ಬಂಧುವರ್ಮ ವಿರಚಿತ

# ಹರಿವಂಶಾಭ್ಯುದಯಂ

ಸಂಪಾದಕ

ಬಿ. ಎಸ್. ಸಣ್ಣಯ್ಯ




ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
೧೯೭೪

ಕನ್ನಡ ಅಧ್ಯಯನ ಸಂಸ್ಥೆ ಪ್ರಕಟಣೆ–೨೦೭
ಪ್ರಾಚ್ಯಕಾವ್ಯ ಮಾಲೆ–೩೪

ಪ್ರಧಾನ ಸಂಪಾದಕ

**ಡಾ. ಹಾ. ಮಾ. ನಾಯಕ**

ವಿಭಾಗ ಸಂಪಾದಕ

**ಎನ್. ಬಸವಾರಾಧ್ಯ**

ಬಂಧುವರ್ಮ ವಿರಚಿತ

# ಹರಿವಂಶಾಭ್ಯುದಯಂ

ಬಂಧುವರ್ಮ ವಿರಚಿತ

# ಹರಿವಂಶಾಭ್ಯುದಯಂ

ಸಂಪಾದಕ

ಬಿ. ಎಸ್. ಸಣ್ಣಯ್ಯ




ಕನ್ನಡ ಅಧ್ಯಯನ ಸಂಸ್ಥೆ

ಮೈಸೂರು ವಿಶ್ವವಿದ್ಯಾನಿಲಯ

೧೯೭೪

# ಮುನ್ನುಡಿ

ಕನ್ನಡ ಅಧ್ಯಯನಕ್ಕೆ ಸಂಬಂಧಪಟ್ಟ ಚಟುವಟಿಕೆಗಳೆಲ್ಲವನ್ನೂ ಕೇಂದ್ರೀಕರಿಸುವ ದೃಷ್ಟಿಯಿಂದ ೧೯೬೬ರ ಕೊನೆಯಲ್ಲಿ ಪ್ರಾಚ್ಯಸಂಶೋಧನಾಲಯದ ಕನ್ನಡ ವಿಭಾಗವನ್ನು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ವಿಲೀನಗೊಳಿಸಲಾಯಿತು. ಅಂದಿನಿಂದ ಈ ವಿಭಾಗವನ್ನು ಅಧ್ಯಯನ ಸಂಸ್ಥೆಯ 'ಸಂಪಾದನ ವಿಭಾಗ'ವೆಂದು ಹೆಸರಿಸಲಾಯಿತು. ಕ್ರಿ. ಶ. ೧೩೪೨ರಲ್ಲಿ ಪ್ರತಿಮಾಡಲಾಗಿರುವ ಹಾಗೂ ಅತ್ಯಂತ ಪ್ರಾಚೀನ ಉಪಲಬ್ಧ ಹಸ್ತಪ್ರತಿಯಾಗಿರುವ ರನ್ನನ 'ಗದಾಯುದ್ಧ'ದ ಹಸ್ತಪ್ರತಿಯಿಂದ ಹಿಡಿದು ೧೮೫೦ರಲ್ಲಿ ಲಿಖಿತವಾಗಿರುವ 'ಪ್ರಭಾವತಿ ಪರಿಣಯ'ದ ಹಸ್ತಪ್ರತಿಯ ವರೆಗೆ ಇಂದು ೫೦೦೦ಕ್ಕೂ ಹೆಚ್ಚು ಹಸ್ತಪ್ರತಿಗಳನ್ನು ಹೊಂದಿರುವ 'ಸಂಪಾದನ ವಿಭಾಗ' ಅಧ್ಯಯನ ಸಂಸ್ಥೆಯ ಒಂದು ಪ್ರಧಾನ ಅಂಗವಾಗಿದೆ. ಕನ್ನಡ ಭಾಷಾಸಾಹಿತ್ಯಗಳಿಗೆ ಸಂಬಂಧಿಸಿದ ಅಧ್ಯಯನವನ್ನು ಕೈಗೊಳ್ಳುವವರಿಗೆ, ಸಂಶೋಧಕರಿಗೆ, ಸ್ನಾತಕ ಮತ್ತು ಸ್ನಾತಕೋತ್ತರ ಕನ್ನಡ ವಿದ್ಯಾರ್ಥಿಗಳಿಗೆ ಇದು ಆಕರ ಗ್ರಂಥಗಳ ತವರಾಗಿದೆ, ಪ್ರೇರಣೆಯ ಸ್ರೋತವಾಗಿದೆ.

ಮುದ್ರಣ ಸೌಲಭ್ಯ ಈಗ್ಗೆ ಕೆಲವು ಶತಮಾನಗಳಿಂದೀಚೆಗೆ ಮಾನವ ಜನಾಂಗಕ್ಕೆ ದೊರೆತಿರುವ ವರ. ಈ ಸೌಲಭ್ಯವಿಲ್ಲದಿದ್ದ ಕಾಲದಲ್ಲಿ ಓಲೆಗರಿ ಅಥವಾ ತಾಡಪತ್ರದ ಮೇಲೆ ಕಂಠದಿಂದ ಕೊರೆದು, ಅನನ್ಯ ಶ್ರದ್ಧೆಯಿಂದ ಆ ಸಾಹಿತ್ಯವನ್ನು ಅಭ್ಯಸಿಸಿ, ಅದನ್ನು ಕಾಯ್ದುಕೊಂಡು ಬಂದ ಹಿರಿಯರಿಂದ ಅಂದಿನ ಅಪೂರ್ವಸಾಹಿತ್ಯ ನಮ್ಮ ಸಂಪತ್ತಾಗಿ ಉಳಿದಿದೆ. ತಮಗೆ ಪ್ರಿಯವೆನಿಸಿದ ಸಾಹಿತ್ಯ ಕೃತಿಗಳನ್ನು ಪ್ರತಿಮಾಡಿಸಿ ಇಟ್ಟುಕೊಳ್ಳುತ್ತಿದ್ದುದು ಆ ಕಾಲದ ಒಂದು ಬಗೆಯ ಹವ್ಯಾಸವೇ ಆಗಿತ್ತು. ಈ ಕಾರಣದಿಂದಾಗಿಯೇ, ಓಲೆಗರಿಯ ಒಂದು ಸಂಪುಟದಲ್ಲಿಯೇ ಅನೇಕ ಗ್ರಂಥಗಳನ್ನು, ಗ್ರಂಥಭಾಗಗಳನ್ನು ಪ್ರತಿಲಿಪೀಕರಿಸಿರುವುದನ್ನು ಕಾಣುತ್ತೇವೆ. ಹಸ್ತಪ್ರತಿಗಳ ಅನೇಕ ಪ್ರತಿಗಳನ್ನು ಸಿದ್ಧಪಡಿಸಿ ಹಂಚುವುದನ್ನು ಪುಣ್ಯಕಾರ್ಯವೆಂದು ಬಗೆದು, ಆ ರೀತಿ ಮಾಡುತ್ತಿದ್ದುದಕ್ಕೂ ಉದಾಹರಣೆಗಳಿವೆ. ಪ್ರತಿಲಿಪೀಕರಣ ಹಲವರಿಗೆ ಜೀವನೋಪಾಯದ ಸಾಧನವಾಗಿಯೂ ಇತ್ತು. ಹಸ್ತಪ್ರತಿಗಳನ್ನು ಸುಂದರ ಸಂದರ್ಭೋಚಿತ ಚಿತ್ರಗಳಿಂದ ಅಲಂಕರಿಸುವ ವಾಡಿಕೆಯೂ ಇತ್ತು. ಇವು ನಮ್ಮ ಜನಗಳ ಸಾಹಿತ್ಯ–ಶಾಸ್ತ್ರ–ಕಲಾಭಿರುಚಿಯ ಪ್ರತೀಕವಾಗಿವೆ.

ಸಂಸ್ಕೃತಿ, ಇತಿಹಾಸ, ಭಾಷಾಚರಿತ್ರೆ–ಇವುಗಳ ಸಮಗ್ರ ಅರಿವಿಗೆ ಶಾಸ್ತ್ರೀಯವಾಗಿ ಸಂಪಾದಿಸಿದ ಸಾಹಿತ್ಯ ಅತ್ಯಾವಶ್ಯಕ. ಅಷ್ಟೇ ಅಲ್ಲ, ಕೋಶ ಅಥವಾ ನಿಘಂಟುಗಳ

ರಚನೆಗೆ, ಅವುಗಳ ಮೂಲಘಟಕಗಳಾದ ಶಬ್ದಗಳ ಅರ್ಥನಿರ್ಧಾರಕ್ಕೆ ಶಾಸ್ತ್ರೀಯವಾಗಿ ಸಂಪಾದಿಸಿದ ಸಾಹಿತ್ಯಕೃತಿಗಳು ಅನಿವಾರ್ಯವಾಗುತ್ತವೆ. ಸಾಂಸ್ಕೃತಿಕ ಮತ್ತು ಐತಿಹಾಸಿಕ ಪುನರ್ರಚನೆಗೆ ಅಗತ್ಯವಾಗಿ ಬೇಕಾಗಿರುವ ಅನೇಕ ಗ್ರಂಥಗಳು ಇಂದಿಗೂ ಅನುಪಲಬ್ಧವಾಗಿವೆ. ಶಾಸನಗಳಲ್ಲಿ, ಅನ್ಯಕವಿಗಳ ಕೃತಿಗಳಲ್ಲಿ ಉಕ್ತವಾಗಿರುವುದರಿಂದ ಮಾತ್ರ ಹಲವು ಕವಿಗಳ ಮತ್ತು ಗ್ರಂಥಗಳ ಹೆಸರುಗಳು ತಿಳಿದುಬರುತ್ತವೆ. 'ಕಾವ್ಯ ಪ್ರಯೋಗ ಪರಿಣತಮತಿ'ಗಳಾಗಿದ್ದ ಕನ್ನಡ ಜನತೆಯ ಬಳಿ ಒಂದು ಕಾಲದಲ್ಲಿ ಇವೆಲ್ಲ ಲಭ್ಯವಾಗಿದ್ದಿರಬೇಕು. ನಾಡಿನ ಹಲವೆಡೆಗಳಲ್ಲಿ ಓಲೆಗರಿಯ ಸಾಹಿತ್ಯ ಅನೇಕ ಶತ ಮಾನಗಳವರೆಗೆ ತನ್ನ ವೈಭವನನ್ನು ಮೆರೆದಿತ್ತು. ಕಾವ್ಯಪಾರಾಯಣ ಸಾಂಸ್ಕೃತಿಕ ಜೀವನದ ಅಂಗವಾಗಿ ಪರಿಣಮಿಸಿತ್ತು. ಕಾಲಕ್ರಮದಲ್ಲಿ ದೇಶ ಕಾಲ ಪರಿಸರಗಳ ಪ್ರಭಾವ ದಿಂದ, ಜನತೆಯ ಅಜ್ಞಾನ, ಅಶ್ರದ್ಧೆ ಮತ್ತು ಔದಾಸೀನ್ಯಗಳ ಫಲವಾಗಿ ಅವು ಮೂಲೆ ಗುಂಪಾಗುತ್ತ ಬಂದು ಕೀಟಗಳಿಗೆ ಆಹಾರವಾಗತೊಡಗಿದವು. ಅವುಗಳನ್ನು ಸಂರಕ್ಷಿಸ ಲಾರದೆ ನದಿಯ ಪಾಲೋ ಬೆಂಕಿಯ ಪಾಲೋ ಮಾಡುತ್ತಿದ್ದ ಉದಾಹರಣೆಗಳೂ ಅಸಂಖ್ಯವಾಗಿವೆ. ಮತ್ತೆ ಕೆಲವೆಡೆಗಳಲ್ಲಿ ನವರಾತ್ರಿಯಂದು ಬೆಳಕುಕಂಡು, ಪೂಜಾರ್ಹ ವಾಗಿ, ಹಾಲುಂಡು ಮತ್ತೆ ಕತ್ತಲ ಕೋಣೆಯ ಮೂಲೆ ಸೇರಬೇಕಾದ ದುಃಸ್ಥಿತಿ ಒದಗಿ ಹಲವಾರು ಅಮೂಲ್ಯ ಪ್ರತಿಗಳು ತ್ರುಟಿತವಾಗಿ ಹೋಗಿವೆ. ಇಂಥ ಮೌಢ್ಯವನ್ನು ದೂರ ಮಾಡಿ, ಹಸ್ತಪ್ರತಿಗಳನ್ನು ಹೊರಗೆಳೆದು, ಅವುಗಳನ್ನು ಕೊಂಡು ಇಲ್ಲವೆ ಎರವಲಾಗಿ ಪಡೆದು ಪರಿಷ್ಕರಿಸಿ, ಸಂಪಾದಿಸುವ ಹೊಣೆಯನ್ನು ಹೊತ್ತಿದೆ ಈ ಸಂಸ್ಥೆಯ ಸಂಪಾದನ ವಿಭಾಗ.

ಅನುಪಲಬ್ಧವಾಗಿರುವ ಸಾಹಿತ್ಯರಾಶಿಯನ್ನು ಹೊರತರಲು, ಉಪಲಬ್ಧ ಸಾಹಿತ್ಯಕ್ಕೆ ಪರಿಷ್ಕಾರನೀಡಲು ಹಸ್ತಪ್ರತಿಗಳ ಸಂಗ್ರಹಕಾರ್ಯ ಸತತವಾಗಿ ನಡೆಯಬೇಕಾಗಿದೆ. ಸಾಹಿತ್ಯಿಕ ಚಟುವಟಿಕೆಯ ಕೇಂದ್ರಗಳಾಗಿದ್ದ ಎಡೆಗಳಲ್ಲಿ, ಕವಿಗಳ ಕೀರ್ತಿ ಹರಡಿದ್ದ ಪ್ರದೇಶಗಳಲ್ಲಿ, ಜ್ಞಾನಗಂಗೆಯನ್ನು ಮನೆಮನೆಯ ಬಾಗಿಲಿಗೆ ಕೊಂಡೊಯ್ದ ಶಿವಶರಣರು ಮತ್ತು ದಾಸರುಗಳು ಸಂಚರಿಸುತ್ತಿದ್ದ ಸ್ಥಳಗಳಲ್ಲಿ ಅವರ ನೆನಪಿಗಾಗಿ ಮಠಗಳು, ಸ್ಮಾರಕ ಗಳು ನಿರ್ಮಿತವಾಗಿರುವ ಕಡೆಗಳಲ್ಲಿ, ಅನುಯಾಯಿಗಳ ಮತ್ತು ಭಕ್ತರ ಮನೆಗಳಲ್ಲಿ, ಸಾಹಿತ್ಯೋಪಾಸಕರ ಬಳಿಯಲ್ಲಿ ಹೇಗೋ ಎಂತೋ ಸಂಗ್ರಹಿತವಾಗಿರುವ ಹಸ್ತಪ್ರತಿಗಳನ್ನು ಸಂಗ್ರಹಿಸಿ ರಕ್ಷಿಸಬೇಕಾಗಿದೆ. ಈ ಸಂಸ್ಥೆಯ ಹಸ್ತಪ್ರತಿಯ ಭಂಡಾರವನ್ನು ಈ ದೃಷ್ಟಿ ಯಿಂದ ಬೆಳಸಿಕೊಂಡು ಬರುವತ್ತ ಆದ್ಯಗಮನ ಕೊಡಲಾಗಿದೆ.

ಸಂಗ್ರಹಿಸಿದ ಪ್ರತಿಗಳನ್ನು ಎಚ್ಚರಿಕೆಯಿಂದ ಕಾಪಾಡಿಕೊಂಡು ಬರುವುದೂ ಅತ್ಯಂತ ಮುಖ್ಯವಾದ ಹೊಣೆ. ಕೀಟಗಳ ಹಾವಳಿಗೆ ಸಿಕ್ಕಿ ಪ್ರತಿಗಳು ಶಿಥಿಲವಾಗದಂತೆ ನೋಡಿ ಕೊಳ್ಳುವ ದೃಷ್ಟಿಯಿಂದ ಸಾಧ್ಯವಾದಷ್ಟು ಸಲ ಅವುಗಳನ್ನು ಸ್ವಚ್ಛಗೊಳಿಸುವುದು, ಕೀಟ ನಿರೋಧಕ ತೈಲ ಲೇಪನ ಮಾಡುವುದು, ವಾಯುನಿಯಂತ್ರಿತ ಕೊಠಡಿಯಲ್ಲಿಟ್ಟು ಪ್ರಧೂಮನ ಉಪಚಾರ ನೀಡುವುದು (Fumigation treatment), ತೀರ ತ್ರುಟಿತ

ವಾದ ಹಸ್ತಪ್ರತಿಗಳನ್ನು ಮೈಕ್ರೊ ಫಿಲಂಗಳಲ್ಲಿ ಶಾಶ್ವತಗೊಳಿಸುವುದು ಅಗತ್ಯವಾಗುತ್ತದೆ. ಈ ರೀತಿ ಹಸ್ತಪ್ರತಿಗಳನ್ನು ಕಾಪಾಡಿಕೊಂಡು ಬರುವುದು ವ್ಯಕ್ತಿಗಳಿಗೆ ಶ್ರಮಸಾಧ್ಯವಾದ ಹಾಗೂ ಆರ್ಥಿಕವಾಗಿ ಸುಲಭಸಾಧ್ಯವಲ್ಲದ ಕಾರ್ಯ. ಕನ್ನಡ ಅಧ್ಯಯನ ಸಂಸ್ಥೆ ಹಸ್ತಪ್ರತಿಗಳ ಸಂರಕ್ಷಣೆಗೆ ಅಗತ್ಯವಾದ ಮೇಲ್ಕಂಡ ಎಲ್ಲ ಕ್ರಮಗಳನ್ನೂ ಕೈಗೊಂಡಿದೆ.

ಗ್ರಂಥಸಂಪಾದನೆ ಶ್ರಮಸಾಧ್ಯವಾದ ಕಾರ್ಯ. ವಿದ್ವತ್ತು, ವ್ಯುತ್ಪತ್ತಿ, ಪ್ರತಿಭೆ ಮೇಳವಿಸಿರುವ ಸಮರ್ಥರು ಕೈಗೊಳ್ಳಬೇಕಾದ ಕಾರ್ಯ. ಈ ಕಾರ್ಯದಲ್ಲಿ ಹಲವಾರು ಭಾಷೆಗಳ, ಶಾಸ್ತ್ರಗಳ ಪರಿಚಯವೂ ಅಗತ್ಯವಾಗುತ್ತದೆ. ಹಸ್ತಪ್ರತಿಗಳೂ ಕಾಲ ದೇಶ ಮತ್ತು ಪರಿಸರಗಳ ಪ್ರಭಾವಕ್ಕೆ ಒಳಗಾಗಿರುತ್ತವೆ. ಸಾಹಿತ್ಯಾಭ್ಯಾಸಿಗಳು ಹಸ್ತಪ್ರತಿಗಳ ಮೇಲೆ ಟಿಪ್ಪಣಿಗಳನ್ನು, ತಮ್ಮ ಅನಿಸಿಕೆಗಳನ್ನು ಬರೆದುಬಿಡುತ್ತಿದ್ದುದೂ ಉಂಟು. ಕಾಲ ಕ್ರಮದಲ್ಲಿ ಅವು ಮೂಲದ ಅಂಗವೋ ಎಂಬಂತೆ ಸೇರಿಬಿಡುತ್ತಿದ್ದುದೂ ಸಹಜವೇ. ಪ್ರತಿಭಾವಂತರೂ, ವ್ಯುತ್ಪನ್ನಮತಿಗಳೂ, ಕಾವ್ಯರಚನಾಸಮರ್ಥರೂ, ಮೂಲವನ್ನು ಕೆಲವು ವೇಳೆ ಉತ್ತಮಪಡಿಸಿ, ಕೆಲವು ವೇಳೆ ಕೆಡಿಸಿ, ಅರ್ಥಸೌಲಭ್ಯಕ್ಕಾಗಿ ಅರ್ಥ ವಾಗುವಂತಹ ಪಾಠಾಂತರಗಳನ್ನು ಕಲ್ಪಿಸಿ, ಅಲ್ಲಲ್ಲಿ ಮೂಲಧಾಟಿಗೆ ಭಂಗಬರದಂತೆ ತಮ್ಮ ಸ್ವಂತ ರಚನೆಗಳನ್ನು ಪ್ರಕ್ಷೇಪಿಸಿಬಿಟ್ಟಿರುವುದೂ ಉಂಟು. ಇಂತಹ ಪ್ರಕ್ಷೇಪಗಳು ಕೆಲವೊಮ್ಮೆ ಸನ್ನಿವೇಶದ ಪ್ರಭಾವವನ್ನು ಹೆಚ್ಚಿಸಿರುವುದೂ ಉಂಟು ; (ಒಂದು ವೇಳೆ ವಾಸ್ತವವಾಗಿ ಹಾಗಾಗದಿದ್ದರೂ ಪ್ರಕ್ಷೇಪಕರು ಹಾಗೆ ಭಾವಿಸಿಕೊಂಡದ್ದೂ ತಮ್ಮ ಚಪಲ ವನ್ನು ತೀರಿಸಿಕೊಂಡದ್ದೂ ಸತ್ಯ!) ಒಟ್ಟಿನಲ್ಲಿ ಅನಾವಶ್ಯಕ ವಿಸ್ತರಣಕ್ಕೆ ಕಾರಣವಾಗಿ ಕೃತಿಯ ಗಾತ್ರದ ಹೆಚ್ಚಳಕ್ಕೆ ಮಾತ್ರ ನೆರವಾಗಿರುವುದೂ ಉಂಟು. ಲಿಪಿಕಾರರೂ ಅನೇಕ ವೇಳೆ ತಮಗೆ ಸರಿದೋರಿದಂತೆ ಅಥವಾ ಸೂಕ್ತಕಂಡಂತೆ ಶಬ್ದರೂಪಗಳನ್ನು ಬದಲಾಯಿಸಿ ಅಥವಾ ಬೇರೆ ಶಬ್ದವನ್ನು ತಂದು ಗಿಡಿದು, ತಿಳಿದೋ ತಿಳಿಯದೆಯೋ ಮೂಲಕ್ಕೆ ತಿದ್ದುಪಡಿಗಳನ್ನು ತಂದುಬಿಡುತ್ತಿದ್ದುದುಂಟು. ಇಂತಹ ಅನೇಕ ಕಾರಣ ಗಳಿಂದಾಗಿ ಒಂದೇ ಕೃತಿಯ ಹಲವು ಪ್ರತಿಗಳಲ್ಲಿ ಪಾಠವ್ಯತ್ಯಾಸಗಳು ಕಂಡುಬರುತ್ತವೆ. ಒಂದೊಂದೇ ಪ್ರತಿಗಳು ದೊರಕಿದ್ದು ಅವೂ ತ್ರುಟಿತವಾಗಿರುವಂತಹ ಸಂದರ್ಭಗಳಲ್ಲಿ ಮೂಲಪ್ರತಿಯ ಪಾಠವನ್ನು ಪುನಸ್ರಚಿಸಬೇಕಾಗುತ್ತದೆ. ಇದು ನಿಜಕ್ಕೂ ಪ್ರತಿಭೆಯ ಕೆಲಸವಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಸಂಪಾದಕನ ಪರೀಕ್ಷೆಯೇ ನಡೆದು ಹೋಗುತ್ತದೆ. ವಿದ್ವತ್ತಿನ ಹಿನ್ನೆಲೆಯಲ್ಲಿ ತಾಳ್ಮೆ, ಶ್ರಮಸಹಿಷ್ಣುತೆ ಇಲ್ಲವಾದರೆ ಈ ಕ್ಷೇತ್ರದಲ್ಲಿ ಯಶಸ್ಸು ಪಡೆಯುವುದು ಸಾಧ್ಯವಾಗುವುದಿಲ್ಲ. ಗ್ರಂಥಸಂಪಾದನೆ ಇಂದು ವಿಶಿಷ್ಟ ಶಾಸ್ತ್ರವಾಗಿಯೇ ಬೆಳೆದಿದೆ.

'ಸಂಪಾದನ ವಿಭಾಗ' ಹಲವಾರು ಸಾಹಿತ್ಯ ಮತ್ತು ಶಾಸ್ತ್ರಗ್ರಂಥಗಳನ್ನು ವೈಜ್ಞಾನಿಕವಾಗಿ ಸಂಪಾದಿಸಿ, ಪಾಠಗಳನ್ನು ನಿರ್ಧರಿಸಿ, ಪಾಠಾಂತರಗಳನ್ನು ಒದಗಿಸಿ, ವಿಸ್ತಾರವಾದ ಪೀಠಿಕೆಗಳನ್ನು ಬರೆದು, ಕವಿಯ ಕಾಲ, ದೇಶ, ಕೃತಿಗಳ ವಿಚಾರವನ್ನು

ಚರ್ಚಿಸಿ, ಅವುಗಳ ಸಾಹಿತ್ಯಿಕ ಮೌಲ್ಯವನ್ನು ಪರಿಶೀಲಿಸಿ, ಅಗತ್ಯವಾದಲ್ಲಿ ಟಿಪ್ಪಣಿ ವ್ಯಾಖ್ಯಾನಗಳನ್ನು ನೀಡಿ, ಕೆಲವು ಸಂದರ್ಭಗಳಲ್ಲಿ ಗದ್ಯಾನುವಾದಗಳನ್ನು ಕೊಟ್ಟು ಅರ್ಥ ಕೋಶವನ್ನು ಒದಗಿಸಿ ಬೆಳಕಿಗೆ ತರುತ್ತಿದೆ. ಪ್ರಾಚ್ಯಸಂಶೋಧನಾಲಯದ ಅಂಗವಾಗಿದ್ದಾಗ ಹೊರತಂದಿರುವ ೪೦ ಗ್ರಂಥಗಳ ಜೊತೆಗೆ ಅಧ್ಯಯನ ಸಂಸ್ಥೆಯಲ್ಲಿ ಸೇರ್ಪಡೆಯಾದ ಮೇಲೆ 'ಪ್ರಾಚ್ಯ ಕಾವ್ಯಮಾಲೆ'ಯ ಹೆಸರಿನಲ್ಲಿ ಈಗಾಗಲೇ ೩೩ ಗ್ರಂಥಗಳನ್ನು ಹೊರತರಲಾಗಿದೆ. ಬೆಳಕುಕಾಣಲು ಹಾತೊರೆಯುತ್ತಿರುವ ಗ್ರಂಥಗಳನ್ನು ವ್ಯವಸ್ಥಿತ ರೀತಿಯಲ್ಲಿ ಹೊರತರಲು ಸಂಸ್ಥೆ ಸತತವಾಗಿ ಶ್ರಮಿಸುತ್ತಿದೆ. ಇದುವರೆಗೂ ಸಂಪಾದನ ವಿಭಾಗದ ಸಂಶೋಧನ ಸಹಾಯಕರು ಸಿದ್ಧಪಡಿಸಿದ ಕೃತಿಗಳನ್ನು ಮಾತ್ರ ಪ್ರಕಟಿಸಲಾಗುತ್ತಿತ್ತು. ಈಗ ಈ ವಿಭಾಗದಲ್ಲಿ ಸಂಗ್ರಹಿತವಾಗಿರುವ ಹಸ್ತಪ್ರತಿಗಳನ್ನುಪಯೋಗಿಸಿಕೊಂಡು ಹೊರಗಿನವರೂ ಸಂಪಾದಿಸಬಹುದಾದ ಗ್ರಂಥಗಳನ್ನೂ ಪ್ರಕಟಿಸಲು ಯೋಜಿಸಲಾಗಿದೆ. ಇದರಿಂದ ಪ್ರಕಟಣೆಯ ಕೆಲಸ ತ್ವರಿತಗೊಳ್ಳುತ್ತದೆ. ಹಸ್ತಪ್ರತಿಗಳಲ್ಲೇ ಉಳಿದು ಸಾಮಾನ್ಯರ ಕೈಗೆಟುಕದ ಗ್ರಂಥಗಳನ್ನು ಸರ್ವರ ಸ್ವತ್ತಾಗಿಸುವ ಉದ್ದೇಶವೂ ತೀವ್ರಗೊಳ್ಳುತ್ತದೆ.

ಸಂಪಾದನ ವಿಭಾಗ ಸಂಕಲಿತ ಗ್ರಂಥಗಳನ್ನು ಹೊರತರುವಲ್ಲಿಯೂ ನಮಗೆ ನೆರವಾಗುತ್ತಿದೆ. ಎರಡು ಸಾವಿರ ವರ್ಷಗಳ ಸುದೀರ್ಘ ಪರಂಪರೆಯನ್ನುಳ್ಳ ಕನ್ನಡ ಸಾಹಿತ್ಯದ ಸಿಂಹಾವಲೋಕನ ಮಾಡಿಸುವಂತಹ ಪ್ರಾತಿನಿಧಿಕ ಸಂಕಲನ ಗ್ರಂಥಗಳನ್ನು ಸಿದ್ಧಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದ ವಿವಿಧ ಪರೀಕ್ಷೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸಲಾಗುತ್ತಿರುವ ಈ ಗ್ರಂಥಗಳು ಆಯಾ ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ ಕನ್ನಡ ಸಾಹಿತ್ಯದ ಪರಿಚಯವನ್ನು ಬಯಸುವವರಿಗೂ ಉಪಯುಕ್ತವಾಗುತ್ತವೆ. ಇಂಥ ಸಂಕಲನಗಳನ್ನು ಸಿದ್ಧಪಡಿಸುವುದೂ ಸಂಪಾದನ ವಿಭಾಗದ ಒಂದು ಪ್ರಮುಖ ಹೊಣೆಯಾಗಿದೆ.

ಬಂಧುವರ್ಮನ 'ಹರಿವಂಶಾಭ್ಯುದಯಂ' ಎಂಬ ಈ ಅಪ್ರಕಟಿತ ಕಾವ್ಯವನ್ನು ಶ್ರದ್ಧೆಯಿಂದ ಸಂಪಾದಿಸಿಕೊಟ್ಟ ಸಂಪಾದನ ವಿಭಾಗದ ಸಹಾಯಕ ನಿರ್ದೇಶಕರಾದ ಶ್ರೀ ಬಿ. ಎಸ್. ಸಣ್ಣಯ್ಯ ಅವರಿಗೂ ಬೇಗ ಅಚ್ಚುಮಾಡಿಕೊಟ್ಟ 'ಮಿತ್ರ ಪ್ರಿಂಟರ್ಸ್' ಅವರಿಗೂ ನಮ್ಮ ವಂದನೆಗಳು.

ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು-೬

**ಹಾ. ಮಾ. ನಾಯಕ**
ಪ್ರಧಾನ ಸಂಪಾದಕ

# ವಿಭಾಗ ಸಂಪಾದಕರ ಮಾತು

ಕನ್ನಡ ಸಾಹಿತ್ಯಕ್ಕೆ ಜೈನಕವಿಗಳ ಕೊಡುಗೆ ವಿಶಿಷ್ಟವಾದುದು. ಗುಣದಲ್ಲಿಯೂ ಗಾತ್ರದಲ್ಲಿಯೂ ಮಿಗಿಲಾದ ಕೃತಿಗಳನ್ನು ರಚಿಸಿದವರಲ್ಲಿ ಜೈನರೇ ಮೊದಲಿಗರು. ಪಂಪ ಪೊನ್ನ ರನ್ನ-ಇವರು ರತ್ನತ್ರಯರೆಂದೂ ಜಿನಸಮಯದೀಪಕರೆಂದೂ ಪರಿಕೀರ್ತಿತರಾಗಿದ್ದಾರೆ. ಪೊನ್ನ ರನ್ನ ಜನ್ನರು ಕವಿಚಕ್ರವರ್ತಿಗಳೆಂದೂ ಖ್ಯಾತಿವೆತ್ತಿದ್ದಾರೆ. ಇವರೆಲ್ಲರೂ ತಮ್ಮ ಕೃತಿಗಳಲ್ಲಿ ಧರ್ಮವನ್ನೂ ಕಾವ್ಯಧರ್ಮವನ್ನೂ ಮೆರೆದಿದ್ದಾರೆ. ಈ ಪರಂಪರೆಗೇ ಸೇರಿದವನು ಕ್ರಿ.ಶ. ಸುಮಾರು ೧೨೦೦ರಲ್ಲಿದ್ದ ಬಂಧುವರ್ಮ. ಈತನು ವೈಶ್ಯೋತ್ತಮನೆಂದು ಹೇಳಿಕೊಂಡಿದ್ದರೂ ಜೈನ ಧಾರ್ಮಿಕ ಕಾವ್ಯಗಳನ್ನು ರಚಿಸಿ ಅಮರನಾಗಿದ್ದಾನೆ.

ಬಂಧುವರ್ಮ ಜೀವಸಂಬೋಧನೆ ಮತ್ತು ಹರಿವಂಶಾಭ್ಯುದಯ ಎಂಬೆರಡು ಚಂಪೂಕಾವ್ಯಗಳನ್ನು ಬರೆದಿದ್ದಾನೆ. ಜೀವಸಂಬೋಧನೆಯಲ್ಲಿ ಹನ್ನೆರಡು ಅಧ್ಯಾಯಗಳಿವೆ. ಇದರಲ್ಲಿ ಜೀವನನ್ನು ಸಂಬೋಧಿಸಿ ಜೈನಮತದ ದ್ವಾದಶಾನುಪ್ರೇಕ್ಷೆಗಳನ್ನು ಹೇಳಲಾಗಿದೆ. ಆದುದರಿಂದಲೇ ಈ ಕಾವ್ಯಕ್ಕೆ ಜೀವಸಂಬೋಧನೆ ಎಂಬ ಹೆಸರನ್ನಿಡಲಾಗಿದೆ. ಈ ಕಾವ್ಯ ಮದರಾಸು ವಿಶ್ವವಿದ್ಯಾನಿಲಯದ ವತಿಯಿಂದ ಈಗಾಗಲೇ ಅಚ್ಚಾಗಿದೆ.

ಹರಿವಂಶಾಭ್ಯುದಯದಲ್ಲಿ ಹದಿನಾಲ್ಕು ಆಶ್ವಾಸಗಳಿವೆ. ಇದರಲ್ಲಿ ಇಪ್ಪತ್ತೆರಡನೆಯ ತೀರ್ಥಂಕರನಾದ ನೇಮಿನಾಥನ ಚರಿತೆಯನ್ನು ಹೇಳಿದೆ. ಬಂಧುವರ್ಮನಿಗಿಂತ ಹಿಂದೆ ಒಂದನೆಯ ಗುಣವರ್ಮ, ಚಾವುಂಡರಾಯ, ಕರ್ಣಪಾರ್ಯ, ನೇಮಿಚಂದ್ರ-ಇವರು ತಮ್ಮ ಕಾವ್ಯಗಳಲ್ಲಿ ನೇಮಿನಾಥನ ಚರಿತೆಯನ್ನು ಹೇಳಿದ್ದಾರೆ. ಇವುಗಳಲ್ಲಿ ಗುಣವರ್ಮನ ಹರಿವಂಶಪುರಾಣ ಉಪಲಬ್ಧವಿಲ್ಲ. ಚಾವುಂಡರಾಯನ ತ್ರಿಷಷ್ಟಿಲಕ್ಷಣ ಮಹಾಪುರಾಣ ಪೂರ್ತಿಯಾಗಿ ಇನ್ನೂ ಅಚ್ಚಾಗಿಲ್ಲ. ಕರ್ಣಪಾರ್ಯನ ನೇಮಿನಾಥಪುರಾಣ, ನೇಮಿಚಂದ್ರನ ಅರ್ಧನೇಮಿಪುರಾಣ ಈಗಾಗಲೇ ಅಚ್ಚಾಗಿವೆ.

ಬಂಧುವರ್ಮನ ತರುವಾಯ ಬಂದ ಕ್ರಿ.ಶ. ೧೨೫೪ರಲ್ಲಿದ್ದ ಮಹಾಬಲಕವಿ, ಕ್ರಿ.ಶ. ೧೫೦೮ರಲ್ಲಿದ್ದ ಮೂರನೆಯ ಮಂಗರಸ, ಕ್ರಿ.ಶ. ೧೫೫೦ರಲ್ಲಿದ್ದ ಸಾಳ್ವ-ಇವರು ನೇಮಿನಾಥನ ಚರಿತ್ರೆಯನ್ನು ಬರೆದಿದ್ದಾರೆ. ಮಹಾಬಲಕವಿಯ ನೇಮಿನಾಥಪುರಾಣ, ಸಾಳ್ವನ ಭಾರತ ಅಥವಾ ನೇಮೀಶ್ವರ ಚರಿತ್ರೆ ಇನ್ನೂ ಅಚ್ಚಾಗಿಲ್ಲ. ಮಂಗರಸನ ನೇಮಿಜಿನೇಶ ಸಂಗತಿ ಹಿಂದೆಯೇ ಪ್ರಕಟವಾಗಿದೆ.

ನೇಮಿನಾಥನನ್ನು ಕುರಿತು ಕನ್ನಡ ಸಂಸ್ಕೃತ ಪ್ರಾಕೃತ ಭಾಷೆಗಳಲ್ಲಿ ಹಲವಾರು ಕೃತಿಗಳು ಹುಟ್ಟಿಕೊಂಡಿವೆ. ಇಪ್ಪತ್ತನಾಲ್ಕು ತೀರ್ಥಂಕರರಲ್ಲಿ ಒಬ್ಬರಾದ ಈ ನೇಮಿ ತೀರ್ಥಂಕರರ ಮೇಲೆ ಅಪಾರವಾದ ಸಾಹಿತ್ಯ ಸೃಷ್ಟಿಯಾಗಿದೆ. ಈ ಕಾವ್ಯದ ಜನಪ್ರಿಯತೆಗೆ ನೇಮಿನಾಥನ ಸುತ್ತ ಹೆಣೆದುಕೊಂಡಿರುವ ಜೈನಸಂಪ್ರದಾಯದ ಹರಿವಂಶ ಕುರುವಂಶಗಳ ಕಥೆಯೇ ಕಾರಣವಾಗಿರಬಹುದು. ವೈದಿಕ ಸಂಪ್ರದಾಯದ ಭಾರತ ಭಾಗವತದ ಕಥೆಗಳು ಜೈನಸಂಪ್ರದಾಯದಲ್ಲಿ ಯಾವರೀತಿ ನಿರೂಪಿತವಾಗಿವೆ ಎಂಬುದನ್ನು ಈ ಹರಿವಂಶ ಪುರಾಣಗಳಿಂದ ತಿಳಿದುಕೊಳ್ಳಬಹುದು. ನೇಮಿನಾಥ ಪುರಾಣಕ್ಕೆ ಹರಿವಂಶಪುರಾಣ ವೆಂಬ ಪರ್ಯಾಯನಾಮವೂ ಪ್ರಚಲಿತವಾಗಿದೆ. ವೈದಿಕಮತದ ಪ್ರಕಾರ ಕ್ಷತ್ರಿಯರಲ್ಲಿ ಸೂರ್ಯವಂಶ ಚಂದ್ರವಂಶಗಳೆಂಬ ಎರಡೇ ರಾಜವಂಶಗಳಿದ್ದರೆ ಜೈನಪುರಾಣಗಳಲ್ಲಿ ಪುರು, ನಾಥ, ಉಗ್ರ, ಹರಿ ಮತ್ತು ಕುರು ಎಂಬ ಐದು ವಂಶಗಳಿರುವುದು ಕಂಡು ಬರುತ್ತದೆ. ಇಪ್ಪತ್ತನಾಲ್ಕು ಜನ ತೀರ್ಥಂಕರರೂ ಈ ಐದು ವಂಶಗಳಲ್ಲೇ ಹುಟ್ಟಿದವರು. ಅವರಲ್ಲಿ ನೇಮಿನಾಥ ಹರಿವಂಶಕ್ಕೆ ಸೇರಿದವನು. ಆದುದರಿಂದಲೇ ನೇಮಿನಾಥನ ಪುರಾಣಕ್ಕೆ ಹರಿವಂಶಪುರಾಣವೆಂಬ ಹೆಸರು ಹೆಚ್ಚು ರೂಢಿಯಲ್ಲಿದೆ.

ಬಂಧುವರ್ಮ ಸಂಪ್ರದಾಯಸ್ಥ ಕವಿ. ಚಂಪೂಶೈಲಿಯಲ್ಲಿ ರಚಿತವಾಗಿರುವ ಈತನ ಕಾವ್ಯಗಳು ಪ್ರೌಢವಾಗಿವೆ. ಅಷ್ಟೇ ಅಲ್ಲ, ಪಂಪನು ಹೇಳಿರುವಂತೆ ಈತನ ಕಾವ್ಯ ಗಳಲ್ಲಿಯೂ ಕಾವ್ಯಧರ್ಮವನ್ನೂ ಧರ್ಮವನ್ನೂ ಅರಿತುಕೊಳ್ಳಬಹುದಾಗಿದೆ.

ಬಂಧುವರ್ಮನ ಬಗೆಗೆ ಕ್ರಿ.ಶ. ೧೩೩೧ರಲ್ಲಿದ್ದ ನಾಗರಾಜ—

ಕವಿಗಳೊಳೆ ಬಂಧುವರ್ಮಂ
ಕವಿಯಾತನ ಮುಂದೆ ಕವಿಗಳೆಂಬುವರೆಲ್ಲಂ
ಛವಿಗೆಟ್ಟರ್ಪರ್ ತೊಳಗುವ
ರವಿಯಂ ಬಳಸಿರ್ಪ ಬಹಳ ಭಗಣಂಗಳವೊಲ್

ಈ ರೀತಿ ಹೇಳಿರುವುದರಲ್ಲಿ ಉತ್ಪ್ರೇಕ್ಷೆ ಇದೆ ಎಂದು ಕಂಡುಬಂದರೂ ಈ ಹೇಳಿಕೆ ತೀರ ನಿರಾಧಾರವಾದುದೇನೂ ಅಲ್ಲ ಎಂಬುದು ಈತನ ಕಾವ್ಯಗಳನ್ನು ಓದಿದಾಗ ವ್ಯಕ್ತವಾಗು ತ್ತದೆ. ಬಂಧುವರ್ಮನಿಗಿಂತ ಹಿಂದಿನ ನೇಮಿನಾಥಪುರಾಣಗಳನ್ನು ಕುರಿತ ನಿಬಂಧ ವೊಂದು ಈಗಾಗಲೇ ಹೊರಬಂದಿದೆ. ಈತನ ಹರಿವಂಶಾಭ್ಯುದಯ ಇದೀಗ ಮೊದಲ ಬಾರಿಗೆ ಪ್ರಕಟವಾಗುತ್ತಿದೆ. ಇದರಿಂದ ನೇಮಿನಾಥಪುರಾಣಗಳನ್ನು ಕುರಿತು ಅಧ್ಯಯನ ಮಾಡುವವರಿಗೆ, ಸಂಶೋಧನೆ ನಡೆಸುವವರಿಗೆ ತುಂಬಾ ಪ್ರಯೋಜನವಾಗುತ್ತದೆ. ಇಂತಹ ಅಪ್ರಕಟಿತ ಪ್ರೌಢಕಾವ್ಯ ಕನ್ನಡ ಜನತೆಗೆ ಮೆಚ್ಚಾಗುವುದರಲ್ಲಿ ಸಂಶಯವಿಲ್ಲ.

ಮೈಸೂರು
೧–೬–೧೯೭೪

ಎನ್. ಬಸವಾರಾಧ್ಯ
ವಿಭಾಗ ಸಂಪಾದಕ

# ವಿಷಯಸೂಚಿ

# ಪೀಠಿಕೆ

## ಕವಿ ಕಾವ್ಯ ವಿಚಾರ

ಹರಿವಂಶಾಭ್ಯುದಯವೆಂಬ ಜೈನಪುರಾಣವನ್ನೂ ದ್ವಾದಶಾನುಪ್ರೇಕ್ಷೆಗಳ ನಿರೂಪಣೆಯನ್ನೊಳಗೊಂಡ ಜೀವಸಂಬೋಧನೆ ಎಂಬ ಗ್ರಂಥವನ್ನೂ ಚಂಪೂಶೈಲಿಯಲ್ಲಿ ರಚಿಸಿ ಪ್ರಸಿದ್ಧನಾಗಿರುವ ಬಂಧುವರ್ಮನು ಕ್ರಿ.ಶ. ಸು. ೧೨೦೦ರಲ್ಲಿದ್ದನೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಈತನು ತನ್ನ ಹಿಂದಣ ಯಾವ ಕವಿಗಳನ್ನೂ ಸ್ತುತಿಸಿಲ್ಲ ; ತನ್ನ ಬಗ್ಗೆ ಯಾವ ವಿಷಯಗಳನ್ನೂ ಹೇಳಿಕೊಂಡಿಲ್ಲ. ಜೀವಸಂಬೋಧನೆಯ ಕೊನೆಯಲ್ಲಿ 'ನುತ ವೈಶ್ಯೋತ್ತಮನು ಬಂಧುವರ್ಮ' ಎಂದು ಹೇಳಿಕೊಳ್ಳುವುದರ ಹೊರತು ಈತನ ಬಗ್ಗೆ ಉಳಿದ ಯಾವ ವಿಷಯಗಳೂ ತಿಳಿದುಬರುವುದಿಲ್ಲ.

ಬಂಧುವರ್ಮನನ್ನು ಸ್ತುತಿಸಿರುವ ಕವಿಗಳಲ್ಲಿ ಮೊದಲನೆಯವನೆಂದರೆ ಕ್ರಿ.ಶ. ಸು. ೧೨೩೫ರಲ್ಲಿದ್ದ ಕಮಲಭವ. ಈತನು ತನ್ನ ಶಾಂತೀಶ್ವರ ಪುರಾಣದಲ್ಲಿ:

ಜಿನಸಮಯ ಪ್ರಕಾಶಕೃತ ಸತ್ಕವಿ ಪಂಪನ ಪೆಂಪುವೆತ್ತ ಪೊ
ನ್ನನ ಕವಿ ನಾಗಚಂದ್ರನ ನೆಗಟ್ತೆಯ ರನ್ನನ **ಸಂದ ಬಂಧುವ**
**ರ್ಮನ** ಬುಧ ನೇಮಿಚಂದ್ರನ ಜಗನ್ನುತ ಜನ್ನನ ರಂಜಿಪಗ್ಗಳ
ಯ್ಯನ ಕೃತಿ ಸೌಂದರೀ ಸುಭಗಮಾಪಗಮಿರ್ಕೆ ಮದೀಯ ಕಾವ್ಯದೊಳ್ ೧-೬೨

ಎಂಬ ಪದ್ಯದಲ್ಲಿ 'ಸಂದ ಬಂಧುವರ್ಮ' ಎಂದು ಹೇಳಿದ್ದಾನೆ. ಮುಂದೆ ಕ್ರಿ.ಶ. ೧೩೩೧ರಲ್ಲಿದ್ದ ನಾಗರಾಜನು ತನ್ನ ಪುಣ್ಯಾಸ್ರವದಲ್ಲಿ:

ಕವಿಗಳೊಳೆ **ಬಂಧುವರ್ಮಂ**
ಕವಿಯಿವರ್ಗಳ ಮುಂದೆ ಕವಿಗಳೆಂಬವರೆಲ್ಲಂ
ಛವಿಗೆಟ್ಟಿರ್ಪರ್ ತೊಳಗುವ
ರವಿಯಿಂ ಬಳಸಿರ್ದ ಬಹಳ ಭಗಣಂಗಳವೋಲ್ ೧-೬೨

ಎಂದು ಪೊಗಳಿದ್ದಾನೆ. ಅನಂತರಲ್ಲಿ ಬಂದ ಕ್ರಿ.ಶ. ೧೫೦೮ರಲ್ಲಿದ್ದ ಮೂರನೆಯ ಮಂಗರಸನು ತನ್ನ ನೇಮಿಜಿನೇಶ ಸಂಗತಿಯಲ್ಲಿ:

ಬಂಧುರ ಭರತ ಯಾದವ ವಂಶವನು ಕೃತಿ
ಬಂಧನದೊಳಗೆ ಸೇರಿಸಿದ
**ಬಂಧುವರ್ಮ**ನನು ನೆನೆದು ನೇಮಿಜರಿತ ಪ್ರ
ಬಂಧವ ನಾನುಸಿರುವೆನು ೧-೨೮

ಎಂದು ಸ್ತುತಿಸಿದ್ದಾನೆ.

ಕ್ರಿ.ಶ. ಸು. ೧೨೩೫ರಲ್ಲಿದ್ದ ಕಮಲಭವನು 'ಸಂದ ಬಂಧುವರ್ಮ' ಎಂದು ಹೇಳಿರುವುದರಿಂದ ಬಂಧುವರ್ಮನು ಈತನಿಗಿಂತ ಹಿಂದೆ ಇದ್ದವನೆಂಬುದು ಸ್ಪಷ್ಟವಾಗಿದೆ. ಎಷ್ಟು ಹಿಂದಿನವನು ಎಂಬುದನ್ನು ನಿರ್ಧರಿಸುವುದು ಕಷ್ಟ. ಏಕೆಂದರೆ, ಈತನು ತನ್ನ ಹಿಂದಣ ಕವಿಗಳಾರನ್ನೂ ಹೆಸರಿಸಿಲ್ಲ. ಆದರೆ ಹರಿವಂಶಾಭ್ಯುದಯದಲ್ಲಿ ಸು. ೧೧೪೦ರಲ್ಲಿದ್ದ ಕರ್ಣಪಾರ್ಯನ ನೇಮಿನಾಥಪುರಾಣವನ್ನು ಅನುಸರಿಸಿರುವುದು ಕಂಡುಬರುವುದರಿಂದ ಈ ಕಾಲಕ್ಕಿಂತ ಈಚೆಗಿದ್ದವನು ಎಂದು ಹೇಳಬಹುದಾಗಿದೆ. ಇದರಿಂದ ಈತನ ಕಾಲವನ್ನು ೧೧೪೦ರಿಂದ ೧೨೩೫ರ ಒಳಗೆ ಎಂದು ನಿರ್ಣಯಿಸಿ, ಕವಿಚರಿತೆಕಾರರು ಹೇಳಿರುವ ಸು. ೧೨೦೦ ಎಂಬುದನ್ನು ಅಂಗೀಕರಿಸಬಹುದಾಗಿದೆ.

ಬಂಧುವರ್ಮನು ಇತರ ಕವಿಗಳಂತೆ ಯಾವ ರಾಜರ ಆಶ್ರಯದಲ್ಲಾಗಲಿ ಇದ್ದುದು ಕಂಡುಬರುವುದಿಲ್ಲ. ಈತನು ನೇಮಿಜಿನೇಶರು, ಸಿದ್ಧರು, ಬುಧರು, ಸಾಧುಗಳು, ಯಕ್ಷ ಯಕ್ಷಿಯರುಗಳನ್ನು ಸ್ತುತಿಸಿ, ಸರಸ್ವತಿಯು ತನ್ನ 'ವಕ್ತ್ರಮಳ ಕೋಮಳಾಂಬುರುಹದೊಳ್ ನೆಲಸಿರ್ಕೆ ಮನೋನುರಾಗದಿಂ' ಎಂದು ಬೇಡಿಕೊಳ್ಳುತ್ತಾನೆ.

ಸಾಮಾನ್ಯವಾಗಿ ಕವಿಗಳೆಲ್ಲರೂ ಸಂಸ್ಕೃತ ಮತ್ತು ಕನ್ನಡ ಕವಿಗಳ ಸ್ತುತಿಯನ್ನು ಮಾಡಿ ಕಥೆಯನ್ನು ಪ್ರಾರಂಭಿಸುವುದು ರೂಢಿಯಲ್ಲಿದೆ. ಆದರೆ ಬಂಧುವರ್ಮನು ಇದಕ್ಕೆ ವ್ಯತಿರಿಕ್ತವಾಗಿ ನಿಲ್ಲುತ್ತಾನೆ. 'ಕಾವ್ಯಲಕ್ಷಣಮೊಳ್ಪಳವಟ್ಟಿರೆ ಪೇಳ್ವುದಲ್ಲದೇಕಾರಣವಯ್ಯ ಕಬ್ಬವ ಬಿಟ್ಟಿಪೇಳ್ವುದೇ,' 'ವಿರಸಮಪ್ಪ ಕಬ್ಬಂಬೇಳ್ದಾಲೋಲಕೆಯಿಂದಂ ಬರೆ ಬರೆ ದೋಲೆಗಳಂ ಕಿಡಿಸುವಂತು ತಾಟಿಬೊಳು ಪಗೆಪೀ', 'ಸೊಪ್ಪುವಟ್ಟ ಬಗೆಯಿಂದಟಿಗನ್ನಡಗಬ್ಬದೊಳ್ ತಗುಳ್ಚುವ ಬೆಸನೇಕೆ ಮಟ್ಟಮಿರಲಾಗದೆ' ಮೊದಲಾದ ಮಾತುಗಳಿಂದ ಕುಕವಿಗಳನ್ನು ತೆಗಳಿದ್ದಾನೆ. ತಾನು

ರಸದೊಳ್ ಬಿನ್ನಣದೊಳ್ಪು ಕೂಡೆ ಪದಮರ್ಥವ್ಯಕ್ತಿಯುಂ ಮಾಡೆ ರಂ
ಜಿಸಿ ಪತ್ತಿರ್ದಗೆ ಮಾತು ಬಲ್ಲರೆರ್ದೆಯಾಳ್ದಂತಂ ಜನಂ ಸಾಡೆ ಬೆ
ಕ್ಕಸಮಪ್ಪಂತುಮಿದೊಂದೆ ಸಾಲ್ವುದು ಜಗಕ್ಕೆಂಬಂತುಮಿಂ ಪೇಳ್ವೆನೆಂ
ದುಸುರಲ್ ಕಬ್ಬಿಗರಣ್ಣದಂತುಮಿದನಾಂ ಪೇಳ್ವೆಂ ಮಹಾಕಾವ್ಯಮಂ ೧-೧೬

ಎಂದು ತನ್ನ ಕಾವ್ಯರಚನೆಯ ಬಗ್ಗೆ ಹೇಳಿಕೊಳ್ಳುತ್ತಾನೆ. ಈ ಮಾತಿನಲ್ಲಿ ಅತಿಶಯೋಕ್ತಿಯಿದ್ದರೂ ಈತನ ಕಾವ್ಯಗಳನ್ನು ಓದಿದವರಿಗೆ ಇದರ ಸಾರ್ಥಕತೆ ಸ್ವಲ್ಪಮಟ್ಟಿಗಾದರೂ ಇದೆ ಎನ್ನಿಸದಿರಲಾರದು.

ಬಂಧುವರ್ಮನು ಜೀವಸಂಬೋಧನೆಯಲ್ಲಿ :

ಅನುಪಮ ಕಾವ್ಯಧರ್ಮದಜಿೞ್ವಿಲ್ಲದನಂ ಜಡನೆಂದು ಪಾಪಕ
ರ್ಮನ ದೆಸೆವೊಲ್ಲನೆಂದು ಪುಸಿವಾತನನೇಱದನೆಂದು ಕಾವ್ಯಜೋ
ರನನುೞದೇವೆನೆಂದು ಮನಸಂದು ಸರಸ್ವತಿ ಬಂದು ಬಂಧುವ
ರ್ಮನ ಮುಖಪದ್ಮದೊಳ್ ನೆಲಸಿ ನಿಂದು ವಿರಾಜಿಸುತಿರ್ಕೆ ರಾಗದಿಂ ೧-೬

ಎಂದು ತನ್ನ ಸದ್ಗುಣಗಳನ್ನು ಮೆಚ್ಚಿ ಸರಸ್ವತಿ ತನ್ನಲ್ಲಿ ವಿರಾಜಮಾನಳಾಗಿದ್ದಾಳೆಂಬು ದನ್ನು ಸ್ಪಷ್ಟಪಡಿಸುತ್ತಾನೆ.

ಈ ಮಾತಿನ ಯಥಾರ್ಥತೆಗೆ ಈತನ ಕಾವ್ಯಗಳೇ ಸಾಕ್ಷೀಭೂತವಾಗಿವೆ. ಕವಿಯು ಹರಿವಂಶಾಭ್ಯುದಯದಲ್ಲಿ ಕರ್ಣಪಾರ್ಯನಿಂದ ಉಪಕೃತನಾಗಿರುವುದು ಕಂಡುಬಂದರೂ ಜೀವಸಂಬೋಧನೆಯಲ್ಲಿ ಯಾವ ಕನ್ನಡ ಕಾವ್ಯವನ್ನೂ ಆಧರಿಸಿರುವುದು ಕಂಡುಬರುವುದಿಲ್ಲ.

**ಜೀವಸಂಬೋಧನೆ** : ಹೆಸರೇ ಸೂಚಿಸುವಂತೆ ಜೀವನವನ್ನು ಕುರಿತು ಬೋಧಿಸುವ ಜೈನ ದ್ವಾದಶಾನುಪ್ರೇಕ್ಷೆಗಳ ನಿರೂಪಣೆಯಿದೆ. ಇದರಲ್ಲಿ ಕಂಡುಬರುವುದು ಕವಿಯ ಹೃದಯ ಪರಿಪಕ್ವತೆ; ಧರ್ಮದಲ್ಲಿ ನೆಲೆಗೊಂಡ ಆತನ ಮನಸ್ಸು. ಇಲ್ಲಿ ದ್ವಾದಶಾನುಪ್ರೇಕ್ಷೆಗಳ ನಿರೂಪಣೆ ಮಾಡಿದರೂ ಅದರಲ್ಲಿ ಹೆಚ್ಚಾಗಿ ಜೈನಪ್ರಕ್ರಿಯೆಗಳಾವುವೂ ಕಂಡುಬರುವುದಿಲ್ಲ. ಕಾಣುವುದು ಕೇವಲ ಮಾನವ ಧರ್ಮ. ಇದರಿಂದ ಎಲ್ಲ ವರ್ಗದ ಜನರೂ ಇದನ್ನು ಮೆಚ್ಚುತ್ತಾರೆ. ಈ ಮೆಚ್ಚಿಕೆಗೆ ಮತ್ತೂ ಒಂದು ಕಾರಣವೆಂದರೆ ಪದಬಂಧವು ಲಲಿತವಾಗಿಯೂ ಸರಳವಾಗಿಯೂ ದೇಸೀಯ ಶಬ್ದಗಳಿಂದಲೂ ಕೂಡಿರುವುದು. ಈತನು ನೀತಿವೈರಾಗ್ಯಬೋಧಕ ಕಥೆಗಳನ್ನು ತನ್ನ ಧರ್ಮಪ್ರತಿಪಾದನೆಗೆ ಬಳಸಿಕೊಂಡಿರುವುದು ತುಂಬ ಸೊಗಸಾಗಿದೆ. ಇಲ್ಲಿ ಕಥೆಗಳನ್ನು ವಿಸ್ತರಿಸಲು ಹೋಗಿಲ್ಲ. ತನ್ನ ಉದ್ದೇಶ ಆ ಕಥೆಗಳ ಮೂಲಕ ಮನುಜನನ್ನು ಧರ್ಮದತ್ತ ಸೆಳೆಯುವುದು ಮಾತ್ರವಾಗಿದೆ. ಆದುದರಿಂದಲೇ ಆ ಉದ್ದೇಶಕ್ಕೆ ತಕ್ಕಂತೆ ಕಥೆಗಳಲ್ಲಿ ಯಾವ ವಿಧವಾದ ಹೆಚ್ಚಿನ ವರ್ಣನೆಗಳನ್ನೂ ತಾರದೆ ತಕ್ಕಷ್ಟನ್ನು ಚಿಕ್ಕ ಕಥೆಗಳಲ್ಲಿ ಚೊಕ್ಕವಾಗಿ ನಿರ್ವಹಿಸಿದ್ದಾನೆ. ಇದರಲ್ಲಿ ಕವಿಯ ಸಾಮರ್ಥ್ಯ, ಪ್ರೌಢಿಮೆ, ಸರಳತೆ ಅರ್ಥವಾಗುತ್ತದೆ; ಕವಿಯ ಬಗ್ಗೆ ಇರುವ ಗೌರವ ಅಧಿಕವಾಗುತ್ತದೆ.

**ಹರಿವಂಶಾಭ್ಯುದಯ :**

ಈಗ ದೊರೆತಿರುವ ಕನ್ನಡ ನೇಮಿನಾಥಚರಿತೆಗಳಲ್ಲಿ 'ಹರಿವಂಶಾಭ್ಯುದಯ' ಎಂಬ ಹೆಸರನ್ನು ಹೊತ್ತಿರುವ ಕೃತಿಯೆಂದರೆ ಬಂಧುವರ್ಮನದೇ ಆಗಿದೆ. ಕರ್ಣಪಾರ್ಯ, ನೇಮಿಚಂದ್ರರು ತಮ್ಮ ಕೃತಿಗಳಿಗೆ ನೇಮಿನಾಥಪುರಾಣಂ ಎಂದು ಹೆಸರಿಟ್ಟರೂ, ಅವರನ್ನನುಸರಿಸದ ಬಂಧುವರ್ಮನು ತನ್ನ ಹೆಸರಿನಲ್ಲಿ ವೈಶಿಷ್ಟ್ಯತೆಯನ್ನು ಮೆರೆದಿದ್ದಾನೆ. ನೇಮಿನಾಥನು

ಹರಿವಂಶೋದ್ಭವನಾದುದರಿಂದಲೇ ಈ ಕಾವ್ಯಕ್ಕೆ ಹರಿವಂಶಾಭ್ಯುದಯ ಎಂಬ ಹೆಸರನ್ನಿಟ್ಟಿರುವಂತೆ ತೋರುತ್ತದೆ.

ಈ ಕೃತಿಯು ಚಂಪೂಕೃತಿಯಾಗಿದ್ದು ೧೪ ಆಶ್ವಾಸಗಳನ್ನೊಳಗೊಂಡಿದೆ. ಈ ಕೃತಿಯಲ್ಲಿ ಕವಿ ಗದ್ಯಪದ್ಯಗಳನ್ನು ಸಮಸಮನಾಗಿ ಉಪಯೋಗಿಸಿ ಉತ್ತಮ ವರ್ಣನೆಗಳಿಂದ ಕಾವ್ಯದ ಸೊಗಸನ್ನು ಹೆಚ್ಚಿಸಿದ್ದಾನೆ. ಇದರಲ್ಲಿ ಕಂಡುಬರುವ ನೇಮಿನಾಥನ ಕಥಾಭಾಗ ಸ್ವಲ್ಪವಾದರೂ ಪೂರ್ವಭಾವಿಯಾಗಿ ಬರುವ ಹರಿವಂಶ ಕುರುವಂಶಗಳ ಹಾಗೂ ಚಾರುದತ್ತ ಪ್ರಕರಣದ ನಿರೂಪಣೆಯಲ್ಲಿ ಕಂಡುಬರುವ ಸೊಗಸು ಮನನೀಯವಾಗಿದೆ.

## ಕಥಾಸಾರ

### ಪ್ರಥಮಾಶ್ವಾಸಂ :

ಭರತಕ್ಷೇತ್ರದಲ್ಲಿ ಮಗಧೆಯೆಂಬ ದೇಶವು ಸಕಲ ಸಂಪತ್ತಿನಿಂದ ಕೂಡಿದ್ದಿತು. ಇದರ ರಾಜಧಾನಿ ರಾಜಗೃಹ. ಆ ಪಟ್ಟಣದಲ್ಲಿ ಶ್ರೇಣಿಕ ಮಹಾರಾಜನು ರಾಣಿ ಚೇಳಿನಿಯೊಡನೆ ಸುಖವಾಗಿದ್ದನು. ಒಂದು ದಿನ ರಾಜದಂಪತಿಗಳು ಓಲಗದಲ್ಲಿದ್ದಾಗ ಋಷಿನಿವೇದಕನು ಬಂದು ಉದ್ಯಾನವನದಲ್ಲಿ ಮರಗಳು ಹೂಬಿಟ್ಟು, ಪಕ್ಷಿಗಳು ನಲಿದಾಡುವುದನ್ನು ರಾಜನಿಗೆ ತಿಳಿಸಿದನು.

ರಾಜನು ಪಶ್ಚಿಮಾಭಿಮುಖವಾಗಿ ನೋಡಿ ವಿಪುಳಗಿರಿಯಲ್ಲಿ ಶ್ರೀವರ್ಧಮಾನಭಟ್ಟಾರಕರ ಸಮವಸರಣವು ಬಂದಿರುವುದನ್ನು ತಿಳಿದನು. ಕೂಡಲೆ ಆತನು ಆ ದಿಕ್ಕಿಗೆ ಏಳಡಿ ನಡೆದು ನಮಸ್ಕರಿಸಿ, ಪಟ್ಟಗಜೇಂದ್ರನನ್ನೇರಿ ವರ್ಧಮಾನಭಟ್ಟಾರಕರನ್ನು ಅಷ್ಟವಿಧಾರ್ಚನೆಯಿಂದ ಪೂಜಿಸಿ ಹರಿವಂಶದ ಕಥೆಯನ್ನು ಹೇಳಬೇಕೆಂದು ಕೇಳಿಕೊಂಡನು.

ಭಟ್ಟಾರಕರು ಆ ಕಥೆಯನ್ನು ಹೇಳಿದರು. ಆದಿಭಟ್ಟಾರಕನು ಇಕ್ಷ್ವಾಕುವಂಶ, ಉಗ್ರವಂಶ, ಕುರುವಂಶ, ನಾಥವಂಶ, ಭೋಜವಂಶವೆಂಬ ಐದು ಕ್ಷತ್ರಿಯ ವಂಶಗಳನ್ನು ಮಾಡಿದನು. ಮುಂದೆ ಹತ್ತನೆಯ ತೀರ್ಥದಂದು ವಿದ್ಯಾಧರ ಶ್ರೇಣಿಯನ್ನಾಳುವ ಹರಿವಂಶವೆಂಬ ಪಟ್ಟಣದ ಪ್ರಭಂಜನನೆಂಬ ಅರಸನಿಗೂ ಮೃಕಂಡುವೆಂಬ ಅರಸಿಗೂ ಮಾರ್ಕಂಡೇಯನು ಹುಟ್ಟಿದನು. ಆತನು ಯೌವನನಾದಮೇಲೆ ವಜ್ರಚಾಪನೆಂಬ ಖೇಚರನ ಮಗಳು ವಿದ್ಯುನ್ಮಾಲೆಯನ್ನು ಮದುವೆಯಾದನು. ಈ ದಂಪತಿಗಳು ಸುಖವಾಗಿರಲು, ಈತನ ಪೂರ್ವಭವವೈರಿಯಾದ ಚಿತ್ರಾಂಗದದೇವನು ಅವರನ್ನು ಕೊಲೆ ಮಾಡಲೋಸುಗ ಹೊತ್ತುಕೊಂಡು ನಡೆದನು. ಅಷ್ಟರಲ್ಲಿ ಮಾರ್ಕಂಡೇಯನ ಪೂರ್ವಜನ್ಮ ಸ್ನೇಹಿತನಾಗಿದ್ದ ಸೂರ್ಯಪ್ರಭದೇವನ ಬುದ್ಧಿವಾದದಿಂದ ಚಿತ್ರಾಂಗದನು ಮಾರ್ಕಂಡೇಯನನ್ನು ಸೂರ್ಯಪ್ರಭನಿಗೊಪ್ಪಿಸಿ ಹೋದನು.

ಸೂರ್ಯಪ್ರಭನು ಭೋಜವಂಶದ ಚಂದ್ರಕೀರ್ತಿಯೆಂಬ ರಾಜನಿಗೆ ಮಕ್ಕಳಿಲ್ಲದಿರಲು ಆತನಿಗೆ ಮಾರ್ಕಂಡೇಯ ಮತ್ತು ವಿದ್ಯುನ್ಮಾಲೆಯರನ್ನು ಹಿರಿಯ ಮಗ ಮತ್ತು

ಹಿರಿಯ ಸೊಸೆಯರೆಂದು ಹೇಳಿ ಒಪ್ಪಿಸಿಕೊಟ್ಟನು. ಕೊನೆಯಲ್ಲಿ ಚಂದ್ರಕೀರ್ತಿಯು ರಾಜ್ಯವನ್ನು ಮಾರ್ಕಂಡೇಯನಿಗೊಪ್ಪಿಸಿ ತಾನು ತಪಸ್ಸಿಗೆ ನಡೆದನು.

ಹರಿವಂಶದವನಾದ ಮಾರ್ಕಂಡೇಯನು ಭೋಜವಂಶಕ್ಕೆ ಉತ್ತರಾಧಿಕಾರಿಯಾದುದರಿಂದ ಈ ವಂಶಕ್ಕೆ ಹರಿವಂಶವೆಂಬ ಹೆಸರಾಯಿತು. ಈತನಿಗೆ ವಿದ್ಯುನ್ಮಾಲೆಯಲ್ಲಿ ಹುಟ್ಟಿದ ಮಗನಿಗೆ ಹರಿ ಎಂಬ ಹೆಸರಿಟ್ಟರು. ಮುಂದೆ ಈ ವಂಶದವರಲ್ಲಿ ಮಹಾಗಿರಿ, ಹಿಮಗಿರಿ, ವಸುಗಿರಿ, ನೀಲಗಿರಿ–ಮೊದಲಾದ ರಾಜರು ರಾಜ್ಯವಾಳಿದರು. ಶೂರವೀರನೆಂಬರಸನು ಸೂರ್ಯಪ್ರಭದೇವಾಯತ್ತವಾದ ತನ್ನ ವಂಶಕ್ಕೆ ಸೂರ್ಯಪುರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯವಾಳುತ್ತಿದ್ದನು. ಈತನ ಮಗ ಅಂಧಕವೃಷ್ಣಿಗೆ ಸುಭದ್ರೆಯೆಂಬುವಳು ಪತ್ನಿಯಾಗಿದ್ದಳು. ಈ ದಂಪತಿಗಳಿಗೆ ಸಮುದ್ರವಿಜಯನೇ ಮೊದಲಾದ ಹತ್ತು ಜನ ಗಂಡುಮಕ್ಕಳೂ, ಕೊನೆಯಲ್ಲಿ ಕೊಂತಿ, ಮಾದ್ರಿಯೆಂಬಿಬ್ಬರು ಹೆಣ್ಣುಮಕ್ಕಳೂ ಹುಟ್ಟಿದರು.

ಅಂಧಕವೃಷ್ಣಿಯು ಧರ್ಮಶ್ರವಣದಿಂದ ಸಂಸಾರವಿಮುಖನಾಗಿ ದೀಕ್ಷೆಯನ್ನು ತೆಗೆದುಕೊಂಡನು. ಸಮುದ್ರವಿಜಯನು ಸಕಲ ವೈಭವದಿಂದ ರಾಜ್ಯಭಾರ ಮಾಡುತ್ತಿದ್ದನು. ಎಲ್ಲರಿಗಿಂತ ಕಿರಿಯನಾದ ವಸುದೇವನು ಅಕ್ಷರಕಲಾಭ್ಯಾಸಾದಿ ಚತುಷ್ಷಷ್ಟಿ ಕಲೆಗಳಲ್ಲಿ ಪರಿಣತನಾಗಿ, ಪರಾಕ್ರಮಿಯೂ ಸುಂದರನೂ ಆಗಿ ಶೋಭಿಸಿದನು. ಆತನನ್ನು ನೋಡಿದ ಕಣ್ಗಳು ಸಫಲವೆನ್ನುವಂತಿದ್ದ ಆತನ ರೂಪು ಸೊಬಗುಗಳಿಗೆ ಪುರಸ್ತ್ರೀಯರು ಮಾರುಹೋದರು. ಸ್ತ್ರೀಯರ ಮನೋವ್ಯಥೆಯನ್ನು ಮನಗಂಡ ಪುರಜನರು ಸಮುದ್ರವಿಜಯನಲ್ಲಿ ದೂರಿತ್ತರು. ಇದರಿಂದ ನೊಂದ ಸಮುದ್ರವಿಜಯನು ಬೇರೆ ದಾರಿಗಾಣದೆ ವಸುದೇವನು ಹೊರಗೆಲ್ಲಿಯೂ ಹೋಗದಂತೆ ಮಾಡಬೇಕೆಂದು ನಿಶ್ಚಯಿಸಿದನು.

## ದ್ವಿತೀಯಾಶ್ವಾಸಂ :

ಸಮುದ್ರವಿಜಯನು ಉಪಾಯಾಂತರದಿಂದ ತಮ್ಮ ವಸುದೇವನನ್ನು ನಂದನವನದಲ್ಲಿರುವಂತೆ ಮಾಡಿದನು. ಆ ವನದಲ್ಲಿ ವಸುದೇವನು ಸುಖವಾಗಿರಲು ಒಂದು ದಿನ ಆತನು ಪರಿಚಾರಕಿಯೊಬ್ಬಳಿಂದ ತಾನು ಬಂಧನದಲ್ಲಿರುವುದನ್ನರಿತನು. ಅಣ್ಣನು ತನ್ನನ್ನು ಈ ರೀತಿಯರಿಸಿದುದಕ್ಕಾಗಿ ತೀವ್ರ ವ್ಯಥೆಗೊಂಡ ಆತನು ದೇಶತ್ಯಾಗಮಾಡಬಯಸಿದನು. ಮಂತ್ರಗಳನ್ನು ಸಾಧಿಸುವ ನೆಪದಿಂದ ಪರೇತವನಕ್ಕೆ ಹೋದ ವಸುದೇವನು ಜೊತೆಯಲ್ಲಿದ್ದವರನ್ನು ದೂರದಲ್ಲಿರಿಸಿದನು. ತಾನು ಬಟ್ಟೆಗಳನ್ನು ಕಳೆದಿಟ್ಟು ಅಗ್ನಿಪ್ರವೇಶ ಮಾಡಿದಂತೆ ನಟಿಸಿ ಮರವನ್ನೇರಿದನು. ವಸುದೇವನು ಅಗ್ನಿಪ್ರವೇಶಮಾಡಿದನೆಂದೇ ಬಗೆದ ದಾರುಕ ವಲ್ಲಭಕರು ದುಃಖಿತರಾಗಿ ಈ ವಿಷಯವನ್ನು ಸಮುದ್ರವಿಜಯನಿಗೆ ತಿಳಿಸಿದರು.

ಇತ್ತ ಮರದಲ್ಲಿ ಕುಳಿತಿದ್ದ ವಸುದೇವನು ಬೆಳಗಾಗುತ್ತಲೆ ಮರದಿಂದಿಳಿದು ಕುಕ್ಕುಟ ಗ್ರಾಮಕ್ಕೆ ಬಂದನು. ಅಲ್ಲಿ ಕುಂಭಕಾರನೊಬ್ಬನ ಆತಿಥ್ಯವನ್ನು ಸ್ವೀಕರಿಸಿ ಪಥಪರಿಶ್ರಮ

ವನ್ನು ಹೋಗಲಾಡಿಸಿಕೊಳ್ಳುತ್ತಿರಲು ಸೂರ್ಯಪುರದಿಂದ ಬಂದ ಬ್ರಾಹ್ಮಣನೊಬ್ಬನಿಂದ ವಸುದೇವನು ಅಗ್ನಿಪ್ರವೇಶ ಮಾಡಿದನೆಂಬುದನ್ನು ಕೇಳಿ ತಿಳಿದನು. ಇದರಿಂದ ತನಗೆ ದೇಶತ್ಯಾಗಮಾಡಲು ದಾರಿ ಸುಗಮವಾಯಿತೆಂದು ಬಗೆದ ವಸುದೇವನು ಪಯಣವೋಗಿ ವಿಜಯಖೇಡವೆಂಬ ಪಟ್ಟಣಕ್ಕೆ ಬಂದನು. ಅಲ್ಲಿನ ಹೊರವಳಯದ ಅಶ್ವತ್ಥವೃಕ್ಷದ ಕೆಳಗೆ ವಿಶ್ರಮಿಸಿಕೊಳ್ಳುತ್ತಿರಲು ಅಲ್ಲಿಗೆ ಬಂದ ಘಟ್ಟವಳ್ಳನಿಂದ ಜಿತಶತ್ರುಮಹಾರಾಜನ ಮಕ್ಕಳಾದ ವಿಜಯೆ ಮತ್ತು ಜಯಸೇನೆಯರ ಸ್ವಯಂವರ ವಾರ್ತೆಯನ್ನು ಕೇಳಿದನು. ವಸುದೇವನು ಸ್ವಯಂವರಕ್ಕೆ ಹೋಗಿ ಗೀತ ನಾಟ್ಯಗಳಿಂದ ಇಬ್ಬರನ್ನೂ ಗೆದ್ದು ಅರ್ಧ ರಾಜ್ಯವನ್ನು ಪಡೆದು ಸುಖವಾಗಿದ್ದನು. ವಿಜಯೆಯು ಗರ್ಭವತಿಯಾಗಿ ಮಗನನ್ನು ಹಡೆದಳು. ಆತನಿಗೆ ಕ್ರೂರನೆಂದು ಹೆಸರಿಟ್ಟರು.

ಹೀಗಿರಲು ಒಂದು ದಿನ ವಸುದೇವನು ಕೀಳುಮಾನವನಂತೆ ಸ್ತ್ರೀವಶವಾಗಿರುವುದನ್ನು ಯೋಚಿಸಿದನು. ಕೂಡಲೆ ಆತನು ಹೆಂಡಿರಿಗೆ ಬಳಿಯುನಟ್ಟುವೆನೆಂದು ಬರೆದಿರಿಸಿ ಅಲ್ಲಿಂದ ಹೊರಟು ಬಂದು ಸರೋವರವಲ್ಲಿ ಕೈಕಾಲು ತೊಳೆದು ವಿಶ್ರಮಿಸಿ ಮುಂದುವರಿದನು. ದಾರಿಯಲ್ಲಿ ಮದಿಸಿದ ಆನೆಯನ್ನು ಹದಕ್ಕೆ ತಂದು ಅದನ್ನೇರಿ ಹೋಗಿ ಶಾಲ್ಮಲಿದತ್ತೆಯನ್ನು ಮದುವೆಯಾಗಿ ಸುಖವಾಗಿದ್ದನು. ವಸುದೇವನೂ ಶಾಲ್ಮಲಿದತ್ತೆಯೂ ಮಲಗಿರಲು ಪೂರ್ವಭವವೈರಿಯಾದ ಅಶನಿವೇಗನು ವಸುದೇವನನ್ನು ಎತ್ತಿಕೊಂಡು ಹೋಗುತ್ತಿದ್ದನು. ನಿದ್ರೆಯಿಂದೆಚ್ಚೆತ್ತ ಶಾಲ್ಮಲಿದತ್ತೆಯು ಅಶನಿವೇಗನನ್ನು ಬೆನ್ನಟ್ಟಿದಳು. ಇದರಿಂದ ಭಯಗೊಂಡ ಅಶನಿವೇಗನು ವಸುದೇವನನ್ನು ಕೆಳಕ್ಕೆಸೆದು ಓಡಿದನು. ಕೆಳಗೆ ಬೀಳುತ್ತಿದ್ದ ವಸುದೇವನನ್ನು ಶಾಲ್ಮಲಿದತ್ತೆಯು ಹಿಡಿದು ತರುತ್ತಿರಲು ದಿಶಾದೇವತೆಗಳು ಈಗ ಕೊಂಡೊಯ್ಯುವುದು ಒಳ್ಳೆಯದಲ್ಲವೆಂದೂ, ಕೆಲವು ದಿನಗಳ ಬಳಿಕ ಕೂಡಿ ಸುಖವಾಗಿರುವನೆಂದೂ ನುಡಿದರು. ಶಾಲ್ಮಲಿದತ್ತೆಯು ಪತಿಯನ್ನು ವಿದ್ಯಾದೇವತೆಗೊಪ್ಪಿಸಿ ಹೋದಳು. ಆ ದೇವತೆಯು ವಸುದೇವನನ್ನು ಚಂಪಾಪುರದ ಬಹಿರುದ್ಯಾನವನದಲ್ಲಿಳಿಸಿದಳು. ಎಚ್ಚರಗೊಂಡ ವಸುದೇವನು ಕೊಳದಲ್ಲಿ ಪಾದಪ್ರಕ್ಷಾಳನ ಮಾಡಿ ಪಟ್ಟಣವನ್ನು ಪ್ರವೇಶಿಸಿ ಜಿನಪೂಜೆಯನ್ನು ಮಾಡಿದನು.

**ತೃತೀಯಾಶ್ವಾಸಂ:**

ವಸುದೇವನು ಜಿನದೇವಾಲಯದ ಮುಂದಣ ವಿಶಾಲಪಟ್ಟಶಾಲೆಯಲ್ಲಿ ಗಾಂಧರ್ವ ವಿದ್ಯಾಭ್ಯಾಸ ಮಾಡುತ್ತಿದ್ದುದನ್ನು ಕಂಡನು. ಹಲವು ಜನ ಶಿಷ್ಯರ ನಡುವೆ ಕುಳಿತಿದ್ದ ಗಾಂಧರ್ವಾಚಾರ್ಯರನ್ನು ಕಂಡ ಆತನು ಅತ್ತ ನಡೆದನು. ಹೀಗೆ ಬಂದ ವಸುದೇವನ ಶುಭಲಕ್ಷಣಗಳನ್ನು ಗುರುತಿಸಿದ ಗಾಂಧರ್ವಾಚಾರ್ಯರು ಆತನನ್ನು ಕರೆದು ಕುಳ್ಳಿರಿಸಿದರು. ವಸುದೇವನು ಪಟ್ಟಣದಲ್ಲೆಲ್ಲ ಹಲವರು ವೀಣಾವಾದ್ಯಗಳನ್ನು ಹಿಡಿದು ಕುಳಿತಿರಲು ಕಾರಣವೇನೆಂದು ಕೇಳಿದನು. ಆಗ ಗಾಂಧರ್ವಾಚಾರ್ಯರು ಆ ಪಟ್ಟಣದ ರಾಜ ಚಾರು

ದತ್ತನ ಮಗಳು ವೀಣಾವಾದ್ಯದಲ್ಲಿ ಗೆದ್ದವನನ್ನಲ್ಲದೆ ಮದುವೆಯಾಗೆನೆಂದಿರುವುದನ್ನು ಹೇಳಿ, ಚಾರುದತ್ತನ ಪೂರ್ವವೃತ್ತಾಂತವನ್ನು ತಿಳಿಸಿದರು.

ಚಂಪಾನಗರದ ರಾಜ ವಿಮಲವಾಹನ. ಅಲ್ಲಿಯ ವರ್ತಕ ಭಾನುದತ್ತಸೆಟ್ಟಿ. ಆ ಸೆಟ್ಟಿಯ ಹೆಂಡತಿ ದೇವಿಲೆ. ಆ ದಂಪತಿಗಳಿಗೆ ಮಕ್ಕಳಿರಲಿಲ್ಲ. ಈ ಚಿಂತೆಯಿಂದ ದೇವಿಲೆಯು ಒಂದು ದಿನ ಚಾರುಮುನಿಗಳನ್ನು ಕಂಡು ತನಗೆ ಮಕ್ಕಳಾಗುವುವೋ ಇಲ್ಲವೊ ಎಂದು ಕೇಳಿದಳು. ಮುನಿಗಳು ಮಹಾಪುರುಷನಾದ ಪುತ್ರನು ಹುಟ್ಟುವನೆಂದು ಹೇಳಿದರು. ಅದರಂತೆಯೇ ಆಕೆಯು ಮಗನನ್ನು ಪಡೆದಳು.

ಚಾರುಗಳ ಆದೇಶದಂತೆ ಹುಟ್ಟಿದ ಮಗನಿಗೆ ಚಾರುದತ್ತನೆಂದು ಹೆಸರಿಟ್ಟರು. ಆತನು ಬೆಳೆದು ರೂಪು ಯವ್ವನಗಳಿಂದ ತುಂಬಿ ಶೋಭಿಸಿದನು. ಅಷ್ಟರಲ್ಲಿ ಪಟ್ಟಣಕ್ಕೆ ಸ್ವಲ್ಪ ದೂರದ ಅಮರನಂದಿರನೆಂಬ ಬೆಟ್ಟಕ್ಕೆ ಯಮಧರ ಕೇವಳಿಗಳು ಯಾತ್ರೆ ಬಂದರು. ಭಾನುಸೆಟ್ಟಿಯು ಪರಿವಾರದೊಡನೆ ಕೂಡಿ ನಡೆದನು. ಆತನು ಚಾರುದತ್ತನನ್ನು ರಜತವಾಳುಕ ನದೀತೀರದಲ್ಲಿ ದೊರೆಯುವ ಸುಗಂಧಪುಷ್ಪಗಳನ್ನು ಮಿತ್ರರೊಡನೆ ಹೋಗಿ ಕಳುಹಿಸಬೇಕೆಂದು ಹೇಳಿಕಳುಹಿಸಿದನು. ಅದರಂತೆ ನದಿಯ ದಂಡೆಯನ್ನು ಸೇರಿದ ಚಾರುದತ್ತನು ನಾನಾ ವಿಧ ಪುಷ್ಪಗಳನ್ನು ತಿರಿದು ತಮ್ಮಯ್ಯನಿಗೆ ಕಳುಹಿಸಿ ತಾನು ನದಿಯ ರಮ್ಯತೆಗೆ ಮನಸೋತು ಅಲ್ಲಿಯೇ ಉಳಿದನು. 'ಇಂತಹ ಸುಂದರ ಪ್ರದೇಶವನ್ನು ಬಿಟ್ಟು ನಗರದಲ್ಲಿ ಪಡೆಯುವ ಭಾಗ್ಯವೇನು' ಎಂದು ಚಿಂತಿಸಿದನು. ತೊರೆಯ ಚೆಲುವನ್ನು ಕಂಡು ಮೆಚ್ಚಿ, ಅಲ್ಲಿ ಜಲಪಕ್ಷಿಗಳನ್ನೂ, ಕುಸುಮ ರಾಶಿಯನ್ನೂ, ದೇವದಂಪತಿಗಳು ನಲಿದ ಗುರುತುಗಳನ್ನೂ ನೋಡುತ್ತಾ ಬರುತ್ತಿರಲು, ಒಂದು ಕದಂಬವೃಕ್ಷದ ಮೊದಲಲ್ಲಿ ಕೀಲಿಸಿದ್ದ ವಿದ್ಯಾಧರನ ಹೆಣವನ್ನು ನೋಡಿದ ಸಖಾಯರು ಭಯಗೊಂಡರು. ಚಾರುದತ್ತನು ಮುಂದೆ ಬಂದು ಅಲ್ಲಿ ಹೊಳೆಯುತ್ತಿದ್ದ ಮೂರು ಗುಳಿಗೆಗಳನ್ನು ತೆಗೆದು ಪ್ರಯೋಗಿಸಿ ವಿದ್ಯಾಧರನನ್ನು ಬದುಕಿಸಿದನು.

ವಿಜಯಾರ್ಧಪರ್ವತದ ಮೇಲಿರುವ ಸಿದ್ಧಮಂದಿರವನ್ನು ಆಳುವ ಮಹೇಂದ್ರವಿಕ್ರಮ ಮತ್ತು ಪತ್ನಿಯರಿಗೆ ಹುಟ್ಟಿದ ಮಗ ಈ ವಿದ್ಯಾಧರ. ಈತನ ಹೆಸರು ಅಮಿತಗತಿ. ಈತನ ಪ್ರಾಣವಲ್ಲಭೆಯನ್ನು ಬಯಸಿದ ಗೌರಮುಂಡ ಮತ್ತು ಮಾರುತಿಮುಂಡರೆಂಬ ವಿದ್ಯಾಧರರು ಈತನಲ್ಲಿ ಸ್ನೇಹವನ್ನು ಬೆಳಸಿದರು. ಈತನು ಒಮ್ಮೆ ವಾಸುಪೂಜ್ಯತೀರ್ಥವಂದನೆಗೆ ಬಂದು ಹೋಗುತ್ತ ನದಿಯ ಸೌಂದರ್ಯಕ್ಕೆ ಮನಸೋತು ಪತ್ನಿಯೊಡನೆ ವಿಮಾನದಿಂದಿಳಿದು ವಿಶ್ರಮಿಸಿದನು. ಆಗ ಗೌರಮುಂಡ ಮತ್ತು ಮಾರುತಿಮುಂಡರು ಅಲ್ಲಿಗೆ ಬಂದು ವಿದ್ಯಾಧರನನ್ನು ಕೊಂದು ಮರದಲ್ಲಿ ನೇತುಹಾಕಿ ಪತ್ನಿಯನ್ನು ಎಳೆದೊಯ್ದರು. ಇಷ್ಟನ್ನು ತಿಳಿಸಿದ ವಿದ್ಯಾಧರನು ತನ್ನ ಪತ್ನಿಯನ್ನು ಹುಡುಕಲು ಹೊರಟುಹೋದನು.

ಅನಂತರ ಚಾರುದತ್ತನು ಪಟ್ಟಣಕ್ಕೆ ಹಿಂದಿರುಗಿ ಎಂದಿನಂತೆ ವಿದ್ಯಾಭ್ಯಾಸ ಮಾಡು ತ್ತಿದ್ದನು. ತಾಯಿ ದೇವಿಲೆಯು ಅಣ್ಣನಾದ ಸಿದ್ಧಾರ್ಥಸೆಟ್ಟಿಯ ಮಗಳು ಮಿತ್ರಾವತಿ ಯನ್ನು ತಂದು ಮಗನಿಗೆ ವೈಭವದಿಂದ ಮದುವೆ ಮಾಡಿದಳು. ಮದುವೆಯಾದ ಮೇಲೂ ಚಾರುದತ್ತನು ತನ್ನ ಸ್ತ್ರೀಯನ್ನು ಸ್ವಲ್ಪವೂ ಗಮನಿಸದೆ ತನ್ನ ಶಾಸ್ತ್ರಾಭ್ಯಾಸ ದಲ್ಲಿಯೇ ನಿರತನಾಗಿರಲು, ಮಿತ್ರಾವತಿಯು ತವರುಮನೆಗೆ ಹೋದಳು.

ಮಗಳ ಮುಖವನ್ನು ನೋಡಿದ ತಾಯಿಯು ಮಗಳು ವಸುದೇವನಿಂದ ವಂಚಿತ ಳಾಗಿರುವುದನ್ನು ತಿಳಿದಳು. ಬೀಗತಿ ದೇವಿಲೆಯಲ್ಲಿಗೆ ಹೋಗಿ ಛೇಡಿಸಿದಳು. ತನ್ನ ಮಗನು ಶಾಸ್ತ್ರಜಡನಾಗಿರುವುದನ್ನರಿತ ದೇವಿಲೆಯು ಮಗನನ್ನು ದಾರಿಗೆ ತರುವ ಯೋಚನೆ ಮಾಡಿದಳು. ಆಕೆಯು ತನ್ನ ಸೆಟ್ಟಿಯ ತಮ್ಮ ದುಷ್ಟನೂ ಜಾರನೂ ಆದ ರುದ್ರದತ್ತ ನನ್ನು ಕರೆದು ತನ್ನ ಮಗನು ರತಿಸುಖಾಭಿಲಾಷಿಯಾಗುವಂತೆ ಮಾಡೆಂದಳು; ಖರ್ಚಿಗೆ ಬೇಕಾದ ಹಣವನ್ನು ಕೊಟ್ಟಳು.

ಚಾರುದತ್ತನು ವಿದ್ಯಾಭ್ಯಾಸ ಮಾಡುತ್ತಿದ್ದ ಗುರುಗಳಲ್ಲಿಗೆ ರುದ್ರದತ್ತನೂ ಹೋಗಿ ವಿದ್ಯಾಭ್ಯಾಸಮಾಡಲು ತೊಡಗಿದನು. ಅಲ್ಲಿ ಈತನು ಚಾರುದತ್ತನೊಡನೆ ಮಿತ್ರತ್ವ ವನ್ನು ಬೆಳಸಿ ಉಪವನವನ್ನು ನೋಡಲು ಕರೆದೊಯ್ಯುತ್ತಿದ್ದನು. ಅಲ್ಲಿಯ ವಿಲಾಸಿನೀ ಜನರನ್ನು ತೋರಿಸುತ್ತಾ ಚಾರುದತ್ತನಿಗೆ ಶೃಂಗಾರ ಕಥೆಗಳನ್ನು ಹೇಳುತ್ತಿದ್ದ ರುದ್ರ ದತ್ತನು ಒಂದು ದಿನ ಸೂಳೆಗೇರಿಗೆ ಕರೆದೊಯ್ದನು. ಅಲ್ಲಿಯ ವಿವಿಧ ರೀತಿಯ ಸ್ತ್ರೀಯ ರನ್ನು ತೋರಿಸಿ ಅವರ ಜಾತಿಸ್ವಭಾವಗಳನ್ನು ತಿಳಿಸಿದನು.

ಮರುದಿನ ರುದ್ರದತ್ತನು ವಸಂತತಿಳಕೆಯ ರೂಪು ಯವ್ವನಗಳನ್ನು ಮನಗಂಡು, ಆಕೆಯಲ್ಲಿಗೆ ಚಾರುದತ್ತನನ್ನು ಕರೆದೊಯ್ಯುವ ಏರ್ಪಾಟುಮಾಡಿದನು. ಇದರಂತೆ ವಸಂತ ತಿಳಕೆಯನ್ನು ಕೂಡಿದ ಚಾರುದತ್ತನು ಉಳಿದೆಲ್ಲವನ್ನೂ ಮರೆತನು. ಆತನು ಶಾಸ್ತ್ರಚಿಂತೆ ಯನ್ನು ಮರೆತು, ಮನೆಯನ್ನು ತೊರೆದು ಮಾಡದ ಮೇಗಣಿಂದಿಳಿಯದೆಯೂ, ಆಕೆ ಯನ್ನುಳಿಯಲಾರದೆಯೂ ಇದ್ದನು.

**ಚತುರ್ಥಾಶ್ವಾಸಂ :**

ಹೀಗೆ ಚಾರುದತ್ತನು ವಸಂತತಿಳಕೆಯಲ್ಲಿ ಅನುರಕ್ತನಾಗಿರಲು, ಆಕೆಯ ತಾಯಿಯು ಖರ್ಚಿಗಾಗಿ ಚಾರುದತ್ತನ ಮನೆಯಿಂದ ದಿನಕ್ಕೆ ಸಾವಿರ ಗದ್ಯಾಣಗಳನ್ನೂ ಇದಲ್ಲದೆ ಹಬ್ಬ ಹರಿದಿನಗಳಿಗಾಗಿ ವಿಶೇಷವಾಗಿ ದ್ರವ್ಯವನ್ನೂ ತರಿಸಿಕೊಳ್ಳುತ್ತಿದ್ದಳು. ಆರು ವರ್ಷಕ್ಕೆ ಹದಿನಾರು ಕೋಟಿ ದ್ರವ್ಯ ತೀರಿಹೋಯಿತು. ಇದನ್ನರಿತ ಭಾನುದತ್ತಸೆಟ್ಟಿಯು ನಿರ್ವೇಗ ದಿಂದ ತಪಸ್ಸಿಗೆ ನಡೆದನು. ಆದರೆ, ದೇವಿಳೆ ತನ್ನ ಮಗನಿಗಾಗಿ ಮತ್ತೆ ಹಣವನ್ನು ನೀಡು ತ್ತಿದ್ದಳು. ಹನ್ನೆರಡು ವರ್ಷಕ್ಕೆ ಮೂವತ್ತೆರಡು ಕೋಟಿ ಹಣ ತೀರಲು, ಮಿತ್ರಾವತಿಯು ತನ್ನ ಒಡವೆಗಳನ್ನಿತ್ತಳು. ಇದನ್ನು ತಿಳಿದ ವಸಂತತಿಳಕೆಯ ತಾಯಿ 'ಸಜ್ಜನವೆಂಡಿರ

ತುಡುಗೆಯಂ ಗಂಡವರ್ಕಳಾಯುಧಮಂ ಕೊಳ್ವುದು ಪುರುಷಾರ್ಥಮಲ್ಲೆಂದು' ಅದನ್ನು ಹಿಂದಿರುಗಿಸಿದಳು. ಆಕೆಯು ನಿರ್ದ್ರವ್ಯನಾದ ಅಳಿಯನನ್ನು ಹೇಗಾದರೂ ಮಾಡಿ ಹೊರ ಹಾಕಬೇಕೆಂದು ಬಗೆದಳು. ಮಗಳು ಆತನನ್ನು ಬಿಡದಿರುವುದನ್ನರಿತ ಆಕೆಯು ಮಗಳಿಗೂ ಚಾರುದತ್ತನಿಗೂ ತೆಂಗಿನೆಳಗಾಯಲ್ಲಿ ಸೊಕ್ಕನ್ನು ಹಾಕಿ ಕುಡಿಸಿದಳು. ಇದರಿಂದ ವೈಮರೆತ ಚಾರುದತ್ತನನ್ನು ಭಾನುಸೆಟ್ಟಿಯ ಮನೆಯ ಮುಂದಣ ತಿಪ್ಪೆಯಲ್ಲಿ ಹಾಕಿಸಿದಳು.

ಎಚ್ಚೆತ್ತ ಚಾರುದತ್ತನು ತನ್ನ ಅವಸ್ಥೆಗೆ ಹೇಸಿ ಮನೆಗೆ ಹಿಂದಿರುಗಿದನು. ಅಷ್ಟರಲ್ಲಿ ಬಡತನದಿಂದ ನೊಂದ ತಾಯಿಯು ತನ್ನ ಮನೆಯನ್ನು ಮಾರಿ ಮಾವನ ಮನೆಯಲ್ಲಿದ್ದಳು. ಚಾರುದತ್ತನು ಅಲ್ಲಿ ಹೋಗಿ ತಾಯಿಯನ್ನು ಕಂಡನು. ದೇವಿಲೆಯು ಮಗನನ್ನು ತಬ್ಬಿಕೊಂಡಳು. ಆತನು ತನ್ನ ದೆಸೆಯಿಂದ ಒದಗಿದ ಕಷ್ಟಕ್ಕಾಗಿ ಪಶ್ಚಾತ್ತಾಪಗೊಂಡನು. ಪತ್ನಿ ಮಿತ್ರಾವತಿಯು ಕಮ್ಮೆಣ್ಣೆಯನ್ನು ತಂದು ಮಜ್ಜನ ಮಾಡಿಸಿ ಉಪಚರಿಸಿದಳು.

ಚಾರುದತ್ತನು ಹಿಂದಣ ಹಣವನ್ನು ಹಾಳುಮಾಡಿದುದಕಾಗಿ ಮರುಗಿ ಅದರ ಎರಡರಷ್ಟನ್ನು ಸಂಪಾದಿಸಿದಲ್ಲದೆ ಬರುವುದಿಲ್ಲವೆಂದು ಹೇಳಿ ದೇಶತ್ಯಾಗಮಾಡಿದನು. ಆತನ ಮಾವನಾದ ಸಿದ್ಧಾರ್ಥಸೆಟ್ಟಿಯು ತನ್ನಲ್ಲಿದ್ದ ಹದಿನಾರು ಕೋಟಿ ಹಣವನ್ನು ತೆಗೆದುಕೊಂಡು ಸುಖವಾಗಿರೆಂದು ಹೇಳಿದರೂ ಒಪ್ಪದೆ ಹೊರಟ ಚಾರುದತ್ತನೊಡನೆ ತಾನೂ ಹೋದನು. ಅವರಿಬ್ಬರೂ ಪಾಲಾಶಪುರವನ್ನು ಸೇರಿ ಸುಗಂಧದ್ರವ್ಯಗಳ ವ್ಯಾಪಾರಮಾಡಿ, ನೂಲನ್ನೂ ಹತ್ತಿಯನ್ನೂ ಸಂಗ್ರಹಿಸಿಕೊಂಡು ಅದನ್ನು ಹೇರಿಕೊಂಡು ಕಾಡಿನಲ್ಲಿ ಹೋಗುತ್ತಿದ್ದರು. ಕಾಡ್ಗಿಚ್ಚು ಆ ಹೇರನ್ನು ಸುಟ್ಟುಹಾಕಿತು.

ಇದರಿಂದ ಧೈರ್ಯಗುಂದದ ಚಾರುದತ್ತನು ಮತ್ತೆ ಎತ್ತುಗಳನ್ನು ಕೊಂಡು ಮುಂದುವರಿದನು. ಮುಂದೆ ಕಂಜಷ್ಟವೆಂಬ ದುರ್ಗಾಧಿಪನ ಸೇನಾಪತಿಯನ್ನು ಕೂಡಿಕೊಂಡು ಹೋಗುತ್ತಿರಲು ಕಿರಾತರು ಮೇಲೆ ಬಿದ್ದರು. ಚಾರುದತ್ತನು ಅವರನ್ನು ಎದುರಿಸಿ ಓಡಿಸಿದನು. ಅದರಲ್ಲಿ ನೊಂದ ಚಾರುದತ್ತನನ್ನು ಸೇನಾಪತಿಯು ಬೀಡಿಗೆ ಕೊಂಡೊಯ್ದು ಉಪಚರಿಸಿ ಬೀಳ್ಕೊಟ್ಟನು.

ಚಾರುದತ್ತನೂ ಅವನ ಮಾವನೂ ಪ್ರಿಯಂಗುಪಟ್ಟಣವನ್ನು ಸೇರಿ ಜಲಯಾತ್ರೆಯನ್ನು ಕೈಗೊಂಡರು. ಬಹಿತ್ರವನ್ನೇರಿದ ಅವರು ಒಂದು ದ್ವೀಪದಲ್ಲಿ ಕೊಂಡು ಮತ್ತೊಂದು ದ್ವೀಪದಲ್ಲಿ ಮಾರುತ್ತಾ ಕಳಶಪುರ, ಗಜದ್ವೀಪ, ಕಟಹರ, ಲಂಕಾ, ಅಶೋಕ, ಸಿಂಹಳ, ಪಾಂಡು, ಕೇರಳ, ಬಬ್ಬರಾದಿ ಸಮುದ್ರೋಪಕಂಠದ ಪಟ್ಟಣಗಳಲ್ಲಿ ಸಂಚರಿಸಿ ಹನ್ನೆರಡು ವರ್ಷಗಳಲ್ಲಿ ಮೂವತ್ತೆರಡು ಕೋಟಿ ದ್ರವ್ಯವನ್ನು ಕೂಡಿಹಾಕಿದರು.

ಈ ದ್ರವ್ಯವನ್ನು ತೆಗೆದುಕೊಂಡು ಹಿಂದಿರುಗುತ್ತಿದ್ದ ಅವರ ಹಡಗು ಬಿರುಗಾಳಿಯಲ್ಲಿ ಸಿಕ್ಕಿ ಒಡೆದುಹೋಯಿತು. ಸಿದ್ಧಾರ್ಥನು ಚಾರುದತ್ತನನ್ನು ಪ್ರಮಾದವಲಗೆಯನ್ನೇರಿಸಿ ತಾನೊಂದನ್ನೇರಿ ಸಮುದ್ರದಲ್ಲಿ ಬಿದ್ದನು. ಇಬ್ಬರೂ ಬೇರೆ ಬೇರೆಯಾದರು. ಚಾರುದತ್ತನು

ಗಾಳಿಯ ವಶದಿಂದ ಅಂಬರಾಪತಿಯೆಂಬ ಊರಿಗೆ ಬಂದು ಸಿದ್ಧಾರ್ಥಸೆಟ್ಟಿಯು ಪಟ್ಟಣಕ್ಕೆ ಹಿಂದಿರುಗಿದ ವಿಷಯವನ್ನು ತಿಳಿದನು.

ಅಲ್ಲಿ ನಾಲ್ಕು ದಿನವಿದ್ದ ಚಾರುದತ್ತನು ಸಿಂಧುದೇಶಕ್ಕೆ ಹೋಗಿ ಧನದತ್ತಸೆಟ್ಟಿಯನ್ನು ಕಂಡು ತನ್ನ ಮಾವ ಸಿದ್ಧಾರ್ಥಸೆಟ್ಟಿಯ ಸುಖವಾರ್ತೆಯನ್ನು ಕೇಳಿದನು. ಧನದತ್ತ ಸೆಟ್ಟಿಯು ಸಿದ್ಧಾರ್ಥಸೆಟ್ಟಿಯ ಎಂಟು ಕೋಟಿ ಹಣ ತನ್ನಲ್ಲಿರುವುದನ್ನು ತಿಳಿಸಿ ಅದನ್ನು ಚಾರುದತ್ತನಿಗೆ ಕೊಡಬಯಸಿದನು. ಆದರೆ ಚಾರುದತ್ತನು ಅದನ್ನು ನಿರಾಕರಿಸಿ ಧರ್ಮ ಕಾರ್ಯಕ್ಕಾಗಿ ಕೊಡುವಂತೆ ಹೇಳಿದನು.

ಆ ಕಾಲದಲ್ಲಿ ಸಾಹಸಪುರುಷನೂ ದಾನಶೂರನೂ ಆದ ಚಾರುದತ್ತನನ್ನು ಬಿಟ್ಟರೆ ಬೇರಿಲ್ಲ ಎಂದು ಲೋಕವೆಲ್ಲವೂ ಹೊಗಳುತ್ತಿದ್ದಿತು. ಇದನ್ನು ಪರೀಕ್ಷಿಸಬೇಕೆಂದು ಬಗೆದ ವೀರಪ್ರಭನೆಂಬ ವ್ಯಂತರದೇವನು ಚಾರುದತ್ತನು ಬರುವ ಚೈತ್ಯಾಲಯದ ಸಭಾಂಗಣದಲ್ಲಿ ವಿಕ್ರಮಾದಿತ್ಯನ ರೂಪುಧರಿಸಿ ಶೂಲೆಯಾಯ್ತೆಂದು ಗೋಳಾಡುತ್ತಿದ್ದನು. ಬಸದಿಯ ಪೂಜೆಗೆ ಬಂದ ಚಾರುದತ್ತನು ಮನುಷ್ಯನ ಬಲದ ಪಕ್ಕೆಲುಬಿನ ಕಾವಿನಿಂದ ಈ ರೋಗ ವಾಸಿಯಾಗುವುದೆಂದು ತಿಳಿದು ತನ್ನ ಪಕ್ಕೆಲುಬನ್ನು ಕತ್ತರಿಸಿಕೊಟ್ಟು, ಅದರಿಂದ ಮೂರ್ಛಿತನಾದನು. ವಿಕ್ರಮಾದಿತ್ಯನು ಸಂಜೀವನ ಪ್ರಯೋಗದಿಂದ ಚಾರುದತ್ತನನ್ನು ಬದುಕಿಸಿ ಸುವರ್ಣವೃಷ್ಟಿಯನ್ನು ಕರೆದನು.

ಅಲ್ಲಿಂದ ಚಾರುದತ್ತನು ಹೇಮಾಂಗವೆಂಬ ನಾಡ ರಾಜಪುರದ ಸಮೀಪದ ತಾಪಸ ಪಳ್ಳಿಯನ್ನು ಸೇರಿದನು. ಅಲ್ಲಿ ಪೂರ್ಣಾಕ್ಷಿಯೆಂಬ ತಾಪಸನು ಚಾರುದತ್ತನ ಸ್ವವಿಷಯ ವನ್ನು ತಿಳಿದು ಉಪಚರಿಸಿದನು. ಆತನು ಬೆಟ್ಟದಲ್ಲಿರುವ ರಸದ ಕೂಪಕ್ಕೆ ಚಾರುದತ್ತ ನನ್ನು ಕರೆದೊಯ್ದು ಬಾವಿಯಲ್ಲಿಳಿಸಿ, ತಾನು ಹೊರಟುಹೋದನು. ಮೋಸಹೋದ ಚಾರುದತ್ತನು ರಸ ಕುಡಿಯಲು ಬಂದ ಉಡುವಿನ ಬಾಲವನ್ನು ಹಿಡಿದು ಮೇಲೆ ಬಂದು ಮುಂದೆ ನಡೆದನು. ವಿಧಿಯ ಆಟವೂ ಎಂಬಂತೆ ದಾರಿಯಲ್ಲಿ ಹುಲ್ಲಿನ ನಡುವೆಯಿದ್ದ ಹಾವನ್ನು ಮೆಟ್ಟಿದನು. ಅಷ್ಟರಲ್ಲಿ ಕಾಡ್ಕೋಣವೊಂದು ಬಂದಿತು. ಹಾವು ಮಹಿಷ ನನ್ನು ನುಂಗಿತು.

ಚಾರುದತ್ತನು ಮುಂದೆ ನಡೆದು ನದಿಯ ದಡದಲ್ಲಿ ವಿಶ್ರಮಿಸಿಕೊಳ್ಳುತ್ತಿರಲು ರುದ್ರ ದತ್ತನೂ ಐವರು ಸಹಾಯಕರೂ ಅಲ್ಲಿಗೆ ಬಂದರು. ತಾಯಿ ಮತ್ತು ಪತ್ನಿಯರ ಕ್ಷೇಮ ಸಮಾಚಾರವನ್ನು ತಿಳಿದ ಚಾರುದತ್ತನು ವಸಂತತಿಳಕೆಯು ತಪಸ್ವಿನಿಯಾಗಿರುವುದನ್ನು ಅರಿತನು.

ಈ ಎಲ್ಲರೂ ಕೂಡಿ ಶ್ರೀಪುರವೆಂಬ ಪಟ್ಟಣವನ್ನು ಸೇರಿದರು. ಅಲ್ಲಿ ಅವರು ಪ್ರಿಯಂಗುಸೆಟ್ಟಿಯ ಆತಿಥ್ಯದಲ್ಲಿ ಕೆಲವು ದಿನವಿದ್ದರು. ಚಾರುದತ್ತನು ವಿದ್ಯೋಪದೇಶ ದಿಂದ ಸ್ವಲ್ಪ ಹಣವನ್ನು ಮಾಡಿಕೊಂಡು, ಗಾಂಧಾರದೇಶದಲ್ಲಿ ಬಳೆಗಳನ್ನು ಕೊಂಡು ಕಿರಾತಾಶ್ರಯದಲ್ಲಿ ಮಾರಿ ಹಣವನ್ನು ಗಳಿಸಿದನು. ಅಲ್ಲಿಂದ ಅವರು ರತ್ನದ್ವೀಪಕ್ಕೆ

ಹೊರಟರು. ಅಜಪಥವನ್ನು ದಾಟಬೇಕಾಗಿದ್ದ ಅವರು ಏಳು ದೊಡ್ಡ ಆಡಹೋರಿಗಳನ್ನು ತರಿಸಿ ಅವುಗಳ ಮೇಲೆ ಕುಳಿತು ಅಜಪಥವನ್ನು ದಾಟಿದರು. ಚಾರುದತ್ತನಿಲ್ಲದಿರುವ ವೇಳೆಯಲ್ಲಿ ರುದ್ರದತ್ತಾದಿಗಳು ಏಳು ಆಡುಗಳ ಚರ್ಮವನ್ನು ಸುಲಿದರು. ಇದನ್ನು ಕಂಡ ಚಾರುದತ್ತನು ವ್ಯಸನಪಟ್ಟನು. ಪ್ರಾರಬ್ಧ ಕರ್ಮಕ್ಕೆ ಬೇರೆ ದಾರಿಯಿಲ್ಲವೆಂದುಕೊಂಡನು. ಅವರೆಲ್ಲರೂ ಚರ್ಮಗಳ ಚೀಲಗಳಲ್ಲಿ ಕುಳಿತರು. ಏಳು ಹಕ್ಕಿಗಳು ಅವುಗಳನ್ನು ಕೊಂಡೊಯ್ದುವು. ಚಾರುದತ್ತನನ್ನು ಹೊತ್ತ ಹಕ್ಕಿಯು ಆ ಚೀಲವನ್ನು ಎಲ್ಲಿಯೋ ಹಾಕಿತು.

ಸಖಾಯರಿಂದ ಬೇರೆಯಾದ ಚಾರುದತ್ತನು ಬೆಟ್ಟವನ್ನೇರಿ ಮುನಿಗಳನ್ನು ಕಂಡು ಭವದ ವಾರ್ತೆಯನ್ನು ಕೇಳಿದನು. ಅಷ್ಟರಲ್ಲಿ ಅಲ್ಲಿಗೆ ಬಂದ ಸಿಂಹಗ್ರೀವನೆಂಬ ಖಚರನು ಚಾರುದತ್ತನ ವಿಷಯವನ್ನು ತಿಳಿದು ಆತನನ್ನು ವಿಮಾನದಲ್ಲಿ ಮಂದಿರವೆಂಬ ಪಟ್ಟಣಕ್ಕೆ ಕರೆದೊಯ್ದನು. ಅಲ್ಲಿ ಸಿಂಹಗ್ರೀವನ ಮಗಳು ಗಾಂಧರ್ವದತ್ತೆಯನ್ನು ಚಾರುದತ್ತನು ಮದುವೆಯಾಗಿ, ಬೀಳ್ಕೊಂಡು ಚಂಪಾಪುರದ ಬಹಿರುದ್ಯಾನದಲ್ಲಿ ಬೀಡುಬಿಟ್ಟನು. ಇತ್ತ ರತ್ನದ್ವೀಪದಲ್ಲಿಳಿದ ರುದ್ರದತ್ತಾದಿಗಳು ಚಾರುದತ್ತನನ್ನು ಕಾಣದೆ ಮನೆಗೆ ಮರಳಿ ಆತನನ್ನು ಸಂಧಿಸಿದರು.

ತಾಯಿ ಮಾವ ಪತ್ನಿಯರನ್ನು ಕೂಡಿಕೊಂಡ ಚಾರುದತ್ತನು ಮಿತ್ರಾವತಿ, ವಸಂತತಿಳಕೆ ಮೊದಲಾದ ಹದಿನೆಂಟು ಜನ ಪತ್ನಿಯರಿಗೆ ಹದಿನೆಂಟು ಬಳ್ಳಿಮಾಡಗಳನ್ನೂ ಗಾಂಧರ್ವದತ್ತೆಗೆ ಕನ್ಯಾಮಾಡವನ್ನೂ ಮಾಡಿಸಿ ಸುಖದಿಂದಿದ್ದನು.

**ಪಂಚಮಾಶ್ವಾಸಂ :**

ಈ ವಿಧವಾಗಿ ಚಾರುದತ್ತನ ಮಗಳಾದ ಗಾಂಧರ್ವದತ್ತೆಯ ವಿಷಯವನ್ನು ತಿಳಿದ ವಸುದೇವನು ಮರುದಿನ ವೀಣಾಸ್ವಯಂವರಕ್ಕೆ ಹೋದನು. ವಸುದೇವನ ವೀಣಾವಾದನಕ್ಕೆ ಮಾರುಹೋದ ಗಾಂದರ್ವದತ್ತೆಯು ಆತನ ಕೊರಳಲ್ಲಿ ಮಾಲೆಹಾಕಿದಳು. ಇಬ್ಬರೂ ಇಷ್ಟವಿಷಯ ಕಾಮಭೋಗಗಳನ್ನು ಅನುಭವಿಸುತ್ತಿದ್ದರು.

ಕೆಲವು ದಿನಗಳಲ್ಲಿಯೇ ವಸುದೇವನು ಅಲ್ಲಿಂದ ಹೊರಟು ವಸಂತಪುರದಲ್ಲಿ ಕೇತುಮತಿಯನ್ನೂ, ಪುಷ್ಕಳಾವತಿಯಲ್ಲಿ ಪ್ರಭಾವತಿಯನ್ನೂ ಮದುವೆಯಾದನು. ಹೀಗೆಯೇ ಶೋಭನಕ್ರಿಯಾ ವಿಧಾನ ಮತ್ತು ಗಾಂಧರ್ವ ವಿವಾಹದಿಂದ ತಂದ ಆರುನೂರ ತೊಂಬತ್ತೆಂಟು ಸ್ತ್ರೀಯರನ್ನು ಅಲ್ಲಲ್ಲಿಯೇ ಬಿಟ್ಟುಬಂದು ಅರಿಷ್ಟಪುರವನ್ನು ಹೊಕ್ಕನು. ಅಲ್ಲಿ ರೋಹಿಣಿಯನ್ನು ವರಿಸಿದನು. ಇದನ್ನು ಸಹಿಸದ ಜರಾಸಂಧಾದಿ ರಾಜರು ಯುದ್ಧಕ್ಕೆ ಬಂದರು. ಅಲ್ಲಿ ಸಮುದ್ರವಿಜಯನೂ ಬಂದಿರಲು ಅಣ್ಣತಮ್ಮಂದಿರು ಸಂಧಿಸಿ ಕೂಡಿಕೊಂಡರು. ಯುದ್ಧ ನಿಂತಿತು. ಸಮುದ್ರವಿಜಯನು ತಮ್ಮನನ್ನು ಸ್ವಲ್ಪ ದಿನದಲ್ಲಿಯೇ ಊರಿಗೆ ಬರುವಂತೆ ಹೇಳಿ ಹಿಂದಿರುಗಿದನು.

ವಸುದೇವನು ರೋಹಿಣಿಯೊಡನೆ ಸುಖವಾಗಿದ್ದನು. ಒಂದು ದಿನ ಮಾಡದ ಮೇಗಣ ನೆಲೆಯಲ್ಲಿ ಪವಡಿಸಿದ್ದ ವಸುದೇವನನ್ನು ವಿದ್ಯಾಧರಿಯೊಬ್ಬಳು ಎತ್ತಿಕೊಂಡು ವೇದಂಡಪರ್ವತದ ಮೇಗಣ ಗಗನಾನಂದಪುರದ ಉಪವನದಲ್ಲಿರಿಸಿದಳು. ಅಲ್ಲಿಯ ವಾಯುವೇಗನು ತನ್ನ ಮಗಳು ಬಾಲಚಂದ್ರೆಯನ್ನು ವಸುದೇವನಿಗಿತ್ತು ಮದುವೆ ಮಾಡಿದನು.

ವಸುದೇವನು ಅಲ್ಲಿ ಕೆಲವು ದಿನಗಳಿದ್ದು ನಾನಾ ವಿಧ ವಸ್ತುವಾಹನಗಳ ಸಮೇತ ಮಾನನಿಂದ ಬೀಳ್ಕೊಂಡು ಹೆಂಡತಿಯೊಡನೆ ಅರಿಷ್ಟಪುರಕ್ಕೆ ಹಿಂದಿರುಗಿದನು. ಕೆಲವು ದಿನಗಳಲ್ಲಿ ಇದುವರೆಗೆ ವರಿಸಿದ ಪತ್ನಿಯರನ್ನು ಕರೆಸಿಕೊಂಡು ಸೂರ್ಯಪುರಕ್ಕೆ ಹಿಂದಿರುಗಿದನು.

ಪಟ್ಟದ ರಾಣಿಯಾದ ರೋಹಿಣಿಯು ತಲೆನೀರ್ವಿಂದು ಸುಖದಿಂದ ನಿದ್ರೆಹೋಗಿ ಪೂರ್ಣಚಂದ್ರನು ಮಾಣಿಕ್ಯವನ್ನು ನುಂಗಿದಂತೆ ಕನಸು ಕಂಡಳು. ಇದನ್ನು ಪತಿಗೆ ತಿಳಿಸಿ, ತನ್ನ ಗರ್ಭದಲ್ಲಿ ಮಹಾಪುರುಷನೊಬ್ಬನು ಅವತರಿಸುವನೆಂದು ಅರಿತಳು. ನವಮಾಸಗಳು ತುಂಬಿದ ಆಕೆಯು ಮಗನನ್ನು ಹಡೆದಳು. ಆತನಿಗೆ ಬಲದೇವನೆಂದು ಹೆಸರಿಟ್ಟರು.

ಕಂಸನು ವಸುದೇವನಲ್ಲಿ ಧನುರ್ವಿದ್ಯೆಯನ್ನು ಕಲಿಯುತ್ತಿದ್ದನು. ಪೌದನಪುರಾಧಿಪತಿಯಾದ ಸಿಂಹರಥನೆಂಬುವನು ಬಹಳ ಅಹಂಕಾರದಿಂದ ಮೆರೆಯುತ್ತಿರಲು ಜರಾಸಂಧ ಚಕ್ರವರ್ತಿಯು ಆತನ ಮೇಲೆ ದಂಡೆತ್ತಿ ನಡೆದನು. ಜರಾಸಂಧನ ದಂಡು ಸೋತು ಓಡಿ ಹೋಗಲು, ಆತನು ಸಿಂಹರಥನನ್ನು ಗೆದ್ದವನಿಗೆ ತನ್ನ ಮಗಳನ್ನೂ ಮೆಚ್ಚಿದ ನಾಡನ್ನೂ ಕೊಡುವೆನೆಂದು ಘೋಷಣೆಯನ್ನಿಡಿಸಿದನು. ಇದನ್ನು ಕೇಳಿದ ವಸುದೇವನು ಕಂಸನೊಡನೆ ಕೂಡಿಕೊಂಡು ಸಿಂಹರಥನ ಮೇಲೆ ದಂಡೆತ್ತಿಹೋದನು. ಕಂಸನು ಸಿಂಹರಥನನ್ನು ಕಟ್ಟಿತಂದು ವಸುದೇವನಿಗೊಪ್ಪಿಸಿದನು. ಜಯಶಾಲಿಯಾಗಿ ಹಿಂದಿರುಗಿದ ತಮ್ಮನ ಪರಾಕ್ರಮಕ್ಕೆ ಸಮುದ್ರವಿಜಯನು ಸಂತಸಗೊಂಡನು.

ವಸುದೇವನು ಸಿಂಹರಥನನ್ನು ಜರಾಸಂಧನಿಗೊಪ್ಪಿಸಿದನು. ಇದರಿಂದ ಸಂತುಷ್ಟನಾದ ಜರಾಸಂಧನು ಬಯಸಿದ ನಾಡನ್ನು ಕೇಳಬಹುದೆಂದನು. ವಸುದೇವನು ಸಿಂಹರಥನನ್ನು ಹಿಡಿದು ತಂದ ಕಂಸನಿಗೆ ಮಗಳನ್ನೂ ನಾಡನ್ನೂ ಕೊಡುವಂತೆ ಹೇಳಿದನು. ಕಂಸನು ತಾನು ಮಿಡಂಗುಲಿಗನ ಮಗನೆಂದೂ ಕೊಳುಕೊಡೆಗೆ ತಕ್ಕನಲ್ಲವೆಂದೂ ನುಡಿಯಲು, ಅವನ ತಂದೆತಾಯಿಗಳನ್ನು ಕರೆಸಿ ನಿಜಾಂಶವನ್ನರಿತನು. ಇದರಿಂದ ಕಂಸನು ಮಥುರಾನಗರದ ರಾಜ ಉಗ್ರಸೇನ ಮತ್ತು ರಾಣಿ ಪದ್ಮಾವತಿಯ ಮಗನೆಂದು ತಿಳಿಯಿತು. ಜರಾಸಂಧನು ಕಂಸನಿಗೆ ಮಗಳು ಜೀವಂಜಸೆಯನ್ನು ಮದುವೆ ಮಾಡಿಕೊಟ್ಟು ಬೇಕಾದ ನಾಡನ್ನು ತೆಗೆದುಕೊಳ್ಳುವಂತೆ ಹೇಳಿದನು. ಕಂಸನು ಉಗ್ರಸೇನನ ನಾಡನ್ನು ತೆಗೆದುಕೊಂಡನು. ಇದರಿಂದ ತಂದೆ ಮಕ್ಕಳಿಗಿರುವ ಹಗೆತನವನ್ನರಿತ ವಸುದೇವನು ಅವರ

ಪೂರ್ವಭವ ವಿಷಯವನ್ನು ತಿಳಿಸಬೇಕೆಂದು ಭಟಾರರನ್ನು ಕೇಳಿಕೊಂಡನು. ಭಟಾರರು ಹೀಗೆ ಹೇಳಿದರು.

ಕೌಸಿಕವೆಂಬ ಊರಿನಲ್ಲಿದ್ದ ವಶಿಷ್ಟನೆಂಬ ತಾಪಸನು ಸೂರ್ಯನ ತಾಪ ಮತ್ತು ಕಿಚ್ಚುಗಳ ಮಧ್ಯೆ ತಪಸ್ಸು ಮಾಡುತ್ತಿದ್ದನು. ಇದನ್ನು ನೋಡಿದ ಚಾರಣಋಷಿಗಳು ಇದು ಅಜ್ಞಾನ ತಪಸ್ಸೆಂದರು. ತಾಪಸನು ಕೋಪದಿಂದ ಮೇಲಿದ್ದ ಪುಳ್ಳಿಗಡಿನ ಕೊಡಲಿಯನ್ನು ಹಿಡಿದು ಅಜ್ಞಾನ ತಪಸ್ಸು ಹೇಗೆಂಬುದನ್ನು ತೋರಿಸು ಎಂದು ಅವರನ್ನು ಅಡ್ಡಗಟ್ಟಿದನು. ಆ ಚಾರಣರು ಒಟ್ಟಿದ ಕಿಚ್ಚಿನಲ್ಲಿ ಬೇಯುವ ಕಾಂಡವನ್ನು ಸೀಳಿ ನಿಡಿವೀಡ ಮಿಡುಕುವ ಹಾವಿನ ಮರಿಗಳನ್ನು ತೋರಿಸಿದರು.

ಇದರಿಂದ ತಾಪಸನು ಚಾರಣರಲ್ಲಿ ದೀಕ್ಷೆಯನ್ನು ತೆಗೆದುಕೊಂಡನು. ಆತನು ವಿಹಾರಿಸುತ್ತಾ ಮಧುರೆಗೆ ಬಂದನು. ಅಲ್ಲಿಯ ರಾಜ ಉಗ್ರಸೇನನು ಮುನಿಗಳಿಗೆ ತಾನೇ ಚರಿಗೆಯಿಕ್ಕ ಬಯಸಿ ಆ ತಾಪಸನನ್ನು ಊರಿನಲ್ಲಾರೂ ನಿಲ್ಲಿಸಬಾರದೆಂದು ಘೋಷಣೆಯಿಡಿಸಿದನು. ಅಂದು ಆನೆಯೊಂದು ಮದಿಸಿರಲು ಅದನ್ನು ಅಂಕೆಗೆ ತರುವ ಕಾರ್ಯದಲ್ಲಿ ರಾಜನು ಮಗ್ನನಾಗಿ ಮುನಿಯನ್ನು ಮರೆತನು. ಇದರಿಂದ ಮುನಿಯು ಚರಿಗೆಯಿಲ್ಲದೆ ಹಿಂದಿರುಗಬೇಕಾಯಿತು. ಹೀಗೆಯೇ ಮತ್ತೆರಡು ಸಲವೂ ಚರಿಗೆಗೆ ಹೋದ ಮುನಿಯನ್ನು ಇತರ ಕಾರಣಗಳಿಂದ ರಾಜನು ಮರೆತನು. ರಾಜಘೋಷಣೆಯಿಂದ ಇತರರಾರೂ ಚರಿಗೆ ಈಯದಂತಾಯಿತು.

ಮುನಿಯು ಹಿಂದಿರುಗುತ್ತಾ ನಡೆಯಲಾರದೆ ಬೀದಿಯ ಕೊನೆಯಲ್ಲಿ ಬಳಲಿರಲು ಪುರಜನರು ಮರುಗಿ ಇದಕ್ಕೆ ರಾಜನೇ ಕಾರಣವೆಂದರು. ಇದರಿಂದ ಕೋಪಗೊಂಡ ಮುನಿಯು ಸತ್ತು ಉಗ್ರಸೇನನ ರಾಣಿ ಪದ್ಮಾವತಿಯಲ್ಲಿ ನೆಲಸಿದನು. ಹೀಗೆ ನೆಲಸಿದ ಮಗುವಿನ ದೆಸೆಯಿಂದ ರಾಣಿಗೆ ಗಂಡನ ರಕ್ತವನ್ನೇ ಕುಡಿಯುವ ಬಯಕೆಯಾಯಿತು. ಈ ಬಯಕೆಯನ್ನು ಚಿತ್ರದ ಲೆಪ್ಪದ ಬೊಂಬೆಯ ಮೂಲಕ ಈಡೇರಿಸಲಾಯಿತು. ದಿನತುಂಬಿ ಹುಟ್ಟಿದ ಮಗನು ವಿಪರೀತ ರೂಪಿನಿಂದ ಕೂಡಿರಲು ಕಂಚಿನ ಪೆಟ್ಟಿಗೆಯಲ್ಲಿಟ್ಟು ಅದನ್ನು ಜಮುನೆ ನದಿಯಲ್ಲಿ ತೇಲಿಬಿಟ್ಟರು. ಈ ಪೆಟ್ಟಿಗೆಯನ್ನು ಕೌಶಂಬಿಯ ಕಳವತಿ ತೆಗೆದು ಕೊಂಡು ಮಗುವನ್ನು ಸಾಕಿದಳು ಎಂಬುದಾಗಿ ಮುನಿಗಳು ಕಂಸನ ಕಥೆಯನ್ನು ನಿರೂಪಿಸಿದರು.

ಕಂಸನು ಕೆಲವು ದಿನ ವಸುದೇವನಲ್ಲಿದ್ದು ಮಧುರೆಗೆ ಹಿಂದಿರುಗಿದನು. ಅಲ್ಲಿ ತನ್ನ ತಂದೆ ಉಗ್ರಸೇನನನ್ನೂ ತಾಯಿ ಪದ್ಮಾವತಿಯನ್ನೂ ಸೆರೆಯಲ್ಲಿಟ್ಟು ಸುಖದಿಂದಿದ್ದನು. ಉಗ್ರಸೇನನ ಅಣ್ಣ ದೇವಸೇನನಿಗೆ ದೇವಕಿ ಮತ್ತು ಅತಿಮುಕ್ತಕ ಎಂಬಿಬ್ಬರು ಮಕ್ಕಳಿದ್ದರು. ಅತಿಮುಕ್ತಕ ಕುಮಾರನು ತಪಸ್ಸಿಗೆ ನಡೆದನು. ಕಂಸನು ದೇವಕಿಯನ್ನು ವಸುದೇವನಿಗೆ ಗುರುದಕ್ಷಿಣೆಯಾಗಿ ಮದುವೆ ಮಾಡಿಕೊಟ್ಟನು.

**ಷಷ್ಠಾಶ್ವಾಸಂ :**

ದೇವಸೇನನ ಮಗ ಅತಿಮುಕ್ತಕನು ತಪಸ್ಸಿಗೆ ನಡೆದು ವಿಹಾರಿಸುತ್ತಾ ಪಟ್ಟಣಕ್ಕೆ ಬಂದನು. ಪಾರಣೆಯ ದಿನ ಕಂಸನ ಮನೆಯ ಮುಂದೆ ಬಂದಾಗ ಜೀವಂಜಸೆಯು ಮೈದುನ ಋಷಿಯನ್ನು ಕೀಟಲೆ ಮಾಡಿದಳು. ಅವಳು ದೇವಕಿಯಾನಂದವಸ್ತ್ರವಿದೆಂದು ದೇವಕಿಯ ಬಟ್ಟೆಯನ್ನು ತೋರಿದಳು. ಇದರಿಂದ ನೊಂದ ಋಷಿಯು ಜೀವಂಜಸೆಯ ಗಂಡನನ್ನೂ ತಂದೆಯನ್ನೂ ದೇವಕಿಯಲ್ಲಿ ಹುಟ್ಟಿದ ಮಗನೇ ಕೊಲ್ಲುವನೆಂದನು. ಜೀವಂಜಸೆಯು ಚಿಂತೆಗೀಡಾದಳು. ಇದನ್ನು ತಿಳಿದ ಕಂಸನು ಉಪಾಯವನ್ನು ಯೋಚಿಸಿದನು.

ಕಂಸನು ದೇವಕಿಯ ಪ್ರಸವವು ತನ್ನ ಮನೆಯಲ್ಲಾಗಲೆಂದು ವಸುದೇವನನ್ನು ಕೇಳಿಕೊಂಡನು. ವಸುದೇವನು ದೇವಕಿಯನ್ನು ಕಂಸನಲ್ಲಿಗೆ ಕಳುಹಿಸಿಕೊಟ್ಟನು. ಆಕೆಯು ಯಮಳರನ್ನು ಹೆರಲು ನೈಗಮದೇವನು ಮಾಯಾಶಿಶುಗಳನ್ನು ದೇವಕಿಯ ಬಳಿಯಿರಿಸಿ ನಿಜವಾದ ಮಕ್ಕಳನ್ನೆತ್ತಿಕೊಂಡು ಹೋದನು. ಮತ್ತೆರಡು ಸಾರಿ ಮಕ್ಕಳಾದಾಗಲೂ ಇದೇ ರೀತಿ ಮಾಡಲಾಯಿತು. ಕಂಸನು ಮಾಯಾಶಿಶುಗಳನ್ನೇ ನಿಜಶಿಶುಗಳೆಂದರಿತು ಅವುಗಳನ್ನು ಬಂಡೆಯಲ್ಲಿ ಬಡಿದು ಸಾಯಿಸಿ ಅತಿಮುಕ್ತಕರಾದೇಶವನ್ನು ಹುಸಿಮಾಡಿದೆನೆಂದು ಬಗೆದನು. ಆದರೆ ಆ ಶಿಶುಗಳು ಬೇರೆಡೆ ಬೆಳೆಯುತ್ತಿದ್ದುವು. ದೇವಕಿಯ ನಾಲ್ಕನೆಯ ಗರ್ಭದಲ್ಲಿ ಏಳನೆಯ ತಿಂಗಳಲ್ಲಿ ಹುಟ್ಟಿದ ಮಗುವನ್ನು ವಸುದೇವನು ಕೊಂಡೊಯ್ದನು.

ಅಷ್ಟರಲ್ಲಿ ಸಮೀಪದ ತುರುಪಟ್ಟಿಯ ನಂದಗೋಪನು ಹೆಣ್ಣು ಹುಟ್ಟಿತೆಂದು ಬೇಸರಗೊಂಡು ದೇವತೆಗೊಪ್ಪಿಸಲು ಬಂದಿದ್ದನು. ಆತನು ಆ ಮಗುವನ್ನು ದೇವರ ಬಳಿಯಿಟ್ಟು ಹೋಗಲು, ವಸುದೇವನು ತನ್ನ ಮಗುವನ್ನು ಅಲ್ಲಿರಿಸಿ ಆ ಹೆಣ್ಣು ಮಗುವನ್ನೆತ್ತಿಕೊಂಡು ಮರೆಯಲ್ಲಿದ್ದು ದೇವತೆಯೇ ಕರೆದಂತೆ ಗಂಡುಗೂಸನ್ನು ಕೊಡುವೆನೆಂದು ಕರೆದನು. ದೇವತೆಯೆ ಕರೆದು ಕೊಟ್ಟಿತೆಂದು ಬಗೆದ ನಂದಗೋಪನು ಆ ಮಗುವನ್ನು ತೆಗೆದುಕೊಂಡು ಹೋಗಿ ಸಾಕಿದನು. ಮಗುವನ್ನು ಕೃಷ್ಣಯಕ್ಷಿಯು ಕೊಟ್ಟುದರಿಂದ ಅವನಿಗೆ ಕೃಷ್ಣನೆಂದು ಹೆಸರಿಟ್ಟರು.

ವಸುದೇವ ಬಲರಾಮರು ಆ ಹೆಣ್ಣು ಮಗುವನ್ನು ತಂದು ದೇವಕಿಯಲ್ಲಿ ಬಿಟ್ಟರು. ದೇವಕಿ ಬೆಸಲೆಯಾದುದನ್ನರಿತ ಕಂಸನು ಹೆಣ್ಣು ಮಗುವೆಂದು ತಿಳಿದು ಆ ಕೂಸಿನಾಣ್ಮನಿಂದ ಹೇಗಾದರೂ ಕೇಡಾಗುವುದೆಂದು ಬಗೆದು ಅದರ ಮೂಗನ್ನು ಒತ್ತಿ ವಿರೂಪಮಾಡಿದನು. ಆಕೆಯು ಬೆಳೆದು ಯವ್ವನೆಯಾಗಿ ತನ್ನ ವಿರೂಪಕ್ಕೆ ಹೇಸಿ ತಪಸ್ವಿನಿಯಾಗಿ ಹೋದಳು. ಆಕೆಯು ವಿಂಧ್ಯಪರ್ವತದಲ್ಲಿ ತಪಸ್ಸಿನಲ್ಲಿರಲು ಒಂದು ದಿನ ಹುಲಿ ಬಂದು ಆಕೆಯನ್ನು ತಿಂದು ಹೋಯಿತು.

ಇತ್ತ ಪಟ್ಟಣದಲ್ಲಿ ಅಶುಭಗಳಾಗಲು ಕಂಸನು ನೈಮಿತ್ತಿಕರಿಂದ ವೈರಿಯ ಬೆಳೆಯುವಿಕೆಯನ್ನು ತಿಳಿದನು. ಅದನ್ನು ನಿವಾರಿಸಲೋಸುಗ ಹಿಂದಣ ಭವದಲ್ಲಿ ತನಗೆ ವಶರಾಗಿದ್ದ

ಏಳು ವ್ಯಂತರದೇವತೆಗಳಿಂದ ಹಗೆಯನ್ನು ತೀರಿಸಬಯಸಿದನು. ಈ ವ್ಯಂತರದೇವತೆಗಳು ವಿವಿಧ ರೂಪುಗಳಿಂದ ಕೃಷ್ಣನನ್ನು ಸಂಹರಿಸಹೋಗಿ ಸಾಧ್ಯವಾಗದೆ ಸೋತು ಹಿಂದಿರುಗಿದರು. ಕೃಷ್ಣನ ಯಶಸ್ಸು ಜನಜನಿತವಾಯಿತು.

ಇದನ್ನು ಕೇಳಿದ ದೇವಕಿಯು ಮಗನನ್ನು ನೋಡಬಯಸಿದಳು. ವಸುದೇವನೂ ಬಲದೇವನೂ ಉಪಾಯಾಂತರದಿಂದ ಗೋಮುಖಿಯೆಂಬ ನೋಂಪಿಯ ನೆಪದಲ್ಲಿ ತುರುಪಟ್ಟಿಗೆ ಬಂದು ಎಲ್ಲರನ್ನೂ ಸೇರಿಸಿದರು. ಇಷ್ಟರಲ್ಲಿ ಅಂಗಾರಕನೆಂಬ ಖೇಚರನು ತನಗೆಂದಿದ್ದ ಕೂಸನ್ನು ವಸುದೇವನಿಗೆ ಕೊಟ್ಟ ದುಃಖದಿಂದಲೂ ಕಾದಿ ಸೋತ ಅವಮಾನದಿಂದಲೂ ಕೃಷ್ಣನನ್ನು ಕೊಲ್ಲಲು ಅರಿಷ್ಟನನ್ನು ಕಳುಹಿಸಿದನು. ಆತನು ಗೂಳಿಯಾಗಿ ಹೋಗಿ ಕೃಷ್ಣನಿಂದ ಸೋತುಹೋದನು.

ಇದರಿಂದ ಸಂತಸಗೊಂಡ ಗೋಪಾಲರು ಕೃಷ್ಣನೊಡನೆ ಗೋಮುಖಿನೋಂಪಿಗೆ ಹೋಗಿ ಪೂಜೆಮಾಡಿದರು. ಕೃಷ್ಣನನ್ನು ನೋಡಿದ ದೇವಕಿಯು ಸಂತಸಗೊಂಡಳು. ಆಕೆಯು ಮಗನನ್ನು ವಿವಿಧಾಲಂಕಾರಗಳಿಂದ ಅಲಂಕರಿಸಿ ತೊಡೆಯ ಮೇಲೆ ಕುಳ್ಳಿರಿಸಿಕೊಂಡಳು. ಪ್ರೀತಿಯಿಂದ ಆಕೆಯ ಸ್ತನಗಳಲ್ಲಿ ಹಾಲುಕ್ಕಿ ಹರಿಯಿತು. ಇದನ್ನು ತಿಳಿದ ಬಲರಾಮನು ಗುಪ್ತವಿಷಯವು ಪ್ರಕಟವಾಗುವುದೆಂದು ಬಗೆದು ಈ ನೋಂಪಿಯಲ್ಲಿ ನೋಂತವರು ಹಾಲನ್ನು ಮಿಂಯಬೇಕೆಂದು ಹೇಳಿ ಆಕೆಯ ಮೇಲೆ ಹಾಲು ಸುರಿದನು. ಎಲ್ಲರನ್ನೂ ಬೀಳ್ಕೊಟ್ಟ ವಸುದೇವ ದೇವಕಿಯರು ಪಟ್ಟಣಕ್ಕೆ ಮರಳಿದರು.

ವಿಜಯಾರ್ಧಪರ್ವತದ ರಥನೂಪುರ ಚಕ್ರವಾಳಪುರವನ್ನು ಆಳುವ ಸುಕೇತುವೆಂಬ ವಿದ್ಯಾಧರನಿಗೂ ಸ್ವಯಂಪ್ರಭೆಗೂ ಸತ್ಯಭಾಮೆಯೆಂಬ ಮಗಳಿದ್ದಳು. ಬೆಳೆದು ದೊಡ್ಡವಳಾದ ಆಕೆಯು ಚಕ್ರವರ್ತಿಗೆ ಅಗ್ರಮಹಿಷಿಯಾಗುವಳೆಂದು ನೈಮಿತ್ತಿಕರು ಹೇಳಿದರು. ರಾಜನು ಭರತಕ್ಷೇತ್ರದಲ್ಲಿ ಪ್ರಸಿದ್ಧನಾಗಿದ್ದ ಕಂಸನಲ್ಲಿಗೆ ಪೆರ್ಗಡೆಗಳನ್ನಟ್ಟಿ ಐಯ್ವಾಯಶಂಖವನ್ನು ಪೂರೈಸಿ, ನಾಗಶಯ್ಯೆಯಲ್ಲಿ ಪವಡಿಸುವವನು ಯಾವನೊ ಅವನಿಗೆ ಸತ್ಯಭಾಮೆಯನ್ನು ಕೊಡುವುದಾಗಿ ಸಾರಿಸಿದನು. ಇದನ್ನು ಕೇಳಿದ ಕೃಷ್ಣನು ಈ ಕೆಲಸಗಳನ್ನು ಪೂರೈಸಿ ಸತ್ಯಭಾಮೆಯನ್ನು ವರಿಸಿದನು.

ಕಂಸನು ಹಗೆಯನ್ನು ಕೊಲ್ಲುವ ಉಪಾಯಗಳನ್ನು ಯೋಚಿಸುತ್ತಾ ಕಾಳಿಂದಿಯ ಮಡುವಿನ ಮಧ್ಯಗಲ್ಲಿರುವ ಶತಪತ್ರಪುಷ್ಪವನ್ನು ತಂದೊಪ್ಪಿಸುವಂತೆ ನಂದಗೋಪನಿಗೆ ಓಲೆಯನ್ನಟ್ಟಿದನು. ಇದರಿಂದ ನಂದಗೋಪನು ಚಿಂತೆಗೀಡಾದನು. ಆದರೆ ಕೃಷ್ಣನು ಮುಂದೆ ಬಂದು ಹೂವನ್ನು ತಂದನು. ನಂದಗೋಪನು ಹೂವನ್ನು ಕಂಸನಿಗೊಪ್ಪಿಸಿ ಕೃಷ್ಣನೊಡನೆ ಬರುತ್ತಿರಲು ದಾರಿಯಲ್ಲಿ ಮಹಾಗಜೇಂದ್ರವೊಂದು ಕೋಪದಿಂದ ಬರುತ್ತಿದ್ದಿತು. ಕೃಷ್ಣನು ಅದನ್ನು ಹಿಡಿದು ಕೊಂದನು.

ಈ ವಿಷಯವೆಲ್ಲವನ್ನೂ ತಿಳಿದ ಕಂಸನು ಚಾಣೂರಾದಿ ಜಟ್ಟಿಗಳನ್ನು ಮಲ್ಲಯುದ್ಧದಲ್ಲಿ ಕೃಷ್ಣನನ್ನು ಕೊಲ್ಲುವಂತೆ ಹೇಳಿಕಳಿಸಿದನು. ಆದರೆ ಆ ಜಟ್ಟಿಗಳೆಲ್ಲರೂ ಕೃಷ್ಣ

ನಿಂದ ಹತರಾದರು. ಇದನ್ನು ನೋಡಿ ಸೈರಿಸದ ಕಂಸನು ಕೃಷ್ಣನ ಮೇಲೆ ಬಿದ್ದನು. ಕೃಷ್ಣನು ಆತನನ್ನು ಕೊಂದನು. ಉಗ್ರಸೇನ ಪದ್ಮಾವತಿಯರ ಬಂಧವಿಮೋಚನೆ ಯಾಯಿತು. ಕೃಷ್ಣನು ಉಗ್ರಸೇನನಿಗೆ ರಾಜ್ಯವನ್ನೊಪ್ಪಿಸಿ ತಾನು ಸೂರ್ಯಪುರಕ್ಕೆ ಹೋದನು.

## ಸಪ್ತಮಾಶ್ವಾಸಂ :

ಇತ್ತ ಮಥುರೆಯಲ್ಲಿ ಜೀವಂಜಸೆಯು ತನ್ನ ಪತಿಯನ್ನು ಕೊಂದವನ ತಲೆಯನ್ನು ತುಳಿದಲ್ಲದೆ ಬಿಡೆನೆಂದು ಪ್ರತಿಜ್ಞೆ ಮಾಡಿದಳು. ಆಕೆಯು ತನ್ನ ತಂದೆ ಜರಾಸಂಧನ ಲ್ಲಿಗೆ ಹೋದಳು. ಜರಾಸಂಧನು ಮಗಳನ್ನು ಸಂತೈಸಿ ಕೃಷ್ಣನ ತಲೆಯನ್ನು ತರಲು ತನ್ನ ಮಗ ಕಾಲಯವನನ್ನು ಕಳುಹಿಸಿದನು. ಕಾಲಯವನು ಸೋತು ಹಿಂದಿರುಗಿ ಬರಲು ಆತನ ತಮ್ಮ ಅಪರಾಜಿತನು ಹೋದನು. ಆತನೂ ಸೋತು ಮರಳಿದನು.

ಹೀಗೆ ಜರಾಸಂಧನ ಮಕ್ಕಳನ್ನು ಹೊಡೆದೋಡಿಸಿದರೂ ಜರಾಸಂಧನೊಡನೆ ಶತ್ರುತ್ವ ಸರಿಯಲ್ಲವೆಂದು ಬಗೆದ ಸಮುದ್ರವಿಜಯಾದಿಗಳು ಪಟ್ಟಣವನ್ನು ಬಿಟ್ಟು ಪಶ್ಚಿಮದಿಕ್ಕಿಗೆ ನಡೆದರು. ಅವರು ಪದ್ಮಾವತಿ ಎಂಬ ಪಟ್ಟಣದ ಹತ್ತಿರ ಬೀಡುಬಿಟ್ಟಿರಲು ಜರಾಸಂಧನ ಮಗ ಅಪರಾಜಿತನು ದಂಡೆತ್ತಿ ಬಂದನು. ಸಮುದ್ರವಿಜಯಾದಿಗಳು ಮತ್ತೆ ಪಶ್ಚಿಮಕ್ಕೆ ನಡೆದು ಅವಂತೀವಿಷಯದ ಉಜ್ಜಯಿನಿಯ ಪಶ್ಚಿಮಭಾಗದಲ್ಲಿ ಬೀಡುಬಿಟ್ಟಿದ್ದರು. ಹರಿವಂಶವನ್ನು ರಕ್ಷಿಸುವ ಕುಲದೇವತೆಯು ಕೈಗೊಂಡ ಉಪಾಯದಿಂದ ಸಮುದ್ರವಿಜಯಾದಿ ಗಳು ಸತ್ತರೆಂದರಿತ ಜರಾಸಂಧನ ಮಗನು ಹಿಂದಿರುಗಿದನು.

ಇತ್ತ ದೇವೇಂದ್ರನ ಆದೇಶದಂತೆ ದ್ವಾರಾವತಿಯೆಂಬ ಪಟ್ಟಣವು ನಿರ್ಮಿತ ವಾಯಿತು. ಅಲ್ಲಿ ಕೃಷ್ಣನಿಗೆ ಪಟ್ಟಾಭಿಷೇಕವಾಯಿತು. ಇದನ್ನು ಕೇಳಿದ ಸುಕೇತು ವೆಂಬ ರಾಜನು ತನ್ನ ಮಗಳನ್ನು ಕೃಷ್ಣನಿಗೆ ಮದುವೆಮಾಡಿಕೊಟ್ಟನು.

ಒಂದು ದಿನ ನಾರದನು ಕೃಷ್ಣನಲ್ಲಿಗೆ ಬಂದು ರುಗ್ಮಿಣಿಯ ರೂಪುಲಾವಣ್ಯಗಳನ್ನು ವರ್ಣಿಸಿ, ಆಕೆಯು ಕೃಷ್ಣನಿಗೆ ತಕ್ಕವಳೆಂದೂ ಈಗ ಅವಳನ್ನು ಶಿಶುಪಾಲನಿಗೆ ಕೊಟ್ಟು ಮದುವೆ ಮಾಡಲಿರುವರೆಂದೂ ತಿಳಿಸಿದನು. ಇದನ್ನರಿತ ಕೃಷ್ಣನೂ ಬಲರಾಮನೂ ಸಾತ್ಯಕಿ ಮತ್ತು ಅರ್ಜುನರನ್ನು ಕೂಡಿಕೊಂಡು ಕುಂಡಿನಪುರಕ್ಕೆ ಬಂದರು. ಸಾತ್ಯಕಿಯೂ ಅರ್ಜುನನೂ ಪುರವನ್ನು ಪ್ರವೇಶಿಸಿ ರಾಜಾಲಯದ ಮುಂದಿದ್ದು, ರಾಜಕನ್ಯೆಯು ಜಿನಾಲಯಕ್ಕೆ ಹೋಗಿಬರುತ್ತಿರಲು ಕಾಪಿನವರನ್ನಿರಿದು ಕನ್ನೆಯನ್ನೆತ್ತಿಕೊಂಡು ಹೊರಟರು.

ಈ ವಿಷಯವನ್ನು ತಿಳಿದ ವಿಶ್ವಾವಸುರಾಜನು ಕೋಪಗೊಳ್ಳಲು ಹಿರಿಯರುಗಳು ಮಗಳನ್ನೆತ್ತಿಕೊಂಡು ಹೋದವನು ಸಾಮಾನ್ಯನಲ್ಲವೆಂದು ಹೇಳಿ ಸಮಾಧಾನಪಡಿಸಿದರು. ಶಿಶುಪಾಲನು ಕೃಷ್ಣನ ಮೇಲೆ ದಂಡೆತ್ತಿಬಂದನು. ಎರಡು ಕಡೆಯ ವೀರರಿಗೂ ಹಣಾಹಣಿ

ಯುದ್ಧವಾಯಿತು. ಶಿಶುಪಾಲನು ಕೃಷ್ಣನನ್ನು ಎದುರಿಸಿ ಹಲವಾರು ಮಾತುಗಳಿಂದ ಆತನನ್ನು ತೆಗಳಿದನು. ಶಿಶುಪಾಲನ ತಾಯಿಗೆ ನೀಡಿದ್ದ ವಚನದಂತೆ ಕೃಷ್ಣನು ಆತನ ನೂರು ಬೈಗುಳಗಳನ್ನು ಸಹಿಸಿದನು. ಕೊನೆಗೆ ಆತನು ಶಿಶುಪಾಲನನ್ನು ಕೊಂದು, ರುಗ್ಮಿಣಕುಮಾರನನ್ನು ಸಂತೈಸಿ ರುಗ್ಮಿಣಿಯನ್ನು ಮದುವೆಯಾದನು. ಆತನು ಆಕೆಗೆ ಮಹಾದೇವಿ ಪಟ್ಟಗಟ್ಟಿ ಸುಖದಿಂದಿದ್ದನು.

ಮತ್ತೆ ನಾರದನು ದಕ್ಷಿಣಶ್ರೇಣಿಯ ಜಂಬೂಪುರವನ್ನಾಳುವ ಜಂಭಾಂಬರ ರಾಜನ ಮಗಳು ಜಂಭಾವತಿಯ ರೂಪು ಸೊಬಗುಗಳನ್ನು ಕೃಷ್ಣನಿಗೆ ತಿಳಿಸಿದನು. ಕೃಷ್ಣನೂ ಬಲರಾಮನೂ ಸಾಮದಿಂದ ವ್ಯವಹರಿಸಿ ಸಾಧ್ಯವಾಗದಿರಲು, ಜಂಭಾಂಬರನನ್ನು ಕೊಂದರು. ಜಂಭಾವತಿಯನ್ನು ಶ್ರೀಕೃಷ್ಣನು ವರಿಸಿದನು. ಹೀಗೆಯೇ ಸುಖಮೆಯನ್ನೂ ಇನ್ನೂ ಹಲವಾರು ಉತ್ತಮ ಸ್ತ್ರೀಯರನ್ನೂ ಮದುವೆಯಾಗಿ ಇಷ್ಟವಿಷಯ ಸುಖವನ್ನನು ಭವಿಸುತ್ತಿದ್ದನು.

**ಅಷ್ಟಮಾಶ್ವಾಸಂ :**

ರುಗ್ಮಿಣಿ ಸತ್ಯಭಾಮೆಯರು ಪ್ರಭುತ್ವಕ್ಕಾಗಿ ಮತ್ಸರಿಸುತ್ತಿದ್ದರು. ಇದನ್ನು ಕಂಡ ಕೃಷ್ಣನು ಇಬ್ಬರಲ್ಲಿ ಯಾರು ಮೊದಲು ಪುತ್ರನನ್ನು ಪಡೆಯುವಳೋ ಅವಳೇ ಮೊದಲನೆ ಯ.ವಳೆಂದನು. ಮೊದಲು ರುಗ್ಮಿಣಿಯೂ ಅನಂತರ ಸತ್ಯಭಾಮೆಯೂ ಮಕ್ಕಳನ್ನು ಹಡೆದರು.

ತನ್ನ ಹಗೆ ಹುಟ್ಟಿದುದನ್ನು ಅವಧಿಜ್ಞಾನದಿಂದ ತಿಳಿದ ಧೂಮಕೇತುವೆಂಬ ಅಸುರನು ಅದೃಶ್ಯನಾಗಿ ಬಂದು ರುಗ್ಮಿಣಿಯ ಮಗುವನ್ನು ಎತ್ತಿಕೊಂಡು ಹೋದನು. ರುಗ್ಮಿಣಿಯು ದುಃಖಿತಳಾದಳು. ಇದನ್ನು ತಿಳಿದ ಕೃಷ್ಣನು ಕೋಪಗೊಳ್ಳಲು ಅಶರೀರವಾಣಿಯೊಂದು ಮಗನು ವಿದ್ಯಾಧರಶ್ರೇಣಿಯಲ್ಲಿ ಬೆಳೆದು ಹದಿನಾರು ವರ್ಷಗಳಿಗೆ ಬರುವನೆಂದು ಹೇಳಿ ಸಂತೈಸಿತು.

ಇತ್ತ ಕೂಸನ್ನೊಯ್ದ ಧೂಮಕೇತುವು ಪೂರ್ವಭವ ಕ್ರೋಧದಿಂದ ಪ್ರೇರಿತನಾಗಿ ಮಗುವನ್ನು ಕತ್ತರಿಸಬಯಸಿದನು. ಆದರೆ ಈ ಕ್ರೂರವಿಧಿಯಿಂದ ತಾನು ದುರ್ಗತಿಯಲ್ಲಿ ಬೀಳುವೆನೆಂದು ಬಗೆದ ಆತನು ಮಗುವನ್ನು ತಕ್ಷಕಶಿಲೆಯ ಮೇಲಿರಿಸಿ ಹೋದನು. ಅಷ್ಟರಲ್ಲಿ ಮೇಘಕೂಟ ಪಟ್ಟಣವನ್ನಾಳುವ ಕಾಳಸಂಬರ ವಿದ್ಯಾಧರನು ರಾಣಿ ಕಾಂಚನಮಾಲೆಯೊಡನೆ ವಿಮಾನಾರೂಢನಾಗಿ ಹೋಗುತ್ತಾ ಈ ಮಗುವನ್ನು ನೋಡಿದನು. ಶುಭಲಕ್ಷಣಗಳಿಂದ ಕೂಡಿದ ಆ ಮಗುವನ್ನೆತ್ತಿಕೊಂಡು ಹೋದ ಆತನು ಅದನ್ನು ತನ್ನ ಪತ್ನಿಗಿತ್ತನು. ಗೂಢಗರ್ಭದಿಂದ ರಾಣಿಗೆ ಹುಟ್ಟಿದ ಮಗನೆಂದು ಹೇಳಿ ಆತನಿಗೆ ಪ್ರದ್ಯುಮ್ನನೆಂದು ಹೆಸರಿಟ್ಟು ಸಲಹಿದನು. ಬಾಲಕನು ಬಾಲಚಂದ್ರನಂತೆ ಬೆಳೆದು ಯೌವನದಿಂದ ಕೂಡಿ ಹಲವು ವಿದ್ಯೆಗಳಲ್ಲಿ ಪರಿಣತನಾದನು.

ಅಗ್ನಿರಾಜನೆಂಬುವನು ಮಲೆತಿರಲು ಆತನ ಮೇಲೆ ಯುದ್ಧಕ್ಕೆ ಹೋದ ಪ್ರದ್ಯುಮ್ನನು ಆತನನ್ನು ಸೆರೆಹಿಡಿದು ತಂದನು. ಇದರಿಂದ ಸಂತಸಗೊಂಡ ಕಾಳಸಂಬರ ಕಾಂಚನಮಾಲೆಯರು ಪ್ರದ್ಯುಮ್ನನಿಗೆ ಯುವರಾಜಪದವಿಯನ್ನಿತ್ತರು. ಅವರ ಉಳಿದ ಐವರು ಪುತ್ರರು ಹಗೆತನದಿಂದ ಪ್ರದ್ಯುಮ್ನನನ್ನು ಕೊಲ್ಲುವ ಏರ್ಪಾಟು ಮಾಡಿದರು. ಅವರು ಪ್ರದ್ಯುಮ್ನನನ್ನು ಸಿದ್ಧಕೂಟಕ್ಕೆ ಕರೆದೊಯ್ದು ಅಲ್ಲಿದ್ದ ಹಲವು ವಿದ್ಯೆಗಳನ್ನು ಸಾಧಿಸುವ ನೆಪದಲ್ಲಿ ಪ್ರದ್ಯುಮ್ನನ ಸಾವನ್ನು ನೋಡಬಯಸಿದರು. ಆದರೆ ಪ್ರದ್ಯುಮ್ನನು ಆ ಎಲ್ಲ ವಿದ್ಯೆಗಳನ್ನೂ ಸಾಧಿಸಿ ಹಲವು ಉತ್ತಮ ಸಾಧನಗಳನ್ನು ಪಡೆದು ಹಿಂದಿರುಗಿದನು.

ಸುರಸುಂದರನಾದ ಪ್ರದ್ಯುಮ್ನನ ರೂಪಿಗೆ ಹಲವು ಹೆಂಗಸರು ಮನಸೋತರು. ಕಾಳಸಂಬರನ ಹೆಂಡತಿ ಕಾಂಚನಮಾಲೆಯೂ ಇದಕ್ಕೆ ಹೊರತಾಗಲಿಲ್ಲ. ಆಕೆಯ ಮದನಜ್ವರ ಅತಿಯಾಯಿತು. ಯಾವ ಶೈತ್ಯಕ್ರಿಯೆಯಿಂದಲೂ ಆಕೆಯು ವಿಮುಕ್ತಳಾಗದಾದಳು. ತಾಯಿಯನ್ನು ನೋಡಬಂದ ಪ್ರದ್ಯುಮ್ನನ ಕೈಯನ್ನು ಹಿಡಿದ ಆಕೆಯು ತನ್ನ ಮದನಜ್ವರವನ್ನು ನಿವಾರಿಸಬೇಕೆಂದಳು. ಆತನು ಬೆದರಿ ಇದು ಪಿತ್ತಜ್ವರದಿಂದಾದ ಕೇಡೆಂದನು. ಅದಕ್ಕೆ ಆಕೆಯು ತಾನು ಆತನ ತಾಯಿಯಲ್ಲವೆಂದೂ ತಸ್ಕರಶಿಲೆಯಲ್ಲಿ ಸಿಕ್ಕಿದನನೆಂದೂ ತನ್ನನ್ನು ಕೂಡಿ ತಣಿಸಬೇಕೆಂದೂ ಪ್ರದ್ಯುಮ್ನನನ್ನು ಬೇಡಿಕೊಂಡಳು. ಆತನು ಆಕೆಯ ಇಚ್ಛೆಯನ್ನು ನೆರವೇರಿಸಲು ಸಾಧ್ಯವಿಲ್ಲದವನಾಗಿ ಹಿಂದಿರುಗಿದನು. ಇದರಿಂದ ಕುಪಿತಳಾದ ಆಕೆಯು ಪ್ರದ್ಯುಮ್ನನನ್ನು ಕೊಲ್ಲಬಯಸಿ ತನ್ನ ಪತಿಯಲ್ಲಿ ದೂರಿತ್ತಳು. ಮಗನು ತನ್ನನ್ನು ಘಾಸಿಮಾಡಿದನೆಂದು ತಾನೇ ಮಾಡಿಕೊಂಡ ಗಾಯಗಳನ್ನು ತೋರಿಸಿದಳು. ಇದನ್ನು ನಂಬಿದ ಕಾಳಸಂಬರನು ಉಳಿದ ಐವರು ಮಕ್ಕಳಿಗೆ ಪ್ರದ್ಯುಮ್ನನನ್ನು ಕೊಲ್ಲುವಂತೆ ಹೇಳಿದನು. ಅವರು ಪ್ರದ್ಯುಮ್ನನನ್ನು ಕೊಲ್ಲಬಂದು ಕೋಡಗಗಟ್ಟು ಕಟ್ಟಿಸಿಕೊಂಡರು. ಇದನ್ನು ತಿಳಿದ ಕಾಳಸಂಬರನು ತಾನೇ ದಂಡೆತ್ತಿ ನಡೆದನು. ಅಷ್ಟರಲ್ಲಿ ನಾರದನು ಬಂದು ಇಬ್ಬರನ್ನೂ ಸಮಾಧಾನಪಡಿಸಿದನು. ತನ್ನ ಕಾರ್ಯಕ್ಕೆ ಪಶ್ಚಾತ್ತಾಪಗೊಂಡ ಕನಕಮಾಲೆಯು ನಿಜವಿಷಯವನ್ನು ತಿಳುಹಿಸಿ ತಪಕ್ಕೆ ಹೋದಳು.

**ನವಮಾಶ್ವಾಸಂ :**

ನಾರದನು ಪ್ರದ್ಯುಮ್ನನ ಪೂರ್ವಚರಿತೆಯನ್ನು ವಿವರಿಸಿ ಆತನನ್ನು ತನ್ನ ಜತೆಯಲ್ಲಿ ಕರೆದೊಯ್ದನು. ದಾರಿಯಲ್ಲಿ ಆತನು ಹಸ್ತಿನಾಪುರವನ್ನು ತೋರಿಸಿ, ಅಲ್ಲಿ ಪ್ರದ್ಯುಮ್ನನ ಮಾವ ದುರ್ಯೋಧನನಿರುವನೆಂದೂ, ಆತನ ಮಗಳು ಉದಧಿಯನ್ನು ಸತ್ಯಭಾಮೆಯ ಮಗ ಭಾನುಕುಮಾರನಿಗೆ ಕೊಡುವರೆಂದೂ ತಿಳಿಸಿದನು ; ಈ ಮದುವೆಯಾದರೆ ಸತ್ಯಭಾಮೆಯು ಪ್ರದ್ಯುಮ್ನನ ತಾಯಿಯ ತಲೆಯನ್ನು ಮೆಟ್ಟಿ ವಿವಾಯುವಳೆಂದನು.

ಇದನ್ನು ತಿಳಿದ ಪ್ರದ್ಯುಮ್ನನು ನಾರದನನ್ನು ಆಕಾಶದಲ್ಲಿರಿಸಿ ತಾನು ವೃದ್ಧ ನಾವಿದನಾಗಿ ರಾಣಿವಾಸವನ್ನು ಹೊಕ್ಕು ಉದಧಿಯನ್ನು ಕೊಂಡೊಯ್ದನು. ನಾವಿದನ ಕೈಗೆ ಸಿಕ್ಕಿ ಗೋಳಿಡುತ್ತಿದ್ದ ಉದಧಿಗೆ ನಾರದನು ಪ್ರದ್ಯುಮ್ನನ ನಿಜಸ್ಥಿತಿಯನ್ನು ತಿಳುಹಿಸಿ ಸಮಾಧಾನಪಡಿಸಿ ಇಬ್ಬರನ್ನೂ ಹರಸಿದನು. ಪ್ರದ್ಯುಮ್ನನು ಉದಧಿಯ ತಂದೆ ತಾಯಿಯರು ಒಪ್ಪಿದರೆ ಸ್ವೀಕರಿಸುವೆನೆಂದು ಹೇಳಿ ಆಕೆಯನ್ನು ನಾರದನ ಸಂಗಡ ದುರ್ಯೋಧನನಲ್ಲಿಗೆ ಕಳುಹಿಸಿದನು. ಉದಧಿಯ ಅಗಲಿಕೆಯಿಂದ ದುಃಖಿತರಾಗಿದ್ದ ರಾಜಪರಿವಾರವೆಲ್ಲವೂ ಸಂತಸಗೊಂಡಿತು.

ಕೂಸನ್ನೊಪ್ಪಿಸಿ ಮರಳಿದ ನಾರದನು ಪ್ರದ್ಯುಮ್ನನೊಡನೆ ಮುಂದುವರಿದನು. ಎದುರಿಲ್ಲವೆಂಬಂತೆ ಕೌರವಪಾಂಡವಸೇನೆ ಹೋಗುತ್ತಿದ್ದುದನ್ನು ಕಂಡ ಪ್ರದ್ಯುಮ್ನನು ತನ್ನ ಪ್ರತಾಪವನ್ನು ಅದಕ್ಕೆ ತೋರಬಯಸಿದನು. ಆತನು ಕಿರಾತವೇಷದಿಂದ ಅವರನ್ನಡ್ಡಗಟ್ಟಿ ಸುಂಕವನ್ನು ಕೊಟ್ಟಲ್ಲದೆ ಮುಂದುವರಿಯಲಾಗದೆಂದನು. ಈ ಮಾತನ್ನು ಲೆಕ್ಕಿಸದೆ ಮುಂದುವರಿದ ಭೀಮಾರ್ಜುನ, ಭೀಷ್ಮದ್ರೋಣಾದಿ ವೀರರೆಲ್ಲರೂ ಪ್ರದ್ಯುಮ್ನನಿಂದ ಬಂಧಿತರಾದರು. ಅವರು ಕಿರಾತನಿಗೆ ಬೇಕಾದ ಸುಂಕವನ್ನು ಹರಿಯಲ್ಲಿಯೇ ಕೊಡುವೆವೆಂದು ಒಪ್ಪಿದ ಮೇಲೆ ಎಲ್ಲರ ಬಿಡುಗಡೆಯಾಯಿತು. ಪ್ರದ್ಯುಮ್ನನು ಮುನ್ನಿನ ರೂಪವನ್ನು ಧರಿಸಿ ನಾರದನೊಡನೆ ಮುಂದೆ ನಡೆದನು.

ದ್ವಾರಾವತಿಗೆ ಬಂದ ಪ್ರದ್ಯುಮ್ನನು ನಾರದನನ್ನಿರಿಸಿ ತಾನು ಗೊರವನ ವೇಷವನ್ನು ಕೈಗೊಂಡು ಪಟ್ಟಣದಲ್ಲೆಲ್ಲಾ ವಿಶೇಷಗಳನ್ನುಂಟುಮಾಡಿದನು. ಸತ್ಯಭಾಮೆಯ ನಂದನ ವನದಲ್ಲಿದ್ದ ಕೊಳದ ನೀರೆಲ್ಲವನ್ನು ಗುಂಡಿಗೆಯಲ್ಲಿ ತುಂಬಿಕೊಂಡು ಪಟ್ಟಣದ ಮಧ್ಯದಲ್ಲಿ ಬಂದು ಸುರಿಯಲು ಅದು ಅಲ್ಲಿ ಪ್ರವಾಹದಂತೆ ಹರಿಯಿತು. ಮುಂದೆ ಆತನು ಗುಜ್ಜನೂ ಪೊರಂಡನೂ ಆಗಿ ಕಂಡಕಂಡವರಿಗೆ ಕೋಡಗದ ಬಾಲ, ಆನೆಯ ಸೊಂಡಿಲು ಮೊದಲಾದ ವಿಶೇಷಗಳನ್ನುಂಟುಮಾಡುತ್ತಿದ್ದನು. ಹಾಗೆಯೆ ಕಿವುಡರು ಕೇಳುವಂತಾದರು, ಕುರುಡರು ನೋಡುವಂತಾದರು.

ಕೊನೆಗೆ ಅವನು ಬ್ರಾಹ್ಮಣನ ವೇಷವನ್ನು ಕೈಗೊಂಡು ಸತ್ಯಭಾಮೆಯನ್ನು ಕಂಡು ಊಟಕ್ಕಿಡಿರೆಂದನು. ಎಷ್ಟೆಷ್ಟು ಬಡಿಸಿದರೂ ಆತನ ಹಸಿವಿಂಗದಿರಲು ಸತ್ಯಭಾಮೆಯು ಆತನು ಮಾಯಾವಿಯೆಂದು ತಿಳಿದು ಹೊರಗಟ್ಟಲು ಹೇಳಿದಳು.

ಗೊರವನು ತನ್ನ ವೇಷವನ್ನು ಬದಲಾಯಿಸಿ ವಿಕಾರ ವೇಷಧಾರಿಯಾಗಿ ರುಗ್ಮಿಣಿಯನ್ನು ಕಂಡನು. ಮಗನ ಬರುವಿಕೆಯನ್ನು ಕಾಯುತ್ತಿದ್ದ ರುಗ್ಮಿಣಿಯು ಈತನಿಗೆ ಉಣಲಿಕ್ಕಿದಳು. ಇಲ್ಲಿಗೆ ನಾರದನನ್ನು ಬರಮಾಡಿದ ಪ್ರದ್ಯುಮ್ನನು ತನ್ನ ನಿಜರೂಪವನ್ನು ತೋರಿಸಿದನು. ತಾಯಿಯು ಸಂತೋಷಗೊಂಡಳು. ಅನಂತರ ಆತನು ಅಯ್ಯನಿಗೆ ತನ್ನ ಪ್ರತಾಪವನ್ನು ತೋರಬಯಸಿದನು. ಆತನು ಹರಿಯ ಕರಿಯ ರೂಪದವನಾಗಿ ಓಡಿಬಂದವರನ್ನು ಅಟ್ಟಿದನು. ಕೊನೆಗೆ ತಂದೆ ಮಕ್ಕಳಿಗೆ ಹೋರಾಟ ನಡೆಯಲು

ನಾರದನಿಂದ ನಿಜಸ್ವರೂಪ ತಿಳಿಯಿತು. ಪ್ರದ್ಯುಮ್ನನೊಡನೆ ಉದಧಿ ಮತ್ತು ಇತರ ಐನೂರು ಜನ ಕನ್ಯೆಯರ ವಿವಾಹವಾಯಿತು. ಪ್ರದ್ಯುಮ್ನನು ರುಗ್ಮಿಣಿಯ ಮಗನಲ್ಲ ವೆಂದು ಹೇಳಿದ ಸತ್ಯಭಾಮೆಗೆ ನಾರದನು ತಾನು ಪ್ರದ್ಯುಮ್ನನ ಪೂರ್ವಚರಿತೆಯನ್ನು ಸೀಮಂಧರ ಮುನಿಗಳಿಂದ ಕೇಳಿತಿಳಿದುದನ್ನು ಹೇಳಿದನು.

ಭರತಕ್ಷೇತ್ರದ ಮಗಧೆಯ ಶಾಲಿಗ್ರಾಮದಲ್ಲಿ ಸೋಮಶರ್ಮನೆಂಬ ಬ್ರಾಹ್ಮಣನಿಗೂ ಅಗ್ನಿಲೆಯೆಂಬ ಪಾರ್ವಂತಿಗೂ ಅಗ್ನಿಭೂತಿ ವಾಯುಭೂತಿ ಎಂಬ ಅವಳಿ ಮಕ್ಕಳಾದರು. ಅವರು ಶಾಸ್ತ್ರವಿದ್ಯಾಪಾರಂಗತರಾಗಿ, ದೀಕ್ಷೆಯನ್ನು ತೆಗೆದುಕೊಂಡು ಸುರಲೋಕದಲ್ಲಿ ಹೋಗಿ ದಿವ್ಯಸುಖವನ್ನುಂಡು, ಅರ್ಹದ್ದಾಸನೆಂಬ ಹರದನಿಗೂ ವಿಪ್ರಶ್ರೀಗೂ ಪೂರ್ಣಭದ್ರ ಮಣಿಭದ್ರರೆಂಬ ಅವಳಿಮಕ್ಕಳಾಗಿ ಹುಟ್ಟಿದರು. ಅವರು ಪರಮಶ್ರಾವಕರಾಗಿ ಸತ್ತು ಸ್ವರ್ಗದಲ್ಲಿ ಸುಖವಾಗಿದ್ದು ಅಲ್ಲಿಂದ ಬಂದು ಹಸ್ತಿನಪುರದ ವಿಶ್ವಮಂದ್ರ ಮತ್ತು ರೂಪವತಿಗೆ ಮಧುಕೈಟಭರೆಂಬ ಮಕ್ಕಳಾಗಿ ರಾಜ್ಯವಾಳುತ್ತಿದ್ದರು. ಮಧುರಾಧಿಪತಿ ವೀರಸೇನನ ಹೆಂಡತಿ ಚಂದ್ರಾಭೆಯ ರೂಪಿಗೆ ಮನಸೋತ ಮಧುವು ಆಕೆಯನ್ನು ಎಳೆದುತಂದು ಕೂಡಿದ್ದನು. ವೀರಸೇನನು ವಿರಹದಿಂದ ರಾಜ್ಯವನ್ನು ತೊರೆದು ಭಿಕ್ಷುಕನಾಗಿ ಭೂಮಿಯಲ್ಲಿ ಅಲೆದನು.

ಹೀಗೆ ಅಲೆಯುತ್ತಾ ಆತನು ಹಸ್ತಿನಪುರಕ್ಕೆ ಬಂದು ಚಂದ್ರಾಭೆಯನ್ನು ನೆನಸಿಕೊಂಡು ಗೋಳಿಡುತ್ತಿದ್ದನು. ಇದನ್ನು ತಿಳಿದ ಮಧುರಾಜನು ಪಶ್ಚಾತ್ತಾಪಪಟ್ಟು ಸತ್ತು ದಿವಿಜೇಂದ್ರಲೋಕದಲ್ಲಿ ಹುಟ್ಟಿ, ಅಲ್ಲಿಂದ ಬಂದು ಹರಿ ಮತ್ತು ರುಗ್ಮಿಣಿಯರಿಗೆ ಮಗನಾಗಿ ಹುಟ್ಟಿದನು. ವೀರಸೇನನ ಕೋಪ ಅಜ್ಞಾನದಿಂದ ಆರದಿರಲು ಸತ್ತು ಧೂಮಕೇತುವೆಂಬ ಅಸುರನಾದನು. ಆತನು ತನ್ನ ಪೂರ್ವಭವವೈರದಿಂದ ರುಗ್ಮಿಣಿಯ ಮಗನನ್ನು ಕೊಂಡೊಯ್ದು ತಕ್ಷಶಿಲೆಯಲ್ಲಿ ಹಾಕಿದನು. ಚಂದ್ರಾಭೆಯು ಸತ್ತು ಕಾಂಚನಮಾಲೆಯಾದಳು. ಕೈಟಭದೇವನು ಸತ್ತು ಹರಿಗೆ ಮಗನಾಗಿ ಹುಟ್ಟುವನೆಂಬ ಮಾತನ್ನು ಕೇವಲಿಗಳಿಂದ ತಿಳಿದ ನಾರದನು ಸತ್ಯಭಾಮೆಗೆ ಹೇಳಿದನು.

ಇದನ್ನು ಕೇಳಿದ ಸತ್ಯಭಾಮೆಯು ತನ್ನ ಕುಮಳನ್ನು ಕೊಯ್ದು ಪರಿಚಾರಕಿಯರೊಡನೆ ಕಳುಹಲು ರುಗ್ಮಿಣಿಯು ಅದನ್ನು ಮೆಟ್ಟಿನಿಂದಳು. ಕೈಟಭರಾಜನಾಗಿದ್ದ ಜಂಭಾವತಿಯ ಮಗ ಶಂಭುಕುಮಾರನೂ ಪ್ರದ್ಯುಮ್ನನೂ ಭವಾಂತರ ಸ್ನೇಹದಿಂದ ಒಡಗೂಡಿ ಹಲವು ವಿದ್ಯೆಗಳನ್ನು ಸಾಧಿಸಿ ಬೆಳೆದರು.

ರುಗ್ಮಿಣಿಯು ತನ್ನಣ್ಣ ರುಗ್ಮಿಕುಮಾರನ ಮಗಳನ್ನು ಪ್ರದ್ಯುಮ್ನನಿಗೆ ತಂದುಕೊಳ್ಳ ಬಯಸಿ ಈ ಕಾರ್ಯಕ್ಕಾಗಿ ಹೆಗ್ಗಡೆಗಳನ್ನು ಕಳುಹಿಸಿದಳು. ಆದರೆ, ರುಗ್ಮಿಣಿಯನ್ನೆತ್ತಿಕೊಂಡು ಹೋಗುವಲ್ಲಿ ತನ್ನವರೆಲ್ಲರನ್ನೂ ಬಲಿಪಿಗೆದುಕೊಂಡುದಕ್ಕಾಗಿ ರುಗ್ಮಿಣನು ಈ ಸಂಬಂಧವನ್ನು ತಿರಸ್ಕರಿಸಿದನು. ಇದರಿಂದ ರುಗ್ಮಿಣಿಯು ಚಿಂತಾಕ್ರಾಂತಳಾದಳು. ಪ್ರದ್ಯುಮ್ನನೂ ಶಂಭುಕುಮಾರನೂ ಈ ಸಂಬಂಧವನ್ನು ಬೆಳಸಿಬರುವೆವೆಂದು ಹೊರಟರು.

ರುಗ್ಮಿಣನು ಮಗಳನ್ನು ರುಗ್ಮಿಣಿಯ ಮಗನಿಗೆ ಕೊಡುವುದಕ್ಕಿಂತ ತೊನ್ನ ಮಾದಿಗಂಗೆ ಕೊಡುವೆನೆಂದು ಹೇಳಿದ್ದರಿಂದ, ಪ್ರದ್ಯುಮ್ನನೂ ಶಂಭುಕುಮಾರನೂ ಮಾದಿಗರ ವೇಷದಿಂದ ಪುರವನ್ನು ಹೊಕ್ಕರು. ಈ ರೂಪಿಗೆ ಈ ವೇಷ ಹೊಸತೆಂದು ಪುರಜನರು ಆಶ್ಚರ್ಯಪಟ್ಟರು. ಪ್ರದ್ಯುಮ್ನನು ಪ್ರಜ್ಞಪ್ತಿವಿದ್ಯೆಯ ಸಹಾಯದಿಂದ ಮಾದೆಂಗಿತಿಯಾಗಿ ಬಂದು ರುಗ್ಮಿಣನನ್ನು ಕಂಡನು. ಆಕೆಯು ಮಾದೆಂಗಿತಿಯೆಂಬುದನ್ನು ರುಗ್ಮಿಣನು ಒಪ್ಪದಾದನು. ಹೊರಬಂದ ಪ್ರದ್ಯುಮ್ನನು ಮತ್ತೆ ಕೊರವಂಜಿಯ ವೇಷಧರಿಸಿ ರಾಣಿವಾಸಕ್ಕೆ ಹೋಗಿ ರುಗ್ಮಿಣಕುಮಾರಿಯನ್ನು ಎತ್ತಿಕೊಂಡು ಬಂದನು. ಆತನೂ ಶಂಭುಕುಮಾರನೂ ಆ ಕುಮಾರಿಯು ಮಿಳಿಯನ್ನೂ ಬೀಸನ್ನೂ ಮಾರುವ ಮಾದೆಂಗಿತಿಯ ರೂಪವನ್ನು ತಾಳಿ ಪುರದಲ್ಲಿ ಹೋಗುವಂತೆ ಮಾಡಿದರು. ಆಕೆಯ ರೂಪವನ್ನು ನೋಡಿದ ಜನರು ಬೆರಗಾದರು. ಕೊನೆಗೆ ಕಾಮದೇವ ಮತ್ತು ರುಗ್ಮಿಣಕುಮಾರಿ ವಿದರ್ಭೆಯರ ವಿವಾಹಕಾರ್ಯ ನೆರವೇರಿತು.

ಹರಿವಂಶದ ಹಿರಿಯ ಮಗ ಸಮುದ್ರವಿಜಯ ರಾಣಿ ಶಿವದೇವಿಯ ಗರ್ಭದಲ್ಲಿ ನೇಮಿ ಜಿನನಾಥನು ನೆಲಸಬರಲು ದೇವೇಂದ್ರನಿಗೆ ಆಸನಕಂಪವಾಯಿತು. ದೇವೇಂದ್ರನು ತನ್ನ ರಾಣಿಯನ್ನು ಕಳುಹಿಸಿ ಶಿವದೇವಿಯನ್ನು ಉಪಚರಿಸಿದನು. ಶಿವದೇವಿಯು ನಾಲ್ಕು ನೀರ್ಮಿಂದು ಮಲಗಿರಲು ಷೋಡಶಸ್ವಪ್ನಗಳನ್ನು ಕಂಡಳು. ಆಕೆಯ ಗರ್ಭದಲ್ಲಿ ನೇಮಿ ಜಿನನು ನೆಲಸಿರುವುದನ್ನರಿತ ದೇವತೆಗಳು ಬಂದು ಗರ್ಭಾವತರಣಮೊಸಗೆಯನ್ನು ನೆರವೇರಿಸಿದರು. ಗರ್ಭಬೆಳೆದು ನವಮಾಸಗಳು ತುಂಬಿದ ಶಿವದೇವಿಯು ವೈಶಾಖ ಶುದ್ಧ ದ್ವಾದಶಿಯಂದು ಅರಿಷ್ಟನೇಮಿಗೆ ಜನ್ಮವಿತ್ತಳು. ಜ್ಯೋತಿರ್ಲೋಕದ ದೇವತೆಗಳು ಬಂದು ಜಿನಶಿಶುವಿನ ಜನ್ಮೋತ್ಸವವನ್ನು ವಿಜೃಂಭಣೆಯಿಂದ ನೆರವೇರಿಸಿ ಸ್ತುತಿಸಿದರು. ಅವರು ಮರಳಿ ದ್ವಾರಾವತಿಯನ್ನು ಹೊಕ್ಕು ಶಿಶುವಿನ ತಾಯಿಯನ್ನೂ ತಂದೆಯನ್ನೂ ಭದ್ರಾಸನದಲ್ಲಿರಿಸಿ, ಕ್ಷೀರಸಮುದ್ರದ ನೀರಿನಿಂದ ಅಭಿಷೇಕ ಮಾಡಿ, ಜಿನಶಿಶುವನ್ನು ಪೂಜಿಸಿ ಹಿಂದಿರುಗಿದರು. ನೇಮಿಯು ಯಾವ ಕೊರತೆಯೂ ಇಲ್ಲದೆ ಬೆಳೆಯುತ್ತಿದ್ದನು.

### ದಶಮಾಶ್ವಾಸಂ :

ವೃಷಭಜಿನೇಂದ್ರನು ಕ್ಷತ್ರಿಯ ವಂಶಗಳ ಉತ್ಪತ್ತಿಯನ್ನು ಕೈಗೊಂಡನು. ಅವುಗಳಲ್ಲೊಂದಾದ ಕುರುವಂಶದಲ್ಲಿ ಸೋಮಪ್ರಭನೆಂಬರಸನು ಹಲವು ಕಾಲ ರಾಜ್ಯವಾಳಿದನು. ಅನಂತರ ಆ ವಂಶದಲ್ಲಿ ಹಸ್ತಿಯೆಂಬುವನು ಹಸ್ತಿನಾಪುರವೆಂಬ ಪಟ್ಟಣವನ್ನು ಮಾಡಿ ರಾಜ್ಯಭಾರ ಮಾಡಿದನು. ಆ ಸಂತತಿಯಲ್ಲಿ ಹಲವರು ಸಂದ ಬಳಿಕ ಶಾಂತನು ಎಂಬುವನು ಹುಟ್ಟಿದನು. ಈತನಿಗೂ ಗಂಗೆಗೂ ಗಾಂಗೇಯನು ಜನಿಸಿದನು. ಈತನು ವಿದ್ಯಾವಂತನೂ ಪ್ರತಾಪಿಯೂ ಆಗಿ ಪ್ರಸಿದ್ಧನಾದನು. ಒಂದು ಸಲ ಶಾಂತನು ವನಕ್ರೀಡೆಯಲ್ಲಿ ತೊಡಗಿ ಬರುತ್ತಾ ತಾಪಸಾಶ್ರಮದಲ್ಲಿ ವಿಶ್ರಮಿಸಿ ವಸುಧೆಯೆಂಬ ರಾಜಋಷಿಯ ಮಗಳಾದ

ಸತ್ಯವತಿಯನ್ನು ಕಂಡು ಮೋಹಗೊಂಡನು. ಆತನು ಆ ಹೆಣ್ಣನ್ನು ಮದುವೆಯಾಗ ಬಯಸಿದರೂ ಆಕೆಯ ತಂದೆಯು ಒಪ್ಪದಾದನು. ಇದರಿಂದ ಶಾಂತನು ದುಃಖಿತನಾದನು.

ಇದನ್ನು ತಿಳಿದ ಗಾಂಗೇಯನು ತನ್ನಯ್ಯನ ವಿರಹತಾಪವನ್ನು ಪರಿಹರಿಸಲೋಸುಗ ತಾಪಸನಲ್ಲಿಗೆ ಬಂದು ಕೂಸನ್ನು ಬೇಡಿದನು. ಆತನು ಶಾಂತನಿಗೆ ಗಾಂಗೇಯನಂತಹ ಸಂತಾನಕ್ಕರ್ಹನಾದ ಮಗನಿರುವಾಗ ತನ್ನ ಮಗಳನ್ನು ಕೊಡೆನೆಂದನು. ಹಾಗಾದಲ್ಲಿ ತಾನು ಬ್ರಹ್ಮಚರ್ಯವ್ರತವನ್ನು ಕೈಗೊಳ್ಳುವುದಾಗಿ ವಾಗ್ದಾನವನ್ನು ನೀಡಿದ ಗಾಂಗೇಯನು ಸತ್ಯವತಿಗಾದ ಮಕ್ಕಳೇ ಮುಂದೆ ರಾಜ್ಯಕ್ಕರ್ಹರಾಗುವರೆಂದನು.

ಶಾಂತನು ಸತ್ಯವತಿಯನ್ನು ವಿವಾಹವಾದನು. ಅವರಿಗೆ ಚಿತ್ರ ವಿಚಿತ್ರ ಎಂಬಿಬ್ಬರು ಮಕ್ಕಳಾದರು. ಚಿತ್ರನು ಯುದ್ಧದಲ್ಲಿ ಸತ್ತನು. ವಿಚಿತ್ರನೂ ಗಾಂಗೇಯನೂ ಅನ್ಯೋನ್ಯರಾಗಿ ಬಾಳುತ್ತಿದ್ದರು. ಗಾಂಗೇಯನು ಕಾಶಿದೇಶಾಧೀಶ್ವರನ ಮಕ್ಕಳಾದ ಅಂಬೆ, ಅಂಬಿಕೆ, ಅಂಬಾಲೆಯರನ್ನು ತಂದು ವಿಚಿತ್ರನಿಗೆ ಮದುವೆಮಾಡಬಯಸಿದನು. ಆದರೆ ಕಾಶಿರಾಜನು ಇದಕ್ಕೆ ಒಪ್ಪದಿರಲು ಗಾಂಗೇಯನು ಅವನನ್ನು ಯುದ್ಧದಲ್ಲಿ ಸೋಲಿಸಿ ಆ ಮೂವರನ್ನೂ ವಿಚಿತ್ರನಿಗೆ ಮದುವೆ ಮಾಡಿದನು. ಈ ಭೀಷಣಯುದ್ಧದಲ್ಲಿ ಗೆದ್ದ ಗಾಂಗೇಯನಿಗೆ ಭೀಷ್ಮರೆಂಬ ಹೆಸರಾಯಿತು.

ಅಂಬೆ, ಅಂಬಿಕೆ, ಅಂಬಾಲೆಯರಿಗೆ ಕ್ರಮವಾಗಿ ಧೃತರಾಷ್ಟ್ರ, ಪಾಂಡು, ವಿದುರರೆಂಬ ಮಕ್ಕಳಾದರು. ಈ ಮೂವರು ಬೆಳೆದು ಯವ್ವನ ಪ್ರಾಪ್ತರಾಗಲು ಧೃತರಾಷ್ಟ್ರನಿಗೆ ಗಾಂಧಾರಿಯೊಡನೆ ವಿವಾಹವಾಯಿತು. ಪಾಂಡುವಿಗೆ ಅಂಧಕವೃಷ್ಣಿಯ ಮಕ್ಕಳಾದ ಕೊಂತಿ ಮಾದ್ರಿಯರನ್ನು ತರಬಯಸಿದರು. ಆದರೆ ಪಾಂಡುರೋಗವುಳ್ಳ ಪಾಂಡುವಿಗೆ ತನ್ನ ಮಕ್ಕಳನ್ನು ಅಂಧಕವೃಷ್ಣಿಯು ಕೊಡಲು ಒಪ್ಪದಾದನು. ಕೊಂತಿಯ ಚೆಲುವನ್ನು ಕೇಳಿ ತಿಳಿದ ಪಾಂಡುಕುಮಾರನು ವಿರಹಕ್ಕೊಳಗಾಗಿ ಸಹಾಯಕರನ್ನು ಕೂಡಿಕೊಂಡು ಸೂರ್ಯಪುರಕ್ಕೆ ಹೋದನು. ಅಲ್ಲಿನ ನಂದನವನದಲ್ಲಿ ವಿಶ್ರಮಿಸುತ್ತಿದ್ದ ಪಾಂಡುವನ್ನು ಕಂಡ ಕೊಂತಿಯು ಮೋಹಗೊಂಡಳು. ಒಬ್ಬರನ್ನೊಬ್ಬರು ಒಲಿದುದನ್ನು ಕಂಡ ಸಖಿಯರು ಇಬ್ಬರಿಗೂ ಗಾಂಧರ್ವ ವಿವಾಹವನ್ನು ನೆರವೇರಿಸಿದರು. ಇಬ್ಬರೂ ಕೂಡಿ ಸುಖಿಸಿದರು. ಜೊತೆಯವರು ಇಬ್ಬರನ್ನೂ ಬೇರೆ ಬೇರೆ ಕರೆದೊಯ್ದರು. ಕನ್ಯಾಮಾಡದಲ್ಲಿದ್ದ ಕೊಂತಿಯು ಗಂಡುಗೂಸಿಗೆ ಜನ್ಮವಿತ್ತಳು. ಗುಪ್ತದಲ್ಲಾದ ಈ ಮಗುವನ್ನು ಮಂದಸಿನಲ್ಲಿಟ್ಟು ಜಮುನೆ ನದಿಯಲ್ಲಿ ಬಿಟ್ಟರು. ಆ ಪೆಟ್ಟಿಗೆಯು ಚಂಪೆಯೆಂಬ ಪಟ್ಟಣದ ಬಳಿ ಬಂದಾಗ ಅಂಬಿಗನೊಬ್ಬನು ಅದನ್ನು ತೆಗೆದುಕೊಂಡನು. ಆತನು ಅದನ್ನು ತೆರೆದು ನೋಡಿದಾಗ ಮಗುವು ಎರಡು ಕೈಗಳಿಂದಲೂ ಎರಡು ಕಿವಿಗಳನ್ನು ಹಿಡಿದಿದ್ದಿತು. ಹೀಗೆ ಬಾಲಕನು ಕರ್ಣಧಾರನಾಗಿದ್ದುದರಿಂದ ಆತನಿಗೆ ಕರ್ಣನೆಂಬ ಹೆಸರಿಟ್ಟು ಸಲಹಿದನು.

ಆ ಪಟ್ಟಣದರಸು ಸೂರ್ಯನೆಂಬವನು ಆ ಕೂಸನ್ನು ತರಿಸಿ ನೋಡಿ ಮಗುವು ಕುಲಜನೆಂದು ಬಗೆದು ಮಕ್ಕಳಿಲ್ಲದಿದ್ದ ರಾಧೆಯೆಂಬರಸಿಗೆ ಕೊಡಲು ಮಗುವು ಸೂರ್ಯಪುತ್ರನಾಗಿ ಇಲ್ಲಿ ಬೆಳೆಯುತ್ತಿದ್ದನು.

ಇತ್ತ ಅಂಧಕವೃಷ್ಣಿಯು ಗಾಂಧರ್ವವಿವಾಹದ ಸುದ್ದಿಯನ್ನು ತಿಳಿದು ಪಾಂಡು ಕುಮಾರನಿಗೆ ಓಲೆಯನ್ನಟ್ಟಿದನು. ಪಾಂಡುವು ಕೊಂತಿ ಮಾದ್ರಿಯರಿಬ್ಬರನ್ನೂ ಕೂಡ ಬೇಕೆನ್ನಲು ಅಂತೆಯೇ ಮದುವೆಯಾಯಿತು. ಎಲ್ಲರೂ ಸುಖವಾಗಿರಲು ಶಾಂತನು ಸಂಸಾರ ವಿರಕ್ತನಾಗಿ, ಧೃತರಾಷ್ಟ್ರನು ಹಿರಿಯನಾದರೂ ಅಂಧನಾದುದರಿಂದ ಪಾಂಡುವಿಗೆ ರಾಜ್ಯಭಾರವನ್ನು ವಹಿಸಿ ತಾನು ತಪಸ್ಸಿಗೆ ನಡೆದನು.

ಕೊಂತಿಯು ಗರ್ಭವತಿಯಾದಳು. ಪಾಂಡುವು ಮಾದ್ರಿಯೊಡನೆ ವನಕ್ರೀಡೆಗೆ ಹೋಗಿ ಹರಿಣಮಿಥುನಗಳನ್ನು ಬಾಣದಿಂದುರುಳಿಸಿದನು. ಇದನ್ನು ಕಂಡ ಮಾದ್ರಿಯು ಮೃಗಜಾತಿಯನ್ನು ನಿಷ್ಕಾರಣವಾಗಿ ಕೊಂದುದಕ್ಕೆ ಮರುಗಿದಳು. ಪಾಂಡುವು ವೈರಾಗ್ಯದಿಂದ ಬಿಲ್ಲು ಬಾಣಗಳನ್ನೆಸೆದು ಸುವ್ರತಸ್ವಾಮಿಗಳೆಂಬ ಆಚಾರ್ಯರನ್ನು ಕಂಡು ಧರ್ಮದ ಸ್ವರೂಪವನ್ನು ತಿಳಿದು, ಶ್ರಾವಕವ್ರತಗಳನ್ನು ಕೈಗೊಂಡು ಪಟ್ಟಣಕ್ಕೆ ಹಿಂದಿರುಗಿ ಧರ್ಮಕಾರ್ಯದಲ್ಲಿ ನಿರತನಾಗಿದ್ದನು.

ಕೊಂತಿಯು ಮಗನನ್ನು ಹಡೆಯಲು ಆತನಿಗೆ ಯುಧಿಷ್ಠಿರನೆಂದು ಹೆಸರಿಟ್ಟರು. ಧರ್ಮಮಾಹಾತ್ಮ್ಯದಿಂದ ಹುಟ್ಟಿದ ಈ ಮಗುವಿಗೆ ಧರ್ಮ ಎಂಬ ಹೆಸರೇ ಸರಿಯೆಂದು ಹಿರಿಯರು ಹೇಳಲು ಅದೇ ಹೆಸರು ಭೂತಲದಲ್ಲಿ ಪ್ರಸಿದ್ಧವಾಯಿತು. ಮತ್ತೆ ಕೊಂತಿಯು ಗರ್ಭವತಿಯಾಗಿ ಮಗನನ್ನು ಹೆರಲು, ಮೂಲಾನಕ್ಷತ್ರದಲ್ಲಿ ಹುಟ್ಟಿದ ಈ ಮಗುವನ್ನು ಸ್ಮಶಾನದಲ್ಲಿ ಬಿಸುಟರು. ಹೀಗೆ ಬಿಸುಟ ಮಗುವನ್ನು ಸುಟ್ಟುರೆ ಗಾಳಿಯು ಬೆಳಗಾಗುವವರೆಗೂ ಭೂತ ಪಿಶಾಚಿಗಳು ಹತ್ತಿರಬಾರದಂತೆ ಕಾದಿರಲು, ಅದನ್ನು ಕಂಡು ಮಗುವನ್ನು ತಂದು ವಾಯುರಕ್ಷಿತನಾದುದರಿಂದ ವಾಯುಪುತ್ರನೆಂದು ಹೇಳಿ, ಭೀಮನೆಂದು ಹೆಸರಿಟ್ಟು ಸಾಕಿದರು. ಮರಳಿ ಕೊಂತಿಯು ಗರ್ಭವತಿಯಾಗಿ ಇಂದ್ರೋತ್ಸವದ ದಿನದಲ್ಲಿ ಗಂಡು ಮಗುವಿಗೆ ಜನ್ಮವಿತ್ತಳು. ಇಂದ್ರೋತ್ಸವದಂದು ಹುಟ್ಟಿದ ಮಗುವಿಗೆ ಇಂದ್ರನ ಮಗನೆಂದು ಹೇಳಿ, ಅರ್ಜುನನೆಂಬ ಹೆಸರಿಟ್ಟು ಕೊಂಡಾಡಿದರು. ಈ ಮೂವರು ಮಕ್ಕಳಾದ ಬಳಿಕ ಮಾದ್ರಿಗೆ ನಕುಲ ಸಹದೇವರೆಂಬ ಮಕ್ಕಳಾದರು.

ಪಂಚಪರಮೇಷ್ಠಿಗಳೈವರಿಂದ ಅರುಹನ್ಮತ ಬೆಳಗುವಂತೆ ಗುಣಯುತರಾದ ಐವರು ಮಕ್ಕಳಿಂದ ಪಾಂಡುರಾಜ ಸಾಮ್ರಾಜ್ಯ ಶೋಭಿಸಿತು. ಪಾಂಡುವಿನ ಅಣ್ಣ ಧೃತರಾಷ್ಟ್ರನಿಗೆ ದುರ್ಯೋಧನ ದುಶ್ಶಾಸನಾದಿ ನೂರು ಜನ ಗಂಡುಮಕ್ಕಳೂ, ದುಶ್ಶಲೆಯೆಂಬ ಹೆಣ್ಣು ಮಗಳೂ ಆದರು. ಅವರೆಲ್ಲರೂ ಅಕ್ಷರಾದಿ ಕಲೆಗಳೆಲ್ಲದರಲ್ಲಿಯೂ ಪರಿಣತರಾಗಿ ಯವ್ವನ ಪ್ರಾಪ್ತರಾದರು. ಪಾಂಡುವು ಸುವ್ರತಸ್ವಾಮಿಗಳೆಂಬಾಚಾರ್ಯರನ್ನು ಕಂಡು ಧರ್ಮ ಶ್ರವಣದಿಂದ ದೀಕ್ಷೆಯನ್ನು ಕೈಗೊಂಡು ತಪಶ್ಚರ್ಯದಿಂದ ದಿವಿಜಲೋಕಕ್ಕೆ ಹೋದನು, ಮಾದ್ರಿಯು ತಪಸ್ಸಿನಿಂದ ಮುಡುಪಿ ಸ್ವರ್ಗವನ್ನು ಸೇರಿದಳು.

ಧೃತರಾಷ್ಟ್ರನು ಕುರುವಂಶಕ್ಕೆ ಹಿರಿಯನಾದುದರಿಂದ ಆತನ ಮಕ್ಕಳು ಕೌರವರಾದರು; ಪಾಂಡುರಾಜನ ಮಕ್ಕಳು ಪಾಂಡವರಾದರು. ಕೌರವ ಪಾಂಡವರು ಆಟಪಾಠಗಳಲ್ಲಿ

ಒಬ್ಬರೊಡನೊಬ್ಬರು ಸ್ಪರ್ಧಿಸುತ್ತ ಮಚ್ಚರಿಸುತ್ತ ಅಕ್ಷರಾದಿ ವಿದ್ಯೆಗಳನ್ನು ಕಲಿತರು. ಒಬ್ಬೊಬ್ಬರೂ ಒಂದೊಂದು ವಿದ್ಯೆಯಲ್ಲಿ ವಿಶೇಷ ಆಸಕ್ತಿಯುಳ್ಳವರಾದರು. ದುಶ್ಶಾಸನಾದಿಗಳು ಸಕಲಕಲಾ ಪರಿಣತರಾದರು.

ಹೀಗೆ ಪರಿಣತರಾದ ಕೌರವ ಪಾಂಡವರು ಸುಖದಿಂದಿರುವಲ್ಲಿ ಆ ಪಟ್ಟಣಕ್ಕೆ ಭಾರದ್ವಾಜನ ಮಗ ಚಾಪವಿದ್ಯಾಚತುರನಾದ ದ್ರೋಣನೆಂಬುವನು ಬಂದನು. ಕೃಪನು ಈತನನ್ನು ಕೌರವ ಪಾಂಡವರ ಬಿಲ್ವಿದ್ಯೆಯ ಗುರುವನ್ನಾಗಿ ಮಾಡಿ ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿದನು. ಅವರಿಗೆ ಅಶ್ವತ್ಥಾಮನೆಂಬ ಮಗನಾದನು.

ಒಂದು ದಿನ ಕರ್ಣನಿಗೂ ಭೀಮನಿಗೂ ವಾಗ್ವಾದವಾಯಿತು. ಇದನ್ನು ಕಂಡ ದುರ್ಯೋಧನನು ಕರ್ಣನಿಗೆ ಅಂಗರಾಜ್ಯವನ್ನು ಕೊಟ್ಟು ಅಂಗಾಧಿಪತಿಯನ್ನಾಗಿ ಮಾಡಿದನು. ಪಾಂಡವರ ವಿದ್ಯಾಬಲಕ್ಕೂ ಜನಾನುರಾಗಕ್ಕೂ ಸೈರಿಸದ ದುರ್ಯೋಧನನು ತನ್ನಯ್ಯ ಧೃತರಾಷ್ಟ್ರನಲ್ಲಿ ದೂರಿದನು. ಇದನ್ನು ಕೇಳಿದ ಧೃತರಾಷ್ಟ್ರನು ಪಾಂಡವರನ್ನು ಬೇರೆಡೆ ಇರಿಸುವ ಉಪಾಯವನ್ನು ಮಾಡಿದನು. ಇದರಂತೆ ಪಾಂಡವರು ಹಸ್ತಿನಪುರವನ್ನು ಬಿಟ್ಟು ವಾರಣಪುರದಲ್ಲಿರುವಂತಾಯಿತು. ದುರ್ಯೋಧನನು ಗೂಢಪುರುಷರಿಂದ ಅರಗಿನ ಮನೆಯನ್ನು ಮಾಡಿಸಿ ಪಾಂಡವರು ಅಲ್ಲಿರುವಂತೆ ಏರ್ಪಾಟು ಮಾಡಿದನು. ವಿದುರನಟ್ಟಿದ ಓಲೆಯಿಂದ ಅರಗಿನ ಮಾಡನೆಂದು ತಿಳಿದ ಪಾಂಡವರು ಉಪಾಯದಿಂದ ದೀವಳಿಗೆಯಂದು ಅರಗಿನ ಮನೆಗೆ ಬೆಂಕಿಯಿಕ್ಕಿ ತಾವು ಅಲ್ಲಿಂದ ತಪ್ಪಿಸಿಕೊಂಡರು. ಆವರಲ್ಲಿದ್ದ ಪಾಂಡವರು ಬೆಂದು ಹೋದರೆಂದು ಲೋಕ ತಿಳಿಯಿತು.

ಅರಮನೆ ಬೆಂದು ಆರು ಹೆಣದ ಎಲುಬುಗಳನ್ನು ಕಂಡ ಪಾಂಡವರ ಕಡೆಯವರು ಮಹಾದುಃಖಗೊಂಡರು. ಹಸ್ತಿನಪುರದಲ್ಲಿ ಧೃತರಾಷ್ಟ್ರ ವಿದುರ ಗಾಂಗೇಯಾದಿಗಳು ಇದನ್ನು ಕೇಳಿ ನೀರಿಗಿಳಿದರು. ದುರ್ಯೋಧನನು ಮನದಲ್ಲಿ ಸಂತೋಷಗೊಂಡು ಲೋಕೋಪಚಾರದಂತೆ ನಡೆದುಕೊಂಡನು. ಇದನ್ನು ಕೇಳಿದ ನಾರಾಯಣನು ಕೋಪಗೊಳ್ಳಲು ಬಲರಾಮನು ತಡೆದನು. ಸುರಂಗಮಾರ್ಗದಿಂದ ತಪ್ಪಿಸಿಕೊಂಡ ಪಾಂಡವರು ತಾರಾಗಣಗಳಿಂದ ದಿಕ್ಕನ್ನರಿತು ನಡೆದು ಕೌಶಳನೆಂಬ ಪಟ್ಟಣವನ್ನು ಸೇರಿದರು. ಅಲ್ಲಿಯ ರಾಜಘಾನ್ವನ ಮಗಳು ಕುಸುಮಮಾಳಿಕೆಯನ್ನು ಯುಧಿಷ್ಠಿರನು ಮದುವೆಯಾದನು.

**ಏಕಾದಶಾಶ್ವಾಸಂ :**

ಕೌಶಳನಗರದಲ್ಲಿ ಕೆಲವು ದಿಸವಿದ್ದ ಪಾಂಡವರು ಕುಸುಮಮಾಳಿಕೆಯನ್ನು ಅಲ್ಲಿಯೇ ಇರಿಸಿ ಮುಂದೆ ಹೋದರು. ಅವರು ಮುಂದೆ ಒಂದು ಋಷ್ಯಾಶ್ರಮದಲ್ಲಿ ವಿಶ್ರಮಿಸಿರಲು ರೂಪು ಯೌವನಗಳಿಂದ ಕೂಡಿದ ಜಟಾವಲ್ಕಲಧಾರಿಯಾದ ತಪಸ್ವಿನಿಯೊಬ್ಬಳು ಬಂದು ತನ್ನ ತಂದೆಯು ತನ್ನನ್ನು ಯುಧಿಷ್ಠಿರನಿಗೆ ಕೊಡಲಿದ್ದುದಾಗಿಯೂ ಪಾಂಡವರು ಅರಗಿನ ಮನೆಯಲ್ಲಿ ಸುಟ್ಟುದನ್ನು ಕೇಳಿ ದೀಕ್ಷೆಗೊಂಡಿರುವುದಾಗಿಯೂ ಹೇಳಿದಳು. ಆಕೆಯು

ಅವರನ್ನು ಅನ್ನ ಪಾನಾದಿಗಳಿಂದ ಉಪಚರಿಸಿದಳು. ಇದರಿಂದ ತೃಪ್ತನಾದ ಧರ್ಮರಾಜನು ನಿಜವಿಷಯವನ್ನು ತಿಳುಹಿಸಿ ಸಂತೈಸಿದನು. ಬಳಿಕ ಅವರು ಮಧ್ಯರಾತ್ರಿಯಲ್ಲಿ ಪಯಣ ಪೋಗಿ ತ್ರಿಸಿಂಗನೆಂಬ ಪಟ್ಟಣವನ್ನು ಸೇರಿ ಜಿನದೇವಾಲಯದಲ್ಲಿ ಪೂಜೆಮಾಡುತ್ತಿದ್ದರು. ಆ ಪಟ್ಟಣದರಸು ಚಂಡವಾಹನನು ತನ್ನ ಹನ್ನೊಂದು ಜನ ಕನ್ನೆಯರನ್ನೊಡಗೊಂಡು ಬಂದು ದಿವ್ಯಜ್ಞಾನಿಗಳಾದ ಆಚಾರ್ಯರಿಗೆ ಕೈಮುಗಿದು ತಾನು ಈ ಮಕ್ಕಳನ್ನು ಧರ್ಮರಾಜನಿಗೆ ಕೊಡಲಿದ್ದುದಾಗಿಯೂ, ಪಾಂಡವರು ಸತ್ತಿದ್ದು ನಿಜವಾದರೆ ಇವರು ತಪಸ್ಸಿಗೆ ತೆರಳುವರೆಂದೂ ತಿಳಿಸಿ, ನಿಜವಿಷಯವನ್ನು ತಿಳಿಯಬಯಸಿದನು. ಪಾಂಡವರು ಪರರಿಂದ ಸಾಯುವವರಲ್ಲವೆಂದು ನುಡಿದ ಆಚಾರ್ಯರ ಮಾತಿನಿಂದ ಸಂತಸಗೊಂಡ ರಾಜನು ಮಕ್ಕಳೊಡನೆ ಮನೆಗೆ ಹಿಂದಿರುಗಿದನು.

ಈ ಮಾತುಗಳನ್ನು ಕೇಳಿದ ಪಾಂಡವರು ತಮ್ಮ ಕಾರ್ಯಕ್ಕಾಗಿ ಮುಂದುವರಿದು ಕಾಡಿನ ಮಧ್ಯದಲ್ಲಿ ಆಲದ ಮರದಡಿಯಲ್ಲಿ ವಿಶ್ರಮಿಸಿದರು. ಸಂಧ್ಯಾನಗರದ ರಾಜ ಸಿಂಹೋದರನ ಮಗಳು ಹಿಡಿಂಬೆಯು ಜಾಗರವಿದ್ದ ಭೀಮನಲ್ಲಿಗೆ ಬಂದು ತನ್ನ ವೃತ್ತಾಂತವನ್ನು ತಿಳುಹಿಸಿದಳು. ಅಷ್ಟರಲ್ಲಿ ಹಿಡಿಂಬನು ಭೀಮನ ಮೇಲೇರಿಬಂದನು. ಆತನನ್ನು ಭೀಮನು ಕೊಂದನು. ಹಿಡಿಂಬೆಗೂ ಭೀಮನಿಗೂ ವಿವಾಹವಾಯಿತು. ಅವರಿಗೆ ಘಟೋತ್ಕಚನೆಂಬ ಮಗನಾದನು. ಮಗನನ್ನೂ ತಾಯಿಯನ್ನೂ ಅವರಯ್ಯನಲ್ಲಿಯೇ ಬಿಟ್ಟ ಪಾಂಡವರು ಮುಂದುವರಿದು ಅಂಗದೇಶಾಧಿಪತಿಯಾದ ಕರ್ಣನ ತ್ಯಾಗ ಗುಣ ಪರಾಕ್ರಮಗಳನ್ನು ತಿಳಿದರು. ಅಲ್ಲಿ ಒಬ್ಬನಿಂದ ದ್ರುಪದನನ್ನೂ ಆತನ ಮಗಳು ದ್ರೌಪದಿಯ ರೂಪು ವಿಳಾಸ ವಿಭ್ರಮಗಳನ್ನೂ ಅರಿತರು. ಆ ರಾಜನು ದ್ರೌಪದಿಯನ್ನು ಪಾಂಡವರಿಗಲ್ಲದೆ ಬೇರೆಯವರಿಗೆ ಕೊಡುವುದಿಲ್ಲವೆಂದಿರುವುದನ್ನರಿತರು.

ದ್ರುಪದರಾಜನು ಪಾಂಡವರು ಸತ್ತಿಲ್ಲವೆಂಬ ದಿವ್ಯಜ್ಞಾನಿಗಳ ಮಾತನ್ನು ಕೇಳಿ ಮಗಳಿಗೆ ಸ್ವಯಂವರವನ್ನೇರ್ಪಡಿಸಿದನು. ಪಾಂಡವರು ವೇಷ ಮರೆಸಿ ಸ್ವಯಂವರಕ್ಕೆ ಹೋದರು. ದುರ್ಯೋಧನ ಕರ್ಣ ದುಶ್ಯಾಸನಾದಿಗಳು ಬಿಲ್ಲನ್ನೇರಿಸಲು ಸಮರ್ಥರಾಗದಿರಲು. ಅರ್ಜುನನು ಆ ಕೆಲಸವನ್ನು ಮಾಡಿ ದ್ರೌಪದಿಯನ್ನು ಜಯಿಸಿದನು. ಇದರಿಂದ ಕುಪಿತನಾದ ದುರ್ಯೋಧನನು ಯುದ್ಧ ಹೂಡಿದನು. ಪಾಂಡವರು ದ್ರುಪದನ ಕಡೆಯಿಂದ ಹೋರಾಡಿದರು. ಪಾಂಡವರಿರುವುದನ್ನರಿತ ಭೀಷ್ಮ ದ್ರೋಣಾದಿಗಳು ಬಂದು ಪಾಂಡವರನ್ನು ಹರಸಿದರು. ಅರ್ಜುನನಿಗೂ ದ್ರೌಪದಿಗೂ ವಿವಾಹವಾಯಿತು.

ಒಂದು ದಿನ ಗಾಂಗೇಯ ಧೃತರಾಷ್ಟ್ರಾದಿಗಳು ದುರ್ಯೋಧನ ದುಶ್ಯಾಸನರನ್ನು ಪಾಂಡವರೊಡನೆ ಕೂಡಿ ಬಾಳುವಂತೆ ಹೇಳಿದರು. ವಿದುರನು ಇದಕ್ಕೆ ದನಿಗೂಡಿಸಿದನು. ಪಾಂಡವರು ಇಂದ್ರಪ್ರಸ್ಥದಲ್ಲಿಯೂ ಕೌರವರು ಹಸ್ತಿನಪುರದಲ್ಲಿಯೂ ಇರುವಂತೆ ಮಾಡಿದರು. ಧರ್ಮಪುತ್ರನು ಹಿಂದೆ ಮದುವೆಯಾದ ಸ್ತ್ರೀಯರನ್ನು ಕರೆಸಿ ತಮ್ಮಂದಿರೊಡನೆ ಸುಖದಿಂದಿದ್ದನು. ತಾವು ಬದುಕಿರುವುದನ್ನು ಯಾದವರಿಗೆ ತಿಳುಹಿಸಿದರು.

ಒಮ್ಮೆ ಪಾಂಡವರು ದ್ವಾರಾವತಿಗೆ ಹೋಗಿ ಬಲದೇವನ ತಂಗಿ ಸುಭದ್ರೆಯನ್ನು ಅರ್ಜುನನಿಗೆ ಮದುವೆ ಮಾಡಿಕೊಂಡು ಹಿಂದಿರುಗಿದರು. ದ್ರೌಪದಿಗೆ ಮಕ್ಕಳಾದ ಬಳಿಕ ಸುಭದ್ರೆಯೂ ಮಗನನ್ನು ಹೆತ್ತಳು. ಆತನನ್ನು ಅಭಿಮನ್ಯುವೆಂದು ಕರೆದರು. ಆತನು ಅನೇಕ ಶಾಸ್ತ್ರಪಾರಂಗತನಾಗಿ ಶೌರ್ಯದಿಂದ ಮೆರೆಯುತ್ತಿದ್ದನು.

ಪಾಂಡವರ ಕೀರ್ತಿಯ ಹಬ್ಬುವಿಕೆಯಿಂದ ರೋಷಗೊಂಡ ದುರ್ಯೋಧನನು ಶಕುನಿಯ ಸೂಚನೆಯಂತೆ ಧರ್ಮಜನನ್ನು ದ್ಯೂತದಲ್ಲಿ ಸೋಲಿಸಿದನು. ಪಾಂಡವರು ಹೆಂಡಿರು ಮಕ್ಕಳೊಡನೆ ನಾಡನ್ನು ಬಿಟ್ಟು ವನವಾಸಕ್ಕೆ ತೆರಳಿದರು. ಅವರು ಗಂಗಾನದಿಯನ್ನು ದಾಟಿ ಒಂದಾಲದ ಮರದಡಿಯಲ್ಲಿ ವಿಶ್ರಮಿಸಿದ್ದರು. ಅಲ್ಲಿಗೆ ಅಮಿತಮತಿ ಎಂಬಾಚಾರ್ಯರು ಬಂದರು. ಅವರಿಂದ ಧರ್ಮಸ್ವರೂಪವನ್ನು ಕೇಳಿದ ಪಾಂಡವರು ದ್ರೌಪದಿಯ ಹೊರತು ಉಳಿದ ಹೆಂಡಿರು ಮಕ್ಕಳನ್ನು ಅವರೊಡನೆ ಹಿಂದಿರುಗಿಸಿ ತಾವು ತೆಂಕಮೊಗವಾಗಿ ಹೊರಟರು. ಅಲ್ಲಿ ಬದರೀವನವೆಂಬ ದೊಡ್ಡ ಕಾಡನ್ನು ಹೊಕ್ಕು ಪುಷ್ಪಶೃಂಗಗಿರಿಯನ್ನು ಕಂಡು ಅಲ್ಲಿನ ಪ್ರಕೃತಿದೃಶ್ಯಕ್ಕೆ ಬೆರಗಾದರು. ಅವರು ಅಲ್ಲಯೇ ಕೆಲವು ದಿನಗಳಿರಲು, ಒಮ್ಮೆ ಅರ್ಜುನನು ಮೇಘರಥನೊಡನೆ ಯುದ್ಧಮಾಡಬೇಕಾಯಿತು. ಇದರಲ್ಲಿ ಸೋತ ಮೇಘರಥನು ಅರ್ಜುನನನ್ನು ಪಟ್ಟಣಕ್ಕೆ ಕರೆದೊಯ್ದು ಸತ್ಕರಿಸಿದನು.

ಅಲ್ಲಿಂದ ಮುಂದೆ ಹೊರಟ ಪಾಂಡವರು ಮಹಾನದಿಯನ್ನು ದಾಟಿ ಕಾಂಚೀಪುರಕ್ಕೆ ಬಂದು ಅಲ್ಲಿಂದ ಪಶ್ಚಿಮಾಭಿಮುಖವಾಗಿ ಹೊರಟು ಬನವಾಸಿ ದೇಶವನ್ನು ಸೇರಿದರು. ಅಲ್ಲಿ ಸಕಲ ಸಂಪತ್ತಿನಿಂದ ಶೋಭಿಸುತ್ತಿದ್ದ ವಿರಾಟಪುರವನ್ನು ಸೇರಿ ಅಜ್ಞಾತವಾಗಿ ಬೇರೆ ಬೇರೆ ಕೆಲಸದಲ್ಲಿ ತೊಡಗಿದರು. ಪಾಂಡವರ ವನವಾಸಾವಧಿಯಾದ ಹನ್ನೆರಡು ವರ್ಷಗಳು ಮುಗಿದುದನ್ನರಿತ ಕೌರವರು, ಪಾಂಡವರು ವಿರಾಟನಗರಿಯಲ್ಲಿರುವುದನ್ನರಿತು ವಿರಾಟನ ಗೋವುಗಳನ್ನು ಹಿಡಿಸಿದರು. ಅಷ್ಟರಲ್ಲಿ ಅಜ್ಞಾತವಾಸಾವಧಿ ಮುಗಿದುದರಿಂದ ಪಾಂಡವರು ಕೌರವರ ಸೇನೆಯನ್ನು ಹಿಂದಟ್ಟಿದರು. ವಿರಾಟನು ಪಾಂಡವರನ್ನು ಗೌರವದಿಂದ ಆದರಿಸಿದನು. ಇದನ್ನು ತಿಳಿದ ಬಲದೇವನು ಸತ್ಯಕನನ್ನು ಕಳುಹಿಸಿ ಪಾಂಡವರನ್ನು ದ್ವಾರಾವತಿಗೆ ಕರೆಯಿಸಿದನು. ಪಾಂಡವರು ಅಲ್ಲಿ ಸುಖವಾಗಿದ್ದರು.

ಒಂದು ಸಲ ವ್ಯಾಪಾರಿಯೊಬ್ಬನು ದ್ವಾರಾವತಿಗೆ ಬಂದು ತಾನು ತಂದ ದಿವ್ಯವಸ್ತುಗಳನ್ನು ನಾರಾಯಣನಿಗೊಪ್ಪಿಸಿದನು. ಪ್ರತಿಯಾಗಿ ಆತನು ಉತ್ತಮ ವಸ್ತುಗಳನ್ನು ಪಡೆದು ಮಗಧದೇಶಕ್ಕೆ ಬಂದನು. ಆತನು ಅಲ್ಲಿಯ ರಾಜ ಜರಾಸಂಧಚಕ್ರವರ್ತಿಗೆ ತಾನು ತಂದ ದಿವ್ಯರತ್ನಗಳನ್ನು ತೋರಿಸಿದನು. ಇದನ್ನು ನೋಡಿದ ಚಕ್ರವರ್ತಿಯು ಆ ವ್ಯಾಪಾರಿಯಿಂದ ದ್ವಾರಾವತಿಯ ವಿಷಯಗಳನ್ನು ತಿಳಿದನು. ಯಾದವರು ಸುಖವಾಗಿರುವುದನ್ನರಿತ ಜರಾಸಂಧನು ಯುದ್ಧಸನ್ನದ್ಧನಾಗಿ ನಡೆದು, ಹಸ್ತಿನಪುರದಲ್ಲಿ ಕುರುಸೇನೆಯನ್ನು ಕೂಡಿಕೊಂಡು ಕುರುಕ್ಷೇತ್ರವನ್ನು ಸೇರಿದನು. ಅಲ್ಲಿಗೆ ನಾರದನು ಬರಲು ಜರಾಸಂಧನು ಕುರುಕ್ಷೇತ್ರವು ಯುದ್ಧಕ್ಕೆ ತಕ್ಕ ಸ್ಥಳವೆಂದು ಕೃಷ್ಣನಿಗೆ ತಿಳಿಸಬೇಕೆಂದು ಹೇಳಿಕಳುಹಿಸಿದನು.

ನಾರದನು ದ್ವಾರಾವತಿಗೆ ಬಂದು ಕೃಷ್ಣನಿಗೆ ವಿಷಯವನ್ನೆಲ್ಲಾ ತಿಳುಹಿಸಿದನು. ಸಮುದ್ರವಿಜಯ ಮಹಾರಾಜನ ಸಹಾಯದೊಡನೆ ಪಾಂಡವರನ್ನು ಕೂಡಿ ಬಲದೇವ ವಾಸುದೇವರು ಯುದ್ಧಕ್ಕೆ ನಡೆದರು. ಜರಾಸಂಧನ ಕಡೆಯಿಂದ ಭೀಷ್ಮ, ಭೂರಿಶ್ರವ, ಶಲ್ಯ, ಕೃಪ, ಕೃತವರ್ಮ, ದುರ್ಯೋಧನ, ದುಶ್ಶಾಸನಾದಿಗಳೂ ಕೃಷ್ಣನ ಕಡೆಯಿಂದ ಧರ್ಮಪುತ್ರ, ಭೀಮ, ಹಿರಣ್ಯವರ್ಮ, ವಿರಾಟಾದಿ ನಾಯಕರೂ ಯುದ್ಧಮಾಡಿದರು. ಚತುರಂಗಬಲದ ಹೋರಾಟದೊಡನೆ ರಣರಂಗ ಭಯಂಕರವಾಯಿತು.

**ದ್ವಾದಶಾಶ್ವಾಸಂ :**

ಎರಡೂ ಕಡೆಯ ಹಲವಾರು ನಾಯಕರು ಮಡಿದರು. ದುರ್ಯೋಧನನೊಡ್ಡಿದ ಚಕ್ರವ್ಯೂಹವನ್ನು ಭೇದಿಸಿದ ಅಭಿಮನ್ಯುವು ದುರ್ಯೋಧನನ ಮಗ ಲಕ್ಕಣನನ್ನು ಕೊಂದನು. ಸೈಂಧವನು ಅಭಿಮನ್ಯುವನ್ನು ತೀರಿಸಿದನು. ಅರ್ಜುನನು ಸೈಂಧವನನ್ನು ಯಮಪುರಿಗೆ ಕಳುಹಿಸಿದನು. ಅರ್ಜುನನಿಗೂ ಕರ್ಣನಿಗೂ ಭೀಕರ ಹೋರಾಟ ನಡೆಯಿತು. ಕೊನೆಗೆ ಅರ್ಜುನನ ಹರಿತವಾದ ಬಾಣಕ್ಕೆ ಕರ್ಣನು ತುತ್ತಾದನು. ಕರ್ಣನ ಅಳಿವಿನಿಂದ ಧೈರ್ಯಗುಂದಿದ ದುರ್ಯೋಧನನು ಜಲಸ್ತಂಭನಮಂತ್ರಬಲದಿಂದ ಕೊಳದಲ್ಲಡಗಿದನು. ಹೀಗೆ ಅಡಗಿರುವುದನ್ನರಿತ ಭೀಮನು ಅಲ್ಲಿಗೆ ಮುತ್ತಿಗೆ ಹಾಕಿ, ಮೂದಲಿಸಿ ದುರ್ಯೋಧನನ್ನು ಹೊರಹೊರಡಿಸಿದನು. ಇಬ್ಬರಿಗೂ ಗದಾಯುದ್ಧವಾಗಿ ಸುಯೋಧನನು ತೊಡೆಮುರಿದು ಬಿದ್ದನು. ಇದರಿಂದ ಕುಪಿತನಾದ ಅಶ್ವತ್ಥಾಮನು ಪಾಂಡವರ ಬಲವನ್ನು ಇರುಳಲ್ಲಿ ಹೊಕ್ಕು ಧೃಷ್ಟದ್ಯುಮ್ನನನ್ನು ಕೊಂದು ಪಾಂಚಾಲರ ತಲೆಗಳನ್ನು ಕೊಂಡು ಬಂದು ದುರ್ಯೋಧನನ ಮುಂದಿಕ್ಕಿದನು. ಈ ತಲೆಗಳನ್ನು ನೋಡಿದ ಸುಯೋಧನನು ಇವು ಪಾಂಡವರ ತಲೆಗಳಲ್ಲವೆಂದೂ ಪಾಂಚಾಲರ ತಲೆಗಳೆಂದೂ ಹೇಳಲು, ಅಶ್ವತ್ಥಾಮನು ಸಿಗ್ಗಾಗಿ ತಲೆಯನ್ನು ಬಾಗಿಸಿದನು. ದುರ್ಯೋಧನನು ಇಹಲೋಕವನ್ನು ತ್ಯಜಿಸಿದನು.

ಎರಡು ಕಡೆಯ ಖಚರರಿಗೂ ಯುದ್ಧವಾಯಿತು. ಬಲದೇವನು ವೃಷಭಸೇನನನ್ನೂ ವಸುದೇವನು ವಜ್ರೇಶನನ್ನೂ ಗೆದ್ದರು. ಜರತ್ಕುಮಾರ, ಅರಿಷ್ಟನೇಮಿ, ಸುನೇಮಿ, ಜಯಂತ, ಅರ್ಕಪ್ರಭ ಮೊದಲಾದವರು ಜರಾಸಂಧನ ಮಕ್ಕಳಾದ ಕಾಲಯವಾದಿಗಳನ್ನು ಎದುರಿಸಿ ಓಡಿಸಿದರು. ಅನಾವೃಷ್ಟಿಕುಮಾರಾದಿ ಖಚರಸೇನೆಯು ಅಂಗಾರವೇಗಾದಿ ಖಚರ ಸೇನೆಯನ್ನು ಗೆದ್ದಿತು. ಕೃಷ್ಣನು ಜರಾಸಂಧನನ್ನು ತನ್ನ ಚಕ್ರಕ್ಕೆ ಆಹುತಿಯಾಗಿ ಮಾಡಿದನು. ವಿಜಯದುಂದುಭಿಗಳು ಮೊಳಗಿದವು. ಕೃಷ್ಣ ಬಲರಾಮರು ದ್ವಾರಾವತಿಗೆ ಹಿಂದಿರುಗಿದರು. ಪಟ್ಟಾಭಿಷಿಕ್ತನಾದ ನಾರಾಯಣನ ಹಿರಿಮೆಯು ಮುಗಿಲನ್ನು ಮುಟ್ಟಿತು. ಆತನು ವಿಜಯದಶಮಿಯಂದು ದಿಗ್ವಿಜಯ ಹೊರಟು ಎಲ್ಲ ಮಹಾಮಂಡಲಿಕರನ್ನೂ ಗೆದ್ದು ಹಿಂದಿರುಗಿ ಸುಖವಾಗಿದ್ದನು.

**ತ್ರಯೋದಶಾಶ್ವಾಸಂ :**

ವಸಂತಾಗಮನದಿಂದ ಉಬ್ಬಿದ ಶ್ರೀಕೃಷ್ಣನು ನೇಮಿಕುಮಾರಾದಿ ಕುಮಾರಗಣವನ್ನೂ ಸಖಿಯರನ್ನೂ ಕೂಡಿ ಜಲಕ್ರೀಡೆಯಲ್ಲಿ ತೊಡಗಿದನು. ವಿವಿಧ ರೀತಿಯ ಜಲಕೇಳಿಯಿಂದ ನಲಿದ ಅವರು ಪಟ್ಟಣಕ್ಕೆ ಹಿಂದಿರುಗಿದರು. ನೇಮಿಕುಮಾರನು ಆಯುಧಶಾಲೆಯನ್ನು ಪೊಕ್ಕು ದಿವ್ಯಾರ್ಚನೆಯಿಂದರ್ಚಿಸಿ, ನಾಗಶಯ್ಯೆಯನ್ನೇರಿ, ಶಾರ್ಙ್ಗಾಯುಧವನ್ನೇರಿಸಿ ಪಾಂಚಜನ್ಯವನ್ನೂದಿದನು. ಇದನ್ನು ತಿಳಿದ ಕೃಷ್ಣನು ಆಶ್ಚರ್ಯಪಟ್ಟು ಸಾಹಸಪುರುಷನಾದ ನೇಮಿಯೇ ರಾಜ್ಯದ ಮೊದಲಿಗನೆಂದನು. ನೇಮಿ ಸತ್ಯವನ್ನರಿತ ಕೃಷ್ಣನು ಆತನು ರಾಜ್ಯವನ್ನು ಬಯಸಿದರೇನು ಮಾಡುವುದೆಂಬ ಆಲೋಚನೆಯಲ್ಲಿ ತೊಡಗಿದನು. ಆತನು ಬಲದೇವನೊಡನೆ ಮಾತನಾಡಿ ನೇಮಿಯು ಸಂಸಾರವಿರಕ್ತನಾಗುವಂತೆ ಮಾಡುವುದಾಗಿ ನಿಶ್ಚಯಿಸಿದನು.

ಬಲರಾಮನು ನೇಮಿಗೆ ಮದುವೆಮಾಡಲು ಯೋಚಿಸಿ ಉಗ್ರಸೇನ ರಾಜನ ಮಕ್ಕಳು ರಾಜೀಮತಿ ಮೊದಲಾದ ಐನೂರು ಜನ ಕನ್ನೆಯರನ್ನು ಗೊತ್ತುಮಾಡಿದನು. ಇತ್ತ ಹತ್ತಿರದಲ್ಲಿಯೇ ಒಂದು ದೊಡ್ಡ ಕೊಟ್ಟಿಗೆಯನ್ನು ಮಾಡಿ ಸಾಧ್ಯವಾದಷ್ಟು ಪ್ರಾಣಿಗಳನ್ನು ಕೂಡಿಸಿದನು. ಆತನು ನೇಮಿಕುಮಾರನನ್ನು ಮದುವೆಯ ಮಂಟಪಕ್ಕೆ ಕರೆತರುತ್ತಾ ಪ್ರಾಣಿಗಳ ಹಿಂಡುಗಳಿದ್ದ ಕೊಟ್ಟಿಗೆಯ ಕಡೆ ಬಂದನು. ಅಲ್ಲಿ ಪ್ರಾಣಿಗಳ ಮಹಾಹುಯ್ಯಲನ್ನು ಕಂಡ ನೇಮಿಯು ಅವುಗಳು ತನ್ನ ಮದುವೆಯ ಸಂದರ್ಭದ ಭೋಜನಕ್ಕಾಗಿರುವವೆಂದು ತಿಳಿದು ವೈರಾಗ್ಯಪರನಾದನು. ದೇವೇಂದ್ರಾದಿಗಳು ಬಂದು ಕುಮಾರನಿಗೆ ಪರಿನಿಷ್ಕ್ರಮಣ ಕಲ್ಯಾಣವನ್ನು ನೆರವೇರಿಸಿದರು. ಅವರು ಕುಮಾರನನ್ನು ಸಿವಿಗೆಯನ್ನೇರಿಸಿ ಉಜ್ಜಯಂತಗಿರಿಗೆ ಕೊಂಡೊಯ್ದು ಹಸೆಯಲ್ಲಿ ಉತ್ತರಾಭಿಮುಖವಾಗಿ ಕುಳ್ಳಿರಿಸಿದರು. ಪಂಚಮಹಾಶಬ್ದಗಳು ಮೊಳಗಿದುವು. ಕುಮಾರನು ವಸ್ತ್ರಗಳನ್ನು ಕಳೆದು ಲೋಚನಕ್ರಿಯೆ ಮಾಡಿ ದೀಕ್ಷೆಗೊಂಡನು. ಆತನನ್ನು ಮದುವೆಯಾಗಲಿದ್ದ ರಾಜೀಮತಿಯು ಇತರ ಕನ್ನೆಯರೊಡನೆ ತಪಸ್ಸಿಗೆ ತೆರಳಿದಳು.

ದೀಕ್ಷೆಯನ್ನು ಕೈಗೊಂಡ ನೇಮಿಯು ಗಿರಿಯನ್ನಿಳಿದು ಚರ್ಯಾಮಾರ್ಗದಿಂದ ಗಿರಿನಗರವನ್ನು ಪ್ರವೇಶಿಸಿದನು. ಅಲ್ಲಿಯ ವರದತ್ತರಾಜನು ಮುನಿಗಳಿಗೆ ಆಹಾರವನ್ನು ನೀಡಿ, ವೈರಾಗ್ಯಪರನಾಗಿ ಮಗನಿಗೆ ರಾಜ್ಯವಿತ್ತು ತಾನು ನೇಮಿಭಟ್ಟಾರರಲ್ಲಿ ದೀಕ್ಷೆಗೊಂಡನು. ನೇಮಿನಾಥರು ಶುಕ್ಲಧ್ಯಾನ ಸಂಪೂರ್ಣತೆಯಿಂದ ಕೇವಲಜ್ಞಾನೋದಯವನ್ನು ಪಡೆದರು. ಇದನ್ನು ತಿಳಿದ ನಾರಾಯಣನು ತನ್ನ ಪರಿವಾರದೊಡನೆ ಬಂದು ಭಟ್ಟಾರರನ್ನು ಪೂಜಿಸಿ ಸ್ತುತಿಸಿದನು. ರುಗ್ಮಿಣಿಮಹಾದೇವಿಯು ತನ್ನ ಭವಾಂತರವನ್ನು ಬೆಸಗೊಳ್ಳಲು ಭಟ್ಟಾರರು ಅದನ್ನು ತಿಳಿಸಿದರು.

ಶ್ರೀಪುರವೆಂಬ ಪಟ್ಟಣದಲ್ಲಿ ಶ್ರೀಪತಿಯು ರಾಜನಾಗಿದ್ದನು. ಅಲ್ಲಿ ಸೋಮಶರ್ಮನೆಂಬ ಬ್ರಾಹ್ಮಣನು ಅಧ್ಯಯನ ಮಾಡುತ್ತಿದ್ದನು. ಆತನ ಪತ್ನಿ ಲಕ್ಷ್ಮೀಮತಿಯು

ರೂಪು ಯೌವನಗಳಿಂದ ಕೂಡಿದ್ದಳು. ಆಕೆಯೂ ರಾಜನ ಮಗಳಾದ ಶ್ರೀಮತಿಯೂ ಅತ್ಯಂತ ಸ್ನೇಹದಿಂದಿದ್ದರು. ಒಂದು ದಿನ ಲಕ್ಷ್ಮೀಮತಿಯು ನಾಲ್ಕುನೀರ್ಮಿಂದು ಅಲಂಕಾರ ಮಾಡಿಕೊಳ್ಳುತ್ತಾ ಕನ್ನಡಿಯಲ್ಲಿ ನೋಡುತ್ತಿರಲು ಚರ್ಯಾಮಾರ್ಗದಿಂದ ಬಂದ ಸಮಾಧಿ ಗುಪ್ತರನ್ನು ಅಲ್ಲಿ ಕಂಡಳು. ಅದರಿಂದ ಆಕೆಯು ಕೆಡುಕಾಯಿತೆಂದು ಭಾವಿಸಿ, ಭಿಕ್ಷುಕ ರನ್ನು ಅಲ್ಲಿಗೆ ಬಿಟ್ಟ ಕಾಪಿನವರನ್ನು ಬಿಡಿಸಿದಳು. ಕೆಲವು ದಿನಗಳಲ್ಲಿಯೇ ಆಕೆಗೆ ಉಂಬರ ಕುಷ್ಠ ಬಂದು ಶರೀರ ಬಾತು ಕೀತು ಹಡುಕೆನಾರುತ್ತಿತ್ತು. ಮನೆಯವರೆಲ್ಲ ಆಕೆಯನ್ನು ಕಂಡು ಹೇಸಿಕೆಪಡುತ್ತಿದ್ದರು.

ಕೊನೆಗೆ ಆಕೆಯು ಸತ್ತು ಆ ಮನೆಯಲ್ಲಿ ಇಲಿಯಾಗಿ ಹುಟ್ಟಿ, ಆಕೆಯು ಗಂಡಸ ಬಡಿತದಿಂದಲೇ ಸತ್ತು ಮತ್ತೆ ಅಲ್ಲಿಯೆ ಕೋಳಿವಾವಾಗಿ ಹುಟ್ಟಿದಳು. ಮತ್ತೆ ಆತನೆ ಹೊಡೆಯಲು ಸತ್ತು ಜೆಗ್ಗತ್ತೆಯಾಗಿ ಹುಟ್ಟಲು, ಅದನ್ನು ನಾಯಿ ತಿಂದಿತು. ಹೀಗೆ ಸತ್ತ ಆಕೆಯು ತುರುಕಾರರ ಮನೆಯಲ್ಲಿ ನಾಯಾಗಿರಲು ಕಿಚ್ಚು ಹತ್ತಿ ಸತ್ತು ಜಗುನೆಯ ದಡದಲ್ಲಿನ ಅಂಬಿಗರ ಬಸಿರಲ್ಲಿ ತುಂಬಿಗೆಯೆಂಬುವಳಾಗಿ ಹುಟ್ಟಿ ಕಷ್ಟದಿಂದ ಜೀವಿಸು ತ್ತಿದ್ದಳು. ಅಲ್ಲಿಗೆ ಸಮಾಧಿಗುಪ್ತರು ಬಂದು ರಾತ್ರಿ ಪ್ರತಿಮಾಯೋಗದಲ್ಲಿ ನಿಂತಿರಲು, ಆಕೆಯು ಅವರ ಶುಶ್ರೂಷೆಮಾಡಿ, ತನ್ನ ಹಿಂದಣ ಭವಾವಳಿಯನ್ನು ತಿಳಿದಳು. ಮುನಿಗಳ ಧರ್ಮಶ್ರವಣದಿಂದ ಆಕೆಯು ತಪಸ್ವಿನಿಯಾಗಿ ಮುಡಿಪಿ ದೇವಲೋಕದಲ್ಲಿ ಹುಟ್ಟಿ ಅಲ್ಲಿಂದ ಈಗ ರುಗ್ಮಿಣಿಯಾಗಿರುವಳು.

ಇಷ್ಟನ್ನು ಹೇಳಿದ ಭಟಾರರು ಹನ್ನೆರಡು ವರ್ಷಕ್ಕೆ ದ್ವೀಪಾಯನ ಕುಮಾರನಿಂದ ದ್ವಾರಾವತಿ ಬೇಯುವುದೆಂದೂ, ಚಕ್ರಿಯೂ ರುಗ್ಮಿಣಿಯೂ ಉಳಿದುಕೊಳ್ಳುವರೆಂದೂ ಹೇಳಿದರು. ಜರತ್ಕುಮಾರನಿಂದ ಚಕ್ರಿಯು ಸಾಯುವನು; ಬಲದೇವನು ನಿರ್ವೇಗ ಹುಟ್ಟಿ ಚಕ್ರಿಯನ್ನಗಲಲಾರದೆ ದುಃಖಪಡುವನು ಎಂದರು.

ಸಮುದ್ರವಿಜಯ ವಸುದೇವಾದಿ ಸೋದರರು ವಯೋವೃದ್ಧರಾದ ಹಲವು ರಾಜ ರೊಡನೆ ದೀಕ್ಷೆಯನ್ನು ಕೈಗೊಂಡರು. ಬಲದೇವ ವಸುದೇವರು ಭಟ್ಟಾರರಿಗೆ ವಂದಿಸಿ ಪಟ್ಟಣಕ್ಕೆ ಹಿಂದಿರುಗಿದರು. ದ್ವೀಪಾಯನ ಕುಮಾರನು ತಾನು ಕೆಡುಕನ್ನುಂಟುಮಾಡು ವುದಿಲ್ಲವೆಂದೂ ಮುನಿವಚನವನ್ನು ಸುಳ್ಳುಮಾಡುವೆನೆಂದೂ ಹೇಳಿ ಪಟ್ಟಣದಿಂದ ಹೊರ ಹೋದನು. ಜರತ್ಕುಮಾರನು ತನ್ನ ಬಾಣದಿಂದ ಕೃಷ್ಣನು ಸಾಯದಂತೆ ಮಾಡುವೆನೆಂದು ತನ್ನಲ್ಲಿದ್ದ ಬಾಣಗಳೆಲ್ಲವನ್ನೂ ಸಮುದ್ರದಲ್ಲಿ ಮುಳುಗಿಸಿ ಪಟ್ಟಣವನ್ನು ತ್ಯಜಿಸಿದನು. ಕೃಷ್ಣನು ಮೋಹನೀಯ ಶಕ್ತಿಯ ವಶದಿಂದ ಪಟ್ಟಣದಲ್ಲಿದ್ದ ಕಳ್ಳೆಲ್ಲವನ್ನೂ ಜಿಟ್ಟಿಗಳಲ್ಲಿ ಸುರಿಸಿದನು.

**ಚತುರ್ದಶಾಶ್ವಾಸಂ:**

ಶ್ರೀಕೃಷ್ಣನು ಸುಖದಿಂದಿರಲು ಪ್ರದ್ಯುಮ್ನನು ತಪಸ್ಸಿಗೆ ಹೊರಟನು. ತಾಯಿ ಮತ್ತು ಪತ್ನಿಯರು ತಪಸ್ಸು ಬೇಡವೆಂದು ಹಲವು ವಿಧದಿಂದ ಬೇಡಿಕೊಂಡರು. ನಾರಾ

ಯಣನು, ಪ್ರದ್ಯುಮ್ನನು ತಪಸ್ಸಿಗೆ ನಡೆದರೆ ರಾಜ್ಯಕ್ಕೆ ಯಾರು ದಿಕ್ಕೆಂದನು. ಇದಾವುದಕ್ಕೂ ಕಿವಿಗೊಡದ ಪ್ರದ್ಯುಮ್ನನು ನೇಮಿಯ ನುಡಿ ಹುಸಿಯಾಗುವುದಿಲ್ಲವೆಂದವನೇ ಸಮುದ್ರವಿಜಯಾದಿಗಳನ್ನೂ ಸತ್ಯಭಾಮೆ ರುಗ್ಮಿಣಿ ಮೊದಲಾದವರನ್ನೂ ಕೂಡಿಕೊಂಡು ಉಜ್ಜಯಂತಗಿರಿಗೆ ಹೋಗಿ ನೇಮಿಭಟ್ಟಾರರ ಸಮವಸರಣವನ್ನು ಹೊಕ್ಕನು. ಅಲ್ಲಿ ಅವರು ವರದತ್ತ ಗಣಧರರಲ್ಲಿ ದೀಕ್ಷೆಗೊಂಡು ಉಗ್ರೋಗ್ರ ತಪಸ್ಸನ್ನಾಚರಿಸಿದರು.

ಇತ್ತ ನಾರಾಯಣನು ರಾಜ್ಯದ ಮೋಹದಿಂದ ರಾಜನಾಗಿದ್ದನು. ಹನ್ನೆರಡು ವರ್ಷ ಮುಗಿಯುತ್ತಲೆ ಮುನೀಶ್ವರರ ಆದೇಶ ತಪ್ಪಿತೆಂದು ಬಗೆದರು. ದ್ವಾರಾವತಿಯನ್ನು ಪ್ರವೇಶಿಸಿದ ದ್ವೀಪಾಯನ ಮುನೀಶ್ವರರು ಒಂದು ದಿವಸ ಪುರಬಹಿರ್ಭಾಗದಲ್ಲಿ ಕಲ್ಮೆಲೆ ನಿಂತರು. ಆ ದಿವಸ ರಾಜಕುಮಾರರು ಕೂಡಿ ಆನೆ ಬೇಟೆಗೆ ಹೋಗಿದ್ದರು. ಅವರ ಜೊತೆಯಲ್ಲಿ ಹೋಗಿದ್ದ ಯೋಧರ ಗುಂಪು ಬಾಯಾರಿ ದೊಣೆಗಳಲ್ಲಿ ತುಂಬಿದ್ದ ಕಳ್ಳು ತಿಳಿಯಾಗಲು, ಅದನ್ನೇ ನೀರೆಂದು ಕುಡಿದರು. ಅದರಿಂದ ಮತ್ತರಾದ ಅವರು ಹಿಂದಿರುಗುತ್ತಾ ಕಲ್ಮೆಲೆ ನಿಂತ ಮುನಿಯನ್ನು ಕಲ್ಲಿನಿಂದ ಹೊಡೆದರು. ಇಷ್ಟರಿಂದ ತೃಪ್ತರಾಗದೆ ಕಲ್ಲುಗಳನ್ನು ತಂದು ಅದಕೆ ಮುನಿಯನ್ನು ಕೊರಳವರೆಗೂ ಹೂಳಿದರು. ಅದನ್ನರಿತ ಬಲದೇವ ವಾಸುದೇವರು ಬಂದು ಗತಕಂಠಪ್ರಾಣರಾಗಿದ್ದ ಮುನಿಗಳನ್ನು ಬಿಡಿಸಿ ಉಪಚರಿಸಿ ಕ್ಷಮೆಯನ್ನು ಕೇಳಿದರು. ಮುನಿಯು ನೀವಿಬ್ಬರು ಮಾತ್ರ ಉಳಿಯುವಿರಿ ಎಂದು ಹೇಳುವಂತೆ ಎರಡು ಬೆರಳುಗಳನ್ನು ತೋರಿಸಿ ಮುಡಿಪಿ ಭವನವಾಸಿಲೋಕದಲ್ಲಿ ಅಗ್ನಿಕುಮಾರನಾಗಿ ಹುಟ್ಟಿದನು.

ಕೊಲಿಗೇರಿ ಹತ್ತಿ ಉರಿಯಿತು. ದ್ವಾರಾವತಿಯು ನಾಶವಾಯಿತು. ಏನೂ ಮಾಡಲಾರದ ಕೃಷ್ಣ ಬಲರಾಮರು ಪಟ್ಟಣವನ್ನು ಬಿಟ್ಟು ಹೊರಟರು. ದಕ್ಷಿಣಾಭಿಮುಖವಾಗಿ ಬರುತ್ತಿದ್ದ ಅವರು ಮರದಡಿಯಲ್ಲಿ ವಿಶ್ರಮಿಸಿಕೊಂಡರು. ತಮ್ಮನು ಹಸಿದಿರುವುದನ್ನರಿತ ಬಲದೇವನು ಹತ್ತಿರದ ಪಟ್ಟಣಕ್ಕೆ ಹೋಗಿ ತನ್ನ ಕುಂಡಲಗಳನ್ನು ಕೊಟ್ಟು ಆಹಾರವನ್ನು ತಂದನು. ಆ ಕುಂಡಲಗಳನ್ನು ಕೊಂಡ ಸೆಟ್ಟಿಯು ಅವುಗಳನ್ನು ಅರಸನಿಗೆ ತೋರಿಸಿದನು. ಆ ಅರಸ ಕಯವರನು ಇವು ಬಲದೇವನ ಕುಂಡಲಗಳೆಂದರಿತು ದಾರಿಯಲ್ಲಿ ಹೋಗುತ್ತಿರುವ ಬಲರಾಮನನ್ನಡ್ಡಗಟ್ಟಲು ಸೈನಿಕರೊಡನೆ ಬಂದನು. ಬಲರಾಮನು ಆಳುಗಳನ್ನು ಸದೆಬಡಿದನು. ಕಯವರನು ಹೆದರಿ ಓಡಿದನು.

ಆ ಕೊಳ್ಳಿಂದ ಕೃಷ್ಣಬಲರಾಮರು ಮುಂದೆ ನಡೆದು ಕೌಶಂಬಿಯನ್ನು ಹೊಕ್ಕು ಆಲದ ಮರದಡಿಯಲ್ಲಿ ವಿಶ್ರಮಿಸಿದರು. ಕೃಷ್ಣನ ಬಾಯಾರಿಕೆಯನ್ನಾರಿಸಲು ಬಲದೇವನು ನೀರು ತರಲು ಹೋದನು. ಹಿಂದೆ ನೇಮಿನಾಥರ ಆದೇಶಕ್ಕೆ ಹೆದರಿ ಓಡಿಹೋಗಿದ್ದ ಜರತ್ಕುಮಾರನು ಬೇಟೆಯಾಡುತ್ತಾ ಆ ಸ್ಥಳಕ್ಕೆ ಬಂದು ಮಲಗಿದ್ದ ಕೃಷ್ಣನನ್ನು ಮೃಗವೆಂದು ಬಗೆದು ಬಾಣದಿಂದ ಹೊಡೆದನು. ಅನಂತರ ಹೀಗೆಂದರಿತ ಆತನು ಗೋಳಾಡಿದನು. ಕೃಷ್ಣನು ಆತನನ್ನು ಸಮಾಧಾನಪಡಿಸಿ ಬಲದೇವನು ಬರುವಷ್ಟರಲ್ಲಿ ಮರೆಯಾಗುವಂತೆ ಹೇಳಿದನು.

ಬಲದೇವನು ಬಂದು ನೋಡುವಲ್ಲಿ ಹರಿಯು ಗತಪ್ರಾಣನಾಗಿದ್ದನು. ತಮ್ಮನನ್ನು ಅಗಲಲಾರದ ಆತನು ಆ ಹೆಣವನ್ನು ಹೊತ್ತು ಅಲೆದನು. ಇದನ್ನು ಅವಧಿಜ್ಞಾನದಿಂದ ತಿಳಿದ ನೈಗಮದೇವನು ವಿವಿಧರೂಪುಗಳನ್ನು ಧರಿಸಿ ಬಲರಾಮನನ್ನು ಎಚ್ಚರಿಸಿದನು. ಬಲರಾಮನು ದಿವ್ಯವಚನವನ್ನು ಕೇಳಿ ಚಾರಣಋಷಿಯರಿಂದ ದೀಕ್ಷೆಯನ್ನು ಕೈಗೊಂಡು ಸಕಳವ್ರತಿಯಾಗಿ ಮುಡಿಪಿ ಬ್ರಹ್ಮಕಲ್ಪದಲ್ಲಿ ಹುಟ್ಟಿದನು. ಮಧುರೆಯಲ್ಲಿ ರಾಜ್ಯ ವಾಳುತ್ತಿದ್ದ ಪಾಂಡವರು ಇದೆಲ್ಲವನ್ನೂ ಕೇಳಿ ದುಃಖಿತರಾಗಿ ಲೌಕಿಕಕ್ರಿಯೆಯನ್ನು ಮಾಡಿದರು. ಅವರು ಅರ್ಜುನನ ಮಗ ಪರೀಕ್ಷಿಗೆ ಪಟ್ಟಗಟ್ಟಿ ಪಲ್ಲವದೇಶದಲ್ಲಿ ನೇಮಿಭಟ್ಟಾರಕರ ಬಳಿ ಗಣಧರರಲ್ಲಿ ದೀಕ್ಷೆಗೊಂಡರು. ಅವರು ವ್ರತಗಳನ್ನಾಚರಿಸುತ್ತಾ ಶತ್ರುಂಜಯ ಪರ್ವತಕ್ಕೆ ಬಂದು ಯೋಗನಿರೋಧದಲ್ಲಿದ್ದರು. ಇದನ್ನು ಕೇಳಿ ದುರ್ಯೋಧನನ ಮೊಮ್ಮಗನಾದ ಕಯು ವರನು ತನ್ನಜ್ಜನ ಶತ್ರುಗಳಾದ ಪಾಂಡವರೆಡೆಗೆ ಬಂದು, ಕೋಪದಿಂದ ದಂಡ ಪ್ರಯೋಗಗಳನ್ನು ಅವರ ಮೇಲೆ ಮಾಡಿದನು. ಈ ಮಹೋಪಸರ್ಗದಿಂದ ಸತ್ತ ಪಾಂಡ ವರು ಮುಕ್ತಿಯನ್ನು ಪಡೆದರು.

ಶ್ರೀನೇಮಿಭಟ್ಟಾರಕರ ಸಮವಸರಣವು ವಿಹಾರಿಸುತ್ತಾ, ಧರ್ಮಾಮೃತವೃಷ್ಟಿ ಯನ್ನು ಸುರಿಸುತ್ತಾ ಬಂದು ಜಯಂತಗಿರಿಯನ್ನು ಸೇರಿತು. ಅಲ್ಲಿ ನೇಮಿಭಟ್ಟಾರಕರು ನಿರ್ವೃತಿಶ್ರೀಗೆ ಒಡೆಯರಾದರು.

**ಆಕರ :**

ಬಂಧುವರ್ಮನ ಈ ಕಥೆಗೆ ಮೂಲವಾವುದೆಂಬುದನ್ನು ನೋಡುವುದಾದರೆ ಈತನಿ ಗಿಂತ ಮೊದಲಿದ್ದ ಕೆಲವು ಪುರಾಣಗಳನ್ನು ಪರಿಶೀಲಿಸಬೇಕಾಗುತ್ತದೆ. ಸಂಸ್ಕೃತದಲ್ಲಿ ಗುಣ ಭದ್ರನ ಉತ್ತರಪುರಾಣದ ಕಥೆ ಕನ್ನಡ ಪುರಾಣಗಳಿಗೆ ಮೂಲವಾಗಿರುವಂತೆ ಬಂಧು ವರ್ಮನ ಹರಿವಂಶಾಭ್ಯುದಯಕ್ಕೂ ಆಕರವಾಗಿರಬಹುದು. ಆದರೆ, ಇಲ್ಲಿ ನೇಮಿನಾಥ ತೀರ್ಥಂಕರ ಕಥೆಯ ಮೊದಲಲ್ಲಿ ಬರುವ ಅರ್ಹದ್ದಾಸ, ಅಪರಾಜಿತ–ಮೊದಲಾದವರ ಕಥೆ ಹರಿವಂಶಾಭ್ಯುದಯದಲ್ಲಿ ಕಂಡುಬರುವುದಿಲ್ಲ. ಉ.ಪು.ದಲ್ಲಿ ಸ್ವಲ್ಪ ಕಥಾಭಾಗ ವನ್ನು ಕಳೆದು ಮುಂದೆ ಬರುವ ಪ್ರಭಂಜನ ಮತ್ತು ಮೃಕಂಡು ದಂಪತಿಗಳ ಕಥೆಯಿಂದ ಇಲ್ಲಿನ ಕಥೆ ಪ್ರಾರಂಭವಾಗುತ್ತದೆ. ಕರ್ಣಪಾರ್ಯ ಮತ್ತು ನೇಮಿಚಂದ್ರರು ತಮ್ಮ ನೇಮಿನಾಥ ಪುರಾಣಗಳಲ್ಲಿ ಉತ್ತರಪುರಾಣದ ಕಥೆಯನ್ನೇ ಅನುಸರಿಸಿದ್ದಾರೆ.

ಕರ್ಣಪಾರ್ಯನ ನೇಮಿನಾಥಪುರಾಣ ಮತ್ತು ಬಂಧುವರ್ಮನ ಹರಿವಂಶಾ ಭ್ಯುದಯದಲ್ಲಿ ಕಂಡುಬರುವ ಚಾರುದತ್ತಪ್ರಕರಣ ಉತ್ತರಪುರಾಣದಲ್ಲಿ ಕಂಡುಬರುವುದಿಲ್ಲ. ಈ ಕಥೆಯನ್ನು ಇಬ್ಬರೂ ಜಿನಸೇನಾಚಾರ್ಯರ ಹರಿವಂಶದಿಂದ ತೆಗೆದುಕೊಂಡಿರುವಂತೆ ತೋರುತ್ತದೆ. ಸದ್ಯಕ್ಕೆ ನಿರ್ಣಯವಾಗಿರುವಂತೆ ಬಂಧುವರ್ಮನು ಕರ್ಣಪಾರ್ಯನಿಗಿಂತ ಈಚಿನವನಾದುದರಿಂದ ಗುಣಭದ್ರ ಮತ್ತು ಕರ್ಣಪಾರ್ಯರಿಬ್ಬರ ಕಾವ್ಯಗಳಿಂದಲೂ ತನ್ನ

ಗ್ರಂಥಕ್ಕೆ ಉಪಯೋಗ ಪಡೆದಿರಬಹುದು. ಅದರಲ್ಲಿಯೂ ಕಾವ್ಯದುದ್ದಕ್ಕೂ ಕರ್ಣ ಪಾರ್ಯನನ್ನೇ ಅನುಸರಿಸಿರುವುದು ಕಂಡುಬರುತ್ತದೆ.

**ಕಥಾವ್ಯತ್ಯಾಸ:**

ಹರಿವರ್ಷವೆಂಬ ದೇಶದಲ್ಲಿನ ಪ್ರಭಂಜನ ಮತ್ತು ಮೃಕಂಡು ದಂಪತಿಗಳಿಗೆ ಹುಟ್ಟಿದ ಮಗ ಸಿಂಹಕೇತುವೆಂದು ಉತ್ತರಪುರಾಣ ಮತ್ತು ಕರ್ಣಪಾರ್ಯನ ನೇಮಿನಾಥಪುರಾಣ ಗಳಲ್ಲಿದ್ದರೆ ಬಂಧುವರ್ಮನಲ್ಲಿ ಮಾರ್ಕಂಡೇಯನೆಂದಿದೆ.

ಸಿಂಹಕೇತುವನ್ನು ಅಪಹರಿಸಿದ ಚಿತ್ರಾಂಗದನು ಸೂರ್ಯಪ್ರಭದೇವನ ಆದೇಶ ದಂತೆ ಚಂಪಾಪುರದ ಅರಣ್ಯದಲ್ಲಿ ಆತನನ್ನು ಬಿಟ್ಟು ಹೋಗುತ್ತಾನೆ. ಅಲ್ಲಿಂದ ಸಿಂಹ ಕೇತುವು ಆನೆಯ ಮೂಲಕ ಚಂದ್ರಕೀರ್ತಿರಾಜನನ್ನು ಸೇರುತ್ತಾನೆ ಎಂಬುದಾಗಿ ಗುಣ ಭದ್ರ ಮತ್ತು ಕರ್ಣಪಾರ್ಯರು ಹೇಳಿದ್ದಾರೆ. ಬಂಧುವರ್ಮನು ಸೂರ್ಯಪ್ರಭದೇವನೇ ಮಾರ್ಕಂಡೇಯನನ್ನು ಚಂದ್ರಕೀರ್ತಿಗೆ ಒಪ್ಪಿಸಿದನೆಂದು ತಿಳಿಸುತ್ತಾನೆ.

ವಸುದೇವನ ರೂಪಿಗೆ ಪುರಸ್ತ್ರೀಯರು ಮಾರುಹೋಗುವುದು, ಪುರಜನರ ದೂರು, ಅಣ್ಣ ಸಮುದ್ರವಿಜಯನು ವಸುದೇವನನ್ನು ಉಪಾಯದಿಂದ ಉದ್ಯಾನವನದಲ್ಲಿ ಕಟ್ಟಿನಲ್ಲಿ ರಿಸುವುದು-ಮೊದಲಾದ ವಿವರಗಳಲ್ಲಿ ಈ ಮೂರು ಕೃತಿಗಳಲ್ಲಿಯೂ ಯಾವ ವ್ಯತ್ಯಾಸವೂ ಕಂಡುಬರುವುದಿಲ್ಲ. ಆದರೆ. ವಸುದೇವನು ದೇಶತ್ಯಾಗಮಾಡಲು ನಿಶ್ಚಯಿಸಿ ಶ್ಮಶಾನಭೂಮಿ ಯಲ್ಲಿ ಏಕಾಕಿಯಾಗಿ "ಅಪಕೀರ್ತಿಯ ಭಯವುಳ್ಳವನು ಮಹಾಜ್ವಾಲೆಯುಳ್ಳ ಚಿಂಕಿಯಲ್ಲಿ ಬಿದ್ದ" ಎಂದು ತಾಯಿಗೆ ಕಾಗದವನ್ನು ಬರೆದು ಕುದುರೆಯ ಕೊರಳಲ್ಲಿ ಕಟ್ಟಿ ಹೆಣವನ್ನು ಸುಡುವ ಚಿಂಕಿಯ ಪ್ರದಕ್ಷಿಣೆ ಮಾಡಿ ಹೊರಟುಹೋದನೆಂದು ಉತ್ತರಪುರಾಣದಲ್ಲಿದೆ. ಕರ್ಣಪಾರ್ಯ ಮತ್ತು ಬಂಧುವರ್ಮರಲ್ಲಿ ದೇಶತ್ಯಾಗಮಾಡಲು ನಿರ್ಧರಿಸಿದ ವಸುದೇವನು ದಾರುಕ ವಲ್ಲಭಕರುಗಳಿಂದ ವಿವಿಧಾರ್ಚನೆಯನ್ನು ತರಿಸಿ, ಶ್ಮಶಾನಭೂಮಿಗೆ ನಡೆದು ಮಂತ್ರವಿದ್ಯೆಯನ್ನು ಸಾಧಿಸುವೆನೆಂದು ಹೇಳಿ, ಜೊತೆಯವರನ್ನು ಬೇರೆ ನಿಲ್ಲಿಸಿ ತಾನು ಅಲಂಕಾರಗಳನ್ನು ಕಳೆದು, ಖಡ್ಗವನ್ನು ನೆಲದಲ್ಲಿಟ್ಟು, 'ಅಣ್ಣನು ವಿಚಾರ ಮಾಡದೆ ತನ್ನನ್ನು ಸೆರೆಯಲ್ಲಿಟ್ಟನು. ಆ ದುಃಖದಿಂದ ತಾನು ಉರಿವ ಚಿಂಕಿಯಲ್ಲಿ ಬಿದ್ದೆನು' ಎಂದು ಕೂಗಿ ಹೇಳಿ, ಉರಿಯಲ್ಲಿ ಹೊಕ್ಕಂತೆ ಮಾಡಿ ಅಡಗಿಕೊಂಡನು ಎಂದಿದೆ.

ಉತ್ತರ ಪುರಾಣದಲ್ಲಿ ತಾಯಿಗೆ ಕಾಗದ ಬರೆದು ಕುದುರೆಯ ಕೊರಳಲ್ಲಿ ಕಟ್ಟಿದ ನೆಂದಿದ್ದರೆ, ಕರ್ಣಪಾರ್ಯ ಮತ್ತು ಬಂಧುವರ್ಮರಲ್ಲಿ ದೊಡ್ಡ ದನಿಯಲ್ಲಿ ಕೂಗಿ ಹೇಳಿದ ನೆಂದಿದೆ. ಅಲ್ಲಿ ಬರೆದ ಮಾತುಗಳಿಗೂ ಇಲ್ಲಿ ಆಡಿದ ನುಡಿಗಳಿಗೂ ವ್ಯತ್ಯಾಸವಿದೆ. ಹೀಗೆ ಉತ್ತರಪುರಾಣದ ಕಥೆಯಿಂದ ಅಲ್ಪಸ್ವಲ್ಪ ವ್ಯತ್ಯಾಸಗಳನ್ನು ಮಾಡಿಕೊಂಡ ಕರ್ಣಪಾರ್ಯ ನನ್ನೇ ಬಂಧುವರ್ಮನೂ ಅನುಸರಿಸಿದ್ದಾನೆ ಎಂದು ಹೇಳಬಹುದಾಗಿದೆ. ಇಂತಹ

ಅನುಸರಣೆಗಳನ್ನು ಕಾವ್ಯದುದ್ದಕ್ಕೂ ಗುರುತಿಸಬಹುದು. ಸಮುದ್ರವಿಜಯನು ತಮ್ಮ ವಸುದೇವನು ಬೆಂಕಿಗೆ ಬಿದ್ದನೆಂಬ ಸುದ್ದಿಯನ್ನು ಕೇಳುತ್ತಲೆ

ಏನಿಂದು ಸತ್ತುಪೋದನೆ
ಮಾನಿತನೆನ್ನನುಜನಣ್ಣ ದಿಟಮೋ ಪೇಟಿಂ
ತಾನಿದೆನುತ್ತಂ ಮತಿಗೆ
ಟ್ಟಾ ನರಪತಿ ತೊಟ್ಟನೆಂದು ಮೂರ್ಛಿತನಾದಂ ೩–೧೬೬

ಎಂದು ಕರ್ಣಪಾರ್ಯ ಹೇಳಿದರೆ, ಬಂಧುವರ್ಮನು

ಎಂತೆಂತೋ ವಸುದೇವಂ
ಭ್ರಾಂತಿಲ್ಲದೆ ಕಿಚ್ಚುವೊಕ್ಕನೇ ಪೇಟ್ ಪೇಟಿಂ
ದಂತೆ ನೃಪಂ ಮೂರ್ಛಿಸಿ ಮರ
ದಂತಪ ಧರಣಿಯೊಳು ಬೀಟಿ ಪರಿಜನಮೆಲ್ಲಂ ೨–೨೧

ಎಂದು ವರ್ಣಿಸುತ್ತಾನೆ.

ಭಾನುದತ್ತಸೆಟ್ಟಿಯ ಹೆಂಡತಿ ದೇವಿಲೆಯು ಚಾರಣಮುನಿಗಳಲ್ಲಿಗೆ ಬಂದು "ಬಂದಿಸಿ ಬೆಸಸಿಮೆನಗೆ ತನಯರಿಲ್ಲದೀ ಜನನಮಿಂತೆ ಪೋಕುಮೊ ಮೇಣ್ ತನೂಭವರ್ ಜನಿಯಿಸುಗುಮೋ" ಎಂದು ಕೇಳಿಕೊಳ್ಳುತ್ತಾಳೆಂದು ಕರ್ಣಪಾರ್ಯ ಹೇಳಿದರೆ, ಬಂಧುವರ್ಮನು

ಎನಗಿಂತೆ ಮಕ್ಕಳಿಲ್ಲದೆ
ಮನುಜತ್ವಂ ವೃಥೆಗೆ ಸಂದು ಪೋಕುಮೊ ಮತ್ತಂ
ತನಯರ್ಕಳಿನ್ನುಮಪ್ಪರೊ
ಮುನಿನಾಥಾ ಬೆಸಸಿಮೆಂದೊಡಾ ಮುನಿಮುಖ್ಯರ್ ೩–೫

ಎಂದು ಹೇಳುತ್ತಾನೆ.

ಹೀಗೆ ಮೂಲದ ಭಾವವನ್ನೂ ಪದಗಳನ್ನೂ ಅನುಕರಿಸಿದ ರಚನೆಯನ್ನು ಕಾಣುವುದರ ಜತೆಗೆ, ಮೂಲದಿಂದ ಪ್ರೇರಿತನಾಗಿ ಮತ್ತೂ ಹೆಚ್ಚು ರಸಪೂರಿತವಾದ ವರ್ಣನೆಗಳನ್ನು ಮಾಡುವುದನ್ನೂ ನಾವು ಅಲ್ಲಲ್ಲಿಯೇ ಕಾಣುತ್ತೇವೆ.

ವಸುದೇವನು ಸತ್ತನೆಂಬ ಸುದ್ದಿಯನ್ನು ತಿಳಿದು ಮೂರ್ಛೆಗೊಂಡ ಸಮುದ್ರವಿಜಯನು ಶೀತಳಕ್ರಿಯೆಯಿಂದ ಎಚ್ಚತ್ತು "ಹಾ ವಸುದೇವಾ! ಹಾ ಮದೀಯ ಪ್ರಿಯಾನುಜಾ! ಎಂದು ವಿಪ್ರಳಾಪಂಗೆಯ್ಯೆ" ಎಂದು ಕರ್ಣಪಾರ್ಯ ಹೇಳಿದರೆ, ಬಂಧುವರ್ಮನು ಅದನ್ನು ವಿಸ್ತರಿಸಿ

ಹಾಹಾ ಮದನಾಕಾರಾ
ಹಾಹಾ ಗುಣಗಣದಶೇಷ ಭೂಷಣಭಾರಾ
ಹಾಹಾ ಕೂರ್ತೆನ್ನನುಜಾ
ಹಾಹಾ ನೀಂ ಸಾಯೆ ಕೆಟ್ಟೆನನುಪಮತೇಜಾ 7-22

ಎಂದು ವರ್ಣಿಸುತ್ತಾನೆ. ಮುಂದೆ ಕರ್ಣಪಾರ್ಯನು ಒಂದೆರಡು ಪದ್ಯಗಳಲ್ಲಿ ವರ್ಣಿಸಿರುವ ಸಮುದ್ರವಿಜಯನ ದುಃಖವನ್ನು ಬಂಧುವರ್ಮನು ನಾಲ್ಕಾರು ಪದ್ಯಗಳಲ್ಲಿ ಮನಮುಟ್ಟು ವಂತೆ ಚಿತ್ರಿಸಿದ್ದಾನೆ ; ಅಣ್ಣತಮ್ಮಂದಿರ ಪ್ರೀತಿಯ ಆಳವನ್ನು ಹೊರಗೆಡಹಿದ್ದಾನೆ.

ಅನಂತರ ಕರ್ಣಪಾರ್ಯನಲ್ಲಿ ಸಮುದ್ರವಿಜಯನು ಲೌಕಿಕಕ್ರಿಯೆಯನ್ನು ಮಾಡಿ ಮುಗಿಸುತ್ತಾನೆ. ಆದರೆ ಬಂಧುವರ್ಮನಲ್ಲಿ ಸಮುದ್ರವಿಜಯನು ತಮ್ಮನು ಸತ್ತ ಸ್ಥಳ ವನ್ನು ನೋಡಲು ಹೋಗಿ ಮುಸುಳಿಸಿದ್ದ ಕೆಂಡವನ್ನೂ ಕೊಂಡವನ್ನೂ ಕಂಡು, ಎಲುಬು ಗಳನ್ನೂ ಅಲ್ಲಿಯೇ ಬಿದ್ದಿದ್ದ ತಮ್ಮನ ಖಡ್ಗವನ್ನೂ ನೋಡಿ ಮೂರ್ಛಿತನಾಗುವ ದೃಶ್ಯ ಮಾನವ ಹೃದಯದ ಅರಿವನ್ನು ಕವಿ ಕಂಡಿರುವುದಕ್ಕೆ ಸಾಕ್ಷಿಯಾಗಿದೆ.

ಭಾನುದತ್ತನು ಜಿನಪೂಜೆಗಾಗಿ ರಜತವಾಳುಕ ನದೀ ತೀರದಲ್ಲಿರುವ ಸುರಭಿ ಹೂವು ಗಳನ್ನು ಕಳುಹಿಸಿಕೊಟ್ಟು, ತಾನು ಪಟ್ಟಣಕ್ಕೆ ಹಿಂದಿರುಗಬೇಕೆಂದು ಹೇಳಿ ಮಗ ಚಾರು ದತ್ತನನ್ನು ಜೊತೆಯವರೊಡನೆ ಕಳುಹಿಸಿಕೊಡಲು, ನದೀತೀರವನ್ನು ಸೇರಿದ ಚಾರು ದತ್ತನು "ವಿರುಪ ಸುರಭಿಕುಸುಮಪ್ರತಾನಮನಾತ್ಮಜನಕಂಗಟ್ಟಿ ತಾನಾ ತಟಿನೀ ವಿಳಾಸ ಮನುತ್ತಟರಾಗದಿ ನಿರೀಕ್ಷಿಸಿ" ಎಂದು ವರ್ಣಿಸಿರುವ ಕರ್ಣಪಾರ್ಯನ ಭಾವಗಳನ್ನೇ ಅನು ಸರಿಸಿದ ಬಂಧುವರ್ಮನು ಅದನ್ನು ಮತ್ತೂ ರಸವತ್ತಾಗಿ ಚಿತ್ರಿಸಿದ್ದಾನೆ. ಆತನು "ನದಿಯ ತಡಿವಿಡಿದು ಬಂದು ನಾನಾ ವಿಧಮಪ್ಪ ಪುಷ್ಪರಾಶಿಯಂ ಕೊಯ್ದು ತಮ್ಮಯ್ಯನಲ್ಲಿ ಗಟ್ಟಿಯಾ ತೋಂಟಯಂ ಮೆಚ್ಚಿ ನೋಡುತ್ತಂ

ಸ್ವಾಂತರತಿಪಥಿಕ ಪಥವಿ
ಶ್ರಾಂತರುಮಂ ನೋಡೆ ನಾಡೆ ರಮ್ಯವಿದಂ ನಾ
ವೆಂತು ಗಳ ಬಿಸುಟು ನಗರಾ
ಭ್ಯಂತರದೊಳ್ ಕಟ್ಟಿಕೊಳ್ವ ಕಣಿಯೇನು ಗಡಿಂ 3-8

ವ|| ಆ ಪುರದೊಳ್ ಚಿಂತಾಮಣಿಯುಳ್ಳಡಂ ಕಲ್ಪವೃಕ್ಷಮುಳ್ಳಡಂ ತನಗಿಷ್ಟ ಮಿಲ್ಲದುದದರೊಳೇನೆಂದು ತೋಂಟದಿಯ ಶೋಭೆಯಂ ಕಂಡು ನೋಡಿ ಮೆಚ್ಚುತ್ತಂ ಬರ್ಪ...."ಮೊದಲಾದ ಬಂಧುವರ್ಮನ ವರ್ಣನೆಯಲ್ಲಿ ಕವಿಯ ಮನೋಭೀಷ್ಟತೆಯನ್ನು ಮನಗಾಣಬಹುದಾಗಿದೆ. ಪ್ರಕೃತಿಯಲ್ಲಿ ಕವಿಗಿರುವ ಆಸಕ್ತಿ, ನಗರಜೀವನದಲ್ಲಿನ ಬೇಸರ ಚಾರುದತ್ತನ ಮೂಲಕ ಹೊರಹೊಮ್ಮಿದೆ.

ಹೀಗೆ ಮೂಲದಿಂದ ಪ್ರೇರಿತನಾಗಿ ವಿಶಿಷ್ಟ ರೀತಿಯ ವರ್ಣನೆಗಳ ಮೂಲಕ ಸಹೃದಯರನ್ನು ಸೆರೆಹಿಡಿಯುವ ಕಲಾವಂತಿಕೆಯನ್ನು ಬಂಧುವರ್ಮನಲ್ಲಿ ಕಾಣಬಹುದಾಗಿದೆ. ಅದರಲ್ಲಿಯೂ ಚಾರುದತ್ತನ ವಿವಾಹ ಮತ್ತು ಶಾಸ್ತ್ರಾಭ್ಯಾಸಗಳಲ್ಲಿ ಆತನಿಗಿರುವ ತನ್ಮಯತೆಯನ್ನು ಅತ್ಯಂತ ರಸವತ್ತಾಗಿ ಚಿತ್ರಿಸಿದ್ದಾನೆ. ಕರ್ಣಪಾರ್ಯನು

ನುತನಪ್ಪಾ ಚಾರುದತ್ತಂ ಸತತಮತುಳ ವಿದ್ಯಾಗಮಾಭ್ಯಾಸದೊಳ್ ಸಂ
ಯುತನಾಗಿರ್ದಾತ್ಮಕಾಂತಾರತಿಯೊಳೆ ಮತಿಯಂ ತಾರದೋರಂತಿರಲ್ಕಾ
ಸತಿ ಖೇದಂದಾಳ್ದಿರಲ್ಕಾಕೆಯ ಜನನಿ ಸುಮಿತ್ರಾಖ್ಯೆ ಕಂಡಕ್ಕ ನಿನ್ನೀ
ನುತವಕ್ತ್ರಂ ಕಂದಿ ಕುಂದಿರ್ದಪುದಿದನಱಿಪೆಂದಾಗ್ರಹಂಗೆಯ್ಯೆ ಪೇೞ್ಗುಂ ೪–೪೦

ಎಂದು ಹೇಳಿದರೆ, ಬಂಧುವರ್ಮನು ಮದುವೆಯಾದ "ಚಾರುದತ್ತನಾಗಳುಂ ವಿದ್ಯಾಭ್ಯಾಸಂಗೆಯ್ಯುತ್ತಂ ನಿಜಸ್ತ್ರೀಯನೆನಸುಂ ಬಗೆಯದಿರೆ ಮಿತ್ರಾವತಿ ತವರ್ಮನೆಗೆ ಪೋದೊಡವರಬ್ಬೆ ಮಗಳ ಮೊಗಮುಂ ನೋಡಿ ರಾಗಮಿಲ್ಲದಿರವಂ ಕಂಡಿಂತೆಂದಳ್

ಎಂತೀ ಮುಡಿ ಮುನ್ನಂ ಮುಡಿ
ದಂತಿರ್ದುದು ನೊಸಲೊಳೊಪ್ಪಿದ ಕತ್ತುರಿಯ ಬೊ
ಟ್ಟಂತಿಟ್ಟಳ ಮಾಱ್ಕೆಯೊಳಿ
ರ್ದಂತಿರ್ದುದು ಮಗಳೆ ಮುನಿದನೇ ನಿಜದಯಿತಂ ೩–೧೭

ಪೂಸಿದ ಕುಂಕುಮಮೆನಸುಂ
ಬೀಸರಮಾಗಿರದು ಮೊಲೆ ಪಳಂಕವು ಮೊಗಮು
ಮ್ಮಾಸರಿಕೆಯತ್ತ ಪೊರ್ದದು
ರೋಸದೆ ಸತಿ ಪೋಗಿಕಳೆನೆ ಪೆಱಪೆಱತೆಡೆಯೊಳ್ ೩–೧೮

ನೀನಾತಂಗಾತಂ ನಿನ
ಗೇನುಂ ತಪ್ಪಿಲ್ಲ ತಕ್ಕನೇ ಕೂಡಿದಿರಿಂ
ತೇನು ಗಡ ತಪಸಿಯಂತಿರೆ
ಮೌನಧ್ಯಾನದೊಳೆ ಕಳೆದಿರೇ ನೀಮಿರುಳಂ ೩–೧೯

ಎಂದು ಕೇಳುವ ತಾಯಿಗೆ ಮಗಳು ನಾಚಿ ತಲೆತಗ್ಗಿಸಿರುವುದೂ, ಮತ್ತೆ 'ಮಗಳಾದವಳು ತಾಯಿಗೆ ಹೇಳದೆ ಮತ್ತಾರಿಗೆ ಹೇಳುವುದೆಂ'ದು ತಾಯಿ ಹೇಳುವುದೂ ಆಗ ಮಿತ್ರಾವತಿಯು ತಾನು ಕಂಡ ಸನ್ನಿವೇಶವನ್ನು ವಿಸ್ತರಿಸುವುದೂ ಬಹಳ ಸೊಗಸಾಗಿವೆ. ಮಿತ್ರಾವತಿಯ ಉತ್ತರದಲ್ಲಿ ಆಕೆಯ ಮುಗ್ಧತೆ, ಕರುಣಾಪೂರಿತ ಸನ್ನಿವೇಶ, ಚಾರುದತ್ತನ ಶಾಸ್ತ್ರಾಭ್ಯಾಸ ತಲ್ಲೀನತೆ ಈ ಮೂರೂ ಮುಪ್ಪುರಿಗೊಂಡು ನಿರೂಪಿತವಾಗಿರುವ ಈ ಚಿತ್ರಣ ಬಂಧುವರ್ಮನ ಕವಿಪ್ರತಿಭೆಯ ಸಂಕೇತವಾಗಿದೆ. ಚಾರುದತ್ತನು ಶಾಸ್ತ್ರಾಭ್ಯಾಸಕ್ಕುಪಯೋಗಿ

ಸುವ ಪ್ರತಿಯೊಂದು ವಸ್ತುವೂ ಮಿತ್ರಾವತಿಯ ಮುಗ್ಧ ಮನಸ್ಸಿಗೆ ಕಂಡ ರೀತಿಯನ್ನೂ, ಅದರಲ್ಲಿ ಆಕೆಯ ಮನಸ್ಸಿಗಾದ ಅಗಾಧ ನೋವನ್ನೂ

ಮರದೊಳ್ ಕಟ್ಟಿದ ಸೊರೆಯುಂ
ಸರಾಗದಿಂದುರದೊಳಿಟ್ಟು ಬೀವಿನ ನೇಣಂ
ಬೆರಲೊಳವನರ್ದಿ ಮಿಡಿಗುಂ
ಮೊರೆಗುಂ ಬಱಿಕೊರ್ವೆ ಕರ್ಚುಗುಂ ಪೆರ್ವಿದಿರಂ ೩–೨೨

ತೋಲೊಳ್ ಮುಚ್ಚಿದ ಮಾಱಿಕ್ಕಯ
ಕೇಲವ ಮುಂದಿಟ್ಟು ಬಡಿವುತಿರ್ದಂ ಪಲರಂ
ಸೋಲಿಸುತೆ ಬಱಿಕೆ ತೊಡೆಗಳ
ಮೇಲಡ್ಡಂ ಕೊಱಡನಿಟ್ಟು ರಾಗದೆ ಬಡಿಗುಂ ೩–೨೩

ಪಾಡುಗುಮಡುತರ್ಪಮೊಗುಮಿಗೆ
ನೋಡುಗುಮಭಿನಯಿಸಿ ಪಲವು ರಸಭಾವನೆಯಿಂ
ದಾಡುಗುಮಾಗದೆ ಕಬ್ಬಂ
ಮಾಡುಗುಮೋಲೆಗಳನಣಮೆ ಬರೆಯುತ್ತಿರ್ಕುಂ ೩–೨೪

ನೆಲನಂ ಬರೆಗುಂ ಮತ್ತಂ
ಪಲಗೆಗಳೊಳ್ ಪಲವು ತೆಱದ ವರ್ಣಕ್ರಮದಿಂ
ಪಲವುಂ ರೂಪಂ ಬರೆಗುಂ
ಪಲವಾಡುವಸಂತೆ ತಾನೆ ತನ್ನೊಳ್ ನುಡಿಗುಂ ೩–೨೫

ಸುರಿಗೆಯಿನಾಡುಗುಮಂತಾ
ನುರವಾಳಂ ಕೊಂಡು ಬೀಸುತಿರ್ಕುಂ ಪೆಱತೇ
ನಿರುಳೆಲ್ಲಮಿಂತೆ ಪೋಪುದು
ಮರುಳಪ್ಪಂಗೇನೊ ಪೇಱ ಕೋಡೊಂದುಱಿಯಲ್ ೩–೨೬

ಎಂಬೀ ಪದ್ಯಗಳಲ್ಲಿ ಬಂಧುವರ್ಮನು ಅತ್ಯಂತ ಚಾಣಾಕ್ಷತನದಿಂದ ಹಿಡಿದಿರಿಸಿದ್ದಾನೆ. ಇಲ್ಲಿ ಚಾರುದತ್ತ ಆದರ್ಶ ವಿದ್ಯಾರ್ಥಿಯಾಗಿ ಮೆರೆದಿದ್ದಾನೆ.

ಹೀಗೆ ಶಾಸ್ತ್ರಾಭ್ಯಾಸದಲ್ಲಿ ತೊಡಗಿ, ಕೈಹಿಡಿದವಳನ್ನು ಕಡೆಗಣಿಸಿದ ಚಾರುದತ್ತ ನನ್ನು ರತಿಸುಖಾಭಿಲಾಷಿಯನ್ನಾಗುವಂತೆ ಮಾಡಲು ದೇವಿಲೆಯು ರುದ್ರದತ್ತನಿಗೆ ಹೇಳಿದಳು. ರುದ್ರದತ್ತನು ಆತನನ್ನು ನಿತ್ಯವೂ ವಿನೋದ ವಿಹರಣಕ್ಕಾಗಿ ಕರೆದೊಯ್ದು ಸ್ತ್ರೀಯರನ್ನು ತೋರುವುದು ಕರ್ಣಪಾರ್ಯನ ಒಂದು ಪದ್ಯದಲ್ಲಿ ಮುಗಿದರೆ, ಬಂಧುವರ್ಮನು ೩೫ ಪದ್ಯಗಳಲ್ಲಿ ವಿವಿಧ ರೀತಿಯ ವಿಳಾಸಿನೀ ಜನರನ್ನು ವರ್ಣಿಸಿ, ಆ ಪದ್ಯಗಳಿಗೆ ಅಲಂಕಾರ

ಗಳ ಹೆಸರುಗಳನ್ನೂ ಹೇಳಿದ್ದಾನೆ. ರುಗ್ಮಿಣಿಯ ಸೌಂದರ್ಯ ವರ್ಣನೆಯಲ್ಲಿ, ಶಿಶುಪಾಲನು ಕೃಷ್ಣನನ್ನು ಹೀಯಾಳಿಸಿದ ಭಾಗದಲ್ಲಿ ಸಹಜವಾದ ಕವಿವಾಣಿಯನ್ನೂ, ದೇಸೀಯ ಪದಗಳ ಮೇಲೆ ಕವಿಯ ಹಿಡಿತವನ್ನೂ ಕಾಣಬಹುದಾಗಿದೆ. ಧೂಮಕೇತುವು ಕೊಲ್ಲ ಬಯಸಿ ತಂದ ಮಗುವನ್ನು ತಕ್ಷಶಿಲೆಯ ಮೇಲೆ ಇರಿಸಿ ಹೋದುದು 'ವ್ಯಂತರಪ್ರೇರಣೆಯಿಂದ' ಎಂದು ಮಾತ್ರ ಕರ್ಣಪಾರ್ಯ ಹೇಳಿದರೆ, ಬಂಧುವರ್ಮನು ಧೂಮಕೇತುವಿನ ಮನದ ಹೊಯ್ದಾಟವನ್ನು ಅತ್ಯಂತ ಸೊಗಸಾಗಿ ಚಿತ್ರಿಸಿದ್ದಾನೆ. ಲಲಿತವಾದ ಶೈಲಿಯಲ್ಲಿ ಚಿತ್ರಿಸಿರುವ ಈ ಭಾಗ ಸಹೃದಯರೆಲ್ಲರನ್ನೂ ಆಕರ್ಷಿಸುತ್ತದೆ. ಮಾತಂಗಿಯ ವರ್ಣನೆಯಲ್ಲಿ, ಕಾಂಚನಮಾಲೆ ಸಾಕಿದ ಮಗ ಪ್ರದ್ಯುಮ್ನನನ್ನೇ ಬಯಸುವಲ್ಲಿ ಬಂಧುವರ್ಮನ ಮಿಂಚಿಬರುವ ಪ್ರತಿಭೆಯನ್ನು ಕಾಣುತ್ತೇವೆ.

ಕರ್ಣಪಾರ್ಯನಲ್ಲಿ ಸಂಸ್ಕೃತಪದ ಪ್ರಯೋಗಗಳನ್ನೂ ಕ್ಲಿಷ್ಟತೆಯನ್ನೂ ಕಂಡರೆ, ಬಂಧುವರ್ಮನಲ್ಲಿ ದೇಸೀಪದಗಳನ್ನೂ ಸರಳತೆಯನ್ನೂ ಕಾಣುತ್ತೇವೆ. ಇದಕ್ಕೆ ಈ ಹಿಂದಣ ಉದಾಹರಣ ಪದ್ಯಗಳಲ್ಲದೆ ಕರ್ಣಪಾರ್ಯನ ೪–೯೬ ವಚನದಲ್ಲಿ "ಶ್ರೀಪುರಮನೆಯ್ದಿ ಪೊಕ್ಕಿರಲವರನಲ್ಲಿಯ ಪರದಂ ಪ್ರಿಯಮಿತ್ರನೆಂಬನಜುಂದಿಸಲಿರೆ ಚಾರುದತ್ತನನೇಕ ವಿದ್ಯಾಚಯೋಪಾಧ್ಯಾಯನಾಗೆ ಮನ್ನಣೆಯಿನಾದೇನಾನುಂ ಸಂದ ಗಾಂಧಾರಿ ವಿಷಯದೊಳ್ ಕಾಚವಳಯನಿಚಯಮುಮಂ ಸ್ವೀಕರಿಸಿಪೋಗಿ ವೇತ್ರಗಿರಿಯ ವೇತ್ರಲತಾಪ್ರತಾನದಿನವ್ಯವಚ್ಛಿನ್ನಮಾದಚ್ಛಿನ್ನ ಶಿಲಾಭಿಧಾನ ಗುಹಾಭ್ಯಂತರದಿನುರ್ಚಿಪೋಗಿ" ಎಂಬ ವರ್ಣನೆಯನ್ನು ಕಂಡರೆ, ಬಂಧುವರ್ಮನಲ್ಲಿ "....ಶ್ರೀಪುರಮೆಂಬ ಪೊೞಲನೆಯ್ದಿ ಕೆಲವು ದಿವಸವಿರ್ದಲ್ಲಿ ಚಾರುದತ್ತಂ ವಿದ್ಯೋಪದೇಶಂಗೆಯ್ದು ಬಂದ ಮನ್ನಣೆಯೊಳ್ ಸಂಬಳಮುಂ ಮಾಡಿಕೊಂಡಲ್ಲಿಂದಂ ಪೋಗಿ ಗಾಂಧಾರವಿಷಯದೊಳ್ ಕಾಚವಳಯಂಗಳಂ ಕೊಂಡು ವೇತ್ರಪರ್ವತದ ಶಿಲಾಭಿಧಾನಗುಹೆಯೊಳಗನುರ್ಚಿ ಪೋಗಿ" ಎಂಬ ನಿರೂಪಣೆಯನ್ನು ಕಾಣುತ್ತೇವೆ. ಅಲ್ಲಿನ 'ವಿದ್ಯಾಚಯೋಪಾಧ್ಯಾಯ', 'ದೀನಾರದಿಸಂದು ಸಂದ' ಮತ್ತು 'ಕಾಚವಳಯನಿಚಯ' ಎಂಬಿವು ಕ್ರಮವಾಗಿ ಇಲ್ಲಿ 'ವಿದ್ಯೋಪದೇಶಂಗೆಯ್ದು, 'ಸಂಬಳಮಂ ಮಾಡಿಕೊಂಡು' ಮತ್ತು 'ಕಾಚವಳಯಂಗಳಂ' ಎಂದಾಗಿವೆ.

ಹೀಗೆಯೇ ಕರ್ಣಪಾರ್ಯನು

ಝಷದಿನಶೇಷಸಂಸ್ತುತ ಸುಲಕ್ಷಣಪಾತ್ರಪವಿತ್ರಗಾತ್ರನಾ
ಸ್ವಪನ ವಿಮಾನದಿಂದಮುಪಮಾನ ಸುಖಾಸ್ಪದನಬ್ಧಿ ಜಾತಿಯಿಂ
ವಿಷಧಿಪರೀತಧಾತ್ರಿಪತಿ ವಾರ್ಧಿಯಿಂ ಮಹಿಮಾಳಯುಂ ಗಜ
ದ್ವಿಷದಿನಘೋರಭೂರಿಭುಜನನ್ನನನಿಂ ಪಡೆವೈ ತನೂದರೀ 　　೭–೧೦೮

ಎಂದು ವರ್ಣಿಸಿದರೆ, ಬಂಧುವರ್ಮನು

ಮಿಾನಿಂ ಸರ್ವಸುಲಕ್ಷಣಾಂಗನಮರೇಂದ್ರಾವಾಸದಿಂ ಭೋಗಿಸಂ
ಶ್ರೀನಾರೀಕ್ಷಣದಿಂ ಪ್ರಸಿದ್ಧ ಸುಭಗಂ ವಾರಾಸಿಯಿಂದಂ ಪ್ರಭು
ಸ್ಥಾನೋಪೇತನನೇಕ ಹಾರಿಯಸಘಪ್ರಧ್ವಂಸಿಯಪ್ಪನ್ನನಂ
ನೀನೋರ್ವಂ ಮಗನಂ ಲತಾಂಗಿ ಪಡೆವೌ ಶ್ರೀಸೇವ್ಯನಂ ಭವ್ಯನಂ ೮–೪

ಎಂದು ಹೇಳುತ್ತಾನೆ. ಮುಂದೆ ಕರ್ಣಪಾರ್ಯನು "ಎಂಬುದುಮಾ ನಿತಂಬಿನೀ ಪ್ರಧಾನೆ ಕರಮೊಸೆದಾತ್ಮೀಯ ಮಣಿಭವನದೊಳಿರೆ ಗರ್ಭಚಿಹ್ನಮೊದವೆ ತತ್ಸುದತಿ ಲೋಕಾವಲೋಕನಾರ್ಥಂ ವಿಯನ್ಮಾರ್ಗ ವಿಹಾರಮಂ ಬಯಸಲದನಱಿದಬ್ಜೋದರಂ...." (೭–೧೦೮ವ) ಎಂದೆಲ್ಲಾ ಹೇಳಿದರೆ, ಬಂಧುವರ್ಮನು "ಎನೆ ಕೇಳ್ದತ್ಯಂತ ಸಂತುಷ್ಟಚಿತ್ತೆಯಾಗಿ ಮಾಡದೊಳಿರ್ದು ಕೆಲವು ದಿವಸಕ್ಕೆ ಗರ್ಭಚಿಹ್ನಂಗಳಾಗೆ ಭೂಲೋಕಾವನಾರ್ಥಂ ಗಗನ ವಿಹಾರಮಂ ಬಯಸಿದೊಡಾಕೆಯ ಬಯಕೆಯನುಪೇಂದ್ರನಱಿದು........" (೮–೪ ವ) ಎಂದು ಮೊದಲಾಗಿ ಕರ್ಣಪಾರ್ಯನನ್ನೇ ಅನುಸರಿಸಿ ಸಂಸ್ಕೃತವನ್ನು ಕನ್ನಡಿಸಿರುವುದನ್ನು ಕಾಣಬಹುದಾಗಿದೆ.

**ವರ್ಣನೆಗಳು :**

ಶಿಶುಪಾಲನು ಕೃಷ್ಣನನ್ನು ಹೀಯಾಳಿಸುವಲ್ಲಿ
ತುಱುಪಟ್ಟೆ ನಿನ್ನ ಪೆಸರೇಂ
ತುಱುಕಾಱಂ ನಿನ್ನ ತಂದೆ ತುಱುವನೆ ಕಾವೈ
ತುಱುಕಾರ್ತಿಯರೊಳ್ ಮಱೆವಾ
ಟ್ಟಿಱಿಕೆಯ ಗೋವುಳಿಗ ನಿನಗೆ ಶೌರ್ಯಮೆ ಪೊಲಸೇ ೭–೬೪

ಉಡಿದೈ ಬಂಡಿಯನೇನಗುರ್ವೊ ಮಗುಳ್ದುಂ ವಿಕ್ರಾಂತದಿಂ ಕಾಗೆಯಂ
ಪಿಡಿದೈ ಸಂಕಿಸದಿರ್ದು ಕತ್ತೆ ಬಡಗೂಂಟೆಂದಿಂತಿವಂ ನೋವಿನಿಂ
ಬಡಿದೈ ನೀರೊಳಗೊಳ್ಳೆಯಂ ಮಡಿಪಿದೈ ನೀಂ ಚೋದ್ಯಮೋ ಮತ್ತೆ ದಂ
ಡಿಡುವಂ ಮಾಣ್ದಿರದೊತ್ತಿದೈ ಗಡಮಿದೇನಾಶ್ಚರ್ಯಮೋ ಸಾಹಸಂ ೭–೬೫

ಎಂಬಿವೇ ಮೊದಲಾದ ಪದ್ಯಗಳಲ್ಲಿ ಬಂಧುವರ್ಮನ ಲಲಿತಶೈಲಿಯನ್ನು ನೋಡಬಹುದಾಗಿದೆ. ಹೀಗೆಯೇ ಮಗನನ್ನೇ ಕೂಡಬಯಸಿದ ಕಾಂಚನಮಾಲೆಯ ಇಚ್ಛೆಯನ್ನು ತಿರಸ್ಕರಿಸಿದ ಪ್ರದ್ಯುಮ್ನನನ್ನು ಕುರಿತು ಆಕೆಯು

ತಕ್ಕನ ತೆಱದಿಂ ನೀನುರ
ದುಕ್ಕಲಿಸಿದೆಯಕ್ಕುಮಾದೊಡಿರದಿನ್ನುಂ ನೀಂ
ಪೊಕ್ಕಿರ್ದಮರೇಂದ್ರನ ಮಱೆ
ವೊಕ್ಕಡಮಾಂ ಕೊಲಿಸೆನೆನ್ನ ಮುಳಿಸನೆ ಸಲಿಸೆಂ ೮–೩೮

ಎಂದು ಹೇಳಿದರೆ, ಆತನು

ನಿಮ್ಮ ಮಗನೆಂದು ಬರ್ದುಕುವೆ
ನುಮ್ಮಡಿಸೆನದೆಂತುಮುಬ್ಬ ಕೊಂದಡೆ ಪಾಪಂ
ನಿಮ್ಮಸೆ ಸಾರ್ಗುಂ ತಾಯ್ ಮುಳಿ
ಸಿಂ ಮಗನಂ ಕೊಂದಳೆಂಬುದೆಲ್ಲಿಯುಮುಂಟೇ ೮–೬೯

ಎಂದು ಮೊದಲಾಗಿ ಬರುವ ವರ್ಣನೆಗಳಲ್ಲಿ ಸರಳತೆಯ ಜತೆಗೆ ನಾಟಕೀಯತೆಯನ್ನೂ ಗುರುತಿಸಬಹುದು. ಈ ಸಂದರ್ಭ ಕುಮಾರರಾಮನ ಕಥೆಯನ್ನು ನೆನಪಿಗೆ ತರುತ್ತದೆ. ಕುಮಾರರಾಮನು ಸವತಿಯ ಮಗನಾದರೆ, ಪ್ರದ್ಯುಮ್ನನು ಸಾಕಿದ ಮಗನಾಗಿದ್ದಾನೆ. ಬಯಕೆ ಇಬ್ಬರದೂ ಒಂದೇ ರೀತಿಯದಾಗಿದ್ದು ಕೃತಕಭಾವದಿಂದ ಇಬ್ಬರೂ ಮಕ್ಕಳಮೇಲೆ ಗಂಡಂದಿರಿಗೆ ದೂರೀಯುತ್ತಾರೆ.

ರುಗ್ಮಿಣಿಯ ಸೌಂದರ್ಯೋನ್ನತಿಯನ್ನು ಮಾಡುವಲ್ಲಿ ಬಂಧುವರ್ಮನು ೭ನೆಯ ಆಶ್ವಾಸದಲ್ಲಿ ೩೩ ಕಂದಪದ್ಯಗಳನ್ನು ಬಳಸಿದ್ದಾನೆ. ಅವುಗಳಲ್ಲಿ

ಮದನನಿಧಾನಮನೊಳಕೆ
ಯ್ದುದಜಂ ಕನ್ನೆಯ ನಿತಂಬಮುನ್ನತಿಕೆಯಿನೊ
ಪ್ಪಿದುದಂತೆಯುಮಲ್ತೆ ನಿಧಾ
ನದ ಮೇಗಿರ್ದಡನನಾವನುನ್ನತನಾಗಂ ೭–೨೨

ಎನ್ನಂ ನೋಡಲ್ ಮಾಱು
ತ್ತುನ್ನತಿಕೆಯನುಂಟುಮಾಡಿ ನೋಡಿದರೆರ್ದೆಯಂ
ಭಿನ್ನಂ ಮಾಡುವೆನೆಂಬಂ
ತುನ್ನತಕುಚಯುಗೆಯ ಬಾಯ್ ಕರಂ ಸೊಗಯಿಸುಗುಂ ೭–೩೯

ಎಂಬಂತಹ ಅಪೂರ್ವವರ್ಣನೆಗಳೂ ಸೇರಿವೆ.

ಬಂಧುವರ್ಮನು ಕರ್ಣಪಾರ್ಯನ ಕಥೆಯನ್ನನುಸರಿಸಿ, ಆತನ ಪದಪ್ರಯೋಗಗಳನ್ನೂ ವರ್ಣನೆಗಳನ್ನೂ ಬಳಸಿ ತನ್ನ ಕಾವ್ಯರಚನೆ ಮಾಡಿಕೊಂಡಿದ್ದರೂ, ಸ್ವಪ್ರತಿಭೆಯಿಂದ ನಿರ್ಮಿಸಿರುವ ಕೆಲವು ರಸದಾಣಗಳನ್ನೂ ಕವಿತಾಚಾತುರ್ಯವನ್ನೂ ಈ ಮೇಲಣ ಕೆಲವು ಉದಾಹರಣೆಗಳಿಂದ ತಿಳಿಯಬಹುದಾಗಿದೆ.

ಸನ್ನಿವೇಶವನ್ನು ಸಂಕ್ಷಿಪ್ತವಾಗಿ ಗದ್ಯದಲ್ಲಿ ನಿರೂಪಿಸುವುದನ್ನು

"ಇಂತೆಲ್ಲರುಮಾ ಕೊಳದ ತೀರ್ಥೋದಕದೊಳ್ ಮಿಂದು ಕೈಗೈದು ಬಂದು ಪಲವುಮರ್ಚನೆಗಳಂ ತಂದು ತೀರ್ಥಜಿನಾಲಯದ ದೇವರಂ ಬಂದಿಸಿ ಮಗುೞ್ದು ಬಂದಾ ಕೊಳದ ತಡಿಯೊಳ್ ಗೋಷ್ಠಿಯಾಗಿರ್ದು ತಾವರೆಯೆಲೆಯಂ ಪಾಸಿ ರಸಾಯನಮಪ್ಪ ದಿವ್ಯಾಹಾರಮನುಂಡು ತಂಬುಲಂಗೊಂಡು ತಮ್ಮ ಮೆಚ್ಚಿನ ಲತಾಭವನಂಗಳೊಳಮದಿ

ಮುರ್ತ್ತೆಯ ಜೊಂಪಂಗಳೊಳಂ ಪಲವುಂ ಪ್ರಾಣವಲ್ಲಭರಿ ವಸುದೇವನುಂ ಗಾಂಧರ್ವ ದತ್ತೆಯುಮೊಂದು ಮಾಧವೀಗೃಹದೊಳಗೆ ಪುಷ್ಪಶಯನದೊಳ್ ಸ್ವೇಚ್ಛೆಯಿನಿರ್ದಿನಿಸು ಬೇಗದಿನಲ್ಲಿಂದಮೆರ್ದು...." (೫–೬೫) ಎಂಬ ಗದ್ಯದಲ್ಲಿ ಕಾಣಬಹುದಾಗಿದೆ. ಇಂತಹ ಸಂಕ್ಷಿಪ್ತ ಚಿತ್ರಣ ಬಂಧುವರ್ಮನ ವೈಶಿಷ್ಟ್ಯವಾಗಿದೆ.

ಈ ವರ್ಣನೆಗಳಲ್ಲಿ ಅಂದಿನ ಸಾಮಾಜಿಕ ರೀತಿನೀತಿಗಳನ್ನು ಮನಗಾಣಬಹುದಾಗಿದೆ. ಮೇಲಣ ಗದ್ಯದಲ್ಲಿ ಬರುವ "ಲತಾಭವನಂಗಳೊಳಮದಿಮುರ್ತ್ತೆಯ ಜೊಂಪಂಗಳೊಳಂ ಪಲವುಂ ಪ್ರಾಣವಲ್ಲಭರಿ" ಎನ್ನುವಲ್ಲಿ ಅಂದಿನ ಕಾಲದಲ್ಲಿ ಸಾರ್ವಜನಿಕ ಉದ್ಯಾನವನಗಳಿದ್ದುವೆಂದೂ, ಅದರಲ್ಲಿ ಹಲವು ದಂಪತಿಗಳು ಸ್ವೇಚ್ಛೆಯಾಗಿ ವಿಹರಿಸುತ್ತಿದ್ದರೆಂದೂ ತಿಳಿಯಬಹುದಾಗಿದೆ. ಹಾಗೆಯೆ ಪ್ರದ್ಯುಮ್ನನು ವೃದ್ಧನಾವಿದನಾಗಿ ಮದುವೆಯಾಗಲಿದ್ದ ಉಪಧಿಯೆಂಬ "ಕನ್ನೆಯ ಪುರ್ವುಂ ನೊಸಲುಮಂ ಸಮೆಜಿಿದಾಗಳಾ" ಎಂಬ ವರ್ಣನೆಯಿಂದ ಅಂದಿನ ಕಾಲದಲ್ಲಿ ಮದುವೆಯಾಗಲಿರುವ ಕನ್ನೆಗೆ ನಾವಿದನಿಂದ ಮುಖಾಲಂಕಾರ ನಡೆಯುತ್ತಿದ್ದಿತು ಎಂದೂ ಅರ್ಥವಾಗುತ್ತದೆ. ಅಂತೆಯೇ ಜಾತಿಗಳು, ವರ್ಣಗಳು ಮೊದಲಾದ ಹಲವಾರು ಪ್ರಯೋಗಗಳನ್ನು ಕಾವ್ಯದುದ್ದಕ್ಕೂ ಕಾಣಬಹುದಾಗಿದೆ.

ಕವಿಯು ತನ್ನ ಕಥಾವರ್ಣನೆಯ ಮನರಂಜನೆಗೆ ಇಂಬಾಗಿ ಮೊಟಗಂ ಕೇಳ್ದ ನವಿಲಂತೆ ರಾಗಿಸಿ, ಪಾವಂ ದಾಂಟಿದಂತುಮ್ಮನೆ ಬೆಮರ್ತು, ಸೋಲದ ಭರದಿಂದೆಱಗಿದಂತೆ (೯–೧೦೮), ಸ್ತ್ರೀಸಂಸರ್ಗದಿಂ ತಪಸ್ವಿಯಾದೊಡಮಧೋಗತಿಗಿೞಗುಮೆಂಬುದನಭಿನಯಿಸುವಂತೆ (೯–೧೧೫), ಕಂಪಿಂಗೆ ಸುಳಿವ ತುಂಬಿಯಂತೆ (೬–೬೨೮), ತಣಿದವರ್ ತನರಂ ಮಱತದರೆಂಬುದು ಪಾಟಿ (೯–೫೨೮) ಎಂಬಿವೇ ಮೊದಲಾದ ಹಲವಾರು ಉಪಮೆಗಳನ್ನು ಉಪಯೋಗಿಸಿದ್ದಾನೆ. ಜೊತೆಗೆ 'ಗುಡಿಗಟ್ಟಿದ ಸೀರೆಯಂತೆ ದಕ್ಕುಂದಲೆಗೆ ಪಂದರುಂ....ರಾಕ್ಷಸರಿಂ ಕೊಂಡಿಕ್ಕುವ ಶಬರನಂತೆ ನೆತ್ತರಂ ಪೀರ್ವ ಪಿಶಾಚಗಳಿಂದ' (೨–೧೧೮), 'ಮಹೇಶ್ವರಾಲಯದಂತೆ ಗೊರವು, ಮನೆಗಳಂತೆ ಕೇರು' (೨–೩೮೮) ಎಂಬಿವೇ ಮೊದಲಾದ ವರ್ಣನೆಗಳಲ್ಲಿ ಕವಿಯು ನಯಸೇನನಿಂದ ಪ್ರಭಾವಿತನಾಗಿರುವುದು ಕಂಡುಬರುತ್ತದೆ.

ಬಂಧುವರ್ಮನು ನೇಮಿತೀರ್ಥಂಕರ ಚರಿತೆಯ ವರ್ಣನೆಯಲ್ಲಿ ತೊಡಗಿದ್ದರೂ ಆತನ ಮನಸ್ಸು ಮಾನವಧರ್ಮದೆಡೆಗೆ ಸದಾ ಹರಿದಂತೆ ಕಂಡುಬರುತ್ತದೆ.

ಬಡವಂ ಸುಭೂಮಿಯೊಳ್ ಪದ
ವಡೆದರ್ಥಿಯೆ ಬಿತ್ತಿದಂತೆ ನೆಂಬುಗೆವಡೆದಂ
ತೊಡರಿಸಿದ ಧರ್ಮದಿಂದಾ
ಗಡೆ ಮನ್ನಣೆವಡೆವುದಱಿಯೆ ಪೇಟಿದೆ ಫಲಮಂ ೧೦–೧೨

ಬಸನನುನುಂಟುಮಾಡದಿರು ಮಾನ್ಯರೊಳೊಪ್ಪೆ ವಿನೀತನಾಗು ಬೆ
ರ್ಚಿಸದಿರು ಬಂಧುವರ್ಗಮನಡಂಗಿಸು ಬೆರ್ಚಿದೊರಂ ಸುದಾನದಿಂ
ಪೆಸರಿಸು ಭೃತ್ಯರಂ ನಯದಿನಾಳ್ ಪ್ರಜೆಯಂ ಬಱಯಿಂದೆ ಬಪ್ಪುದಂ
ಬಿಸುಡು ನಿರಂತರಂ ತಕ್ಕರ ಮಿಕ್ಕರ ಸಂವಿವಾದನಂ ೧೦–೧೯

ಎಂಬಿವೇ ಮೊದಲಾದ ಪದ್ಯಗಳಲ್ಲಿ ಧರ್ಮಸ್ವರೂಪವನ್ನು ನಿರೂಪಿಸುತ್ತಾನೆ. ಹಾಗೆಯೇ ಸ್ತ್ರೀಧರ್ಮ, ಕುಲಿಲಾಳಧರ್ಮಗಳು ಎಂತಹವು? ಅವು ಹೇಗಿರಬೇಕು? ಎಂಬುದೆಲ್ಲವನ್ನು ವಿವರವಾಗಿ ಮನಮುಟ್ಟುವಂತೆ ಚಿತ್ರಿಸುತ್ತಾನೆ.

ಪತಿ ಕಾಗುಮೆ ಪೆಂಡತಿಯಂ
ಸತಿ ತನ್ನಂ ತಾನೆ ಕಾಗುವುತ್ತಮ ಜಾತಿ
ಸ್ಥಿತಿಯಿಂ ಗುಣಸಂತತಿಯಂ
ಗತಿಯಂ ತಾಂ ಬಗೆದು ನೆಗೞ್ದ ಪೞ ಪೊರ್ದುಗುಮೇ ೧೦–೨೮

ಎಂಬಂತಹ ಮುತ್ತೂ ಕೆಲವು ಪದ್ಯಗಳಲ್ಲಿ ಸ್ತ್ರೀಧರ್ಮನಿರೂಪಣೆಯನ್ನು ಕಾಣಬಹುದು.

ಕಲಿತನವಭಿಮಾನಂ ನಿ
ರ್ಮಳ ಧರ್ಮಂ ತ್ಯಾಗಮೆಸೆವ ಸತ್ಯಂ ಶೌಚಂ
ನೆಲಸಿರ್ದೀ ಗುಣ ಮೂಱುಂ
ನೆಲೆಯುಳ್ಳಂ ತುೞಲಸಂದನಲ್ಲದಡಲ್ಲಂ ೧೧–೮೧

ಕೇಳಿಕದಲ್ಲಿ ಸೂಳೆಮನೆಯಲ್ಲಿ ನಿಜಾಲಯದಲ್ಲಿ ಭೂಪನಾ
ರ್ತೀಪೆಡೆಯಲ್ಲಿ ಜೂದಿನೆಡೆಯಲ್ಲಿ ಕರಂ ಪಸಿದಲ್ಲಿ ಪಣ್ಣಲಂ
ತೀವಿದ ತೋಟದಲ್ಲಿ ಬೆಳೆದೊಪ್ಪುವ ಕೆಯ್ವೊಲದಲ್ಲಿ ಪೊರ್ದಿ ನಿಂ
ದಾ ವನಮಾಗೆ ಕಾವುದಭಿಮಾನಮನೊಳ್ಳುೞಲಾಳ್ ನಿರಂತರಂ ೧೧–೮೮

ಮೊದಲಾದ ಹಲವಾರು ಪದ್ಯಗಳಲ್ಲಿ ಯುದ್ಧವೀರನ ಧರ್ಮವನ್ನು ಸೊಗಸಾಗಿ ಚಿತ್ರಿಸುತ್ತಾನೆ. ಮೇಲಣ ಪದ್ಯದಲ್ಲಿ ಪಂಪನ ಪ್ರಭಾವವು ಕವಿಯ ಮೇಲಾಗಿರುವುದನ್ನು ಕಾಣಬಹುದಾಗಿದೆ.

ಇದಲ್ಲದೆ ವೈದಿಕಮತಾನುಸಾರಿಯಾದ ಪುರಾಣಕಥೆಯ ವಿಡಂಬನೆ ''ವಿಷ್ಣುವಂ ಸರ್ವಜ್ಞಂ ಸರ್ವವ್ಯಾಪಿ ಭುವನತ್ರಯಪತಿಯೆಂದು ಲೋಕಂ ತಾಮೆ ಕೊಂಡಾಡುವುದೆತ್ತಾತಂ ಅರ್ಜುನಂಗೆ ರಥಮನೆಸಗಿದನೆಂಬುದೆತ್ತದಲ್ಲದೆಯುಂ ಜ್ಯೋತಿರ್ಲೋಕದ ದೇವನಪ್ಪಾದಿತ್ಯಪೇನನೆತ್ತ ಕೊಂತಿಯೆತ್ತ ಕೊಂತಿ ತಲೆನೀರ್ಮಿಂದು ಆದಿತ್ಯನಂ ಬಯಸಿದೊಡೆ ಗರ್ಭಮಪ್ಪುದೆತ್ತ ಗರ್ಭಮಾಗಿ ಕಿವಿಯೊಳ್ ಕರ್ಣನಂ ಪೆತ್ತಳೆಂಬುದೆತ್ತ....ಅಭಿಮನ್ಯು

ಬಸಿಱತೊಳಿರ್ದ ಚಕ್ರವ್ಯೂಹಮಂ ಕೇಳ್ವುದೆತ್ತ ನೆಱೆತಾಯಿ ಕೇಳದೆ ತಾನೆ ಪೊಱಮಟ್ಟ ನೆಂಬುದೆತ್ತ" (೧-೩೯) ಎಂಬಿವೇ ಮೊದಲಾದ ವರ್ಣನೆಗಳಲ್ಲಿ ವ್ಯಕ್ತವಾಗುತ್ತದೆ.

ಒಟ್ಟಿನಲ್ಲಿ ಬಂಧುವರ್ಮ ಒಬ್ಬ ಉತ್ತಮ ಕವಿ; ಆತನ ಕಾವ್ಯ ಸತ್ಕಾವ್ಯ ಎನ್ನುವುದರಲ್ಲಿ ಸಂದೇಹವಿಲ್ಲ.

**ಸಂಪಾದನೆ:**

ಈ ಕೃತಿಯ ಸಂಪಾದನೆಗೆ ಒಂದೇ ಒಂದು ಓಲೆಪ್ರತಿಯ (ಕೆ ಳ)ನ್ನು ಮೂಲವಾಗಿಟ್ಟುಕೊಳ್ಳಲಾಗಿದೆ. ಇದು ೨೨. ೧×೨.೧ ಇಂಚು ಅಳತೆಯುಳ್ಳುದಾಗಿದ್ದು ೭೮ ಪತ್ರಗಳನ್ನೊಡಗೊಂಡಿದೆ. ಪ್ರತಿಪತ್ರದ ಒಂದು ಪಕ್ಕದಲ್ಲಿ ೧೩ ಪಂಕ್ತಿಗಳೂ, ಪ್ರತಿ ಪಂಕ್ತಿಯಲ್ಲಿ ೧೧೦ ಅಕ್ಷರಗಳೂ ಇವೆ.

ಈ ಪ್ರತಿಯು ಸಂಸ್ಥೆಗೆ ಸಂಗ್ರಹಿಸಿದ ಪ್ರತಿಗಳಲ್ಲಿ ನಾಲ್ಕನೆಯದಾದರೂ ಇದುವರೆಗೂ ಇದು ಪ್ರಕಟವಾಗದಿದ್ದುದಕ್ಕೆ ಕಾರಣ ಬಹುಶಃ ಇದರಲ್ಲಿರುವ ಅಕ್ಷರಸ್ಖಾಲಿತ್ಯಗಳೇ ಇರಬಹುದೆಂದು ತೋರುತ್ತದೆ. ಮತ್ತು ಇದರ ಮತ್ತೊಂದು ಪ್ರತಿ ದೊರೆತರೆ ಸಂಪಾದನಾ ಕಾರ್ಯ ಸುಲಭವಾಗುತ್ತದೆಯೆಂದು ವಿದ್ವಾಂಸರು ಕಾದಿರಲೂಬಹುದು. ಅವರ ಮತ್ತೊಂದು ಪ್ರತಿಯ ಆಸೆ ಇದುವರೆಗೂ ಈಡೇರದಾಯಿತು. ಅಪ್ರಕಟಿತ ಕೃತಿಯಾದ ಈ ಒಂದು ಉತ್ತಮ ಕಾವ್ಯವನ್ನು ಹೊರತರಲೇಬೇಕೆಂದು ಒತ್ತಾಯಪಡಿಸಿ ದಿವಂಗತ ಡಾ. ಡಿ. ಎಲ್. ನರಸಿಂಹಾಚಾರ್ಯರು ನನ್ನನ್ನು ಈ ಕೆಲಸಕ್ಕೆ ಪ್ರೇರೇಪಿಸಿದರು. ಅವರ ಆ ಪ್ರೇರಣೆಯೇ ಇಂದು ಈ ಕಾವ್ಯ ಹೊರಬರಲು ಕಾರಣವಾಗಿದೆ.

ಮತ್ತೊಂದು ಕೆ.ಎ. ೪೯ನೆಯ ಕಾಗದದ ಪ್ರತಿಯಿದ್ದರೂ ಇದು ಕೆ ಳ ಓಲೆಪ್ರತಿಯ ನಕಲಾಗಿ ತೋರುತ್ತದೆ. ಏಕೆಂದರೆ, ಓಲೆಪ್ರತಿಯಲ್ಲಿ ಬಿಟ್ಟ ಭಾಗಗಳು ಈ ಕಾಗದದ ಪ್ರತಿಯಲ್ಲಿಯೂ ಇಲ್ಲ. ಮತ್ತೆ ಮೂಲದಿಂದ ನಕಲು ಮಾಡುವಾಗ ಆಗಿರುವ ಅಕ್ಷರಲೋಪಗಳನ್ನು ಇದರಲ್ಲಿ ಕಾಣಬಹುದು; ಬೇರೆ ಪಾಠಗಳಾವುವೂ ದೊರೆಯುವುದಿಲ್ಲ. ಆದರೆ, ನವಮಾಶ್ವಾಸದ ೧೧೨ನೆಯ ವಚನದಲ್ಲಿ "ಶಿವದೇವಿಗೆ ಗರ್ಭಂ" ಎಂಬಲ್ಲಿಂದ 'ಶಚೀ ಮಹಾದೇವಿ' ಎಂಬವರೆಗಿನ ವಚನಭಾಗವು ಓಲೆಪ್ರತಿಯಲ್ಲಿಲ್ಲದಿದ್ದರೂ ಕಾಗದದ ಪ್ರತಿಯಲ್ಲಿ ದೊರೆಯುತ್ತದೆ. ಇದಿಷ್ಟು ಹೊರತು ಉಳಿದಂತೆ ಯಾವ ವ್ಯತ್ಯಾಸವೂ ಇಲ್ಲ. ಆದುದರಿಂದ ಮೇಲಣ ಭಾಗವನ್ನು ಕಾಗದದ ಪ್ರತಿಯಿಂದ ಉಪಯೋಗಿಸಿಕೊಂಡರೂ ಉಳಿದೆಲ್ಲ ಭಾಗಕ್ಕೆ ಓಲೆ ಪ್ರತಿಯೊಂದನ್ನೇ ಆಧರಿಸಲಾಗಿದೆ. ಛಂದಸ್ಸು ಮತ್ತು ಅರ್ಥ ದೃಷ್ಟಿಯಿಂದ ಬೇರೆ ಅಕ್ಷರಗಳನ್ನೋ ಪದಗಳನ್ನೋ ಜೋಡಿಸಿದ ಭಾಗವನ್ನು ಕಂಸದಲ್ಲಿ ಕೊಟ್ಟು ಮೂಲಪಾಠವನ್ನು ಅಡಿಪಾಠವಾಗಿ ಕೊಡಲಾಗಿದೆ.

ಈ ಗ್ರಂಥಕ್ಕೆ ಪದ್ಯಗಳ ಅಕಾರಾದಿ, ಅರ್ಥಕೋಶ, ಪಾರಿಭಾಷಿಕ ಪದಕೋಶಗಳನ್ನು ಕೊಡಲಾಗಿದೆ. ಇತ್ತೀಚೆಗೆ ದೊರೆತ ಉದಯಾದಿತ್ಯಾಲಂಕಾರದ ಅಪೂರ್ವ ಹಸ್ತಪ್ರತಿ

ಯೊಂದರಲ್ಲಿ ಬಂಧುವರ್ಮನ ಹರಿವಂಶಾಭ್ಯುದಯದ ಕೆಲವು ಪದ್ಯಗಳು ಅಲಂಕಾರಗಳಿಗೆ ಉದಾಹರಣೆಯಾಗಿವೆ. ಗ್ರಂಥ ಅಚ್ಚಾದ ಮೇಲೆ ದೊರೆತ ಈ ಹಸ್ತಪ್ರತಿಯ ಪದ್ಯಗಳಲ್ಲಿ ಕಂಡುಬರುವ ಪಾಠಾಂತರಗಳನ್ನು ಪರಿಶಿಷ್ಟದಲ್ಲಿ ಕೊಡಲಾಗಿದೆ.

ಈ ಸಂಪಾದನಾಕಾರ್ಯದಲ್ಲಿ ಕಂಡುಬಂದ ತೊಡಕುಗಳನ್ನು ಪರಿಹರಿಸುವುದರಲ್ಲಿ ವಿಭಾಗ ಸಂಪಾದಕರಾದ ಶ್ರೀಯುತ ಎನ್. ಬಸವಾರಾಧ್ಯ, ಸಹಾಯ ಸಂಶೋಧಕರಾದ ಶ್ರೀಯುತ ಎಸ್. ಎನ್. ಕೃಷ್ಣಜೋಯಿಸ್, ಕೆಲವೆಡೆಗಳಲ್ಲಿ ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರಿಗಳು ಸಹಕರಿಸಿದ್ದಾರೆ. ಈ ಮಾಲೆಯ ಪ್ರಧಾನಸಂಪಾದಕರಾದ ಡಾ. ಹಾ. ಮಾ. ನಾಯಕರು ಇದು ಆದಷ್ಟು ಬೇಗ ಪ್ರಕಟವಾಗಲು ನೆರವಾಗಿದ್ದಾರೆ. ಶ್ರೀ ಮಿತ್ರ ಪ್ರಿಂಟರ್ಸ್ ಅವರು ಅಚ್ಚುಕಟ್ಟಾಗಿ ಅಚ್ಚುಮಾಡಿಕೊಟ್ಟಿದ್ದಾರೆ. ಈ ಎಲ್ಲರಿಗೆ ನನ್ನ ವಂದನೆಗಳು ಸಲ್ಲಬೇಕಾಗಿದೆ.

ಇಂತಹ ಉತ್ತಮಕಾವ್ಯವೊಂದನ್ನು ಸಹೃದಯರು ಆದರದಿಂದ ಬರಮಾಡಿಕೊಂಡರೆ ನಮ್ಮ ಶ್ರಮ ಸಾರ್ಥಕವಾಗುತ್ತದೆ.

ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು-೬
೨೭-೫-೧೯೭೪

ಬಿ. ಎಸ್. ಸಣ್ಣಯ್ಯ
ಸಹಾಯಕ ನಿರ್ದೇಶಕ
ಸಂಪಾದನಾ ವಿಭಾಗ

# ಹರಿವಂಶಾಭ್ಯುದಯಂ

## ಪ್ರಥಮಾಶ್ವಾಸಂ

ಶಾ|| ಶ್ರೀಯಂ ಭವ್ಯಜನೋದಯಪ್ರಣುತಿಯಂ ಸರ್ವೋಪಕೃದ್ದಿವ್ಯವಾಕ್
ಶ್ರೀಯಂ ಜೀವದಯಾದಮಪ್ರಶಮೆಯಂ ವಿಶ್ವ[1][ಪ್ರಭಾ][1]ಸ್ವದೃಶ
ಶ್ರೀಯಂ ಕರ್ಮರಿಪುಕ್ಷಯಪ್ರಭವಮಂ ತಾಳ್ದಿರ್ದ ನಿ[2][ರ್ವೃತ್ತಿಕಾ][2]
ಶ್ರೀಯಂ ಪ್ರಾರ್ಥಿಸಿ ವಂದಿಪೆಂ ತ್ರಿಭುವನೈಕಸ್ವಾಮಿಯಂ ನೇಮಿಯಂ ೧

ಮ|| ಅತಿಬ[3][ದ್ಧೋ][3]ದ್ಧತಕರ್ಮಸಂಕುಳ ಮಹಾವಿದ್ವಿಷ್ಟರಂ ದುಷ್ಟರಂ
ಹತವಿಧ್ವಂಸನಮಾಗೆ ಮಾಡಿ ಪರಮಶ್ರೀಕಾಂತೆಯೊಳ್ ಕೂಡಿ ನಿ
ರ್ವೃತರಾಗಿರ್ದ ವಿಶುದ್ಧರಂ ಪ್ರವಿಪುಳಜ್ಞಾನೇದ್ಧರಂ ಸಿದ್ಧರಂ
ಸ್ತುತಿಗೆ[4][ಯ್ವೆಂ][4]ಗೆನಗೀಗವರ್ ದುರಿತಭೇದೋಪಾಯಮಂ ಶ್ರೀಯುಮಂ ೨

ಪರಮಾತ್ಮಾನನ ನಿರ್ಗತಾಗಮ ಮಹಾಂಭೋರಾಶಿ ಪಾರಪ್ರಗ
ಲ್ಭರನತ್ಯಾಶ್ರಿತ ಭವ್ಯಪೋಷರ ಗುಣಪ್ರೋದ್ಯೋಗ ಸಂ[5][ಯೋಗ][5]ಭಾ
ಸುರರಂ ದುಷ್ಟಚತುಷ್ಕಷಾಯಹರರಂ ಸೌಜನ್ಯಸೌಂದರ್ಯರಂ
ದುರಿತಚ್ಛೇದನಕಾರ್ಯರಂ ವಿನಯ[6][ದಿಂ ವಂದಿಪ್ಪೆ][6]ನಾಚಾರ್ಯರಂ ೩

ಚಂ|| ಅತಿಹಿತನುಂ ಜಿನೇಂದ್ರಮುಖನಿರ್ಗತಮಂ ಗಣನಾಥನಿರ್ಮಿತ
ಶ್ರುತಮನಶೇಷವಸ್ತುಯುತಮಂ ಪ್ರತಿಬೋಧಿಸುತಿರ್ಪರಂ ಬುಧ
ಸ್ತುತರನಸಂಚಳವ್ರತರನುನ್ನತರಂ ಸ್ತುತಿಗೆಯ್ವೆನೆಂದುಮ
ಪ್ರತಿಮಗುಣಪ್ರಕಾಶಕರನಾನುಪದೇಶಕರಂ ಸರಾಗದಿಂ ೪

ದುರಿತವಿಷೋತ್ಕಟೋಗ್ರತರ ಸರ್ಪಮನಿಂದ್ರಿಯದರ್ಪಮಂ ನಿರಂ
ತರ ಶುಭಭಾವನೋದ್ಯತ ವಿಸೂತ್ರ ಪವಿತ್ರ ಚರಿತ್ರಯುಕ್ತಪೋ
ಭರದಿನಡಂಗಿಸಿರ್ದಖಿಳ ಸಾಧುಗಳಂ ಸ್ತುತಿಯಿಪ್ಪೆನಾಂ ಗುಣೋ
ತ್ಕರದೊಡಗೂಡಿ ಬೇಡಿ ನುತಮುಕ್ತಿಯನುತ್ತಮಸೌಖ್ಯಯುಕ್ತಿಯಂ ೫

---

1 ಭಾ 2 ವೃತಿ 3 ದ್ಧಾ 4 ಯೊ 5 ಯೊ 6 ರಿಂದಿಪ್ಪಪ್ಪ

ಪರನುತತಾರೆಯುಂ ಖಳವಿಕಾರೆಯುಮೋಡಿಸಿ ಗೆಲ್ದು ಗೆಲ್ಲದೊಳ್
ಪರಮಜಿನೇಂದ್ರಶಾಸನವಿಭಾಸನ ಕಾರ್ಯಸಮರ್ಥೆಯಾದ ಸುಂ
ದರಮುಖಿ ಯಕ್ಷದೇವಿ ಪರಿರಕ್ಷಿಸುಗುನ್ನತ ಜೈನಮಾರ್ಗಭಾ
ಸುರಗುಣರಂಜಿನೀಯೆ ಸುವಿ[1][ಧೇಯ ವಿನೇ][1]ಯ ಜನಂಗಳೆಲ್ಲಮಂ ೬

ಮ|| ಜಿನಮಾರ್ಗಸ್ಥ ಮುನೀಂದ್ರರೀಯೆ ಪದೆದೊಂದಲ್ಪವ್ರತಂ ಯಕ್ಷನ
ಪ್ಪನಿತಂ ಮಾಡಿದುದಿಂ ಜಿನಾಶ್ರಯದಿನೇನೇನಾಗದೀ ದೈವ ಬಂ
ಧನವತ್ಪ್ರೋದ್ಧತ ಧರ್ಮಚಕ್ರಧರನಾಗಿರ್ದಂದು ತಾನೋಲಗಿ
ಪ್ಪನವಿಘ್ನಪ್ರದನಕ್ಕೆ ಮತ್ಕೃತಿಗೆ ತಾಂ ಸರ್ವಾಹ ಯಕ್ಷಾಧಿಪಂ ೭

ಉ|| ಕಾಮುಕಳಾನಿತಂಬಿನಿಯೆ ಪಾದಪಯೋಧರಯುಗ್ಮೆ ನಾಟ್ಯವಿ
ದ್ಯಾಮುಖಿ ರಾಜನೀತಿಪದಲಕ್ಷಣಲೋಚನೆ [2][ಸಾ][2]ರಹಸ್ತೆ ಧ
ರ್ಮಾಮೃತವಾಕ್ಯೆ ಕಾವ್ಯರಸಭಾವೆ ಸರಸ್ವತಿ ಬಂಧುವರ್ಮ ವ
ಕ್ತ್ರಾಮಳಕೋಮಳಾಂಬುರುಹದೊಳ್ ನೆಲಸಿರ್ಕೆ ಮನೋನುರಾಗದಿಂ ೮

ಕಂ|| ಪದ್ಯಾಂಗಿ ವಚನೆ ಸನ್ಮುಖಿ
ಗದ್ಯ ಮಹಾರಚನೆ ವಿಶದಮುಭಯಾಳಂಕಾ
ರೋದ್ಯತ್ಕುಚೆ ಮತ್ಕೃತಿವಧು
ವಿದ್ಯಾವಿಜ್ಞನದ ಮನದೊಳಿರೆ ವಿರಚಿಸುವೆಂ ೯

ಉ|| ಕಾರಕದೊಳ್ ಕ್ರಿಯಾಪದದೊಳಿರ್ಕೆ ತಗುಳ್ದಿರೆ ಶಬ್ದಮೆಂಬಳಂ
ಕಾರದೊಳರ್ಥಮೊಂದಿ ನಿಲೆ ಭಾಷೆಯೊಳೊಪ್ಪಿರೆ ದೇಸೆ ಬಲ್ಲರಿ
ದ್ದಾರಯೆ ಕಾವ್ಯಲಕ್ಷಣದೊಳೊಪ್ಪುವನಟ್ಟಿರೆ ಪೇಳ್ವುದಲ್ಲದೇ
ಕಾರಣಮಯ್ಯ ಕೆಮ್ಮಗಿರಲಾಗದೆ ಕಬ್ಬ[3][ವ][3] ಬಿಟ್ಟವೇ[4][ಳ್ವ][4]ದೇ ೧೦

ಕಂ|| ಆಲಿಸುತೆ ಬೇಗಮೋಹೋ
ಸಾಲಿಸಿಮೆನೆ ವಿರಸಮಪ್ಪ ಕಬ್ಬಂಬೇಳ್ವಾ
ಲೋಲತೆಯಿಂದಂ ಬ[5][ರೆ ಬರೆ][5]
ದೋಲೆಗಳಂ ಕಿಡಿಸುವಂತು ತಾಟಿಚಾಳು ಪಗೆಯೇ ೧೧

ಚಂ|| ಪ್ರವಿದಿತ ಸಾಹಸೋರ್ಜಿತ ಮಹಾಪುರುಷೋದ್ಧತರಾ ರಸಂಗಳಂ
ಸವಿಗಿದೆ ಸೊಪ್ಪುವಟ್ಟ ಬಗೆಯಿಂದಟೀಗನ್ನಡಗಬ್ಬದೊಳ್ ತಗು
ಳ್ಚುವ ಜಿಸನೇಕೆ ಮಟ್ಟಮಿರಲಾಗದೆ ಮತ್ತೆ ನಿರರ್ಥಿಯಾದೊಡಂ
ತವವದ[6][ನಂವದಿಂದೊ][6]ರೆಯೆ ನೇಲಿಸಲುತ್ತಮ ಪದ್ಮರಾಗದೊಳ್ ೧೨

---

1 ದೆಲಿಯ ವಿನ 2 ನಾ 3 ದ 4 ಳು 5 ರೆ 6 ...ದೊ

ಕಂ॥ ಅಱಿವಂ ಬುಧತತಿಗೆಲ್ಲಂ
ನೆಱಿಸವಂತಪ್ಪುದು ಮನಕ್ಕೆವರಲಾವೆಡೆಯುಂ
ನೆಱಿಸವಂತಪ್ಪುದು ಪೇಱಿದೇಂ
ನೆಱಿಸವಂತಪ್ಪುದು ವಿದಗ್ಧವಿರಚಿತ ಕಾವ್ಯಂ ೧೩

ಚಂ॥ ಕಿವಿ[1][ದೆಱಿ][1]ದಪ್ಪ [2][ದಾ ನಯದೊಳ][2]ರ್ಥದೊಳೊಂದಿದ ಬಂಧದೋಜೆಯಿಂ
ಕವಿಯ ಮನಂಗೊಳಲ್ ನೆಱಿವುದಪ್ಪುದು ಕಾವ್ಯರಸಂ ತುಳುಂಕೆ [3][ಪಾ][3]
ಯ್ದುವಿರಳದಿಂ ಪೊನಲ್ ಪರಿಗುಮೆಂಬಿನಿತಪ್ಪುದು ನೆಟ್ಟನೋತು ಕೇ
ಳ್ದವರ್ಗಳು ಕಾವ್ಯಬಂಧನಮಿದೆಂಬಿನಿತಪ್ಪುದು ಕಾವ್ಯಬಂಧನಂ ೧೪

ಕಂ॥ ಒಂದೆಡೆಯಲ್ಲದೆ ರಸವೊಡ
ವೊಂದಿರೆ ಪದರಚನೆ ಕಿವಿಗೆ ವಂದಿರೆ ಬುಧರೊಳ್
ಸಂದಿರೆ ಪೇೞ್ವುದು ಕಬ್ಬದ
ದಂದುಗವಿಲ್ಲದೊನನಟ್ಟಿಕಳೆವರೆ ನಾಡಿಂ ೧೫

ವು॥ ರಸದೊಳ್ ಬಿನ್ನಣದೊಳ್ಪು ಕೂಡೆ [4][ಪ][4]ದಮರ್ಥವ್ಯಕ್ತಿಯಂ ಮಾಡೆ ರಂ
ಜಿಸಿ ಪತ್ತಿರ್ದೆಣೆನೋತು ಬಲ್ಲ[5][ರಿರ್ದದಾ][5]ರ್ದಂತುಂ ಜನಂ ನಾಡೆ ಜಿ
ಕ್ಕಸಮಪ್ಪಂತುಮಿದೊಂದೆ ಸಾಲ್ವುದು ಜಗಕ್ಕೆಂಬಂತುಮಿಂ ಪೇೞ್ವನೆಂ
ದುಸುರಲ್ ಕಬ್ಬಿಗರಣ್ಮದಂತುಮಿದನಾಂ ಪೇೞ್ವೆಂ ಮಹಾಕಾವ್ಯಮಂ ೧೬

ಕಂ॥ ದುರಿತಕುಳವಿಜಯ ಸಮುದಿತ
ನಿರುಪಮಗುಣನಿಳಯ ಭಗವದಭಿಮತ ವಿಳಸ
ಚ್ಚರಸುಖಕರಮೆಂಬುವ [6][ಱಿಂ][6]
ಹರಿವಂಶಾಭ್ಯುದಯ ಕೃತಿಯನಾಂ ವಿರಚಿಸುವೆಂ ೧೭

ವ॥ ಅದೆಂತೆಂದೊಡನೇಕವಿಧ ಜಲಚರನಿಕರ ನಿಶಿತಾಂಕುರ ನಖಪಾಡಾಪ್ರಹಿತ ವಿಕ್ಷಿಪ್ತ ಹರಿಶುಕ್ತಿಪುಟ ಸಮುಚ್ಚಳಿತ ಮುಕ್ತಾಫಳ ಕರಾಸಾಂಶು ವಿತಾನಾಳಂಕೃತ ವಿದ್ರುಮ ಲತಾಂಕುರ ಮಂಜರೀ ಪಿಂಜರಿತ ವೀಚೀಚಯನಿಚಿತ ಪೃಷ್ಠವಾಲಂಬಿತ ಕಂಬುಲಸಿತ ವೇಳಾವನಪರಿವೃತ ಚತುರುದಧೀವಳಯವಳಯಿತ ಜಂಬೂದ್ವೀಪದ ಭರತಕ್ಷೇತ್ರದ ವಿನೀತಾಖಂಡದೊಳೆ ಮಗಧೆಯೆಂಬುದು ವಿಷಯಮ[7][ದೆಂ][7]ತಪ್ಪುದೆಂದೊಡೆ

1 ರಿಗ್ಗಿ 2 ನವನೆವೆಯುಮ 3 ಪಾ 4 ಮ 5 ರಿರ್ದಗೊ 6 ಱುಂದಂ
7 ದಂ

ಚಂ|| ಅತಿಬಲಗರ್ವದಿಂ ಕಲಿಯುಗಂ ಕವಿತಂದೊಡೆ ತನ್ನ ಪರ್ವಿದು
ನ್ನತಗುಣಮೆಲ್ಲಮಂ ಕೃತಯುಗಂ ಭಯದಿಂದೆ ತೆಮುಳ್ದಿಕೊಂಡು ತಾಂ
ಧೃತಿಯೊಳೆ ಪುಂಜಿಸಿರ್ದಳವದೇ ತೆಱನಾ ತೆಱದಂತೆ ಶೋಭಿಪೆ
ತ್ರತಿಶಯ ಪತ್ರೈ ಪ್ರೂರ್ವವಾಭಿಸಿಂ[1][ದ್ಯ][1]ಮತರ್ಕ್ಯಮಿದೆಂದುಮುಕ್ಷ್ಣಯುಂ ೧೮

ವ|| ಆ ವಿಷಯದ ವನತರುಗಳೆಲ್ಲಂ ವಿದ್ಯಾರ್ಥಿಗಳಂತೆ ಕಲ್ಪತರುಗಳೆ ಕೆಱೆಗಳೆಲ್ಲಂ ದಯಾಧರ್ಮದಂತಱಗೆಱೆಗಳೆ ಸಂಪನ್ನನಂಗಳೆಲ್ಲಂ ವಿಷಯಸಂಧಿಯ ಪುಟ್ಟದಂತಾಱದಿ ಯುಕ್ತಿಪ ಕೊಳಂಗಳೆಲ್ಲಂ ದಂಡಂಗೊಂಡ ಸಲ್ಲರಂತೆ ತಿಳಿವ ಕೊಳಂಗಳೆ ಬೆಸೆಲ್ಲಂ ಸಮ್ಯಕ್ತ್ವಮುಕ್ಕರಂತೊಂಪಸೆಗೆಱಗಿರ್ದಪ ಗಂಡರೆಲ್ಲಂ ಸೆಲ್ಲಿಕೆಯ್ಯಂತೆ ಪಾಱಯುಳ್ಳರೆ ಪೆಂಡಿರೆಲ್ಲಂ ಧನುರ್ವೇದಿಯ ಬಿಲ್ಲಿನಂತೆ ಗುಣಮುಳ್ಳರೆ ಪುತ್ರಂತೆ ಬಗೆದು ನೋಡಿಪ್ಪಾಗಳ್

ರಗಳೆ|| ಆಸೆಯೊಳ್ ಬಂಧನದ ಹೇತು
ಮಾನಿನಿಯೊಳ್ ನಯದ ಮಾತು
ಪಕ್ಕಿಗಳ ನೆರವಿಯೊಳ್ ಬೆರ್ಚು
ರಕ್ಕಿಸುವ ಮಂತ್ರದೊಳೆ ಪರ್ಚು
ಬೆಳೆವ ಕೆಯ್ಗಳೊಳ್ ತಲೆಗೊಯಿಲು
ಮುಳಿದ ಕಡುನಲ್ಲರೊಳೆ ಪೊಯಿಲು
ಕುಚದೊಳ್ ನೆಲೆಯ ಕೇಡು
ಕತ್ತುರಿಯ ಪುಲ್ಲೊಳೆಸೂಡು
ಮುಸುಗಳ ಮೃಗಂಗಳೊಳೆ ಕಂದು
ಎಸೆವ ಶಶಿಯೊಳೆ ಕಳೆಯ ಕಂದು
ಕೆಱೆಗಳೊಳ್ ನಿರ್ಗುಣದ ಕಾಂತಿ
ಶ್ರುತದೊಳ್ ತಗುಳ್ದ ಕಡುಚಿಂತೆ
ದುರ್ವಾಜಿಗಳೊಳೆ ತೊಡರ್ವ ಸಿರ್ಕು
ನೆಗಟ್ದ ಕರಿಗಳೊಳೆ ಪಿಡಿಕುತ್ತು
ವರ ಭೂಷಣಂಗಳೊಳೆ ಮುತ್ತು ೧೯

ಕಂ|| ಒಕ್ಕಲ್ತನಮುಮನಱುವಿನ
ತಕ್ಕುಮನಱುನನಗುಣಂಗಳಿಮುಗೇವುನಪೆಂ
ದೊಕ್ಕು ಮಿಗಿಲಪ್ಪ ಗುಣದೊಳ್
ಪೊಕ್ಕು ಮಸಂಬೊಕ್ಕು ನೆಗಟ್ವರಾ ನಾಡವರ್ಗಳ್ ೨೦

1 ದಿ

ವ॥ ಅಂತಪ್ಪ ನಾಡೊಳ್ ರಾಜಧಾನಿ ರಾಜಗೃಹಮೆಂಬುದು ಪೊೞಲ್ ಆ ಪೊೞಲ ಬಹಿರ್ಭಾಗದೊಳ್

ಕಂ॥ ಪೊಳೆದೆಸೆವ ನ[1][ಳಿನ][1]ದಲರ್ಗಳ
ತೊಳಗುವ ಬಿಱುಮುಗುಳ ಪಸಿಯ ನನೆಗಳ ಸೊಗಯಿ
ಪ್ಪಳವುಂ ನೀರ್ವಕ್ಕಿಯ ಗೊಂ
ದಳಮುಂ ಕಳಕಳಮುಮೊಳವು ಕೆಱೆಗಳೊಳೆಲ್ಲಂ ೨೧

ವ॥ ಅಲ್ಲಿಯ ಕೆಱೆಗಳೆಲ್ಲಂ ಬೆಳೆಗೆಯ್ಗಳೆ ಕೊಳಂಗಳೆಲ್ಲಂ ಪೂಗೊಳಂಗಳೆ ಬಾವಿಗಳೆಲ್ಲಂ ಬೊಡ್ಡಣವಾವಿಗಳೆ

ಕಂ॥ ಪಣ್ಮರಗಳೆ ಪೂಮರಗಳೆ
ತಣ್ಮಲೆದಲೆವೆಲರೆ ಮಿಱುಗಿಪರಳಲರೆ ಪೊದ
ೞ್ದಿಣ್ಮುವ [2][ಕಂ][2]ಪೆ ಕರಂ ಕೈ
ಗಣ್ಮುವ ದಂಪತಿಯುಲಂಪೆ ನಂದನವನದೊಳ್ ೨೨

ವ॥ ಅಂತೊಪ್ಪುವ ಜನಂಗಳ ಕೆಲದೊಳ್ ನಾಲ್ಕುಂ ಜಾತಿಯೊಳ್ ಮೂಱುಂ ಪ್ರಚಾರದಾನೆಯಗ್ಗಳಮೊಳವಪ್ಪುದಱಿನಾನೆಯಗ್ಗಳಮೆಂದೆಂಬ ಬನಬನಮೊಳಂ ಕಿಱುಜಳದಿಂದಂ ಶುಭಲಕ್ಷಣೋಪೇತಮುಂ ಭೂಮಿಜಾತಮುಮಪ್ಪ ಕುದುರೆಗಳನಾರ್ಗಮಾಶ್ಚರ್ಯಮಾಗೆ ಸಮೆವಶ್ವಾಚಾರ್ಯರಿಂದಂ ಚತುರ್ವಿಧಾಯುಧ ವಿದ್ಯಾಭ್ಯಾಸ ಪ್ರದೇಶಂಗಳಿಂ ಸೊಗಯಿಸುವ ಪೊಱವೊೞಲಿಂ

ಮ॥ ಪುರದೊಳ್ ತಳ್ಕೊತ್ತಿದಿರ್ದ ತನ್ನ ಮಗಳಂ ಶ್ರೀದೇವಿಯಂ ನೋಡಲಾ
ದರದಿಂದಂಬುಧಿ ಬಂದು ರಾಗರಸದಿಂದಾಶ್ಚರ್ಯಮೊಂದಾದುದಂ
ತಿರೆ ನೀರ್ಗಾದಿಗೆ ಕೋಟೆಯುಂದಗೊಗೆದಿರ್ದತ್ಯುತ್ಸವಂ ಮೇಘದೊಳ್
ತೊರೆದೊಂಬಂತಿರೆ ಸನ್ನುತಂ ಕೃತಿಸುಧಾಕರ್ಮಂಗಳಿಂದುನ್ನತಂ ೨೩

ವ॥ ಆ ಕೋಟೆಯಿಂದೊಳಗೆ ಮಾಡಿಸಿದೊಂಗೆ ಸ್ವರ್ಗಕೇಣಿಯು[3][ಮಂ][3] ಮಾಡಿಸುವಂಗಾಣೆಯುಮಾಗಿರ್ದಾಯತನಂಗಳಿಂದನೇಕ ವಿಜಾತಿ ನಿಕೇತನಂಗಳಿಂ ಮತ್ತಮಲ್ಲಿಯಂಗಡಿಗಳೊಳೆ

ಕಂ॥ ಆವಾವ ವಾರ್ತೆಗಾವನು
ಮಾವಾವಳವಿಗಳೊಳಾವುದಾವುದನಾರ್ಪೈ
ಡೋವಾದಿ ಪೊತ್ತು ಕೋಳಡ
ಮಾವರಪಿಡಿದಿರಾವ[4][ಣಂ][4]ಗಳೊಳಮೊಳವೆಂದುಂ ೨೪

1 ಜಳ 2 ಕೆಂ 3 ಮಿಂ 4 ಕೊಂ

ವ॥ ಅಲ್ಲಿಂಬಿ

ಕಂ॥ ಸಾರತರ ಸುಮಸುಭಯುಸಂ
ದಾರಿ ಕನತ್ಕನಕರಚಿತ ಸುರವರಭವನಾ
ಕಾರಿ ಮನೋಜಾ[1][ಸ್ತ್ರಂಗಳ][1]
ಕೇರಿ ಮನೋಹಾರಿ ಸೂಳೆಗೇರಿ ನಿತಾಂತಂ ೨೫

ಚಂ॥ ಸುರಸಿರಿರಾಪಿ ರಾಜಸೊಸೆದಿರ್ಪ ಸುರಾಸತಿಯೆಂತುಟಂತೆ ಖೇ
ಚರನರ ರಾಜಧಾನಿಯ ಬೆಡಂಗಿನ ಮಾಡಿಕ್ಕುಮದೆಂತುಟಂತೆ ಸ
[2][ನ್ನರ][2] ಉರಗೇಂದ್ರನಿಪ್ಪ ಪುರಮೊಂದು ವಿಲಾಸಮದೆಂತುಟಂತೆ ಸಂ
ದನ ವಿಭವಂಗಳಿಂ ಪ್ರಕಟವಿದ್ಯೆಗಳಿಂ ಮಹನೀಯಭೋಗದಿಂ ೨೬

ವ॥ ಇಂತತಿಶಯಮಪ್ಪ ಪೋಟಲನಾಕ್ಷಂ ಶ್ರೇಣಿಕಮಹಾರಾಜನೆಂಬನಾತನ ಪಟ್ಟಮಹಾದೇವಿ ಚೇಳಿನಿಯೊಡನೇಕಾಂತಮನರತಿಶಕ್ತರಾಗಿ ರಾಜ್ಯಂಗೆಯ್ವುತ್ತಿರ್ದೊಂದು ದಿವಸಂ ಪೂರ್ವಾಹ್ಣದೋಲಗದೊಳ್ ಸಿಂಹಾಸನಾಧಿಷ್ಠನಾಗಿರೆ ಋಷಿನಿವೇದಕಂ ಬಂದು ದೇವ ಬಿನ್ನಪಮೆಂದಿಂತೆಂದಂ

ಉ॥ ಪೂಮಸಿಂದೆ ಪೂತಪ್ಪ ತಳಿರ್ತಶೋಕೆಗಳಿಂದೆ ರಾಗದಿಂ
ತಾಮೊಡಸಿಂದೆ ಕೋಗಿಲೆಗ[3][ಳುಲಿ][3]ದನಿಂದೆಸಗಿತ್ತು ತೆಂಬೆಲರ್
ಮಾಮಸಿಂದೆ ಬಂದವು ಬಸಂತಮುಮುತ್ತಮಜಂದಮಂತೊಸ
ವಾಮುಮಂದಿತ ತ್ರಿಭುವನೇಶ್ವರನೀ ದೆಸೆಯತ್ತ ಬಂದಮೋ ೨೭

ವ॥ ಎಂದುಂ ಪಶ್ಚಿಮಾಭಿಮುಖನಾಗಿ ನೋಳ್ಪನ್ನೆಗಂ ವಿಪುಳಗಿರಿಯ ಮೇಲೆ ಶ್ರೀವರ್ಧಮಾನ ಭಟ್ಟಾರಕರ ಸಮವಸರಣ ನಿಂದುದಂ ಕಂಡು ಬಂದೆನೆಂದಾಗಳ್ ಶ್ರೇಣಿಕಮಹಾರಾಜಂ ಸಿಂಹಾಸನದಿಂದಮಿೞಿದಾ ದೆಸೆಯತ್ತಲೇೞಡಿಯಂ ನಡೆದೆಱಗಿ ಪೊಡಮಟ್ಟು ಪೇೞ್ದಾಂಗೆ ತುಷ್ಟಿದಾನಂಗೊಟ್ಟು ಪಡೆವಳ[ರ]ನಿಲ್ಲಾ ದೆ[4][ಸೆಗ][4]ಮೊರ್ಜನೆಯಂ ತರಲ್ ಸಾರಪೇೞ್ದು [illegible]ಮಂತಃಪುರಮುಂ ಮಕುಟಬದ್ಧರುಂ ರಾಜಕುಮಾರರ್ಕಳುಂ ಬೆರಸು ತಾಂ ಪಟ್ಟವರ್ಧನ ಗಜೇಂದ್ರಮನೇಱಿ ಸುರೇಂದ್ರಲೀಲೆಯಿಂ ತನ್ನೊಳ್ ತೋಱಿ ವಂದನಾಭಕ್ತಿಯಿಂ ಪೊಱಮಟ್ಟು ಬಂದು ವಿಪುಳಗಿರಿಯನೆಯ್ತಂದು ಸಮವಸರಣಮಂ ಕಂಡು ವಾಹನದಿಂದಿೞಿದು ಅಷ್ಟವಿಧಾರ್ಚನಾಸಹಿತದಿಂ ರತ್ನತೋರಣಾಂತರಿತಮಣಿಮಯ ವಿಂಶತಿಸಹಸ್ರ ಸೋಪಾನಮನೇಱಿದಾಗಳ್

1 ಸ್ತ್ರರ 2 ಸ್ನುತ 3 ಳಿಗಳಿ 4 ಸಿಗೆ

ಕಂ॥ ಘನನೀಲಮಯಂ ಮಹಿಮಣಿ
ಕನಕಮಯಂ ಭವನವೇದಿಕಾನಿಕರಂಗಳ್
ವಿನತಾಮರಮಯವೆಲ್ಲಿಯು
ಮೆನಿಸಿರ್ದುದು ಸಮವಸರಣಮಘಕುಳಹರಣಂ ೨೮

ವ॥ ಅಂತಪ್ಪುದುಂ ದುರಿತರಿಪುಗಂತಪ್ಪುದಂ ನೋಡಿ ಮಹೋತ್ಸವಭಕ್ತಿಯುಮ ಗ್ಗಳಮಾಗೆ ಪೊಕ್ಕೊಳಗಣ ಪೀಠಮಂ ತ್ರಿಪ್ರದಕ್ಷಿಣಂಗೆಯ್ದು ಶ್ರೀವರ್ಧಮಾನಭಟ್ಟಾರಕರಂ ಕಂಡಭಿಮುಖದರ್ಶನಸ್ತುತ್ಯನೇಕ ಸ್ತೋತ್ರಕ್ರಿಯಾಭಿಪೂರ್ವಕಂ ಸ್ತುತಿಗೆಯಿಸುತ್ತು ಮಷ್ಟಾಂಗವರ್ಚನೆಯಿಂದರ್ಚಿಸಿ ಬಂಧುಗಣಧರಾದ್ಯನೇಕ ಋಷಿಸಮುದಾಯಮುಂ ಯಥಾ ಕ್ರಮದಿಂ ಬಂದಿಸಿ ಗೌತಮಸ್ವಾಮಿಗಳ ಮುಂದೆ ಕುಳ್ಳಿರ್ದು ಧರ್ಮಮಂ ಕೇಳ್ದು [1][ತ][1]ದನಂತರಮೊಳ್ ಕೆಯ್ಯಂ ಮುಗಿದಿರ್ದು

ಕಂ॥ ಬಿನ್ನಪಮನುಪಮ ಹರಿವಂ
ಶೋನ್ನತ ಕಥೆಯುಂ ಕೆಲರ್ ಕ್ರಿಯಾಪೂರ್ವರ್ ಜೇ
ಟ್ಟಿನ್ನರೊಳದನೆ ನಂಬಿ
ಪ್ಪನ್ನರುಮೊರ್ರಾಮೋರ್ಗಳೀ ಕಲಿಯುಗದೊಳ್ ೨೯

ವ॥ ಅದೆಂತೆಂದೊಡರ್ಧಚಕ್ರವರ್ತಿಯಪ್ಪ ವಿಷ್ಣುವಂ ಸರ್ವಜ್ಞಂ ಸರ್ವವ್ಯಾಪಿ ಭುವನತ್ರಯಪತಿಯೆಂದು ಲೋಕಂ ತಾಮೆ ಕೊಂಡಾಡುವುದೆತ್ತಾತಂ ಅರ್ಜುನಂಗೆ ರಥ ಮನೆಸಗಿದನೆಂಬುದೆತ್ತಲ್ಲದೆಯುಂ ಜ್ಯೋತಿರ್ಲೋಕದ ದೇವನಪ್ಪಾದಿತ್ಯದೇವನೆತ್ತ ಕೊಂತಿ ಯೆತ್ತ ಕೊಂತಿ ತಲೆನೀರ್ಮಿಂದು ಆದಿತ್ಯನಂ ಬಯಸಿದೊಡೆ ಗರ್ಭಮಪ್ಪುದೆತ್ತ ಗರ್ಭ ಮಾಗಿ ಕಿವಿಯೊಳ್ ಕರ್ಣನಂ ಪೆತ್ತಳೆಂಬುದೆತ್ತ ಜಮನೆತ್ತಾಕೆಯೆತ್ತ ಜಮಂಗಮಾಕೆಗಂ ಧರ್ಮಪುತ್ರಂ ಪುಟ್ಟಿದನೆಂಬುದೆತ್ತ ಮತ್ತಮಾಕೆ ಗಾಳಿಯೊಳ್ [2][ಪುದುವಿ][2]ದಳೆಂಬುದೆತ್ತ ಗಾಳಿಗಮಾಕೆಗಂ ಭೀಮಂ ಪುಟ್ಟಿದನೆಂಬುದೆತ್ತ ಸ್ವರ್ಗಲೋಕದ ದೇವೇಂದ್ರನೆತ್ತಾಕೆಯೆತ್ತ ಆಕೆಗಮಿಂದ್ರಂಗನುರ್ಜುನಂ ಪುಟ್ಟಿದನೆಂಬುದೆತ್ತಲೆಂದಿಂತು ಸಾಲ್ವರೊಳ್ ಮಱುವಾಟ್ದು ಕೊಂತಿ ಪಾಂಡುರಾಜಂಗೆ ಕುಲಸ್ತ್ರೀಯೆಂದು ಮನ್ನಿಸಿಕೊಂಬುದೆತ್ತ ಅರ್ಜುನಂ ಸಜ್ಜನಂ ದ್ರೌಪತಿ ಪಾಂಡವರಯ್ವರೊಳ್ ಪುದುವಾಟ್ದಳೆಂಬುದೆತ್ತ ಗಾಂಗೇಯರುಂ ದ್ರೋಣರುಂ ಸ್ವೇಚ್ಛಾಮರಣಿಗಳೆಂಬುದೆತ್ತ ಅವರ್ ಮಾನಿಸರ ಕಯ್ಯೊಳ್ಕಾದಿ ನೋವುದುಂ ಸಾವುದು ಮೆತ್ತ ಅಭಿಮನ್ಯು ಬಸಿಱೊಳಿರ್ದು ಚಕ್ರವ್ಯೂಹಮಂ ಕೇಳ್ವುದೆತ್ತ ನೆಱೆಯೆ ಕೇಳದೆ ತಾನೆ ಪೊಱಮಟ್ಟನೆಂಬುದೆತ್ತ

1 ನ 2 ಪುಡುವ

ಉ॥ ಇಂತು ಮಹಾತ್ಮರಪ್ಪ ಪುರುಷರ್ಕಳ ವೃತ್ತಿಯನೊಂದವಿಂದಿಯ
ಪ್ಪಂತು ತಗುಳ್ಚಿ ಪೇಳ್ವ ಕಥೆಯಂತಿರೆ ಪಾಱಿಯೊಳೊಂದಿ ನಿಂದು ವಿ
ಭ್ರಾಂತಿಸಿ ಬಂದೆನಾಂ ಬೆಸಸಿಮಾ ಹರಿವಂಶಮನೆಂದಚಿಂತ್ಯ ವಿ
ಕ್ರಾಂತಪರಂ ಕರಂ ಮುನಿಗಳಂ ಬೆಸಗೊಂಡನಿಳಾತಳಾಧಿಪಂ ೩೦

ವ॥ ಬೆಸಗೊಂಡಾಗಳೀ ಲೋಕದವರೆಂಬಂತು ವಿರುದ್ಧಮಲ್ತು ನೀಮೇಕಚಿತ್ತದಿಂ ಕೇಳಿಂ

ಕಂ॥ ಶ್ರೀಮದ್ಗೌತಮಗಣಧರ
ನಾಮು ಗದಾಧೀಶವಿಭುಗೆ ತಿಳಿದಿರೆ ಪೇಳ್ದು
ದ್ದಾಮ ಕಥಾರಸದೊಳತಿ
ಪ್ರೇಮೋದಯನಾದನದಜಿಂಸನುವರ್ಣಿಸುವೆಂ ೩೧

ವ॥ ಮೊದಲೊಳಾದಿಭಟ್ಟಾರಕನಿಕ್ಷ್ವಾಕುವಂಶಮುಗ್ರವಂಶ ಕುರುವಂಶ ನಾಥವಂಶ ಭೋಜವಂಶಮೆಂಬಯ್ದುಂ ಕ್ಷತ್ರಿಯವಂಶಮಂ ಮಾಡಿಮೊಡಂತೆ ನಡೆಯುತ್ತಿರ್ದುಪತ್ತನೆಯ ತೀರ್ಥದಂದು ವಿದ್ಯಾಧರಶ್ರೇಥಿಯನಾಳ್ವ ಹರಿವಂಶಮೆಂಬ ಪುರಮನಾಳ್ದ ಪ್ರಭಂಜನನೆಂಬರಸಂಗಂ ಮೃಕಂಡುವೆಂಬರಸಿಗಂ ಪುಟ್ಟಿದಾತಂ

ಕಂ॥ ಖರಕಿರಣೋಪಮತೇಜಂ
ನಿರುಪಮ ಶುಭಲಕ್ಷಣಾಂಕಿತಂ ನಯನಮನೋ
ಹರನಾಗೆ ನಾ[1][ಡೆ][1] ಸೊಗಯಿಸು
ತಿರೆ ಮಾರ್ಕಂಡೇಯನೆಂಬ ಪೆಸರಿಂದೆಸೆದಂ ೩೨

ವ॥ ಆತನಾರೂಢಯೌವನನಾದಂದು ವಜ್ರಚಾಪನೆಂಬ ಖೇಚರನ ಮಗಳ್ ವಿದ್ಯುನ್ಮಾಳೆಯಂ ಮದುವೆನಿಂದು ಪೂರ್ವಭವಸ್ನೇಹದಿಂದನ್ಯೋನ್ಯಾಸಕ್ತರಾಗಿ ವನಕ್ರೀಡೆಯೊ[2][ಳಿರ್ದಿ][2]ರ್ದರುಮಂ ಪೂರ್ವಭವವೈರಿಯಪ್ಪ ಚಿತ್ರಾಂಗದನೆಂಬ ದೇವಂ ಕಂಡು

ಕಂ॥ ಮುಳಿದೆತ್ತಿಕೊಂಡು ಪಾಱು
ತ್ತೊಳಗಾದಿರ್ ನಿಮ್ಮನೊಂದು ತೆಱದಿಂ ಕೊಂದಂ
ದಳವಿಗಱಿದೆನ್ನ ಕೋಪಾ
ನಳನಾಱುವುದಲ್ತು ಚಿತ್ರವಧದಿಂ ಕೊಲ್ವೆಂ ೩೩

1 ಡೆಯುಂ 2 ರ್ದಿ

ವ॥ ಎಂದು ಬಗೆವನ್ನೆಗಮಾ ಮಾರ್ಕಂಡೇಯನ ಮುನ್ನಿನ ಭವದ ಕೆಳೆಯಂ ತಪದ ಫಲದಿಂ ಸೂರ್ಯಪ್ರಭನೆಂಬ ದೇವನಾಗಿ ಪುಟ್ಟಿರ್ದಾತನಱಿದು ಬಂದು ತನ್ನ ಕೆಳೆಯನಂ ಪಿಡಿದೊಯ್ವ ಚಿತ್ರಾಂಗದನಂ ಕಂಡು

ಮ॥ ಅಮರಂಗಾಗ ಕೊಲಲ್ ಮನುಷ್ಯಗಣಮಂ ಸಂಸಾರ[1][ದಾ][1] ಪೂರ್ವವೈ
ರಮನಿಂ ಚಿಂತಿಸುವಂತುಟಾರೊಳಮಿದೇನಿಲ್ಲಾಕರಂ ಕ್ರೋಧಮು
ದ್ಗಮಮುಂ ಕೆಮ್ಮನೆ ಮಾಡಿಕೊಂಡು ವಧೆಯುಂ ಕೈಕೊಂಡು ದುಃಖಾಬ್ಧಿಯೊಳ್
ನವೆವಂತಪ್ಪುದು ಕಜ್ಜಮೇ ಬಿಸುಡು ನೀನೀ ದಂಪತಿದ್ವೇಷಮಂ ೩೪

ವ॥ ಎಂದೆನಿತಾನುಂ ತೆಱದಿನಾಱೆನುಡಿದೊಡನಿವರ್ಗೇನುಂ ಗೆಯ್ಯಲಾಱೆ ನೀಂ ನಿನ್ನ ಮೆಚ್ಚುಕೆಯ್ಯೆಂದಾತಂಗೊಪ್ಪಿಸಿ ಚಿತ್ರಾಂಗದಂ ಪೋದಂ ಪೋದೊಡೆ ಸೂರ್ಯಪ್ರಭನಾ ಮಿಥುನಮಂ ಕಂಡು ಬಂದು ಚಂಪಾಪುರದ ಭೋಜವಂಶದ ಚಂದ್ರಕೀರ್ತಿಯೆಂಬೊನ ಪುತ್ರನಾಗಿ ರಾಜ್ಯಂಗೆಯ್ಯುತ್ತಿರ್ದಡಾತನಲ್ಲಿಗೆವಂದು ನೀನಪುತ್ರಕನೈ ನಿನಗೀತಂ ಜ್ಯೇಷ್ಠಪುತ್ರನೀಕೆ ನಿನಗೆ ಪಿರಿಯ ಸೊಸೆಯೆಂದಪ್ಪೈಸಿ ಕೊಟ್ಟು ಪೋದನಾತನುಮವರ ಕೈಕೊಂಡು ಪಿರಿದುಮೊಸಗೆಯುಂ ಮಾಡಿ ರಾಜ್ಯಂಗೆಯ್ವವಸಾನಕಾಲದೊಳಾತಂಗೆ ಪಟ್ಟಮಂ ಕಟ್ಟಿ ತಪಸ್ಥನಾದಂ ಬೞಿಯಮಾ ಮಾರ್ಕಂಡೇಯಂ

ಕಂ॥ ಹರಿವಂಶ ವಿಷಯದಿಂದೀ
ಪುರಕ್ಕೆ ತಂದೊಡವಿದೆಂ ಮದೀಯಾನ್ವಯದಿಂ
ಹರಿವಂಶಮಾಗೆ ನೆಗೞ್ದಾ
ಧರಣಿಯೊಳಂಪೆಸೆಯೆ ಮಾಡಿ ಸುಖದಿಂದಿರ್ದಂ ೩೫

ವ॥ ಅಂತು ಭೋಜವಂಶ ಕೆಟ್ಟು ಹರಿವಂಶಮಾಗೆ ಮಾಡಿ ಮಾರ್ಕಂಡೇಯನರಸುಗೆಯ್ದು ತನಗಂ ವಿದ್ಯುನ್ಮಾಳೆಗಂ ಪುಟ್ಟಿದ ಮಗಂಗೆ ಹರಿಯೆಂದು ಪೆಸರನಿಟ್ಟಾತಂ ತ[ನ್ನ]ವಸಾನದೊಳಾತಂಗೆ ಪಟ್ಟಗಟ್ಟಿ ಲೋಕಾಂತರಿತನಾದನಂತಾ ಹರಿ ರಾಜ್ಯಂಗೆಯ್ದನಾ ಹರಿಗಂ ಸುಮಾಲೆಗಂ ಪುಟ್ಟಿದೊಂ ಮಹಾಗಿರಿಯ ಮಗಂ ಹಿಮಗಿರಿ ಹಿಮಗಿರಿಯ ಮಗಂ ವಸುಗಿರಿ ವಸುಗಿರಿಯ ಮಗಂ ನೀಲಗಿರಿ. ನೀಲಗಿರಿಯ ಮಗಂ ಮಹೇಂದ್ರಗಿರಿ ಮಹೇಂದ್ರಗಿರಿಯ ಮಗಂ ಶುಭಗಿರಿ ಎಂದಿಂತೆನಿಬರಾನುಮರಸುಗಳ್ ಪೋದಿಂಬೞಿಕ್ಕೆ ನೇಮಿಜಿನತೀರ್ಥದೊಳ್ ಹರಿವಂಶದೊಳ್ ಶೂರವೀರನೆಂಬರಸನಾ ಸೂರ್ಯಪ್ರಭದೇವಾಯತ್ತಮೆಂದು ರಮ್ಯಪ್ರದೇಶದೊಳ್ ಸೂರ್ಯಪುರಮೆಂಬ ಪೊೞಲಂ ಮಾಡಿ ರಾಜ್ಯಂಗೆಯ್ಯುತಿರ್ದನಾತನ ಮಗಂ

---

1 ದಲು

ಕಂ|| ಅಂಧಕವೃಷ್ಣಿಯುಮಭಿಮತ
ಬಂಧುಕೋದರೆ ಸುಭಪ್ರಿಯುಂ ಸುಕೃತ ಮಹಾ (?)
ಬಂಧೋದಯಫಲ ರತಿಸುಖ
ಸಂಧಾರಿತರಾಗಿ ಕೂಡಿ ಸುಖದಿಂದಿರ್ದರ್ ೩೬

ವ|| ಆ ಇರ್ವರ್ಗಂ ಪುಟ್ಟಿದಂ ಸಮುದ್ರವಿಜಯನುಂ ಅಕ್ಷೋಭನುಂ ಸ್ತಿಮಿತನುಂ ಹಿಮಗಿರಿಯುಂ ಅಮನುಶನುಂ* ವಿಜಯನುಂ ಧಾರಣನುಂ ಪೂರಣನುಂ ಅಭಿಚಂದ್ರನುಂ ವಸುದೇವನುಮೆಂದಿಂತು ಪದಿಂಬರ್ ಮಕ್ಕಳಾದಿಂಬಳಿಯ[ಂ] ಕೊಂತಿಯು ಮಾದ್ರಿಯು ಮೆಂಬಿರ್ವರ್ ಪೆಂಗೂಸುಗಳ್ ಪುಟ್ಟಿದರಂತು ಸುಖದಿಂದಂಧಕವೃಷ್ಣಿ ರಾಜ್ಯಂಗೆಯ್ಯುತ್ತಿರೆ

ಚಂ|| ಅತಿಶಯ ಗಂಧಮಾದನ ವನಾಂತರದೊಳ್ ಬುಧನೂತ ಸುಪ್ರತಿ
ಷ್ಠಿತ ಮುನಿಪುಂಗವರ್ಗೊಗೆದ ಕೇವಳಬೋಧದ ಪೂಜೆಗೆಂದು ವಿ
ಸ್ತೃತ ವಿಭವಾನ್ವಿತ ಪ್ರಕಟದೇವನಿಕಾಯಮಿ ಪೋಗೆ ಕಂಡು ತ
ತ್ಕ್ಷಿತಿಪತಿಯುಂ ಸರಾಗದೊಡವೋದನಸಂಚಳ ಧರ್ಮಚಿತ್ತದಿಂ ೩೭

ವ|| ಅಂತು ದೇವನಿಕಾಯದೊಡವೋಗಿ ಕೇವಳಿಗಳಂ ಪೂಜಿಸಿ ಪೊಡವಟ್ಟು ಗಣಧರರಂ ಬಂದಿಸಿ ಮುಂದೆ ಕುಳ್ಳಿರ್ದು ಧರ್ಮಮಂ ಕೇಳ್ದು ನಿರ್ವೇಗಂ ಪುಟ್ಟಿ ಸಮುದ್ರವಿಜಯನಂ ಬರಿಸಿ ರಾ[1][ಜ್ಯಮ][1]ನೊಪ್ಪಿಸಿ ಮಹಾವಿಭೂತಿಯಿಂದಂಧಕವೃಷ್ಣಿ ದೀಕ್ಷೆಯಂ ಕೈಕೊಂಡು ಪೋದಿಂಬಳಿಯಂ ಸಮುದ್ರವಿಜಯಂ ಜಿನಮಹಾಮಹಿಮೆಗಳಂ ಮಾಡಿಸಿ ತನ್ನ ಪೂರ್ವಜನ್ಮೋಪಾರ್ಜಿತಮಪ್ಪಗಣ್ಯ ಪುಣ್ಯಫಳೋದಯದಿನಷ್ಟಸಹಸ್ರ ಮಕುಟಬದ್ಧ ಮಹೀಪಾಳ ಕಿರೀಟಘಟಿತರತ್ನದ್ಯುತಿ ವಿಚುಂಬಿತಪಾದಪದ್ಮೋತ್ತಮನಾಗಿ ಮಹಾಮಂಡಳಿಕಶ್ರೀಯನನುಭವಿಸುತ್ತಿರ್ದನುತಿಪ್ಪಿನಮಾತನ ತಮ್ಮಂದಿರೆಲ್ಲರಿಂ ಕಿಱಿಯಂ ವಸುದೇವನೆಂಬೊಂ ಗರ್ಭಾದ್ಯಷ್ಟಕ ಸಂವತ್ಸರದಿಂ ತಗುಳ್ದುಪಾಧ್ಯಾಯಾಂತಿಕಮೊಳಕ್ಷರಾದಿ ಚತುಃಷಷ್ಟಿಕಳಾಪರಿಣತನುಮಭಿಸುತನುಮಾಗಿ ಯವ್ವನ ಮದೋನ್ಮತ್ತ ಚಿತ್ತನಾಗಿ

ಕಂ|| ಪರಮ ಪರಾಕ್ರಮಮನುಪಮ
ಗುರುತ್ವಮನವರತ ದಾನಮೆಂಬಿವಱಿಂದೊಳ್ ಕೇ
ಸರಿಗಂ ಸುರಗಿರಿಗಂ ದಿ
ಕ್ಕರಿಗಂ ಮಿಗಿಲಾದನೆನಿಸಿದಂ ವಸುದೇವಂ ೩೮

---

1 ಜ್ಯಂ

* ಉತ್ತರ ಪುರಾಣ ಮತ್ತು ನೇಮಿನಾಥ ಪುರಾಣಗಳಲ್ಲಿ 'ಅಚಲ' ಎಂದಿದೆ.

ನಿರತಿಶಯತೇಜದಿಂ ಸುಂ
ದರ ಕಾರು[1][ಣ್ಯ][1]ದಿನನೂನ ವೈಭವದಿಂ ಭಾ
ಸ್ಕರನೆನೆ ಶಶಧರನೆನೆ ಸುರ
ವರನೆನೆ ಸಲೆ ನೆಗಳ್ದನಮಿತಗುಣ ವಸುದೇವಂ ೩೯

ವ॥ ಇಂತಪ್ಪ ನೆಗಱ್ತೆಯ ಪೊಗಱ್ತೆಯುಮುಂ ಪ್ರತ್ಯಕ್ಷಂ ಮಾಡುವೆನೆಂದೊಂದು ದಿವಸಂ ಕೌಸುಂಭಾಂಬರಂಗಳನುಟ್ಟು ಪದ್ಮರಾಗಮಯಮಪ್ಪಾಭರಣಂಗಳಂ ತೊಟ್ಟು ಕುಂಕುಮ ಮಣಿಗಣಕಿರಣಾರುಣೀಕೃತಯೋಗಾಳಂಕಾರ ಅರುಣವರ್ಣ ಹಯಮನೇಱಿ ಸೂತವೈತಾಳಿಕ ವಂದಿಮಾಗಧರ್ಕಳ್ ಪೊಗೞೆ ಪೊಱಲ [2][ಜೇಂಕಾ][2]ರದ ವಾದ್ಯಂಗಳ್ ನೆಗೞೆ ಬವಣಿಗೆಗೆ ಪೊಱಮಟ್ಟು

ಕಂ॥ ಎಳನೇಸಱಂದದಿಂ ತೊಳ
ಪಳವಡೆ ನೇರ್ಪಡೆ ಬೆಡಂಗೊಡಂಬಡೆ ಬಪ್ಪ
ಗ್ಗಳಿಕೆಗೆ ಪೊಱಲಚ್ಚರಿವಡೆ
ವಿಳಾಸಮುಂ ಮೆಱೆದು ನೆಱೆಯೆ ಸೊಗಯಿಸಿ ತೋರ್ಕುಂ ೪೦

ವ॥ ಮಱುದಿವಸಂ ದುಕೂಲವಸ್ತ್ರಮನುಟ್ಟು ಮುತ್ತಿನಾಭರಣಮುಂ ತೊಟ್ಟು ಮಲ್ಲಿಗೆಯಪೂವಂ ತುಱುಂಬಿ ಚಂದನಮುಂ ಪೂಸಿ ರಜತಯೋಗಾಳಂಕೃತಮಪ್ಪ ಶ್ವೇತಾಶ್ವಮನೇಱಿ

ಕಂ॥ ತಾರಾಗಣ ಪರಿವೃತಮೀ
ಧಾರಿಣಿಗಿೞಿತಂದ ಚಂದ್ರನೆನೆ ಧವಳಾಳಂ
ಕಾರನುದಾರಂ ಸುಜನಾ
ಧಾರಂ ಬವಣಿಗೆಗೆ ಬರ್ಕುಮೊರ್ಮೆ ಕುಮಾರಂ ೪೧

ವ॥ ಅಲ್ಲಿ ಮಱುದಿವಸಂ ಪೀತಾಂಬರಮನುಟ್ಟು ಮರಕತಮಣಿಮಯ ವಿಭೂಷಣಂಗಳಂ ತೊಟ್ಟು ಜಾಜಿಯ ನನೆಯಂ ತುಱುಂಬಿ ಯಕ್ಷಕರ್ದಮಮಂ ಪೂಸಿ ಹರಿನ್ಮಣಿ ಖಚಿತ ವಿರಾಜಿತ ಹರಿದಶ್ವಮನೇಱಿ ಸೀಗುರಿಗ[3][ಳಂ][3] ತಳ್ತು ಪಿಡಿಯೆ

ಕಂ॥ ರಕ್ಷಿಸುವ ಸಕಳಜನ ಲೋ
ಲಾಕ್ಷಿಗನುವರ್ಗಳ ಮನಕ್ಕಮಾ ವಸುದೇವಂ
ಸಾಕ್ಷಾದತಿಶಯ ವಿಳಸಿತ
ಯಕ್ಷೇಂದ್ರಂ ಬರ್ಪ ತೆಱದೆ ಸೊಗಯಿಸಿ ತೋರ್ಕುಂ ೪೨

---

1 ಣ್ಯ 2 ಜೆಂಕ 3 ಳು

ವ|| ಅಲ್ಲಿಂ ಮುಱುದಿವಸಂ ನೀಲಾವಳಿಯನುಟ್ಟು ಮಿಂದ್ರನೀಲಪತ್ರಂಗಳಂ ತೊಟ್ಟು ಮೇಘಮಾಲೆಯಂ ಕಟ್ಟಿ ಕತ್ತುರಿಯಂ ಪೂಸಿ ಹರಿನೀಲ ಪ್ರಭಾಭಾಸಿತ ಕರೀಂದ್ರಮನೇಱಿ ಮಯೂರಪಿಂಛಾತಪತ್ರಸಂಛನ್ನಾಕಾಶ ವಿರಾಜಿತನುಮಾಗಿ

ಕಂ|| ಇಂಬಾ[1][ಗೆ][1] ಕರಿಯ ಪಸದನ
ಮಿಂಬಾಗೇಱಿರ್ದ ಕರಿಯ ಪಸದನಮುಮುರೇಂ
ದ್ರಂ ಬರ್ಪಂತಿರೆ ವಸುದೇ
ವಂ ಬರುತಿರೆ ಚೋದ್ಯಮಾಯ್ತು ಪೊಬಿಲೊಳಗೆಲ್ಲಂ ೪೩

ವ|| ಪೆಱತೊಂದು ದಿವಸಂ ಹರಿದ್ರಾ[2][ಲೇಶ್ಯಾಂ][2]ಗನಾಗಿ ಸುವರ್ಣವಲ್ಲಿಯ ನುಟ್ಟು ಕನತ್ಕನಕವಿಭೂಷಣರಂಜಿತನಾಗಿ ಪೊಂಜಾಜಿಯಂ ತುಱುಂಬಿ ಹೇಮಮಯ ಯೋಗ ಶೋಭಸೀಯಮುಪ್ಪ ಪೇಸರಿಯನೇಱಿ ಕಳಧೌತಚ್ಛಾಯಾತಪತ್ರಂಗಳ ನಡುವೆ ಬರ್ಪಾಗಳ್

ಕಂ|| ಸುರನೋ ಸುರನಲ್ಲಂ ಖೇ
ಚರನೋ ಖೇಚರನುಮಲ್ಲನಭಿನುತ ಚಕ್ರೇ
ಶ್ವರನೋ ಚಕ್ರಿಯುಮಲ್ಲಂ
ನಿರತಿಶಯಾಕಾರನಾತನಾವಂ ಪೇೞಿಂ ೪೪

ವ|| ಎಂದಿಂತು ತಮ್ಮೊ[3][ಳೋರೋ][3]ರ್ವರಂ ಬೆಸಗೊಳ್ವಾಗಳೀತಂ ಪೆಱನೊರ್ವ ನಲ್ಲಂ ವಸುದೇವನೆಂದು ನುಡಿಯುತ್ತಿರೆ ದಿವ್ಯವಿದ್ದಿನ್ನಮಾನುಷ್ಯವಿದ್ಮನುಷ್ಯವಿದನೆಂದಿಂತು ಮೂಱುಂ ತೆಱದಿಂ ಕಯ್ಗೆಯ್ದು ಬಪ್ಪುದೆಲ್ಲಮುಂ ಕಂಡರೆಲ್ಲಂ ಮರುಳ್ಗೊಂಡಂತೆ ಮತಿಗೆಟ್ಟು ಬಾಯಂಬಿಟ್ಟು ಬೞಿಯುಂ ತಗುಳೆ ಕೇಳ್ದವರೆಲ್ಲಂ ತಂತಮ್ಮನೂಳ್ದಂತೆ ತಮ್ಮಾವಕ್ಷಿಗಳಂ ಬಗೆ ಯುವೆ ಪರಿಪಱಿದು ನೋಡಿ ಸಟ್ಟದೃಷ್ಟಿಯನೊಡಂಬಟ್ಟು ಮನಮುಂ ತೆಗೆಯಲಾಱದಾತ ನೆತ್ತೆತ್ತ ಪೋಕುಮುತ್ತಲತ್ತಲ್ ಪೋಗುತ್ತಿರಲ್ ಮತ್ತೊಂದು ಬೀದಿಯೊಳೊರ್ವಳ್

ಕಂ|| ನೆಲೆಮೊಲೆಗಳಲುಗೆ ಮೇಲುದು
ತೊಲಗೆ ಕುರುಳ್ ಮಿಳಿರ್ದು ಪೊಳೆಯೆ ಮುಡಿ ಬೆನ್ನೊಳ್ ಬಂ
ದಲೆಯೆ ಖಳಿರುಲಿಯೆ ಪಲರುಂ
ಲಲನೆಯರೊಡನೊಡನೆ ಹರಿದು ನೋಡಿದರಾಗಳ್ ೪೫

---

1 ಳೆ 2 ಳೆಸ್ಯಾಂ 3 ಳೊ

ಒಡನಿರ್ದ ನಲ್ಲನಂ ಬಿಸು
ಟುಡುಪಾನನೆ ಪರಿಯೆ ಪರಿದು ಮೇಲುದನೋಪಂ
ಪಿಡಿದೊಡದನಂತೆ ಬಿಸುಟು
ಳ್ದೊಡೆಯ ಸಡಿಲ್ದುಡೆಯುನಣಮೆ ಬಗೆಯದೆ ಪರಿದಳ್ ೪೬

ಅತ್ತೆ ಮನೆಯಿದಿರೊಳಿರೆ ಸೊಸೆ
ಪಿತ್ತಿಲ ಪೆರ್ಮು[1][ದಿಲನೇಱಿ][1] ಭಯಮುಱಿಯದೆ ಪಾ
[2][ಯ್ವುತ್ತೊಂದುಂ][2] ಬಗೆಯದೆ ಕ
ಣ್ಬೆತ್ತ ಫಲಂ ಸಫಲಮೆಂದು ನೋಡಲ್ ಬಂದಳ್ ೪೭

ವ|| ಪೆಱತೊಂದು ಪೆರ್ಮು[3][ದಿ][3]ಲೊಳೊರ್ವಳ್ ಕಯ್ಗೆಯ್ಯಲೆಂದು ತನ್ನ ತುಡಿಗೆಯಂ ತರಿಸಿ ಕೆಲದೊಳಿಟ್ಟಿರ್ದು ವಸುದೇವನ ಬರವಂ ಕೇಳ್ದವಳಲ್ಲಿಯೆ ಬಿಸುಟಿರ್ದು ಪರಿಯೆ ಮನೆಯವಳವಳಂ ಕಂಡಾಕೆಗಡ್ಡಂ ಬಂದಿಂತೆಂಗುಂ

ಕಂ|| ಕೈಪಿಡಿಯೆನೆ [4][ನೀನೆನ್ನಂ
ಕೈಪಿಡಿದಿರು][4] ನೆಟ್ಟನೆಂದವ[5][ಳನವಳಾ][5]ಗಳ್
ಜೈ ಪೋಗದಿ[6][ರೆಂದೆ][6]ನೆ ನೀಂ
ಜೈ ಪೋಗೆಂದಂತೆ ಪಱಿದು ನೋಡಿದಳೊರ್ವಳ್ (?) ೪೮

ವ|| ಮತ್ತಮಂತೆ ಪೊಟಿಲೊಳಗೆಲ್ಲ ಪೋಗಿಪೋಗಿ ನೋಳ್ಪವರ್ಗಳ್

ಕಂ|| ಪರಿದವು ಕಣ್ ಕಂಡಾಗಳೆ
ಪರಿದವು ಮನಮಂತೆ ತಾಮುಮಾತನ ಬಗೆಯಂ
ಪರಿಯುತಿರೆ ಮುಳಿದು ಮದನನ
ಪ[7][ರಿಯಿಂ][7] ಪರಿದಂತುಟಾಯ್ತು ಪೊಟಿಲೊಳಗೆಲ್ಲಂ ೪೯

ವ|| ಇಂತು ಪೊಟಿಲೊಳಗೆಲ್ಲ ಪೆಂಡಿರೆಲ್ಲಂ ಮನೆಯೊಳಿಪ್ಪುದುಮಂ ಮನೆವಾರ್ತೆಗೆ ಮಸಂದಪ್ಪುದುಮಂ ಮಕ್ಕಳೊಳಪ್ಪ ಮೋಹಮುಮಂ ಗಂಡನೊಳಪ್ಪ ನೇಹಮುಮಂ ದ್ರವ್ಯದೊಳಪ್ಪ ಶ್ರದ್ಧೆಯುಮಂ ಕಣ್ಗಳೊಳಪ್ಪ ನಿಟ್ಟೆಯುಮಂ ವಿಭವದೊಳಪ್ಪಲಂಕಾರಮುಮಂ ಪಸುವಿಂಗಪ್ಪಾಹಾರಮುಮಂ ಬಿಸುಟಿರೆ ಕುಂದದಾತನ ರೂಪು ಕಣ್ಗಳೊಳಂ ಮನದೊಳಂ ತೊಟಿಲೆ ಮೆಯ್ ಕಟಿಲೆ ಸ್ಮರಣೆ ಬಟಿಲೆ ತಮ್ಮುಮಂ ಪೆಱರುಮನಱಿಯದಿರೆ ಮತ್ತೊಂದೆಡೆಯೊಳೊರ್ವಳಿಂತೆನುತಿರ್ದಳ್

1 ಡಿಲ ನೆಱಿ 2 ಯ್ದಲ್ಲಿ ಕಡುನೊಂದು ತಾಂನೊಂದುದುಮಂ 3 ಡಿ 4 ಕಯ್ಬಿಡಿದಿರು ನೀನೆನ್ನಂ 5 ಳಾ 6 ರಿ 7 ೦

ಕಂ॥ ನೋಯಿಸುವಂ ವಸುದೇವಂ
ನೋಯಿಸುವಂ ಕಾಮದೇವನಲ್ಲೆದೆ[1][ಯಾ][1]ಣ್ಮಂ
ನೋಯಿಸುವನಂತು ಮುನ್ನಂ
ನೋಯಿಸಿದುದೆ ನೋವು ಬೞಿಕಿದಾದುದು ನೋವೇ ೫೦

ವ॥ ಎಂಬುದನಾಕೆಯಾಣ್ಮಂ ಕೇಳ್ದು ಬೆಱಗಾಗಿ ಬೇಸತ್ತಾಗಳೆ ಮನೆಯಿಂ ಪೊಱ ಮಟ್ಟು ಬಂದು ಬೀದಿಯೊಳೊರ್ವಂ ತನ್ನ ಪಂದಿಗನಂ ಕಂಡಿಂತೆಂದಂ

ಪಿರಿಯಕ್ಕರ॥
ಖಿನ್ನನಾಗಿರ್ದು ಬೆಕ್ಕಸಂಬಟ್ಟು ದೆಸೆಗಳಂ ನೋಲ್ಪಿಣ್ಣ ಕೇ[2][ಳಾಂ ಪೇೞುವೆಂ][2]
ಎನ್ನ ಪೆಂಡತಿ ವಸುದೇವನಂ ಕಾಣುತ್ತೆ ಮರುಳಾದ[3][ಳಾ][3]ಗಳಾತನೆಂಗುಂ
ನಿನ್ನ ಪೆಂಡತಿಯೆಂತಾದೊಳಾದಂತೆಯಾಗಿರ್ದಳೆಮ್ಮಾಕೆಯೇಗೆಯ್ವೆಮೋ
ಮುನ್ನಮಿನ್ನವಿಂತೆಂಬುವೊಳವೆ ಪೋಪಂ ಬಾ ತಪದತ್ತ ಮನೆಯೊಳೇನೋ ೫೧

ವ॥ ಎಂದಾತಂಗಾತಂ ಮಱುಮಾತಿತ್ತು ಬೇಸತ್ತು ಮನ್ಯುಕೆತ್ತು ನುಡಿಯು ತ್ತಿರ್ದನಿತ್ತ ಬ್ರಹ್ಮಪುರಿಗೇರಿಯಲ್ಲಿಯೊರ್ವ ಸೋಮಯಾ[4][ಜಿ][4] ತನ್ನ ಪಾರ್ವಂತಿ ವಸು ದೇವನಂ ಕಂಡಂದಿಂದಿತ್ತ ಮನೆಗೆವಾರದಿರೆ ಮನೆವಾರ್ತೆ ಕಿಡೆ ಸೈರಿಸದೆ ಪೊಱಮಟ್ಟು ಬಂದು ಸಭಾಮಂಟಪಮೊಳ್ ಮುನ್ನಂ ತನ್ನಂತೆ ಬೇಸಱನೊಳ್ ಬಂದಿರ್ದೊರ್ವ ಭಟ್ಟನಂ ಕಂಡಾತನಿರವಿಂದಾತನ ಚಿಂತೆಯನಱಿದಿಂತೆಂಗುಂ

ಪಿರಿಯಕ್ಕರ॥
ಓದುವಿಸುಟು ಚಿಂತಿಪ್ಪುದೇಕೆನೆ ಭಟ್ಟನೆಂಗುಂ ಬೀದಿಯೊಳಲ್ಲಿ ವಸುದೇವಂ[5][ಗಂ
ಪೋದುದಂ ಕಂಡೊಡನವನಿಗಾ][5] ದೆಮ್ಮ ಭಟ್ಟಣಿ ಮರುಳಾಗಿ ತಾಂ ಶೂನ್ಯಮಿಂ
ತಾದೊಳೆಂದೊಡೆ ನಿಮ್ಮಾ[6][ಕೆ][6] ಪಾರ್ವಂತಿ ಪೆರ್ಮರುಳ್ ಪತ್ತಿದಂತೆ ಮರುಳಾಗಿ
ಪೋದೊಡಾಕೆಯ ಪೋ[7][ದುದ][7] ದೆಸೆಗಾಣೆನೆಂದಡೆ ಸೋಮಯಾಜಿ
ಮೂರ್ಛೆಯೋದಂ ೫೨

ವ॥ ಆಗಳೆಲ್ಲಂ ನೆಱೆದಾತನನೆಚ್ಚಱಿಸಿ ಎಮ್ಮ ಮನೆವಾರ್ತೆಗಳೆಲ್ಲಮಿಂತೆ ಕೆಟ್ಟಿರ್ದುವೆಂದಾಱಿನುಡಿಯುತಿರ್ದರಂತಂತೆ ಮತ್ತಮರಿಯ ಸೂಳೆಗೇರಿಯಲೊಂದೊಂದು ಕಿಱಿಯ ಕುಂಟಣಿಯರಲ್ಲಿಗೆವಂದಿಂತೆಂಬರ್

1 ನಾ 2 ಳ ಪೇಳ್ವೆಂ 3 ಳಿಂದಾ 4 ಚಿ 5 ಗಂ 6 ಕೆಳೇಸಿಂಮಾ 7 ದ

ಪಿರಿಯಕ್ಕರ॥

ಎಮ್ಮ ಕೇರಿಯ ಸೂಳೆಯರೆಲ್ಲರುಂ ವಸುದೇವಂಗಾಣತ್ತೆ ಬುದ್ಧಿಗೆಟ್ಟು
ತಮ್ಮ ಗಂಡರಂ ಗಂಡರೆಂದಱಿಯರ್ ಮನೆಯುಮಂ ತಮ್ಮದೆಂದು ಬಗೆಯರ್
ನಿಮ್ಮ ಕೂಸುಗಳಾತಂಗೆ ಸೋಲ್ತರೊ ಪೇೞಿಮೆಂದೊ[1][ಡವರೆಂಬ
ರೆ][1]ಮ್ಮ ಮಕ್ಕಳನೇವೇೞ್ವೆನೆಮ್ಮೆಮ್ಮ ಚಿತ್ತಮುಂ ಪೋಗಿರ್ದುವಾತನತ್ತಂ ೫೩

ವ॥ ಎನುತಮಿರ್ದರ್ ಮತ್ತಮಲ್ಲಿಯ ಪರದರ್ ತಮ್ಮ ಪೆಂಡಿರ ಮನಂ ವಸುದೇವನತ್ತಲ್ ಪೋಗಿರ್ದುದುಮಂ ವಿಕಳರಾದುದುಮನಱಿದು ಬೆಱಗಾಗಿರ್ದಲ್ಲಿಂಬೞಿಯಂ ನಿಲಾಱಿದಂತಂತೆ ಬಂದು ಚೌವಟದಲ್ಲಿ ತನ್ನ ಮಱುಕದಂತೆ ಚಿಂತೆಯಿಂ ಬಸಿರ್ದ ಸೆಟ್ಟಿಯುಂ ಕಂಡಿಂತೆಂದಂ

ಪಿರಿಯಕ್ಕರ॥

ಪರದುವಿಸುಟು ಚಿಂತಿಸುತಿರ್ಪುದೇಕಯ್ಯ ಸೆಟ್ಟಿ ನೀನೆಂದಾಗಳಾತನೆಂಗು
ಸ್ಕರ[2][ನೆ][2] ಬರ್ಪಂತೆ ವಸುದೇವಂ ಬರೆ ಕಂಡಾ ಸೆಟ್ಟಿತಿ ಮರುಳಾದೋಳೆಂದೊಡೆನ್ನ
ಪರದಿ ತಾನುಂ ಸೊ[3][ಸೆ][3]ದಿರುಮಾತನಂ ಕಂಡಡೆ ಚಿಂತಿಸಿ ವಿಕಳೆಯರಾ
ದರು ಪರದಿನಂದಮೆನಗೀಗಳಿನ್ನುಡಿಯಾಯ್ತುಂತು ನಿಮ್ಮರನೆ [4][ಲೇಸತ್ತೆ][4] ೫೪

ವ॥ ಎಂದಾಗಳಾ ಸೆಟ್ಟಿ ಮತ್ತಮಿಂತೆಂದಂ ಪೋೞಲೊಳಗೆಲ್ಲಮಿಂತಾದೊಡೆಂತಿಲ್ಲಿ ಬಾೞ್ವಮಿದನರಸಂಗೆ ಪುಯ್ಯಲಿಡುವಮದಂ ಕೇಳದಂದು ಪೋಪಮೆಂಬ ಮಾತಂತೆ ಪಱೆಮೊಡಲ್ಲಿಯ ಪ್ರಭುಗಳೆಲ್ಲಂ ನೆರೆದು ಬಂದು ರಾಜಮಂದಿರಮಂ ಪೊಕ್ಕು ಸಮುದ್ರವಿಜಯನಂ ಕಂಡು ದೇವಾ ಬಿನ್ನಪಮೆಂದಿಂತೆಂದರ್

ಉ॥ ನಿನ್ನ ಮಹಾಪ್ರಸಾದದಿನಸೂನ ಮಹೋನ್ನತ ಚಿತ್ತವೃತ್ತಿಯಿಂ
ದಿನ್ನೆಗಮೊಳ್ಳಿತಿರ್ದೆಮೆಮಗಿನ್ನಿರಪಾಪದು ನಾಡೆ ದುಃಖಮುಂ
ಬನ್ನ[5][ಮದ][5]ಕ್ಕುಮಿಂ ಪಲವು ಮಾತಿನೊಳೇಂ ನಮಗಿಲ್ಲಿ ಬಾೞ್ವಿಡಂ
ನಿನ್ನಯ ಧರ್ಮಮೆಂದೆ ಬಗೆ ಬೀೞ್ಕೊಳವಂದಮಿಳಾತಳಾಧಿಪಾ ೫೫

ವ॥ ಎಂದೊಡರಸನಂತೆಂಬುದೇನದಱಂದಮನಱಿಯೆ ಪೇೞಿಮೆಂದೊಡವರಿಂತೆಂಬರ್

1 ಡೆಂಬರು ಎ 2 ನು 3 ಸಿ 4 ಲೇಸು 5 ಮ

ಮ॥ ವಸುದೇವಂ ಬರೆ ಕಂಡು ಪೆಂಡಿರೆರ್ದೆಯಂ ಪುಷ್ಪಾಯುಧಂ ಸಾರ್ದು ಪೊ
ರ್ದಿಸೆ ನೊಂದಳ್ಕಿ ಬಱಿಲ್ದೆಳಲ್ದು ಬಿಸುಸುಯ್ದೋರಂತೆೞಲ್ವರೆಂದಿ
ಪ್ಪರಿಸ್ಮ್ರ ಪೆಂಡಿರ ಕಣ್ಣೊಳು ತೊಱಲುತಿರ್ದಪನದಱಿಂದಳಿದುದು
ಮನೆವಾರ್ಚಾರ್ನೊಪ್ಪುವನಾಣಂ (?) ೫೬

ವ॥ ಅನಲ್ಪಪೆಯುಂ ಪರಮಾತ್ಮನಂ ಧ್ಯಾನಿಸುವೊಡಂತರಾತ್ಮನೊ ಪರಮಾತ್ಮನಕ್ಕುಮೆಂಬ ಸಮಯತತ್ವಮುಂ ಸನ್ನಿಮಾಱಿಪ್ಪನೆಂಬಂತೆ ಪಗಲುಮಿರುಳುಂ ವಸುದೇವನನೇ ಧ್ಯಾನಿಸುತ್ತಿರೆ ಪುಟ್ಟುವ ಕೂಸುಗಳೆಲ್ಲಮಾತನನೆ ಪೋಲ್ತು ಪುಟ್ಟಿದಪ್ಪುವೆಮಗಿನ್ನೊಕ್ಕಲ್ತನಕ್ಕೆ ಮೆಯ್ದೆಱಲುಮಿರಲುಂ ಬಾರದೆಂದೊಡರಸನಿಂತೆಂದಂ

ಮ॥ ಪ್ರಜೆಯಂ ನೋಯಿಸಿ ಜೀಪ್ಪಿರಂ ಪೊಗಳಿಪಂ ಮುನ್ನಾದ ಧರ್ಮಂಗಳಂ
ಸುಜನರ್ ಜೀಯೆನೆ ಮೋಹದಿಂದಮಳಿದಾಂ ಧರ್ಮಂಗೆಯುತ್ತಿರ್ಪೆನಿಂ
ನಿಜಮುಪ್ಪಾಯಮನೋವದೋದಿ ತುಱುಲಾಳಾಗಿರ್ಪೆನಂ[1][ಬರ್][1] ಮಹಾ
ವಿಜಯಶ್ರೀಗೆ ಪರತ್ರೆಗುಜ್ವಳಯಶಕ್ಕಾಕಟಿ[2][ಸಿರ್ ಪೇ][2]ಱಿರೇ ೫೭

ಕಂ॥ ನ್ಯಾಯಮುನಱಿದಳಿಪೊದವಿರೆ
[3][ಮಾಯಿಸಿ][3] ಸುಜನರನಡುರ್ತು ನೋಯಿಸಿ ಸೆಱೆಯಿ
ಟ್ಟೋಯೆನಿಸಿರ್ದರ್ಥದಿನಾ
ದಾಯಮುದನ್ಯಾಯಮೊಳ್ಪಿನಾಸೆಗಪಾಯಂ ೫೮

ವ॥ ಅದಱಿನೀ ಮನೆವಾರ್ತೆಗೆ ನಿಮ್ಮ ಮನಕ್ಕೆ ನೋವಾಗಲುಂ ಬೇಡೆನ್ನಾತನ ನರಮನೆಯುಂ ಪೊಱಮಡಲೀಯೆನಂಜದೆ ನಿಶ್ಚಿಂತಮಿರಿಮೆಂದವರುಂ ಸಂತೈಸಿ ಪೋಗವೇೞ್ದುಂ ಬಱಿಯುಂ

ಮ॥ ಅಱಿಗೆಯ್ದಂ ವಸುದೇವನೊಳ್ ಪೊರೆಗುಮೋ ರೂಪಿಂಗೆ ಸೋಲ್ತೀಗಳೀ
ಪೊಱಲೆಲ್ಲಂ ನುಡಿವಾಗಳಿಲ್ಲದೊಡಮುಂಟಾಗಿರ್ಕುಮಂತುಂ ಜನಂ
ಪಱಿಗುಂ ಪೆಂಪಱಿಗುಂ ನಿತಾಂತಮದಱಿಂದೆಂತಾಗಿಯುಂ ತಮ್ಮನಂ
ತೊಱಲಲ್ಕೆತ್ತಲುಮಾಯೆನೆಂಬ ಬಗೆಯಿಂದಿರ್ದಂ ನರೇಂದ್ರೋತ್ತಮಂ ೫೯

ಗದ್ಯ॥ ಇದರ್ಹತ್ಸರ್ವಜ್ಞ ಪಾದಪದ್ಮವಿರಾಜಿತೋತ್ತಮಾಂಗ ಶ್ರೀ ಬಂಧುವರ್ಮ ನಿರ್ಮಿತಮಪ್ಪ ಹರಿವಂಶಾಭ್ಯುದಯದೊಳ್ ಕುಮಾರೋದಯವರ್ಣನಂ

**ಪ್ರಥಮಾಶ್ವಾಸಂ**

---

1 ಬೂ 2 ನಿರ್ಪ 3 ಮೋಹಿಸಿ

# ದ್ವಿತೀಯಾಶ್ವಾಸಂ

ಕಂ॥ ಶ್ರೀಮತ್ಸಮುದ್ರವಿಜಯ
ಸ್ವಾಮಿ ಮನೋಮುದದಿನಂತು ಸುಖಮಿರ್ದು ಕರಂ
ಪ್ರೇಮದೆ ವಸುದೇವನನಭಿ
ರಾಮಗುಣಂ ಬರಿಸಿ ಹರ್ಷವಶಗತನಾದಂ ೧

ವ॥ ಅಂತು ನಿಜಾನುಜಂಗೆ ಸಿಂಹಾಸನಾರ್ಧೈಕಪ್ರದೇಶಮಂ ದಯೆಗೆಯ್ದು ಮುಖಾವಳೋಕನಂಗೆಯ್ದು

ಕಂ॥ ಕಂದಿದುದೊಪ್ಪುವ ಮೆಯ್ ಕರ
ಮೊಂದಿದುದೇಳಿದಿಕೆ ತೊಲಲುತಿರೆ ನಿನಗದಱಿಂ
ನಂದನವನದೊಳ್ ನಿನಗಾ
ನಂದಮುಮಪ್ಪಂತು ಸುಖದಿನಿರು ನಿಶ್ಚಿಂತಂ ೨

ವ॥ ಎಂದೊಡಂತೆಗೆಯ್ವೆಂ ದೇವ ನಿಮ್ಮಡಿಯೆ ಬೆಸಸಿದಲ್ಲಿಪ್ಪೆನೆನೆ ವನಪಾಲಕನಂ ಬರಿಸಿ ನಮ್ಮ ಮಾಡದ ಪೂಜಿಗಣ ವನದಂದಮಂ ಪೇೞೆಂದೊಡಾತನಿಂತೆಂದಂ

ಕಂ॥ ಕರಮೊದವಿದಲಂಪಿಂ ಪೆಂ
ಪೊ[1][ರೆದಿರೆ][1] ಕಣಿಯಿದುವೆ ಧರೆಯೊಳೆನಿಸುವ ತೆಱದಿಂ
ಮರನೆಲ್ಲಂ ಸೊಗಯಿಪ ಪೂ
ಮಸಮುಂ ಪಣ್ಸರಸಮುಮಲ್ಲದಿಲ್ಲಾ ಬನದೊಳ್ ೩

ಕುಂದಲತಾನಿಕರಂಗಳ್
ಕುಂದವಶೋಕೆಗಳ್ ನೋಲ್ಪರಂ ಸೋಲಿಸುಗುಂ
ಚಂದನಮಾರ್ಗಂ ನಯನಾ
ನಂದನಮಾಗಿರ್ಕುಮೆಂದುಮಾ ನಂದನದೊಳ್ ೪

1 ದವಿದ

ಚಂ॥ ತಳಿರ್ಗಳ ಕೆಂಪು ಸಂಪಗೆಯ ಕೆಂಪು ಮದಾಳಿಯುಲಂಪು ಜೆಲ್ವಿನಿಂ
ಮಿಳಿರ್ವಳಿಗೊಂಬು [1][ದಂ][1]ಪತಿಗಳಿಂಬು ಮನೋಭವನಂಬು ಪೂತ ಪೂ
ಗೊಂಗಳ [2][ತಣ್ಪು][2] ತೆಂಕಣೆಲರೊಳ್ಪು ಲತಾಳಿಯ ತಳ್ಪು ಕಾಮುಕ
ರ್ಕಳಿಗಭಿನಂದನಂ ಬಗೆದು ನೋಡಲುಮಿಂತು ಮನೋನುಬಂಧನಂ ೫

ವ॥ ಪಲವು ಮಾತಿನೊಳೇನಾನಂಗನಾನಂದನಂ ಮುಕ್ತ್ಯಂಗನಾಸಕ್ತನಪ್ಪ ಯೋಗಿಯುಮಂ ಮೆಚ್ಚಿಸುಗುಮೆಂದೊಡಿಂತಪ್ಪ ಭೋಗಿಯುಮಂ ಮೆಚ್ಚಿಸುವುದನೆ ಪೇಳಲ್ವೇಳ್ಕು ಮೆಂದೊಡಂತಪ್ಪೋಚಿತನಲ್ಲಿರ್ಪುದನಾವಾವ ವಿನೋದಮರ್ತಿಯಾದೊಡಮವನಲ್ಲಿಯೆ ನಡೆಯಿಸಿಮೆಂದು ಕುಮಾರನಂ ಪೋಗಲ್ವೇಳ್ದು ಬಟ್ಟೆಯುಮಂ ಪೊಱಲೊಳಗೆ ಪೋಗಮುಡದಂತು ಪಾಂಸುಮೊಳಿ ಕಾವುದೆಂದು ವನಪಾಲಕನನೋಜೆಗೊಳಿಸಿ ದಾರುಕ ವಲ್ಲಭಕನೆಂಬಿರ್ವರುಂ ನಂಬುಗೆಯಮಾನಸರುಮಪ್ಪಂಗೆ ಸಹಾಯ ಮಾಡಿರಿಸಿದನಂತು ಕೆಲವು ದಿವಸಂ ವಸುದೇವನಾ ಬನದೊಳ್ ಸುಖದಿನಿರ್ದನಿತ್ತಲೊಂದು ದಿವಸಂ ಸಮುದ್ರವಿಜಯನ ಮನೋವಲ್ಲಭೆಯಪ್ಪ ಮಹಾದೇವಿಗೆ ಚಂಪಕಮಾಲೆಯೆಂಬ ಪರಿಚಾರಕಿಯ ಕೆಯ್ಯೊಳ್ ಸಮುದ್ರವಿಜಯಂ ನರ್ತನ ಸುಗಂಧದ್ರವ್ಯಮನಟ್ಟಿದೊಡೆಯಾ ಸಂದಣದ ಕರುಮಾಡದ ಪೊಱಗನೆ ಪೋಪಳಂ ವಸುದೇವಂ ಕಂಡವಳ ಕೈಯಿಂದಮಾ ಕರಂಡಕಮುಂ ಕೊಂಡೊಡವಳಿಂತೆಂಬಳ್

ಕಂ॥ ತೊಂಡಿಕೆಯನೊಪ್ಪೆ ನಿನ್ನೊಳ್
ಕಂಡುದಱಿನುಪಾಯದಿಂ ವನಾಂತರದೊಳ್ ಭೂ
ಮಂಡಳಪತಿ ನೆಱೆಯಿಟ್ಟುಂ
ಕೊಂಡಾಟದೊಳಿರ್ಪನೆಂದು ಬಗೆಯದೆ ಕಂಡಾ ೬

ವ॥ ಎಂಬುದಂ ಕೇಳ್ದಾ ಮಾತು ತನ್ನ ಮನಮುಂ ನಡೆ ಕಯ್ಯದೊಂದು ಕಂಕಣಮನಾಕೆಗೆ ಲಂಚಂಗೊಟ್ಟು ಪಿಸಗೊಂಡು ಪೊಱಲ ಪ್ರಜೆಯ ಪುಯ್ಯಲಿಂದಾದ ವೃತ್ತಾಂತಮೆಲ್ಲಮನಱಿದು ಪೋಗವೇಳ್ದು ನಿಜಸಹಾಯರಂ ಬಂಚಿಸಿಯಾ ಬನದೊಳಿರ್ದ ಲತಾಭವನದೊಳವಿರ್ದು ಖೇದಮನಸ್ಕನಾಗಿ ತನ್ನೊಳಿಂತೆಂಗುಂ

ಮ॥ ಒಡನಾಂ ಪುಟ್ಟಿದೆನೆಂದು ಕೊಂಡಱವೆನೇ ತನ್ನೀಯದರ್ಥಂಗಳಂ
ಗೆಡೆಗೊಂಡಿರ್ದೆನೆ ತನ್ನ ಮೆಚ್ಚಿನವನಂ ಪೈಮುಟ್ಟಿ ದುರ್ವೃತ್ತಿಯಿಂ
ನಡೆಯುತ್ತಿರ್ದೆನೆ ಕೆಮ್ಮನಿಂತು ಬನದೊಳ್ ತಂದಿಟ್ಟು ಕಾಯಲ್ ಕರಂ
ನಡೆಕಾಯಲ್ ಕಡುಗೂರ್ಮೆಯಿಂ ನಪಪುತಿರ್ದಣ್ಣಂಗದೇಂ ತಕ್ಕುದೇ ೭

1 ದು 2 ತಳ್ಪು

ವ॥ ಮತ್ತೆಯುಂ

ಉ॥ ತಂದೆಯ ಲೆಕ್ಕಮೆಂದುಳಿಸಯುಂಜಿರಸಾಂ ಜಿಸಕೆಯ್ವಿಸಣ್ಣನಾ
ತಂದೆಯಿನಗ್ಗಳಂ ಪ್ರಿಯಪೆ ಲಾಲಿಸಿ ಪಾಲಿಸುತಿರ್ದು ತನ್ನ ಕೂ
ರ್ತಂದವಿದೆತ್ತ ಕೆಮ್ಮನೆ ದುರಾಚರಿತರ್ಕಳ ಮಾತುಗೇಟ್ಟು ತಾಂ
ನಂದನದೊಳ್ ನಿಬಂಧದೊಳಿರ್ಪಂ ತಿರಿಪಂದಮಿದೆತ್ತ ಜೋಗ್ಯಮೋ ೮

ವ॥ ಅಕ್ಕುಮಿಂತಿರ್ಪೋಱಂದಂದದೊಳೊಂದಂ ಬಗೆದು ಸೆಱೆಯೊಳಿರಿಸಿದನಿಂತು ಕೊಂದವರಾರುಂ ಪಿರಿಯವಪ್ಪ ದೋಷಂಗಳನಿಟ್ಟೊಳವಿಟ್ಟು ಪೇೞ್ದುಡೇಗೆಯ್ವರಿಂತು ವಿಚಾರಮಿಲ್ಲದಿಲ್ಲಿಪ್ಪ ಸುಖಮೊಳ್ಳಿತ್ತಲ್ಲ[ಂ] ದೇಶತ್ಯಾಗಮೊಳ್ಳಿತ್ತೆಂದು ಪೋಪ ಕಜ್ಜಮನೆ ಬಗೆಯುತ್ತಮಿರೆಯಿರೆ

ಮ॥ ವಸುದೇವಂಗಮೆಡಂಬಡಪ್ಪ ಜನದಿಂ ಪೋಪಂತುಟಾಯ್ತುತ್ಕಟಾ
[1][ಪುಸಿ][1]ಯೇ ಲೋಕಮು ಪೊಲ್ಲಮಿನ್ನುಮಿರಲಾಗಿನ್ನೆಂದು ಬೇಸತ್ತು ಚಿಂ
ತಿಸಿ ಪೋಪಂತಿರೆ ಪೋದನಸ್ತಗಿರಿಯತ್ತಾದಿತ್ಯನುಂತಂ ವಿಚಾ
ರಿಸದಲ್ಲಿ[2][ಪ್ಪರ][2] ಶುದ್ಧವೃತ್ತಿಯ ಮಹಾತ್ಮ್ಯರ್ಕಳ್ ಮನಸ್ತಾಪದಿಂ ೯

ಕಂ॥ ವಿಭವೋದಯದೊಳ್ ಕೆಲಬರ್
ಪ್ರಭುಗಳ್ ಕರಮೆಸೆದು ಕರ್ಮವಶದಿಂ ಪೋಗಳ್
ಪ್ರಭೆಗೆಟ್ಟು[3][ಡಗುವ ತೆಱದಿಂ
ನಭದಿಂ ಗಮಿಸಿದನ][3]ಡಂಗಿದಂ ದಿವಸಕರಂ ೧೦

ವ॥ ಅಂತಾದಿತ್ಯನಸ್ತಮಾನಮಾದಾಗಳ್ ದಾರುಕ ವಲ್ಲಭಕರಾನುಚರರಪ್ಪರಱಸಿ ಕಂಡೀ ಲತಾಲಯದೊಳಿರ್ದನೆ [4][ಇಂತೇಕೆ][4] ಚಿಂತಿಸುತಿರ್ದಪ್ಪೆಯೆನೆ ತಾಂ ಸಹೋತ್ಪನ್ನ ಬುದ್ಧಿಯಪ್ಪುದಱಿನಿಂತೆಂದಂ ನಮ್ಮ ಸುಖೋಪಾಧ್ಯಾಯರೆನಗೆ ರಾಜಪುತ್ರಯೋಗ್ಯಮೆಂದು ಶರಾಮೋಘಂ ಶಸ್ತ್ರಾಮೋಘಮೆಂಬೆರಡು ಮಂತ್ರಂಗಳಂ ಸಾಧನವಿಧಿಯಂ ಪೇೞ್ದಿತ್ತೊಡವಂ ಸಾಧಿಸುವಲ್ಲಿಗೆ ಸಹಾಯರಿಲ್ಲದೆ ತೀರದೆಂದು ಚಿಂತಿಸುತಿರ್ದೆನೆಂದಡವರ್ ನಾಮುತ್ತೆ ಸಹಾಯರೆಂದು ಪೇೞ್ದುಡಮಂತೆಗೆಯ್ವೆನೆಂದು ನಾಳೆ ಚವುದಿಸಮಾ ಮಂತ್ರಂಗಳಂ ಸಾಧಿಸಲೊಳ್ಳಿತ್ತೆಂದು ಗಂಧಪುಷ್ಪದೀಪಧೂಪಂ ಚರುಕಾದ್ಯಕ್ಷತಾದಿ ಸಾಧನೋಪಕರಣಂಗಳಂ ಸಹಾಯರಿಂ ಪಿಡಿಸಿಕೊಂಡು ಅರ್ಧರಾತ್ರದಾಗಳ್ ಕಾಪಿನವರಂ ಬಂಚಿಸಿ ಪೊೞಲಂ ಪೊಱಮಟ್ಟು ಪರೇತವನಭೂಮಿಯಲ್ಲಿಗೆಯ್ದಿ ತನಗಂ ತನ್ನೊಡನೆಯರ್ಗಂ ಸಕಳೀಯನಿಟ್ಟು ಶಂಕಿಸದೆ ಬನ್ನಿಮೆಂದು ಶ್ಮಶಾನಭೂಮಿಯಂ ಪೊಕ್ಕು ಪೆಣದ ಮೇಗಿರ್ದುರಿವ ಕೊಳ್ಳಿಯಂ ಕೊಂಡು ಕುಣಿವ ಮರುಳ ಕಯ್ಯ ಕೊಳ್ಳಿಗಳ ಬೆಳಗಿನೊಳ್ ನೋಡುತ್ತಂ ಪೋಪಾಗಳ್

1 ಬಿಬಿ 2 ಪ್ಪಂ 3 ಡಂಗು ನಪಿಸುವ ತೆಱದಿಂಗ 4 ಯಿಟ್ಟಕ್ಕಿ

ಕಂ॥ ಉರಿಯುಯ್ಯಲ ದೂಪೆಯ ಸ
ತ್ತ್ರರ ಕರುಳ್ಗಳಸವರ ತಲೆಯ ತೋರಣದಿಂದಂ
ಕರವೂಾಸುರದಿರ್ಪಾಲ[1][ದ][1]
ಮವದಿಂ ಭರದಿಂದ ಮಾಟ್ಟ ಬ[2][ಳ್ಕಿನ][2] ಸರದಿಂ ೧೧

ವ॥ ಅಲ್ಲಿ ಗುಡಿಗಟ್ಟಿದ ಸೀರೆಯಂತೆ ದಕ್ಕುಂದಲೆಗೆ ವಂದರುಂ ಮೆಚ್ಚುಕೆಯ್ವರಂತೆ ತೂಗುವ ತೂಗುಂದಲೆಗ[3][ಳುಮನ][3]ಱಸಿ ಕಾಣದೆ ಬಂದು ನುಡಿವರಂತೆ ಕಂಡನಿಲ್ಲೆಂದು ಮಱುಗುವರಿಂ ಮುಳಿದಿರ್ದಂ ತಿಳಿಪಿ ಮುಂದೆ ಪೋಪಂತೆ ಕಾಲಂ ಪಿಡಿದು ಪೋಪರಪ್ಪರಿಂ ಪತ್ತಿದಂತೆ ಕಯ್ಯಂ ಪಿಡಿದು ಪೋಪರಗೊಟ್ಟಿಂಗರಿಂ ರಕ್ಷೆಯಿಡುವಂತೆ ತಲೆಯಂ ಪಿಡಿದಿಪ್ಪ ಬೇತಾಳರಿಂ ಕುಪ್ಪಸಮಂ ಪೋಲ್ವರಂತೆ ಕಯ್ಯುಮೆಯ್ಯುಮನಱಿವ ಶಾಕಿನಿಯರಿಂ ಬಟ್ಟೆಪೋಪರ್ ಪಸಿವಳಿಗೆಯ್ವಂ ಪೊಕ್ಕಂತೆ ಪೊಟ್ಟೆಯುಮುರ್ಚಿ ತಿಂಬ ಪೇನಿಗಳುಂದೊಡ ....... ರಾಕ್ಷಸರಿಂ ಕೊಂಡಿಕ್ಕುವ ಶಬರನಂತೆ ನೆತ್ತರುಂ ಪೀರ್ವ ಪಿಶಾಚಂಗಳಿಂದಗುರ್ವಾಗಿರೆ

ಕಂ॥ ಕುಣಿದಾಡುವ ಪುಲ್ಮರುಳಿಂ
ತಣಿದಾಡುತಮಿಪ್ಪ ರಕ್ಕಸರ್ಕಳಿನಾಟಂ
ದಣಿಯರವಾಡುವ ಶಾಕಿನಿ
ಗಣದಿಂ ಸುಳಿಸುಳಿವ ಜೀವ ಪೆಣದಿಂ ನೆಣದಿಂ ೧೨

ಪೋರ್ವ ನಿಶಾಚರರಿಂದೊಡ
ನಾರ್ವ ಪಿಶಾಚಿನಿಯರಿಂ ಕರಂ ಪಸಿದೆಲ್ವಂ
ಕಾ[4][ರ್ವ][4] ಮರುಳ್ಗಳಿನೊಯ್ಯನೆ
ಸಾರ್ವ ಮಹಾಭೂತನಿಕರದಿಂದತಿ ರೌದ್ರಂ ೧೩

ನೊಕ್ಕ ಕರುಳ್ಗಳಿನೊಡನೊಳ
ಪೊಕ್ಕ ಕವಿಲ್ಗಣ್ಣ ಗುರ್ವಿನಿಂ ಕೆಂದಲೆಯಿಂ
ದಕ್ಕುಳಿಸಿದ ಬಸುಱಿಂ ಕರ
[5][ಮುಕ್ಕಿಱು][5]ಪಿದ ಮರುಳನವ ಕಯ್ಗಳ ಕರುಳಿಂ ೧೪

ಅಲವಲಿಸಿ ಮಸಗಿ ಪರಿಪರಿ
ದಲಸದೆ ತಿರಿದಱಿಗಿ ಪೆಣನದಂ ತಿಂದು ಕರಂ
ನಲಿನಲಿದು ತನ್ನೊಳುಂ ಪಲಿ
ಮಿಲಿ[6][ಕಿ ಮಿಲಿಕಿ][6]ಯೆಂದು ನುಡಿವ ಪೈಶಾಚಕರಿಂ ೧೫

1 ದ ಬನ್ನಿಯ 2 ಳ್ಗುವ 3 ಳುಂದ 4 ವರ್ಪುಲು 5 ಮುಂತಿರು 6 ಕಿ

ಕಾಡಿರ್ದಡೆ ಮೊರೆದೆಯ್ತಂ
ದಾಡುವ ಜೋಗಿಣಿಯರೊಸೆದು ಪೆಣಗಳ ಕರುಳಂ
ತೋಡುವರಿಂದೇಳಿದರಂ
ಕಾಡುವರಿಂ ಬಲಿವಿಧಾ[1][ನನುಂ][1] ಜೇಡುವರಿಂ ೧೬

ಉ॥ ಎತ್ತಿದ ಕಯ್ಯ ಕತ್ತಿಗೆ ಭಯಂಗೊಳೆ ಬೆಚ್ಚನೆ ಬಿಟ್ಟ ಕಣ್ಣುಮಂ
ಸುತ್ತಿದ ಪೆರ್ಗರುಳ್ ತೆಱದಗುರ್ವಿಪ ಬಾ[2][ಯ್ ಕಡೆ][2]ದಾಡೆ ಕೂಡೆ ತ
ಳ್ತೊತ್ತಿದ ನೆತ್ತರರ್ವಿಸುವ ಪಂದಲೆಮಾಲೆಗಳಾರುಮಂ ತಗು
ಳ್ದೊತ್ತಲೆ ಬಪ್ಪ ಬತ್ತಲೆ ಮರುಳ್ಗಳ ತಂಡದಿನೇಂ ಮಹೋಗ್ರಮೋ ೧೭

ವ॥ ಅಂತು ಭಯಂಕರಾಕಾರಮಪ್ಪನಂ ನಿಶ್ಶಂಕೆಯಿಂ ನೋಡುತ್ತಂ ತನ್ನೊಡನೆಯುವರ್ಗೆ ತಾನೆ ಬಲ್ಪಾಗಿ ಮಹಾದ್ಭುತ ಶ್ಮಶಾನದ ನಡುವಣ ಪೆರ್ಮಳೆಯ ಮೂಡಣ ಕೆಲದೊಳ್ ಪಿರಿದು ಸಂಸ್ಕಾರವಿಧಿಯಿಂ ಬೇಯುತ್ತಿರ್ದ ಪೆಣನಂ ಕಂಡು

ಹರಿಣಿ॥
ಅದಱ ಕೆಲದೊಳ್ ಮೂಱುಂ ಕೊಂಡಂಗಳಂ ಸಮೆದಲ್ಲಿ ತ
ದ್ವಿದಿತ ವಿಧಿಯಿಂ ಹೋಮಂಗೆಯ್ಯುತ್ತಮರ್ಚಿಸುವೊಂದುಪಾ
ಯದೊಳೆ ನಯದಿಂ ಬೇಗಂ ನಿಂದಿರ್ದು ದಿಗ್ಬಲಿಗೆಯ್ಯಲೆಂ
ದೊದಱಿ ಬಲಿಯಂ ಸೂಸುತ್ತಿಂತೆಂಗುಮಾತ್ಮಸಖಾಯರಂ ೧೮

ವ॥ ಆನೋರ್ವನಿಲ್ಲಿರ್ದು ಮಂತ್ರಮಂ ಸಾಧಿಸಿದಪ್ಪೆಂ ನೀಮೆಲ್ಲ[ಂ] ಮೂಡಣ ದೆಸೆಯೊಳಱುವತ್ತನಾಲ್ಕಡಿಯಂತರದೊಳ್ ನಿಲ್ಲಿಮೆಂದವರಂ ನಿಲಿಸಿ ತಾಂ ಮಂತ್ರಮನೋದುತ್ತಂ ದಿಗ್ಬಲಿವಿಧಾನಂಗೆಯ್ವಂತೆ ಬಳಸಿಯುಂ ಬರುತ್ತಂ ಮತ್ತೊಂದರೆಡೆಯಿಂದ ಪೆಣನಂ ತೆಗೆದು ತಂದಾ ಸೆ[3][ದ][3]ಗೆಯೊಳವರಂ ಕಾಣದಂತಿಕ್ಕೆಯು[4][ವರ್][4] ಕಾಣ್ಬಲ್ಲಿಯೊಂದು ಪೆಣನಂ ತೆಗೆದು ಪ್ರೋಜಗಿಕ್ಕಿ ಮತ್ತಂ ಪಲವುಂ ಪಱಿಗೆಯನಲ್ಲಿಯೊಟ್ಟಿ ಪೊಡವಱುರಿಯುಂ ಪೊಗೆಯುಂ ತಳ್ತು ನೆಗೆವಾಗಳ್ ವಸುದೇವನದಱ ..... ತೊಟ್ಟಾಭರಣಂಗಳೆಲ್ಲಮಂ ಕಳೆದುರಿವ ಸೆ[5][ದಗೆ][5]ಯೊಳಿಕ್ಕಿ ಸುರಿಗೆಯುಂ ಕೆಲದೊಳೊಂದು ಮರದಡಿಯೊಳಿಟ್ಟು ಸಖಾಯರ್ ಕೇಳೆ ಪಿರಿಯ ಸರದೊಳಿಂತೆಂದಂ

ಕಂ॥ ಅಱಿಯದೆ ನುಡಿವರ ಮಾತಿಂ
ಸೆಱೆಗೆಯ್ದಂ ಭೂಪನೆಂದು ವಸುದೇವಂ ಬೇ
ಸಱಿನೊಳ್ ಬಂದೀಯೆಡೆಯೊಳ್
ತಱಿಸಂದಗ್ನಿಪ್ರವೇಶದಿಂದಂ ಮಡಿದಂ ೧೯

---

1 ನಂ 2 ಯಿಕಡೆದೊ 3 ಡ 4 ವ 5 ಡದೆ

ವ|| ಎಂಬುದನೆನ್ನಿಸೆಂದು ಬೇಗಮವರ್ಗಲ್ಲಿ ಪಾಯ್ದಂತಾಗೆ ನೆಗೆದುರಿಯ ಮೊದಲೊಳ್ ಲಂಘಿಸಿ ಮೆಳಿಸು ಮಱಿಯನೆ ಪರಿದತ್ತಣದೊಂದು ಮರನನೇಱಿರ್ದ ನಾಗಱಾ ನುಡಿಯುಂ ಕೇಳುತ್ತೆ ದಾರುಕ ಪಲ್ಲಭರ್ಕಳ್ ಹಾಹಾ ನಾಥಾ ಹಾಹಾ ಇನ್ನೆ ಮಗಾರ್ ಶರಣೆನುತ್ತಂ ಪರಿತಂದು ಕೆಲದೊಳೆಳೆದಿಕ್ಕಿದ ಪೆಣನುಮನಾತಂ ಪಾಯ್ದಲ್ಲಿ ಬೇಯುತ್ತಿರ್ದ ಪೆಣನುಮಂ ಕಂಡು ಬೆರ್ಚಿ ಬೆಱಗಾಗಿ ಪೊೞಲ್ಗೆ ಪರಿತಂದು ನಾಮಲ್ಲಿ ಸಾಯಲಂಜಿ ಬಂದುದುನೇನೆಂದು ಸಾವಂ ಪೇೞ್ವೆನೆಂದು ಚಿಂತಿಸುತಿರ್ದು ಬೆಳಗಾದಿಂ ಬೞಿಯುಂ ಪೇೞದಿರ್ಪುದು ಪೊಲ್ಲೆಂದು ಸಮುದ್ರವಿಜಯ ಮಹಾರಾಜನಂ ಕಂಡು ದೇವಾ ಬಿನ್ನಪವೆಂದು

ಚಂ|| ಪುರದವರೆನ್ನ ರೂಪ್ರಮನೆ ಕಂಡು ಪರೀಕ್ಷಿಸದಾತ್ಮಶೌಚಮಂ
ನರಪತಿಗಿಪ್ದಿ [1][ಪೇೞಲವನಿಂ ವನದೊಳ್ ಸೆಱಗೆಯ್ದು ನಾ][1]ನುಮೀ
ಪರಿಭವದೊ[2][ಳ್ ಮುೞುಂಗಿ ನವೆವಂದಕೆ ಸಾವುದೆ][2]ನುತ್ತುಮಾಯನುಂ
ಧರಿಯಿಸಿ ಕಿಚ್ಚುಪೊಕ್ಕು ಮಡಿದಂ ವಸುದೇವಕುಮಾರನೆಂಬುದುಂ ೨೦

ಕಂ|| ಎಂತೆಂತೋ ವಸುದೇವಂ
ಭ್ರಾಂತಿಲ್ಲದೆ ಕಿಚ್ಚುಪೊಕ್ಕನೇ ಪೇೞಿರ್ ಪೇೞಿಂ
ದಂತೆ ನೃಪಂ ಮೂರ್ಛಿಸಿ [3][ಮರ
ದಂತವ ಧ][3]ರಣಿಯೊಳು ಬೀೞೆ ಪರಿಜನಮೆಲ್ಲಂ ೨೧

ವ|| ಪರಿತಂದು ಶೀತಳಕ್ರಿಯೆಯಿನೆಚ್ಚಱಿಸಿ ಮೂರ್ಛೆಯಿಂದೆಚ್ಚಿತ್ತು ವಿಪ್ರಳಾಪಂಗೆಯ್ದು

ಕಂ|| ಹಾಹಾ ಮದನಾಕಾರಾ
ಹಾಹಾ ಗುಣಗಣದಶೇಷ ಭೂಷಣಭಾರಾ
ಹಾಹಾ ಕೂರ್ತೆನ್ನನುಜಾ
ಹಾಹಾ ನೀಂ ಸಾಯೆ ಕೆಟ್ಟಿನನುಪಮತೇಜಾ ೨೨

ಉ|| ಹಾ ವಸುದೇವ ನಿನ್ನನವಿಚಾರದಿನಾಂ ಸೆಱೆಯಿಟ್ಟೆನೆಂಬುದಂ
ಭಾವಿಸಿ ಕೀೞ್ತಿನಂ ವಿನಯದಿನ್ನಳವಂ ನೆಗೞಿರ್ದ ಶೌಚಸ
ದ್ಭಾವಮನಣ್ಣನಂ ನಯದಿನಂಜಿಪೆನೆನ್ನದೆ ಮೂರ್ಖವೃತ್ತಿಯೊಳ್
ಕಾವುದೆ ನಿನ್ನ ಚಿಂತೆಯನೆ ತಿರ್ದದೆಯಿಂತಱಿದೆನ್ನನರ್ದಿಪೈ ೨೩

1 ನಾ 2 ಳಗುಳು ನವೆವಂ ನೆನನೆ ಸಾವೆ 3 ಧ

ಉ|| ಏವುದೊ ರಾಜ್ಯವಿನ್ನೆನಗೆ ನಿನ್ನ ಪರೋಕ್ಷದೊಳಿಂತು ಬಾಳ್ವೆನಿ
ನ್ನಾವುದು ಮೋಹಮಾವುದು ಸುಖಾವಹಮಾವುದು ಪೆಂಪು ನೆಟ್ಟನಿ
ನ್ನಾವನೊ ಕೂರ್ಪನಾವನೆಡರ್ಗಪ್ಪನ ಸಂಭ್ರಮದಣ್ಣ ಧಾತ್ರಿಯಂ
ಕಾವುದು ತಪ್ಪದಿಂತು ಕಿಡೆ ಸಾವುದು ತಕ್ಕುದೆ ಕೂರ್ತರ್ಗೆ ತಮ್ಮನೇ ೨೪

ವ|| ಎನುತ್ತಿಂತು ವಿಕಳನಾಗಿ ನುಡಿವುದುಮನಱುವುಗಿಡುವುದುಮಂ ಕಂಡು ನಂಟರುಂ ಪರಿವಾರಮುಂ ಶೋಕಂಗೆಯ್ದು ಬೞಿಯಮರಸನಂ ಸಂತೈಸಿ ಪೇೞ್ದಿನರಂ ಮತ್ತೆಮತ್ತೆಯುಂ ಬೆಸಗೊಂಡವರಾತನ ಪೊೞಲಸುಟ್ಟುಪಾಯಮುಮಂ ಕಿಚ್ಚುವಾಯ್ದು ಸತ್ತುಪಾಯಮುಮಂ ತಿಳಿಯೆ ಪೇೞ್ದಾಗಳ್

ಕಂ|| ಕಡುದುಃಖದಿನಾತನ ಸ
ತ್ತೆಡೆಯಂ ನೋಡಲ್ಕೆ ಪೋಗಿ ಬಳಸಿದ ಬಲಿಗೊ
ಟ್ಟೆಡೆಯಂ ಹೋಮಕ್ರಿಯೆಗೆ
ಯ್ದೆಡೆಯೊಳ್ ಮಸುಳಿರ್ದ ಕೆಂಡಮುಂ ಕೊಂಡಮುಮಂ ೨೫

ವ|| ಕಂಡಾತನ ಪಾಯ್ದಲ್ಲಿ ಎಲ್ವುಗಳ್ ಮುಂಬೆಂದರೆಗರಿದ ಭೂಪರ ನೆಣಂಗಳುಮಂ ಜಯದಲ್ಲಿ ಸಾರ್ಚಿರ್ದ ಸುರಿಗೆಯುಮಂ ಕಂಡು ಸಮುದ್ರವಿಜಯಂ

ಉ|| ಮತ್ತೆ ಮಹೋಗ್ರ ದುಃಖದಹನಂ ಕೊಳೆ ಮೂ[1][ರ್ಛೆಯ][1] ತಣ್ಪುಗೆಯ್ದೊಡೆ
ಚ್ಚತ್ತನಸಲ್ಲಿ ಕಂಡಿರಪೆ ಬಂಧುಗಳೊಯ್ದೊಡಗೊಂಡು ನಿಂದವರ್
[2][ತತ್ರ][2] ನಿಯೋಗದೊಳ್ [3][ವಿರಹಜಾನಳ ದಂ][3]ದಹ್ಯಶರೀರನಾಗಿರ್ದನಿ
[4][ತ್ರತ್ರ][4] ವಸುದೇವಂ ಮರದ ಪ[5][ರ್ಣೆ][5]ಯೊಳಿರ್ದು ಬೆಳ[6][ರ್ಪ][6]
ಜಾವ[7][ದೊಳ್][7] (?) ೨೬

ವ|| ಮರದಿಂದಮಿೞಿದು ನಡೆದೊಂದು ನಾಡಬಟ್ಟೆಯಂ ತಗುಳ್ದು ಪಯಣಂ ಬೋಗಿ ಕುಕ್ಕುಟಗ್ರಾಮಮೆಂಬುದನೆಯ್ತಂದಾ ಪುರದ[8][ವೊಂ][8]ದು ಕುಂಭ[9][ಕಾಱ][9]ನ ಶಾಲೆಯಂ ಪೊಕ್ಕು ವಿಶ್ರಮಿಸಿ[10][ಪ್ಪುದುಮಾ][10] ಕುಂಭಕಾಱನೆತ್ತಣಿಂ ಬಂದಿರೆಲ್ಲಿಗೆ ಪೋಪಿರೆನೆ ವಸುದೇವನಿಂತೆಂದಂ

1 ರ್ಚೆಸಯ 2 ತಾಳ್ದ 3 ಖಾನಳದಂ 4 ತ್ತ 5 ಣಿ 6 ಗಪ್ಪ 7 ದಾಗಳ್
8 ವೊರೆ 9 ದಾರ 10 ತ್ಪುದುವಾ

ಕಂ|| ಜಾತಿಯೊಳಾಂ ಬ್ರಾಹ್ಮಣನೆಂ
ಗೋತ್ರನು ಮಿತ್ರಜನೆಸಪರಿಮಿ[1][ತ][1]ವಿದಿತಂ ಶಾ
ಸ್ತ್ರಾರ್ಥ[2][ವಿದಂ][2] ಭೂಮಂಡಳ
ಮಂ ತೊೞಲುತಿರ್ಪ[3][ದಿಂದೆ][3]ನಗೆ ವಿನೋದಂ ೨೨

ವ|| ಎಂದಾತನೊಳ್ ನಾಡೆಯುಂ ಪೊತ್ತು ನುಡಿಯುತಿರ್ಪನ್ನೆಗಮಾ ಕುಂಭಕಾಱಂ ಪರಿದು ತನಗಿಷ್ಟರಪ್ಪ ಪಾರ್ವರ ಮನೆಯಿಂ ಬೋನಮುಂ ತರಿಸಿ ಕರಮತಿಪ್ರೀತಿಯಿಂ ಮೀಯಲೆಱೆದುಣಲಿಕ್ಕಿ ಪಥಪರಿಶ್ರಮಮುಮಂ ಕ್ಷುಧಾಪರಿಶ್ರಮಮುಮನಾಱಿಸಿರ್ಪನ್ನೆಗಮಾ ಪೊೞಲ್ಗೆ ಸೂರ್ಯಪುರದಿಂ ಬಂದ ಬ್ರಾಹ್ಮಣರೊರ್ವನಂ ಕಂಡು ನೀಮಾರ್ಗೆಲ್ಲಿಂ ಬಂದಿರೆಂದು ಬೆಸಗೊಳೆ ಸೂರ್ಯಪುರದಿಂ ಬಂದೆನಲ್ಲಿ ವಸುದೇವಂ ತನ್ನ ಪಿರಿಯಣ್ಣಂ ಸಮುದ್ರವಿಜಯಮಹಾರಾಜಂಗೆ ಮುಳಿದಗ್ನಿಪ್ರವೇಶಂಗೆಯ್ದನೆಂಬ ಮಾತಂ ಪೇೞೆ ಕೇಳ್ದು ತನ್ನ ಮನದೊಳ್ ಸಂತೋಷಂಬಟ್ಟು ದೇಶತ್ಯಾಗಕ್ಕೆ ನಿಶ್ಚಿಂತನಾದೆನೆಂದು ಇರುಳಲ್ಲಿಯೆ ವಿಶ್ರಮಿಸಿ ಬೆಳಗಪ್ಪುದು[ಂ] ಪಯಣಂಬೋಗಿ ನಾಡುಮಂ ಪಳ್ಳಮುಮಂ ಕೊಳ್ಳಮುಮಂ ಕೆಱೆಗಳುಮಂ ತೊಱೆಗಳುಮಂ ಕಳಿದುಬಂದು ವಿಜಯಖೇಡಮೆಂಬ ಪೊೞಲನೆಯ್ದೆವಂದದಱ ಪೊಱವೊೞಲೊಳ್

ಚಂ|| ತಳಿರ್ಗಳ ಗೊಂಚಲಿಂಬು ನಯದಿಂ ಮಿಳಿರ್ದೊಪ್ಪುವ ಕೊಂಬು ಸುತ್ತಲುಂ
ಗಿಳಿಗಳ ಪಿಂಡು ಮರ್ಕಟ ಚಯಂಗಳ ತೊಂಡುಮುದಾತ್ತ ಚಿತ್ರಮ
ಪ್ಪಳಿಗಳ ಗಾನಮುಂ ಸ್ಮರನ ಡಾಮರಮಿಂತತಿಶೋಭೆಯಿಂ ಮನಂ
ಗೊಳಿಸುವುದೊಂದು ನಂದನಮನತ್ಯಭಿನಂದನಮಂ ಮನೋಜ್ಞಮಂ ೨೩

ವ|| ಕಂಡಾ ಬನದ ಸಮೀಪಸ್ಥಮಪ್ಪಶ್ವತ್ಥವೃಕ್ಷದ ಮೊದಲೊಳ್ ವಿಶ್ರಮಿಸಲೆಂದು ಕುಳ್ಳಿರ್ದಾಗಳ್ ವನಪಾಲಕನುಂ ನಂದನಕನುಮೆಂಬ [4][ಘ][4]ಟ್ಟಿವಳ್ಳನುಮಲ್ಲಿಗೆ ಬಂದು ವಸುದೇವನಂ ಕಂಡು ನೀಮಾರ್ಗೆಲ್ಲಿಂಬಂದಿರೆತ್ತವೋದಪಿರೆನೆ ಕುಕ್ಕುಟಗ್ರಾಮದಿಂ ಬಂದೆವೀ ನಿಮ್ಮ ವಿಜಯಖೇಡಪುರದೊಳಧ್ಯಯನಾರ್ಥದಿಂದೋದಲ್ ಬಂದೆವೆಂದು ನುಡಿಯುತ್ತಿರ್ದನನ್ನೆಗಮತ್ತಲುತ್ತರ ದಿಗ್ಭಾಗದೊಳ್ ಧ್ವಜತೋರಣ ಮಾಳಾಳಂಕೃತ ವಿಶಾಳಮಪ್ಪ ಮಂಡಪಮಂ ಕಂಡಿದೇಕಾರಣಮಿದಾವುದೆಂದು ಬೆಸಗೊಂಡಡೀ ಪೊೞಲನಾಳ್ವ ಜಿತಶತ್ರುವೆಂಬರಸನ ಮಕ್ಕಳ್ ವಿಜಯೆಯುಂ ಜಯಸೇನೆಯುಮೆಂಬರ್ ಶ್ರೀಗಂ ಸರಸ್ವತಿಗಂ ರೂಪು ಸೌಭಾಗ್ಯದಿಂ ಮಿಗಿಲಿಂತಪ್ಪ ಕುಮಾರಿಯರಲ್ಲಿ ಪಿರಿಯಾಕೆ ಗೀತಪ್ರವೀಣೆ ಕಿಱಿಯಾಕೆ ನಾಟ್ಯವಿದಗ್ಧೆಯರಂತಿರ್ಪರುಂ ತಮ್ಮನೀ ಸ್ವಯಂಬರದೊಳ್

1 ತನುತ 2 ದಿಂದ 3 ದೆ 4 ವನಪಾಳಕನುಂ ಪು

ಜಿತಶತ್ರುಮಹಾರಾಜನುಮುಂ ಸಭೆಯುಮುಂ ತಮ್ಮುಮನೀ ಗೀತನಾಟ್ಯದಿಂ ಗೆಲ್ವಂಗಲ್ಲದೆ ಕುಡಿರಾಗೆವೆಂದಿರ್ದೊಡವರಪ್ಪುನುವಾಕೆಗಳ ವಿದ್ಯಾಬಲಮುಂ ನಚ್ಚಿ

ಕಂ॥ ಎನ್ನ ಕುಮಾರಿಯರುಂ ವಾ
ಗ್ಸ್ನಿಗ್ಧರೂಪೆಯರ ನಾಟ್ಯ ಗೀತ ವಿದಗ್ಧವ್ಯಾಳಿಯರುಂ
ಸುಲಲಿತ ವಿದ್ಯಾನಿಪುಣಿಕೆಯಿಂ
ಗೆಲ್ವಂಗಲ್ಲದೀಯೆನೆಂದತಿ ಮುದದಿಂದಂ (?) ೨೯

ವ॥ ಎಂದಿಂತು ನಾಲ್ಕು ತಿಂಗಳಿಗೆ ವಿದ್ಯಾಸ್ವಯಂಬರಮುಂ ಶಾಲೆಯೆಂದೊಡೆ ಚೋದ್ಯಮೆಂದುಸಿರದಿರೆ ವನಪಾಲನು ನಂದನಕನುಮೆಂಬರಿಂದೆಮಗೆ ಬಿರ್ದಿನರಪ್ಪುದು ಬನ್ನಿಮೆಂದು ಛಮಂಗೆಯ್ದು ಮನೆಗೊಡಗೊಂಡು ಪೋಗಿ ಸ್ನಾನಾನ್ನಪಾನದಿಂ ತಣಿಸಿಪ್ಪುದು ಮಲ್ಲಿ ಪೂಗಟ್ಟುವರಂ ಕಂಡು ತಾನುಮವರ ಕೆಲದೊಳ್ ಕುಳ್ಳಿರ್ದು ನೂಲಿನಗ್ರ ಗ್ರಂಥಿಮ [1][ವೇಢಿಮ][1] ವೇಥಿಮ ಸಂಪೂರಿ[2][ಮ ಸಂಘಾಯಿಮ][2]ಮೆಂಬಯ್ದುಂ ತೆಱದ ಪುಷ್ಪಮಾಲೆಗಳಂ ಸಮೆದಾಗಳ್ ಮಾಲೆಗಾಱರ ಕೂಸುಗಳ್ ಚೋದ್ಯಂಬಟ್ಟು ಪುಷ್ಪದ ಬಂಧದೊಳ್ಪುಮನಾ ಕುಮಾರನೊಳ್ಪುಮುಂ ನಮ್ಮರಸನ ಮಕ್ಕಳ್ಗೆ ತೋರ್ಪೆಮೆಂದು ಪೇಳಂಗೊಂಡಾತನನೊಡಗೊಂಡು ಪೋಗಿ ವಿಜಯೆಗಂ ಜಯಸೇನೆಗಂ ತೋಱಿದಾಗಳ್

ಕಂ॥ ಕುಸುಮಮಾಲೆಗಳೊಳ್ಪಂ
ಕುಸುಮಾಸ್ತ್ರೋಪಮ ಕುಮಾರನಾಕೃತಿಯೊ[3][ಳ್ಪಂ][3]
ಕುಸುಮಶರಂಗಳ್ ಮಾಡಿಯೆ
ಕುಸುಮಾಸ್ತ್ರೇಕ್ಷಣೆಯರಿರ್ದೆಯನುರ್ಚಿಸುತಿರ್ದಂ ೩೦

ವ॥ ಅಂತವರ್ ತಂದ ಕುಸುಮಮಾಲೆಯುಮುಂ ಕುಮಾರನಾಕಾರಮುಂ ಮನಂಗೊಳೆ ಪೇೞಿಸನಾರ್ ಸಮೆದರೆಂದೊಡೆಮ್ಮ ಮಾವನ ಮಗನೀತಂ ಸಮೆದನೆಂದೊಡಲ್ಲನೀತನೆಮ್ಮ ಮಾವನ ಮಗನಂತಾಗಿರ್ಕುಮೆಂದು ಮನದೊಳೆ ಬಗೆದೀತಂಗಂ ನಿಮಗಂ ನಾವೆಲ್ಲಮಿರ್ದು ಮನುಷ್ಯಂ ಮಾಡಿದಪ್ಪುದನ್ನೆಗಂ ಪೋಗಲೀಯದಿರಿಮೆಂದು ತಮ್ಮ ಸ್ವಯಂಬರದ ದಿನಮನೆ ಪಾರುತಿರ್ದರನ್ನೆಗಮಾಗಳ್ ಗೋಸನೆವಿಡಿ[4][ಯಲಾ][4]ಗಳ್ ಪೊೞಲೆಲ್ಲಾ ಕೈಗೆಯ್ದು ಮಹಾವಿಭೂತಿಗಳಿಂ ಬಂದು ತಂತಮ್ಮ ಚೌಪಳಿಕೆಗಳ ಮೇಲೆ ಲೀಲೆಯಿಂ ದಿರ್ದಿರಿರ್ಪಿನಮಾ ಕುಮಾರಿಯುಮಂ ಕಯ್ಗೆಯ್ದು ಸ್ವಯಂಬರಶಾಲೆಯಂ ಪೊಕ್ಕುಚಿತ ಸ್ಥಾನದೊಳಿರ್ಪಿರಿತ್ತ ವಸುದೇವಂ ಕುಸುಮಸಾಯಕಸಹಾಯನಾಗಿ ಬಂದು ಪಲರುಂ

1 ಮನೇಯಿಮ 2 ಮ 3 ಳ್ಪಂ 4 ಯೆಮಾ

ರಾಜಕುಮಾರರ ನಡುವಿರ್ದನಾಗಳ್ ವಿಜಯರಂಗದ ನಡುವೆ ವೀಣೆಯಂ ಮುಂದಿಟ್ಟು ಕುಳ್ಳಿರೆ ಜಯಸೇನೆ ಜನನಿಕೆಯೊಳಿರೆ ರಂಗೋಪಕಂಠ[1][ವ][1] ಬೞಿಯುಂ ವಿಳಾಸಿನೀಜನಮಿರೆ ನಾಟ್ಯಗೀತಕಳಾಕುಶಲರೆಲ್ಲಮರಸನ ಕೆಲದೊಳಿರೆ ಪಲವುಂ ದೇಶಾಧೀಶಕುಮಾರರ ನಡುವಣಿಂ ವಸುದೇವಕುಮಾರಂ

ಕಂ॥ ಉಪಮಾತೀತಂ ವಿದ್ಯಾ
ನಿಪುಣತೆ ರೂಪಿ[2][ದುಮಭಿನವ ಜವ್ವನಮಿಂದೀ][2]
ನೃಪಕನ್ನೆಯರ್ಗಮದಱಿಂ
[3][ದ][3]ಪಮಾನಂ ಪೊರ್ದೆ ಗೆಲ್ವೆನೆಂದವಯವದಿಂ ೩೧

ವ॥ ಬಂದು ಪಾದಪ ಸಂದನರ್ಕಳುಂ ತನಗೆ ಸಹಾಯಮಾಗಿ ರಂಗಮುಂ ಪುಗೆ ಕುಮಾರನ ಭದ್ರಾಕಾರಮುಮಂ ತೇಜಮುಮಂ ಕಂಡು ಭದ್ರಾಸನಮನಿಕ್ಕೆ ವಿಳಾಸದಿಂ ಕುಳ್ಳಿರ್ದಾಗಳ್ ವಿಜಯವೀಣೆಯಂ ಕೊಂಡು ಮೇಳಮಂ [4][ಮು][4]ಱಿದು ತಂತ್ರಿಯಂ ಬಿಗಿದುರದೊಳ್ ಸಾರ್ಚಿ ಮಿಡಿದುನೋಡಿ ಮನಂಗೊಂಡು ಮೃದುಮಧುರ ಧ್ವನಿಗಳೊಳೆಸೆಯೆ ಬಾಜಿಸಿದೊಡಾ ಸಭಾಸದರಾರುಮೀಕೆಯನೀ ವಿದ್ಯೆಯಿಂ ಗೆಲ್ವನ್ನನೊಳನಪ್ಪಡೆ ಬಪ್ಪುದೆನೆ ವಸುದೇವಂ ನಾಮಿನಿಸಾನುಮೆನ್ನ ಗೀತಕಳಾಭ್ಯಾಸಮಂ ತೋರ್ಪೆನೆಂದು ವಿಜಯಿಯ ಮನಮನಿರ್ಕುಳಿಗೊಳ್ವಂತಾಕೆಯ ಕೈಯೊಳಿರ್ದ ವೀಣೆಯಂ ಕೊಂಡು ಮುನ್ನಂ ಸರಸ್ವತಿ ಗ್ರಾಮ ಶ್ರುತಿ ಮೂರ್ಚನೆ ಆಸನಂ ಸ್ಥಾನ ವೃತ್ತಿ ಶುಷ್ಕ ಸಾಧಾರಣ ಜಾತಿ ವರ್ಣ ಅಳಂಕಾರಮೆಂಬೀ ದ್ವಾದಶವಿಧಮಪ್ಪ ಸ್ವರಗತದೊಳಂ ನಾಮಾಖ್ಯಾತ ಉಪಸರ್ಗ ನಿಪಾತ ತದ್ಧಿತ ಸಮಾಸ ಕೃತ್ಯೋಪೇತ ವ್ಯಾಕರಣ ಸಿದ್ಧಾಂತಾದಿ ಪರಿಕಲ್ಪಿತ ವಿಧಾನಕ್ಕನುವಿರುದ್ಧಮಪ್ಪ ಪದಗತದೊಳಂ ಬಹುಲಮಪ್ಪುದಂ ವೀಣಾಶರೀರಮೆಂಬೆರಡಱೊಳಂ ತೋಱಿ

ಚಂ॥ ಶ್ರುತಿ ಪವಣಾಗೆ ನುಣ್ಪುವಡೆದಿಂಪೊದವುತ್ತಿರೆ ತೀವಿ ನಿಂದಳಂ
ಕೃತಕರಮೊಪ್ಪೆ ಕೋಮಳಿಕೆ [5][ತಳ್ತಿಸೆ][5]ಪೊಂದಿರೆ ನಾಡೆಯುಂ ಪ್ರಸ
ನ್ನತೆ ಕರರಾಗಮಾಗೆ ಸಭೆ ಚಿಕ್ಕಸಮಾಗೆ ಮನೋಜಜಾಣ ಸಂ
ಹತಿಯವೊಲಾಗೆ ಕನ್ನೆಯನುರುಳ್ಚಿರೆ ಕೊಂಡುದು ಗೀತನಿಸ್ವನಂ ೩೨

ವ॥ ಆತನುಂ ಪ್ರಾಶ್ನಿಕರಾಗಿರ್ದ ವಿಶ್ವಾವಸು ತುಂಬುರ ನಾರದರ್ಕಳನ್ನರಪ್ಪ ಗಂಧರ್ವನಿಪುಣಾಚಾರ್ಯರೆಲ್ಲಮೊಂದೆ ಸರದೊಳ್ ಪೊಗಳೆ ಕನ್ನೆ ತನ್ನ ಪರಿಚಾರಕಿಯ ಕೈಯೊಳಿರ್ದ ಕುಸುಮಮಾಲೆಯಂ ಕೊಂಡು ವಸುದೇವನ ಕೊರಳೊಳಿಕ್ಕಿದಾಗಳೊಸಗೆವಱೆ

1 ದ 2 ದಮಭಿನವಂ ಜೌವನವಿ 3 ದವರ್ಗ 4 ಮ 5 ತಳಿಸಂ

ಪ್ರೊಯ್ದು ನಲ್ಲಿಂಬಟಿಯುಂ ಜಯಸೇನೆ ರಂಗಮಂಬೊಕ್ಕು ಚಲ್ಲಣಮುಂ ತುಡುವುದು ಮಿಾಕೆಯುಂ ಗೆಲ್ವರೊಳರಪ್ಪೊಡೆ ಬನ್ನಿಮೆಂಬಃದುಮದುವನಾಂ ನೋಟಪ್ಪೆನೆಂದ ಕುಮಾರಂಗೆ ಪೇಳಿಸನುನಿಂಬುಮಾಡಿ ನಟ್ಟವಿರ್ದರುವಂಗರುಂ ನಾಣರುಂ ಶ್ರುತ್ಯಾವಧಾರಣೋಪೇತ ರಾಗಿರ್ದರುವ ... ಕ್ರಮಾಪೇಕ್ಷೆಯೊಳೊಂದು ಜೆಸೆಯುಂ ಪಿಡಿದಿರ್ದಂ ಮತ್ತಮನೇಕಾ ತೋದ್ಯವಾದ್ಯಕಾಜರುಮೋಸರಿಸಿರ್ದು ಸಮಹಸ್ತಮುಂ ಪಿಡಿಮ ಪಾತ್ರಮುಂ ಬರವೇಳೆ ಜವನಿಕೆಯುಂ ತೆ[1][ಗೆಯಲ್][1]

ಕಂ॥ ಸದಭಿಸು[2][ತನಾಟ್ಯ][2]ವಿದ್ಯಾ
ಮದಸ್ವರಪ್ಪವರನಿಂತಡಂಗೊತ್ತುವೆನೆಂ
ಬುದನೊಸೆದಭಿನಯಿಪಂತೊ
ತ್ತಿದ ಬಾಸಣಿಪೊ[3][ಪ್ಪಿ][3] ರಂಗಮಂ ಪುಗುತಂದಳ್ ೩೩

ವ॥ ಅಂತು ಜಯಸೇನೆ ರಂಗಂಬೊಕ್ಕು ಪುಷ್ಪಾಂಜಲಿಗೆಯ್ದು ಅಷ್ಟಾಧಿಕ ವಿಂ[4][ಶ]ತ್ಯುತ್ತರ ಶತಸಂಖ್ಯಾತ ಹಸ್ತಕ್ರಿಯಾನುಗತಮಾಗಂಗುಲಿ ವಿಳಾಸಾಭಿನಯ ಪೂರ್ವಕಂ ತ್ರಿಪತಾಕೋರ್ಧ್ವಮುಖಾ[5][ದ್ಯರ್ಧ][5] ಯಮಕಾದಿ ನೃತ್ಯಮೊಳಾವುದನಾಡಿ ತೋರ್ಪೆನೆಸಿ ನಿಸ್ನ ಮೆಚ್ಚುವುದನಾಡೆಂಬುದುವಾಗಳುತ್ಕ್ಷೇಪಣಾಕುಂಚನ ಪ್ರಸಾರಣ ಮನೋಭ್ರಮಣ ಜಾನಸ ಸ್ಪಂದನ ನಮನೋನ್ನಮನ ಸ್ಥಿತಾಚಳಿತ ಪ್ರಚಳಿತ ಕ್ರಾಂತಾ ಪಕ್ರಾಂತ ಕ್ಷಿ[6][ಪ್ತ][6]ಕಕ್ರಿಯಾವಿಶೇಷಮಾಗೆ ಪತಾಕಾ ತ್ರಿಪತಾಕಾ ಕ[7][ರ್ತರೀ][7]ಮುಖ ಅರ್ಧಚಂದ್ರಕಳಾ ಶುಕತುಂಡಾದಿ ಸನಾಸದಭಿನಯಪ್ರಯೋಗ ಸುಭಗಮಾಗೆ ನಾಟ್ಯಾಂಗಮೆಲ್ಲಮುಂ ತೋರ್ಜುದಾಗಳ್ ಸಭಾಸದರಂಗುಲಿಸ್ಫೋಟನಪೂರ್ವಕಮುದ್ಭೂತ ಕುತೂಹಳಮನೋಹರರಾಗಿರ್ದಿರ್ಪೆಂ ಚೋದ್ಯಮೆನುತ್ತಂ

ಚಂ॥ ಈಗಳ್ ಮಾನಸರಾರೊ ನರ್ತನಕಳಾಸಮ್ಯಕ್ಸಮಾಧಾನಸಂ
ಯೋಗಭ್ರಾಜಿತರಿನ್ನರೆಂದು ಪಲವುಂ ನಾಟ್ಯಾಂಗಮುಂ ಬಲ್ಲರಿ
ದಾರ್[8][ಗಳ್ ನ]ರ್ತಿಸೆ ಕನ್ನೆ ಸೋಲ್ತು ನಯದಿಂ[9][ತಾನಂದು ನಿಶ್ಚೈಸಿ][9]ಸ
ದ್ಭೋಗಕ್ಕೀತನೆ ತಕ್ಕನೆಂದು ಕೊರಳೊಳ್ ತಂದಿಕ್ಕಿದಳ್ ಮಾಲೆಯುಂ ೩೪

ವ॥ ಅಂತಿರ್ದರುಮನೊಂದೆ ರಂಗದೊಳ್ ಗೆಲ್ದ ವಸುದೇವನಂ ಜಿತಶತ್ರು ಮಹಾರಾಜಂ ತನ್ನರಮನೆಗೊಡಗೊಂಡು ಪೋಗಿ ಶುಭಲಗ್ನದೊಳ್ ಮಹಾವಿಭೂತಿ ಯಿಂನಿರ್ಪರ್ ಕನ್ನೆಯರುಮನೆರಡುಂ ಕೆಲದೊಳನೊಂದೆ ಪಸೆಯೊಳಿರಿಸಿ ಪ್ರಾಣಿಗ್ರಹಣಂ

1 ಗೆ 2 ತ 3 ಪ್ಪಿಕರಂ ಬಂದು 4 ದ 5 ರ್ಧಾರ್ಧ 6 ಪ್ರ 7 ತ್ತರಿ
8 ಗ 9 ತಾ

ಗೆಯ್ದು ತನ್ನರ್ಧರಾಜ್ಯಮುಂ ಬಳಿಯವಳಿಗೊಟ್ಟು ಪರಸಿ ಸೇಸೆಯನಿಕ್ಕಿದೊಡಂತವರೊಳ್ ಕೂಡಿ ಪಲದಿವಸಮಿರ್ದನಂತಿರ್ಪಿನಂ ವಿಜಯೆಗೆ ಗರ್ಭೋತ್ಪತ್ತಿಯಾಗಿ ಮಗನಂ ಪೆತ್ತಾ ಗಳಾತಂಗೆ ಕ್ರೂರನೆಂಬ ಪೆಸರನಿಟ್ಟನೂನೋತ್ಸಾಹದಿನಿರೆ ವಿಜಯೆಯೊಂದು ದಿವಸ ಮೇಕಾಂತದೊಳಿಂತೆಂದಳ್

ಇನ್ನಪ್ಪುದು ಪತಿ ಪೇೞಿಲ್
ನಿನ್ನಂದಂ ವಿಪ್ರನಂದಮಲ್ತಣಮವನೀ
ಶೋನ್ನತವಂಶಜನಂದಮಿ
ದಂ ನೆಟ್ಟನೆ ತಿಳಿಯೆ ಪೇೞು ಮನಗೆನೆ ಪೇೞ್ಗುಂ ೩೫

ವ॥ ಆಂ ಕಿಱಿಯಂದಿಂತೊಟ್ಟು ರಾಜಪುತ್ರರ ಸಂಗತ್ಯದೆ ಬೆಳೆದೆನಪ್ಪುದಱಿಂ ರಾಜಕುಮಾರಾಕಾರನಾಗಿರ್ಪೆನೆಂದಳೀಕವ್ಯಾಜದಿಂ ನಂಬಿಸಿ ಸುಖಸಂಕಥಾವಿನೋದ ದೊಳ್ ಪಲವುಕಾಲಮಿರೆಯಿರೆ

ಕಂ॥ ಇಂತು ವಸುದೇವನನುಪಮ
ಕಾಂತೆಯೊಡನಿರ್ದು ಕೆಲವು ದಿವಸದಿನಾನೇ
ಕಿಂತೀ ಪೆಂಡಿರ ವಶ[1][ನಾ
ಗಿಂತಿರ್ಪೆನೊ][1] ಹೀನಪುರುಷರಿರವಿನ ತೆಱದಿಂ ೩೬

ಮ॥ ಪುರುಷಂಗೊಪ್ಪಿರೆ ತನ್ನ ಬಾಹುಬಲದಿಂದಾಮೊಂದು ಕಾಲ್ಬೀಸಮುಂ
ದೊರೆ ಚಃ ಪೂರ್ವಿನ ಸನ್ನೆಯಿಂ ಜವಯಸಂಗೆಯ್ದೊಳ್ಪುಗೆಟ್ಟಿತ್ತು ಸಾ
ಗರ ಪರ್ಯಂತ ಮಹಾಧರಿತ್ರಿ ದೊರೆಯೇ ವಿಕ್ರಾಂತಮುಂ ಕುಂದಿಸಿ
ಟ್ಟರವಿಂಪೇನೆಸೆಗುಂ ಪರೋಪಹಿತಮುಪ್ಪೌದಾರ್ಯಮುಂ ಶೌರ್ಯಮುಂ ೩೭

ವ॥ ಎಂದು ಬಗೆದೆನಗುಳ್ಳ ಪುಣ್ಯದಳವುಮಂ ದೋರ್ವಲದಗುರ್ವುಮನೇಕಾಕಿ ಯಾಗಿ ತೊೞಲ್ದೊಡಲ್ಲದಱಿಯಲ್ ಬಾರದೆಂದು ಪೋಗಲ್ ಬಗೆದಿರ್ದರ್ ಪೆಂಡಿರುಮನ ಱಿಯಲೀಯದೆ ನಿಮಗಸೋಘಂ ಬೞಿಯನಟ್ಟುವೆನೆಂದು ತನ್ನ ಪೆಜ್ಜೆಮನೆಯ ನಾಗ ವೇದಿಕೆಯೊಳ್ ಕಾಣಲಪ್ಪೆಡೆಯೊಳ್ ಬರದು ಪೋಗಲಿಂ ಪೊಱಮಟ್ಟೊರ್ವನೆ ಪಯಣಂ ಬೋಗಿ ನಾಡೆಯಂತರಮುಂ ಪೋಪುದುಂ ಬೆಳಗಪ್ಪಾಗಳ್

1 ದವನಾಗಿರ್ಪೆನೊ ಚಃ

ಉ॥ ಪೂಗಳೊಳೊಲ್ದು ಕೆಂದಳಿರ್ಗಳೆಚ್ಚಱೆ ಪಂಕರುಹೋತ್ಕರಂ ಕರಂ
ರಾಗದಿನಾಗಳುಳ್ಳಲರೆ ಮನ್ಮಥತಾಪದ ಜಕ್ಕವಕ್ಕಿ ಸಂ
ಯೋಗವಿಮೋಹದಿಂದೊಸೆದು ಬೀಗೆ ದಿಗಂತರದೊಳ್ ತಮೋಮಯಂ
[1][ಪೋಗಿ][1] ಪೞಿಚ್ಚನಾಗೆ ರವಿ ಬಂದುದಯಾದ್ರಿಯೊಳೊಪ್ಪಿ ತೋಱಿದಂ ೩೮

ವ॥ ಅಂತು ನೇಸಱ್ ಮೂಡಿದಾಗಳೊಂದು ಮಹಾರಣ್ಯಮನೆಯ್ದಿ ನೋೞ್ಪನಲ್ಲಿ
ಮಹೇಶ್ವರಾಲಯದಂತೆ ಗೊರವು ಮನೆಗಳಂತೆ ಕೇರು ಬಿತ್ತುವ ಕೆಯ್ಗಳಂತಾಸು ಅಳಿ
ಮಾನಸನ ಬಗೆಯಂತೆ ಬಿಲ್ಲು ತಣಿಯುಂಡನಂತೆ ತೇಗು ಬಟ್ಟೆಡುವೆಡೆಯಂತೆ ಬಿಳಿಲು
ಹೊಱಸಿನಂತೆಕ್ಕೆ ಕಮ್ಮಿತ್ರರಂತೆ ಬೇಳಂ ಭೂಮಿ ಪರ್ವದಂತೆ ಸೀಗೆ ಪುಟ್ಟಿಯನಳವನಂತೆ
ವೊಳಗೆ ಕುರುಕಲ್ಕಿಕ್ಕುವ ಪಯಣದಂತಿರ್ವೀಡು ನೃತ್ತದಂತೆ ತಾಳ ಚಿಂತಿಸದೆ ಪೇೞ್ದ
ಕಬ್ಬದಂತಾಸು ಪ್ರಿಯದೊಳ್ ಕರೆವರಂತೆ ಬನ್ನಿ ಒಕ್ಕಲುದುಡಿಗೆಯಂತೆ ತಾಳಿ ಕೂರಿಗೆ
ಯೊಳ್ ಬಿತ್ತಿದನಂತೆ ಸಾಲು ಮಿಾಂಗುಲಿಗನಂತೆ ಜಾಲ ಸಾಲಿಗನಂತೆ ಬೇವು ಮತ್ತ
ಮೆನಿತಾದುಂ ತೆಱಿವ ಮರದುಱುಗಲ್ಗಳೊಳಗೆ ಸುೞಿವ ಕರುಮಾಡದಂತೆ ಮತ್ತವಾರಣಂ
ನೇಮಿಚರಿತಪ್ರಧಾನಪುರುಷನಂತೆ ಹರಿ ವೃಕ್ಷಜಾತಿಯಂತೆ ಕಡವು ಸೂಳೆಯ ಮುಡಿ
ಯಂತೆ ಚಮರಿ ಪ್ರಸಾದದಂತೆ ನಿಕರ ರಾಮರಪಡೆಯಂತೆ ಕಪಿ ಕಾಕೋರ್ಳಿಯಂತೆ
ಪುಲ್ಲೆ ಕೈಲಾಸದಂತಷ್ಟಾಪದ ಪಲರ್ ನೆರೆದು ಸೆಱೆವಿಡಿದಂತೆ ಪೆರ್ವಂದಿ ನಾರಾಯಣನ
ಬಿಲ್ಲಂತೆ ಸಾರಂಗ ಮತ್ತಮಂತೆ ಪಲವು ತೆಱದ ಸಮೂಹದಿಂ ದುರ್ಯೋಧನವಾಡಿಯಂತೆ
ಕೀಜೆಗ ಜಾನಮೋತನಂತೆಱಿಗಂ ಪಾಱುವೆಂಡತಿಯಂತೆ ಪೊಱಸು ಬಡಗಿಯಂತೆ ಮರ
ಕುಟಿಗಂ ಬುದ್ಧಿಗೆಟ್ಟಳಂತೆ ಮರಳಿ ಸುಳ್ಳಿಪಂದನೆ ರವಿಯಂತೆ ಬಱುಳಿ ಸುಗ್ರೀವನ ಪೊೞ
ಲಂತೆ ಕಿಷ್ಕಿಂಧ ನಾಲಗೆಗೆಟ್ಟಾಕೆಯಂತೆ ಮೂಗಿ ನೆರನುಳ್ಳಂ ಪ್ರಿಯಂಗೆಯ್ವಂತೆ ಪಂಗಾಗೆ
ಮುಳಿದು ನೋೞ್ಪನಂತೆ ಕೆಂಗಣ್ಣ ಜಲಗಾಱನಂತೆ ಮಿಾಂಗುಲಿ ಬೈಕಂಗೊಂಡೋಲಗಿಸು
ವನಂತೆ ಕಪ್ಪಡಿ ದ್ರುಪದ ಪುತ್ರನಂತೆ ಶಿಖಂಡಿ ಕೂಸುಗಳ ಕೈಯ ಪಾಸೆಯಂತೆ ಕೊಟ್ಟುಕ
ನೆಂದಿಂತುಮನೇಕ ಪಕ್ಷಿಜಾತಿಗಳಿಂ ತೆಕ್ಕನೆ ತೀವಿದ ಪೞುವಂ ಪೊಲ್ಲಮಾನಸರ್ಗೊಡ್ಡಿದ
ದಿವ್ಯದಂತೆ ಕೞಿದು ಪೋಗಲರಿದಪ್ಪುದಱಿಂ ವಿಶ್ರಮಿಪ ಬಗೆಯಿಂ ಬಪ್ಪೊಂ

ಮಂದಾನಿಲ ರಗಳೆ॥

ಕೊಳರ್ವಕ್ಕಿಯ ಸೊಗಯಿಪ ಮೆಲ್ಲುಲಿಯಿಂ
ಪೊಳೆವಾಡುವ ತೋಯಚರಾವಳಿಯಿಂ
ವಿಸರುಹದ ಪಸುರ್ತೊಲಗದ ನನೆಯಿಂ
ಪಸು[2][ರಿನಿಸಿನಿ][2]ಸಾಡಿದ ಬಲ್ಲನೆಯಿಂ

1 ಕೂಡೆ 2 ರಿನಿ

ಬಿ[1][ರಿದಿ][1]ರ್ದನೆ ತಾನುಂ ಬಲ್ಮುಗುಳಿಂ
ಬಿರಿಯಲ್ಕೊಡನೊಡರಿಪ ಬಿರಿಮುಗುಳಿಂ
ಪೆಸೆದೊಯ್ಯನೆ ತೆಱತೆದೆಸೆವುಳ್ಳಲರಿಂ
ಪೊಸಗುಂಪಿಂ ಪಸರಿಸುವಲರ್ದಲರಿಂ
[2][ಪೊ][2]ಸೆದೊದವಿದ ಕಂಪಿನ ಸ್ಪುದುರಜದಿಂ
ನಲಿದಲ್ಲಿಯೆ ಮುಸುರಿಪ್ಪಳಿವ್ರಜದಿಂ
ದೆಸೆದೆಲೆಗಳ ಪಸುರೆಸೆದಿರ್ದೆಲೆಯಿಂ
ಕಳಹಂಸೆಗಳೊಪ್ಪುವ ಮೆಲ್ನಡೆಯಿಂ
ಬಳಸಿರ್ದ ತಮಾಳದ ತಣ್ನೆೞಲಿಂ
ಪಳವಲ್ಲದೆ ಕೋಡುವ ನು[3][ಣ್ಬು][3]ೞಲಿಂ
ಗಭಿಮತನಿಂತು ಮನೋಹರ ವನಮುಂ
ಪ್ರಭುಕಂಡನಪೂರ್ವ ಸರೋವರಮುಂ ೩೯

ಕಂ॥ ಕಂಡಾ ಕೊಳದೊಳ್ಪು ಮನಂ
ಗೊಂಡಿರೆ ಪೊಕ್ಕಲ್ಲಿ ಪಾದಶುದ್ಧಿಯನಾಗಳ್
ದಂಡಿತದಿನೋದಿ ವಿಳಸನ
ಖಂಡಿತ ಗುಣಸುತ್ತ್ರರಾಭಿಮುಖದೊಳ್ ನಿಂದಂ ೪೦

ವ॥ ಅಂತು ಜಿನೇಶ್ವರನುಂ ಚತುರ್ಭಕ್ತಿಪ್ರೂರ್ವಕಂ ಸ್ತುತಿಯಿಸಿಯಾ ವನದೊಳೊಂದಶೋಕವೃಕ್ಷದ ತಣ್ನೆೞಲೊಳ್ ಕುಳ್ಳಿರ್ದು ಪಥಪರಿಶ್ರಮಮನಾಱಿಂದಿಂ ಬೞಿಯುಂ ಮತ್ತ್ರಮಂತೆ ಪಯಣಂಬೋಪನೊಂದೆಡೆಯೊಳ್

ತರಳ॥ ಕರಿಯ ಪೆ[4][ರ್ಯ್ ಸೆರೆಯೆರ್ದ][4] ಕೈ ಮುಂದಿರ್ದ ಬಾಯ್ ಕವಿಲಪ್ಪ ಕ
ಣ್ಣೆರ[5][ಳ್ಗಳ್][5] ಮುಱಿಂದಿರ್ದ ಕಾಲ್ ನಳಿ ಮೂಗು ಪುಟ್ಟದ [6][ಪ್ರು][6]ರ್ಬು ಕೇ
ಸುರಿಯ ಮೊಳೆಯ ಕೇಶಮೆಂಬಿವು ತಮ್ಮೊಳೊಂದಿರೆ ನಾರಕರ್
ನರಕದಿಂ ಪೊಱಮಟ್ಟು ಬರ್ಪವೊಲಾಗೆ ಬರ್ಪ ಕಿರಾತರಂ ೪೧

ವ॥ ಅವರ ಪೆಱಗೆ ತಳಿರ್ಗನಸುಟ್ಟು ಸನೆಯೊಳಂ ಮುಗುಳೊಳಂ ಗುರುಗುಂಜೆಯೊಳವೊಡಂಬಡೆ ಮಾಡಿದಾಭರಣಂಗಳಂ ತೊಟ್ಟು ನೆಯ್ದಿಲಪೂವನವತಂಸನಿಟ್ಟು ಬೆಡಂಗೊಡಂಬಡೆ ಪೋಪ ಪುಳಿಂದಿಯರಂ ಕಂಡು

1 ಡಿರ್ದ 3 ದ್ಯೊ 3 ಳ್ಪು 4 ಯಿಸಿರೆ 5 ಳಿವಲು 6 ಪ

ಮ॥ ಮಿಳಿರೊಪ್ಪಿರ್ದ ಕುರುಳ್ ಪೊದಟ್ಟು ಬೆಳರ್ವಾಯ್ಗಿಂಪೆಯ್ದೆ ಪರ್ವಿರ್ದ ಕಣ್
ನಳಿತೋಳ್ ಪೆರ್ಮೊಲೆ ದೊಡ್ಡಿತಪ್ಪ ಜಘನಂ ನುಣ್ಪಿಂ ಕರಂ ನಣ್ಪುಗೊಂ
ಡೊಳಕೆಯ್ದುಳ್ದೊ[1][ಡೆ][1] ಪಿಲ್ಲಿಸಪ್ಪಡಿ ಮಸಂಗೊಳ್ವೊಂದು ಕೆಯ್ತ್ತಂ ಬಿಡಂ
ಗಮರ್ದಿರ್ದೊಪ್ಪಿನಮಂ ವಿಘಾತ್ರಸಿಪರೊಳ್ ಕೂಡಲ್ಕಿದೇಂ ತಕ್ಕುದೇ (?) ೪೨

ವ॥ ಎನುತಮಂತೆ ಕಿಱುದಂತರನುಂ ಪೋಪಾಗಳ್ ಬೆಟ್ಟುಗಳೊಳೊಗೆದ ಕೋಡುಂಗಲ್ಲ ತಣ್ಪುಮಂ ಕೆಲದೊಳ್ ಪರಿವ ತೊಱೆಯ ಮಣಲ ದಿಂಟಿಗಳ ನುಣ್ಪುಮಂ ಮೇಲಕ್ಕೊಗೆದ ಪೆರ್ಮರಂಗಳ ನೆೞಲ ತಣ್ಪುಮಂ ತಂದಿರ್ದೆನತಿಶಯಮೋ ಹಸ್ತಿಸಂಭವನ ಪ್ರದೇಶಮಂತೆಂದು ಬಗೆಯುತ್ತಂ ಬರ್ಪೊನಂ ಕೆಲದೊಳೊಂದು ಗಜಯೂಥಮಂ ಕಂಡು ನೋಡುತ್ತುಮಲ್ಲಿಂದೊಂದಾನೆಯಿರ್ದವಸ್ಥಾಂತರಮನಱಿದು ತನ್ನೊಳಿಂತೆಂದಂ

ಕಂ॥ ಪದವಿಡಿಯನಱಿಸಿ ಪಾಱಿ
ಯ್ಸಿದಪುದು ಕರಿ ಪೆಱಪನೊಲ್ಲದುದು ತಾಂ ಮೃಗಮೋ
ಪದನಱಿಯದಂತೆ ಮೃಗಂ ಪ
[2][ರಿದು][2] ದ.ಗರ್ಂಬೊಕ್ಕಡಮದೆ ಪಱುಪಿದು ಪಱುಪೇ ೪೩

ವ॥ ಎಂದು ತನಗೆತಾನೆ ನಿಸ್ಸಹಾಯನಪ್ಪದಱಿಂ ತನ್ನೊಳ್ ನುಡಿಯುತ್ತಂ ಬರ್ಪಾಗಳ್ ಮತ್ತೊಂದೆಡೆಯೊಳೊಂದು ಭದ್ರಗಜಂ ನಾಡೆ ಗೆಂಟಿರೊಳಿರ್ದುದದಱುಗ್ರ ಭಾವಮನಱಿದಿಂತೆಂದಂ

ಕಂ॥ ಬಂಧ ಕಳಂಕೋದಯ ವಿಷ
ಯಾಂಧಂ ಕೆಟ್ಟೊರ್ವನಿರ್ದವೊಲ್ ಜಾತೀಸಂ
ಬಂಧವಿದೂರಂ ವಿಚಕಿಳ
ಬಂಧ ಮಹಾಗಂಧ ಸಿಂಧುರಂ ತಾನಕ್ಕುಂ ೪೪

ವ॥ ಎಂದು ಮತ್ತಮಲ್ಲಿಂ ತೆಱರ್ದು ಪೋಪನೊಂದಾನೆ ನಡೆಯಲಱಿಯದೆ ನಿಂದುದಂ ಕಂಡು ಭಯರಸದಿನಿರ್ದುದೆಂದು

ಮ॥ ಕರಿಪನ್ನೊಂದು ಮಹಾಭ್ರಮಂ ದಿಗಿಭಮೆಂಬಾಶಂಕೆಯಿಂ ತಾನೆ ನಿ
ರ್ಜರನಾಗಿರ್ಪುದು ತನ್ನ ಮೆಯ್ಯಱಿಯದಂತಪ್ಪೊಂದು ಸೊಕ್ಕಿಂ ತಗು
ಳ್ದಿರೆ ತಾಂ ನೆಗ್ಗಿಲ ಮುಳ್ಗೆ ಬೆಚ್ಚಿದಪುದಂತೆಂತಪ್ಪ ಬಲ್ಲಾಳ್ಗಳ
ಪ್ಪುರುಮುತ್ತಂತ ಮದಾಂಧರಾದರ್ಗಳಂತೇನೂನಮಂ ನೋಡುದೇ ೪೫

1 ಪ 2 ರ

ವ॥ ಅದಱಿಂ ಪಿರಿದಪ್ಪ ಮಿಪ್ಸ್ಯಂ ಪಡೆವಲ್ಲಿ ಪ್ರಯೋಜನನಿಲ್ಲ[1][ಮೆಂ][1]ದಱಿದು ನಡೆವನಲ್ಲಿತ್ತೀಕಜ್ಜಮೆಂದಲ್ಲಿಂದಂ ಪ್ರೋಪನೊಂದೆಡೆಯೊಳ್

ಮ॥ ಪಿಡಿ ನೀ[2][ರ್ಗಾಟಿಸಲೊಂ][2]ದಿಭೇಂದ್ರಮೊಡಗೊಂಡೆತ್ತಂ ತೊಱಲ್ತಂದು ನೀ
ರ್ನಡುವಾಗಿರ್ದುದಱಿಂ ಪರೀಕ್ಷಿಸಿ ಗಜಂ ಮುಂಪೊಕ್ಕು ಹಸ್ತಾಗ್ರದಿಂ
ಪಿಡಿಗಾ ನೀರನೆ ಸಿಕ್ಕಿ ನೀಡುತುಮಡುತರ್ಂತಂತೆ ಪೊಕ್ಕಿರ್ದಿಭಂ
ಮಡಿದತ್ತಕ್ಕಟ ತಮ್ಮ ಕೂರ್ತರೆಡರಂ ಕಂಡಾಮು[3][ಮ][3]ಳ್ಕಿಪ್ಪರೇ ೪೬

ಅಕ್ಕರ॥

ಪಿಡಿಯ ನೀರಱಿಕ್ಕೆಯಿನಿತಕ್ಕೆ ಮೃಗಜಾತಿಯಾಗಿರ್ದೀಯಾನೆಯುಮೆಲ್ಲಂ ತನ್ನಂ
ಬಗೆಯದೆ ಸತ್ತುದೆಂದಡೆ ಕೂರ್ತರೆಡರುಮಂ ಪೆಂಡಿ
ರೆಡರುಮಂ ತನ್ನಾಳ್ತ ಪೊಱೆತಾಳ್ದನೆಡರುಮಂ ಮಸುಗೆಯುಮಱಿದು
ಕಡೆಗಣಿಸುವರೆನುತಂ ಪ್ರೋಪನಾಯೆಡೆಯೊಳು ಮತ್ತೊಂದಾನೆಯುಂ ಕಂಡೂ(?) ೪೭

ಹರಿಣಿ॥

ವಿಪುಳವದನಂ ಸ್ಥೂಳಂ ದಂತಂ ಪೃಥೂದರಪೇಚಕಂ
ಕಪಿಳನಯನಂ ಲಂಬಂ ಮಾಂಸಂ ಬೃಹತ್ಪದಸಂಯುತಂ
ಚಪಳರಹಿತಂ ಸ್ವಾಂತಂ ಮೆಲ್ಲಿತ್ತು ಮೆಲ್ಲಿ[4][ತದಪ್ಪು][4]ದಾ
[5][ದ್ವಿಪಮಿದಱಿ][5]ದೇಂ ದೇವಪ್ರಖ್ಯಾತ ಜಾತಿಸಮುದ್ಭವಂ ೪೮

ವ॥ ಎಂತಂತೆ ನೋಟ್ಪಿನಾಯೆಡೆಯೊಳ್ ಜೀಗಂ ನಡೆವಾನೆಯುಂ ಕಂಡು

ಹರಿಣಿ॥

ಪದಸಮಿತಿಯುಂ ಹಸ್ತಂಗ್ರೀವಂಗಳುಂ ಕೃಶಮೊಪ್ಪೆ ದೊ
ಡ್ಡಿದಪು ನಯನಂ ಹ್ರಸ್ವಂ ತಾಳ್ವೋಷ್ಠಮುಂ ಹನುಸಂಕುಲಂ
ಮದನದ[6][ಡೆ ಕೇಶಾಲ್ಪಂ][6]ಸಂಕ್ಷಿಪ್ತಮಾಗುವ ಗುಜ್ಜುಮುಂ
ನಿಘವನ ಸಮುದ್ಭೂತಂ ನೂತಂ ಮೃಗಾನ್ವಯಸಿಂಧುರಂ ೪೯

ವ॥ ಎಂದುಮಲ್ಲಿಯೆ ಮತ್ತಂ ಪೆಱತೊಂದಾನೆಯುಂ ಕಂಡದಱಿಂದಮನುಪಲಕ್ಷಿಸಿ

1 ಮುಂ 2 ರಪಸಿಮುದೊಂ 3 ಮಾ 4 ತ್ತೊದಪ್ಪು 5 ಪುದೊಂದಿಭಮಿದಱಿ 6 ಶಾಲ್ಪ

ಹರಿಣಿ॥

ಉದರದಳವುಂ ಜಿಸ್ನುಂ ಮಂದಾಸ್ಯಯಾಕೃತಿಸನ್ನಿಭಂ
[1][ಪದ][1]ಸಮುದಯಂ ಭಾವಿಪ್ಪಾಗಳ್ ವ್ಯಣಕ್ತಿ ಸುಲಕ್ಷಣಂ
ವದನದ ತೆಱಂ ಭದ್ರಂ ಸಂಕೀರ್ಣಜಾತಿಯಿದೆಂದು [2][ಮ
ತ್ತ್ರದನೆ ನ][2]ಯದಿಂ ನೀಡುಂ ನೋಡುತ್ತಮಿರ್ದನಿಳಾಧಿಪಂ ೫೦

ವ॥ ಮತ್ತಮಲ್ಲಿ ಪಲವುಮಾನೆಗಳ ನಡುವೆ ಹರಿನೀಲಚ್ಛಾಯ ಮಹಾಕಾಯ ಮಹಾಸತ್ತ್ವೋತ್ತ್ರಮ ಗಜೇಂದ್ರಮಂ ಕಂಡು ಸಾರೆವಂದು ನೋಡಿ

ಹರಿಣಿ॥

ಅನತಿಕೃಶಲಂ ಸ್ಥೂಲಂ ಸಮ್ಯಗ್ವಿಭಕ್ತ ನಿಯುಕ್ತ ಸಂ
ಹನನಮುತಸುಗ್ರೀವಂ ವೃ[3][ತ್ತಂ][3]ಪರಾಂಘ್ರಿವಿರಾಜಿತಂ
ವನರುಪಚಿತಂ ವಂಶಂ ಮಧ್ವಾಭವಂತವಿಳೋಚನಂ
ವಿನುತನುಖಸಂಸ್ಕಾರಂ ತಾಂ ಭದ್ರಜಾತಿಯಿದೆಂಬುದಂ ೫೧

ವ॥ ಅದಱಿನೀ ಭದ್ರಗಜಮನೇಱಿ ಬಲ್ಲಣಿಯಮಪ್ಪುದಂ ತೋಱಿಪೊಡವಲ್ಲದೆನ್ನ ನಾರ್ ಮೆಚ್ಚುವರೆಂದಾ ಗಜೇಂದ್ರಕ್ಕೆ ಸಮ್ಮೋಱುವುದುಮಾ ಧ್ವನಿಗೇಳ್ದು ಕೋಪಾನಳನಿಂ ಕಣ್ಗಾಣದೆಪ್ಪೆಪ್ಪಾನೆಗಾಸೆಗೊಟ್ಟು ಪರಿದು ಪಱಿಯೊಳ್ ನಿಲ್ಲದೆ ಕಡುಮುಳಿ ದೆಯ್ದಿ ಪಿಡಿದು ಮೊಗಮಿಕ್ಕಿಮೊಡೆ ಪೊಳೆದು ಪೋಗಿ ಠಕ್ಕನಿಕ್ಕಿದಡೆ ನಿರ್ವರ್ತಿಸಿ ಕಳಿದು ಕಾಲುರ್ದಿಂಗೆ ಪೊರಳ್ದು ಭ್ರಮರಿ ಮೊದಲಾಗೊಡೆಯ ಕರಚಾರಂಗಳೊಳ್ ಪರಿಣತ ನಪ್ಪುದಱಿಂ ನಖದಂತಂಗಳ್ ತನ್ನನೆನಸುಂ ತಾಗಲೀಯದೆ ಕಱಿದು ಪೋಪುದುಮಾನೆ ಜವಜವನಾಗಿ ಜವಂಗೆಟ್ಟು ಸೇದೆವಟ್ಟು ಬೇಸತ್ತು ನಿಲೆ ಪತ್ತೆವಂದು ಲಂಘಿಸಿ ನೆಗೆದಗ್ರ ಪಲ್ಲವಮಂ ಪಿಡಿದು ಬೇಗಂ ಬರ್ಪಾಗಳಿರ್ವರ್ ವಿದ್ಯಾಧರಕುಮಾರರ್ ತೊಟ್ಟನೆಬಂದು ಕಂಡಿಂತೆಂಬರ್

ಕಂ॥ ಈ ಮುನಿಸಿನೊಳೀ ಕಾಯ್ಪಿನೊ
ಳೀ ಮದದುದ್ರೇಕದೊಳ್ ಜವಂಗೆಣೆಯಾಗಿ
ರ್ದೀ ಮಹನೀಯ ಗಜೇಂದ್ರಮ
ನೀ ಮಾಱಿಕ್ಕಂಪೊಳೀಱುವನ್ನನುನ್ನತನೊಳನೇ ೫೨

---

1 ಬಳ 2 ನ 3 ತ್ತಾಂತ

ವ॥ ಎಂದು ಪೊಗೞ್ದಂತಪ್ಪ ಮಹಾಪುರುಷನ್ನೆ ನೀನೆಮಗೆ ಆದೇಶಪುರುಷ ನಪ್ಪುದಱಿಂ ಬಿಜಯಂಗೆಯ್ಯೆಂಬುದುಮಾಸೆಯಿಂದಿಱಿದವರ್ಗೆ ಸವಿನಯಕ್ಕೆ ವಂದು ನೀಮಾರ್ಗೆ ನಿಮಿತ್ತದಿಂದಮಾ ಕಾನನದೊಳಗಿರ್ದರೆಂದೊಡವರಿಂತೆಂಬರಾಮುಂ ವಿದ್ಯಾ ಧರರ್ ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯ ನಿಕುಂಜರಾವರ್ತಮೆಂಬ ಪೊಳಲನಾ ಳ್ವಶನಿವೇಗನ ಮಗಳ್ ಶಾಲ್ಮಲಿದತ್ತೆಯೆಂಬಳೀ ಗಜೇಂದ್ರಮನಾವನಾನುಂ ವಶಂಮಾಡಿ ಕಾಲ್ಗೆಯ್ದು ಬರ್ಪನಾತಂಗಲ್ಲದೆ ಪೆಂಡತಿಯನಾಗೆನೆಂದಿರ್ಪ ದೇಶಾವಧಿಯನೆ ಮುನ್ನ ಮೊದಲ್ ಸುವರ್ಣಪರ್ವತದ ಚೈತ್ಯಾಲಯವಂದನಾ ಭಕ್ತಿ ನಿಮಿತ್ತಮಶನಿವೇಗಂ ಪೋಗಿರೆ ಸಾಗರಸೇನರೆಂಬ ಚಾರಣಋಷಿಯರ್ಕಳಂ ಕಂಡು ಬಲಗೊಂಡು ಪಂಚಮುಷ್ಟಿಯಿಂ ಬಂದಿಸಿ ಕುಳ್ಳಿರ್ದು ಧರ್ಮಕಥನಾನಂತರಮೆನ್ನ ಮಗಳ್ ಶಾಲ್ಮಲಿದತ್ತೆಗೆ ವರನಾವನಕ್ಕು ಮೆನೆ ವಿಂಧ್ಯಾಟವೀಪ್ರದೇಶದ ರಮ್ಯಕವನದೊಳ್ ಭೂಚರನೊರ್ವಂ ಮದಾಂಧನಪ್ಪ ಗಂಧ ಸಿಂಧುರಮನೇಱುಗುಮಾತಂಗೆ ಭಾರ್ಯೆಯಕ್ಕುಮೆಂದು ಬೆಸಸಿದರಂದಿಂದಿತ್ತಲಾವಿನಾ ಬನಮಂ ಕಾದಿರ್ದೆವಿಂದು ಫಲಪ್ರಾಪ್ತರಾದೆವೆಂದು ಸಂತೋಷಂಬಟ್ಟು ಮನದೊಳ್ ಮೆಚ್ಚಿ ಪ್ಪುದುಮಿೀ ವಿಮಾನಮನೇಱಿಮೆನೆ ತಾನುಮುತ್ಕೃಷ್ಟಪೂರ್ವಕಮುಂ ಬಯಸುವನಪ್ಪುದಱಿ ನಂತೆಗೆಯ್ವೆನೆಂದು

ಕಂ॥ ಮಾನಿತ ಸಮಸ್ತ ಗುಣಗಣ
ನಾನಾಳಂಕಾರ ವಿರಚಿತೋಜ್ವಳ ರಮ್ಯ
ಸ್ಥಾನಮನಭಿನುತ ಪುಣ್ಯನಿ
ಧಾನಮನವಯವದಿನಾ ವಿಮಾನಮನಾಗಳ್ ೫೩

ವ॥ ತಾನುಮವರುಮೇಱಿ ಪೋಪಾಗಳ್ ವಿಮಾನಮಾಕಾಶಕ್ಕೆನಿತೆನಿತು ನೆಗೆ ಗುಮನಿತನಿತೆ ಕರ್ಮನಿರ್ಜರದೊಳ್ ಊರ್ಧ್ವಗತಿಸ್ವಭಾವನಪ್ಪಾಸನ್ನಭವ್ಯಂಗೆ ಸಂಸಾರ ಚಕ್ರಂ ಕಿಱಿದಪ್ಪಂತೆ ವಸುದೇವಂಗೆ ನೆಲನುಂ ಕುಲಗಿರಿಗಳುಂ ಮಹಾನದಿಗಳುಂ ಕಿಱಿಯ ವಾಗಿ ತೋಱೆ ನೋಡುತ್ತಂ ಪೋಗೆವೋಗೆ

ಮ॥ ಕುಲಭೂಭೃತ್ಕುಲಮುಂ ಮಹಾನದಿಗಳುಂ ಭೋಗಾಭಿಧಾನಕ್ಷಮಾ
ತಳಮುಂ ಕರ್ಮಮಹೀಪತಿಸ್ಥಿತಿಗಳುಂ ಮುಖ್ಯಪ್ರಖಂಡಂಗಳುಂ
ಜಲಧಿದ್ವೀಪಚಯಂಗಳುಂ ಪೆಱವುಮಂ ನೋಡುತ್ತಮೇನಾಪುದಾ
ದಱಿಯಲ್ಕಾ ತೋರ್ಪುದದಾವುದೆಂದು ಬೆಸಗೊಂಡುತ್ಸಾಹಮಂ ತಾಳ್ದಿದಂ ೫೪

ವ॥ ಅದೆಂತುತ್ಸಾಹಮಂತನಾದೊಡವರುಮಜ್ಞಾನನದೊಳೆ ಪ್ರತ್ಯಕ್ಷಮನುಮಾನ ಮಾಗಮಮೆಂಬ ಮೂಱುಂ ತೆಱದಾಗಮಸಿದ್ಧಮಪ್ಪ ಸಂಗಾಣೆವಿಭಾಗಂಗಳ್ ಪ್ರತ್ಯಕ್ಷ

ಕಂ॥ ಇಂತುಮೆನಗೆನ್ನ ರಾಜ್ಯಮು
[1][ದಂತನುನಯ][1]ದಕ್ಕುಮಾಗದೋ ಮುನಿ ಜಿನನಿಂ
[2][ಎಂತೆಂ][2]ದೊಡವರ್ ಕೇಳ್ ನಿ
[3][ನ್ನಂತಾ][3]ತ್ಮಜೆಗಾಣ್ಮನಾದ ಭೂಚರಸುತನಿಂ ೫೭

ವ॥ ಅಕ್ಕುಮೆಂಬುದನಾಮುಂಗಾರವೇಗನರಿದು ಎನ್ನ ಮಹಿಮೆಯಾದಿಂ ಬಟಿಯುಂ ನಿನ್ನಂ ಛಿದ್ರಿಸಲೆಂದು ಪಾರ್ದಿರ್ದಪ್ಪನಾತಂಗಾನೆನಸುಂ ಬಲ್ಲಿದೆನಪ್ಪುದಱಿಂ ನಿನ್ನಂ ಛಿದ್ರಿಸಲ್ಪಡೆಯನೆಂಬುದುಮಾದೊಡೇನೆಂದು ಕೈಕೊಳ್ಳದಿರ್ದ ನೈರಾಟದ ಶುಕ್ಲಪಕ್ಷದ ಚಂದ್ರೋದಯಮುತಿರಮಣೀಯಮಾದೊಡೆ ಮಾಡದ ಮೇಗೆ ವಿಶ್ರಮಿಸಿದನನಂಗಾರವೇಗಂ ನಿಟ್ಟಿಸಿ ಬಂದು ವಸುದೇವನನೆತ್ತಿಕೊಂಡು ವಿಮಾನದೊಳಿಟ್ಟಾಕಾಶದೊಳ್ ನೆಗೆದು ಪೋಪ್ಪುದುಂ ಶಾಲ್ಮಲಿದತ್ತೆ ನಿದ್ರೆಯಿನೆೞ್ಚತ್ತು ವಸುದೇವನನಲ್ಲಿ ಕಾಣದೆ ಪೆಱದಲ್ಲಿರ್ದಾತನ ಗೊಡ್ಡನೆಂದು ಬಾಳುಮತ್ತ್ರಪರಮುಮಂ ಕೊಂಡು ವಾಯುವೇಗದಿನೆಯ್ದೆ ಪೋಗಲ್ ಪೋಗಲೆಂದೊಡಱಿದಾಗಳಂಗಾರವೇಗಂ ವಿಮಾನದಿಂ ಪೊಱಮಟ್ಟು ನೀಡುಂ ಕಾದಿ ಗೆಲಲಾಱದೆ ಭಯಸ್ಥನಾಗಿ ಮಗುೞ್ದು ವಿಮಾನಮುಂ ಪೊಕ್ಕು ಕೊಳ್ ನಿನ್ನ ಗಂಡನನೆಂದು ವಸುದೇವನಂ ನೆಲಕ್ಕೆ ನೂಂಕಿ ಪೋದನಾಗಳ್ ವಸುದೇವಂ ಬಿೞ್ಪುದನಾಕೆ ಕಂಡತಿ ಜವದಿನೆಱಗಿ ಪಿಡಿದುತಪ್ಪಾಗಳೀತನಂ ನೀನೊಯ್ಯುವಲ್ಲಿ ತಲ್ಲು ನಿಱಿಸಿಪೋದೊಡೆ ಮಹಾಭ್ಯುದಯಮಾಗಿ ಕೆಲವು ದಿವಸದಿಂ ನಿನ್ನೊಳ್ ಕೂಡಿ ಸುಖಮಿರ್ದಪನೆಂದು ದಿಶಾದೇವತೆಗಳ್ ನುಡಿದೊಡಿಲ್ಲಾ ದೆಸೆಯುಮಂ ನೋಡಿಯಾರುಮಂ ಕಾಣದೆ ದೇವತಾವಚನಮಲಂಘನೀಯಮೆಂದು ಮನೋಗತಿಯೆಂಬ ವಿದ್ಯಾದೇವತೆಯುಂ ಬರಿಸಿ ನೀನೀತನನುಚಿತಮಪ್ಪೆಡೆಯೊಳಿೞಿಸಿ ಬಾಯೆಂದು ಪೋದಳಿತ್ತಲಾ ವಿದ್ಯೆ ವಸುದೇವನಂ ತಂದು ಚಂಪಾಪುರದ ಬಹಿರುದ್ಯಾನದ ರಮ್ಯಪ್ರದೇಶದೊಳಿೞಿಪಿದೊಡಿನಿಸುವೇಗದಿಂ ನಿದ್ರೆಯಿನೆೞ್ಚತ್ತು ಬೆಕ್ಕಸಿಸಮಿರ್ದ ಮುನ್ನಂ ತನ್ನಿರ್ದೆಡೆಯಲ್ಲಿದುದುಮನಲ್ಲಿಗೆ ಪೈಸಿದ ವಿದ್ಯಾಧರನಗೆಯ್ದ ಯೋಗಮಪ್ಪುದುಮನಱಿದು ಕಡುಮುಳಿದು ತನಗಾಕ್ಷೇಪಮುಗಪ್ಪುಮಪ್ಪುದುಮನಱಿದು ಮುಳಿಸನುೞಿದು ಬಂದೊಂದು ಕೊಳದೊಳ್ ಪಾದಪ್ರಕ್ಷಾಳನಂಗೆಯ್ದು ಮರ್ಹತ್ಸರ್ವಜ್ಞಪದಾಂಬುಜಕ್ಕೆ ನಿರ್ಭರಭಕ್ತಿಯಿನೆಱಗಿ ಬಂದಿಸಿದನಂತರಮಾ ಪುರಮಂ ಪೊಕ್ಕು ನೇವನೆಗೇರಿಯೊಳಗನೆ ಬಪ್ಪಾಗಳ್ ವಾಸುಪೂಜ್ಯಭಟ್ಟಾರಕರ ನಿರ್ವಾಣಭೂಮಿಯಲ್ಲಿ ಮಾಡಿಸಿದುತ್ತುಂಗ ಜಿನೇಂದ್ರಮಂದಿರಮಂ ಕಂಡು ಮೂಱುಸೂೞ್ ಬಲವಂದೊಳಗೆ ಪೊಕ್ಕು ನೊಸಲ್ಗೆ ಕೈಗಳಂ ತಂದು

1 ದನುನಯದಿಂ 2 ಮೆಂ 3 ನ್ನಾ

ವೃ॥ ತ್ರಿಜಗನ್ನಾಥ ಮುನೀಂದ್ರ ಸೂತ್ರ ಸಕಳ ಪ್ರಖ್ಯಾತ ದುಷ್ಟೌಘ ರ
ಕ್ಷಪ್ರಜಯೋಪೇತ ಸುರೇಂದ್ರಗೀತ ನತದೇವವ್ರಾತ ಸಂ[1][ಸೇವ್ಯ ಭ][1]
ವ್ಯಜನಾಧೀಶ ಗುಣಪ್ರಕಾಶ ಪರಮಶ್ರೀಗೀಶನೀ ವಾಸುಪೂ
ಜ್ಯ ಜಿನ ಮಾಟಿತ್ತನಗಿಷ್ಟಸಿದ್ಧಿಸುಖಮಂ ಸಂಸ್ತುತ್ಯಮಂ ನಿತ್ಯಮಂ ೫೮

ವ॥ ಎಂದು ದರ್ಶನಸ್ತುತಿಯಂ ಪೇೞ್ದು ಚತುರ್ಭಕ್ತಿಸಹಿತಂ ದೇವರಂ ವಂದಿಸಿ ತದನಂತರಂ ಋಷಿಸಮುದಾಯಮಂ

ಚಂ॥ ಪರಮತಪಶ್ಚರಿತ್ರಯುತರಂ ಹಿತರಂ ಗುಣರತ್ನರಂ ಪ್ರಭಾ
ಸುರರಸವಾರ್ಯವೀರ್ಯಪರರಂ ಮದಸಂಹರರಂ ತ್ರಿಶುದ್ಧಿಯೊಳ್
ಗುರು ಪರಿಪಾಡಿಯಿಂದೊಸೆದು ಬಂದಿಸಿ ಧರ್ಮಮನೋತು ಕೇಳ್ದು ತಾಂ
ಸ್ಥಿರತರ ಚಿತ್ತನಿರ್ದನಭಿಸೂತ ಸುವೃತ್ತಸುದಾತ್ತ ಚಿತ್ತದಿಂ ೫೯

ಗದ್ಯ॥ ಇದರ್ಹತ್ಸರ್ವಜ್ಞ ಪಾದಪದ್ಮವಿರಾಜಿತೋತ್ತಮಾಂಗ ಶ್ರೀ ಬಂಧುವರ್ಮ ನಿರ್ಮಿತಮಪ್ಪ ಹರಿವಂಶಾಭ್ಯುದಯದೊಳ್ ದೇಶತ್ಯಾಗವರ್ಣನಂ

## ದ್ವಿತೀಯಾಶ್ವಾಸಂ

---

1 ಸೇ

# ತೃತೀಯಾಶ್ವಾಸಂ

ಕಂ|| ಶ್ರೀ ವಾಸುಪೂಜ್ಯಜಿನತೀ
ರ್ಥಾವಾಸದೊಳಿಂತು ವಿಮಳ ಧರ್ಮಾಮೃತಮುಂ
ಸೇವಿಸುತಮಮಿತಬಲ ವಸು
ದೇವಂ ಶುಭಚರಿತನೆರ್ದು ವಿನಯಸಮೇತಂ ೧

ವ|| ವಂದಿಸಿ ಪೂಜಿಸುತ್ತುಂ ನೋಡುತ್ತಾಗಳಾ ಜಿನಾಲಯದ ಮುಂದಣ ವಿಶಾಲ ಪಟ್ಟಶಾಲೆಯೊಳ್ ವೀಣಾಪರೀಕ್ಷೆಯೆಂಬುದುಂ ತೆಱದ ಗಾಂಧರ್ವವಿದ್ಯಾಭ್ಯಾಸಂಗೆಯ್ವ ಪಲರುಂ ಛಾತ್ರರ ನಡುವೆ ಸುಗ್ರೀವನೆಂಬ ಗಾಂಧರ್ವಾಚಾರ್ಯರಿಂದಂ ಶೋಭಿಸುತ್ತಿರ್ದುದಂ ಕಂಡು ಪ್ರೋತ್ಸಾಹಮನರಿತಂತ ಶುಭಲಕ್ಷಣಾಲಂಕೃತನುಪ್ಪ ಶರೀರಮುಂ ಕಂಡು ಬಿಜಯಂಗೆಯ್ದುಮೆಂದು ಕೇಳ್ದೊಡ್ ಕುಳ್ಳಿರಿಸೆ ಕುಳ್ಳಿರ್ದೀ ಪೊಱಪೊಳಗೆಲ್ಲಿದೆಂದೊಳಂ ವೀಣಾ ವಾದ್ಯಮುಂ ಪಲರುಂ ಪಿಡಿದಿರ್ಪರಿದೇಕಾರಣಮೆಂದೊಡೀ ಪೊೞಲ ರಾಜಶ್ರೇಷ್ಠಿ ಚಾರು ದತ್ತನೆಂಬೊನಾತನ ಮಗಳ್

ಕಂ|| ಗಾಂಧರ್ವದತ್ತೆಯೆಂಬೊಳ್
ಗಾಂಧರ್ವಕಳಾವಿದಗ್ಧೆ ವೀಣೆಯೊಳೆನ್ನೊಳ್
ಗಾಂಧರ್ವದೇವರುಂ ವಿಷ
ಯಾಂಧರ್ ಸೋಲ್ವರೆನೆ ಪೆಱರು ಸೋಲದರೊಳರೇ ೨

ವ|| ಅದಱಿಂ ವೀಣಾವಾದ್ಯದೊಳ್ ತನ್ನಂ ಗೆಲ್ವಂಗಲ್ಲದೆ ಪೆಂಡತಿಯೆನಾಗೆ ನೆಂದಿರ್ಪಳೆರ್ದಪರಿಯಲ್ಕಂ ವೀಣಾವಾದ್ಯಮನಾರ್ ಬಲ್ಲರ್ ಪಕ್ಕಂದು ತಿಂಗಳಿಗೊಮ್ಮೆ ವೀ[1][ಣಾ][1]ಸ್ವಯಂಬರಮುಂ ಮಾಡ್ಪೆಂದೊಡಂತೆ ಪರದರ ಮಗಳ್ಗಿಂತಪ್ಪ ಗಾಂಧರ್ವ ಮೇಕೆಂದೊಡಾ ಕೂಸು ವಿದ್ಯಾಧರರಾಜಂ ಸಾಗರಸೇನನೆಂಬೊನಾತನ ಮಗಳ್ ಚಾರು ದತ್ತನನಾತಂ ಕರು ಪ್ರಿಯಸ[2][ಖಿನಾ][2]ಗ ತನ್ನ ವಿದ್ಯಾಧರಶ್ರೇಢಿಗೆ ತಿಳಕಮಾಗಿರ್ಪ ರಮ್ಯ ಪ್ರದೇಶಮುಮಾ ದೇಶಮುಮಂ ಸಮಸ್ತ ರಾಜ್ಯಮುಂ ಕೊಟ್ಟಿಲ್ಲದಲ್ಲದೆ ಬಹಿರಾಗಳಿನ್ನು

---

1 ಣ 2 ಖಿಯಾ

ಮಗಳನೀ ಗಾಂಧರ್ವದತ್ತೆಯಂ ನೀನೊಯ್ದು ಭೂಮಿಗೋಚರಂಗೆ ಕುಡೆಂಬೊಡಂತೆಗೆಯ್ವೆ ನೆಂದು ಬಂದನದಲ್ಲದುಮಂ ಚಾರುದತ್ತನಂ ಪದಪಿನಿಂದಾಗ ಸಾಹಸದೊಳಂ ಶೌರ್ಯದೊಳ ವಿನಾಗಳಾದುಂ ದೊರೆಯಿಲ್ಲೆಂದೊಡೆಂತಾತನ ವೃತ್ತಾಂತಮಂ ಪೇೞ ಕೇಳಲೆನಗೆಱ್ತಿಯಾ ಗಿರ್ಪುದೆಂದೊಡಂತೆಗೆಯ್ವೆನೆಂದಾಗಳಾ ಗಾಂಧರ್ವಾಚಾರ್ಯರಿಂತೆಂದು ಪೇೞ್ದರ್

ಕಂ|| ಈ ವಿಷಯಮಂಗವಿಷಯಂ
ಭೂವಿದಿತಂ ಚಂಪೆಯೆಂಬುದೀ ಪೊೞಲುದ್ಯತ್
ಶ್ರೀ ವಿಮಳವಾಹನಂ ನ[1][ಯ][1]
ಭಾವದಿನಿದನಾಳ್ಗುಮಮಿತಗುಣಗಣ ನಿಳಯಂ ೩

ವ|| ಭಾನುದತ್ತಸೆಟ್ಟಿಯೆಂಬೊನಿ[2][ಬ್ಬ][2]ಕುಳೋದ್ಭವನಾತನ ಭಾರ್ಯೆ ದೇವಿಲೆ ಯೆಂಬೊಳಂತವರಿರ್ವರುಮನ್ಯೋನ್ಯಾಸಕ್ತರುಮರ್ಹದ್ಭಕ್ತರುಮಾಗಿರ್ಪೊರಂತಿರ್ದುಂ ಮೂ ವತ್ತೆರಡುಕೋಟಿ ದ್ರವ್ಯಂ ಮನೆಯೊಳಿರ್ದುದಂ ಬಗೆಯದೆ ಪುತ್ರೋತ್ಪತ್ತಿ ಗೆಂಟಾದುದಕ್ಕೆ ಚಿಂತಿಸಿಯೊಂದುದಿವಸಂ ದೇವಿಲೆ

ಕಂ|| ಸೂರಿಗಳನಖಿಳ ಗುಣಗಣ
ಧಾರಿಗಳಂ ದೋಷಹಾರಿಗಳನಪಥ ಯಶೋ
ಭೀರುಗಳಂ ಮುನಿವರರಂ
ಚಾರುಗಳಂ ಬೆಸಗೊಳಲ್ ಬಗೆದ[3][ಳ][3]ನುನಯದಿಂ ೪

ವ|| ತನಗಿಷ್ಟೆಯರಪ್ಪ ಪಲರುಂ ಶ್ರಾವಕಿಯರುಂ ಕೂಡಿಕೊಂಡು ತಾನುಮರ್ಚನೆ ಗಳಂ ಕೊಂಡುಪೋಗಿ ಚಾರುಮುನೀಂದ್ರರಿರ್ದ ಜಿನಾಲಯಮಂ ಬಲಗೊಂಡೊಳಪೊಕ್ಕು ದೇವರಂ ಸ್ತುತಿಯಿಸಿ ಗಂಧಶೇಷೆಯಂ ಕೊಂಡು ಬೞಯಂ ಚಾರುಮುನೀಂದ್ರರ್ಗೆ ಕೈಗಳಂ ಮುಗಿದು

ಕಂ|| ಎನಗಿಂತೆ ಮಕ್ಕಳಿಲ್ಲದೆ
ಮನುಜತ್ವಂ ವೃಥೆಗೆ ಸಂದು ಪೋಕುಮೊ ಮತ್ತಂ
ತನಯರ್ಕಳಿನ್ನುಮಪ್ಪರೊ
ಮುನಿನಾಥಾ ಬೆಸಸಿಮೆಂದೊಡಾ ಮುನಿಮುಖ್ಯರ್ ೫

ವ|| ನಿನಗೆ ಮಹಾಪುರುಷನಪ್ಪನೊರ್ವಂ ಸುಪುತ್ರನಕ್ಕುಮೆನೆ ಸಂತೋಷಂಬಟ್ಟು ಮುನಿವಾಕ್ಯಂ ತಪ್ಪದೆಂದು ಮನೆಗೆವಂದು ಕೆಲವು ದಿವಸದಿಂ ತಲೆನೀರ್ಮಿಂದು ಸೌಧ

1 ಯನಾ 2 ಭ್ಬ 3 ಳಂದ

ಗೃಹದೊಳ್ ತಾನುಂ ನಿಜಪ್ರಿಯನುಂ ಸುಖನಿದ್ರಿತರಾಗಿರೆ ಸ್ವಪ್ನದೊಳ್ ಚಾರುಮುನೀಂದ್ರರ್ ದಿವ್ಯಮಪ್ಪ ಮಾಣಿಕಮನಿತ್ತುದಂ ಕಂಡು ಬೆಳಗಪ್ಪ ಜಾವದೊಳ್ ಮುನ್ನಿದ್ರರಾಗಿ ಪ್ರಭಾತಕ್ರಿಯೆಯಂ ನಿರ್ವರ್ತಿಸಿ ನಿಜಪ್ರಿಯನಪ್ಪ ಭಾನುಸೆಟ್ಟಿಗೆ ಪೇೞ್ದು ಸಂತೋಷದಿನಿರೆ ಕೆಲವು ದಿವಸದಿಂ ಗರ್ಭದವಾಗಿ ನವಮಾಸಂ ನೆಱೆದು ಶುಭದಿನದೊಳ್ ಮಗನಂ ಪೆತ್ತಾಗಳ್ ನೆಂಟರೆಲ್ಲರುಮೊಸಗೆ ಮರುಳ್ಗೊಂಡು

ಚಂ॥ ಉದಯದೊಳಿಂತು ಭಾನು ಕಡುರಾಗದೊಳೊಂದುಗುಮಂತೆ ಪುತ್ರಲಾ
ಭದ ನೆಗೞ್ದುತ್ಸವೋದಯದೊಳಿಬ್ಬಗಳೋದ್ಭವ ಭಾನು ತಾನುಮೊ
ದಿದ ಕಡುರಾಗದಿಂ ಪೆಸೆವನೀ ವಿಳಸಂಪ್ರುತಿ ಬಂಧಹೇತುವ
ಪ್ಪುದಱಿಂದಂ ಮಹಾಪುರುಷರಪ್ಪರುಮಂ ಕಡುರಾಗ ಮಾಡುಗುಂ ೬

ವ॥ ಅಂತು ಜಾತೋತ್ಸವಮಂ ಮಾಡಿ ಪತ್ತನೆಯ ದಿವಸದಂದು ಚಾರುಗಳಾದೇಶದೊಳ್ ಪುಟ್ಟಿದನಪ್ಪುದಱಿಂ ಚಾರುದತ್ತನೆಂದು ಪೆಸರನಿಟ್ಟು ನಡಪುತ್ತಿರ್ದರಾತನ ಪುಟ್ಟಿದ ದಿವಸದೊಳಾ ವಿಮಳವಾಹನ ಮಹಾರಾಜನ ಮಂತ್ರಿಗಳಯ್ವರ್ಗಪ್ಪೈವರು ಮಕ್ಕಳಾದೊಡವರ್ಗಳಂ ಭಾನುಸೆಟ್ಟಿಯೆನ್ನ ಮಗನೊಡವಳೆವರೆಂದು ಬೇಡಿಕೊಂಡು ಕೊಸುಗಳ್ಗೆ ಬೇಱೆವೇಱೆ ದಾದಿಯರನಿಟ್ಟು ನಾಮಕರಣಮನವರ್ಗೆ ಹರಿಸಖಂ ಗೋಮುಖಂ ವರಾಹಕಂ ಪರಂದಪಂ ಮರುಭೂತಿಯೆಂದು ಬೇಱೆವೇಱೆ ಪೆಸರನಿಟ್ಟು ಕೊಂಡಾಡಿದನಂತು ಚಾರುದತ್ತನಿಷ್ಟಮನೋಹರಾತಿ ಮುಗ್ಧನುಂ ಸಕಳಕಳಾವಿದಗ್ಧನುಮಾಗಿ ಯವ್ವನಪ್ರಾಪ್ತನಾಗಿರ್ದನಾ ಪೊೞಲ್ಗೆ ಕಿಱಿದಂತರದೊಳಮರಮಂದಿರಮೆಂಬ ಬೆಟ್ಟದೊಳ್

ಕಂ॥ ಯಮಧರ ಕೇವಳಿಗಳಿಗ
ಷ್ಟಮಕಕ್ಷ್ಮಾಮಾದೊಡ[1][ಲ್ಲಿ ಯಾತ್ರೆಗೆ][1] ತೀರ್ಥೋ
ದ[2][ಮು][2]ಮಾಯೆಡೆ[3][ಯೆ][3]ಲ್ಲಂ ಭ
ವ್ಯಮಯಂ ದಲ್ ಮಾರ್ಗಶಿರದ ಶುಕ್ಲಾಷ್ಟಮಿಯೊಳ್ ೭

ವ॥ ಆ ಮಹಿಮೆಯ ದಿವಸದೊಳರಸನೊಡನೆ ಸೇವ್ಯ ಜನಮುಂ ಭವ್ಯಜನಮುಂ ಭಾನುಸೆಟ್ಟಿಯುಂ ಪೋಗೆ ನಾಡೆಯುಂತರಮುಂ ಬೞಿಯುಂ ತಗುಳ್ದು ಬರೆ ಚಾರುದತ್ತನಂ ಕಂಡು ನೀ ನಿನ್ನ ಸಖಾಯರನೊಡಗೊಂಡು ಪೋಗಿ ರಜತವಾಳುಕಮೆಂಬ ನದೀತೀರದೊಳ್ ಸುಗಂಧಮಪ್ಪ ಪುಷ್ಪದೊಳವಂ ಕೊಯ್ದುಮ್ಮಲ್ಲಿಗಟ್ಟಿ ಮಗುೞೆ ಪುರಕೆ ಪೋಗೆಂಬುದುಮಂತೆಗೆಯ್ವೆನೆಂದಾ ನದಿಯ ತಡಿವಿಡಿದು ಬಂದು ನಾನಾವಿಧಮಪ್ಪ ಪುಷ್ಪರಾಶಿಯುಂ ಕೊಯ್ದು ತಮ್ಮುಯ್ಯನಲ್ಲಿಗಟ್ಟಿಯಾ ತೊಱೆಯುಂ ಮೆಚ್ಚಿ ನೋಡುತ್ತಂ

1 ಲ್ಲಿ 2 ಮು 3 ಯೊಳು ಯಾತ್ರೆಗೆ ಜಗವೆ

ಕಂ॥ ಸ್ವಾಂತರತಿಪಥಿಕ ಪಥವಿ
ಶ್ರಾಂತರುಮಂ ನೋಡೆ ನಾಡೆ ರಮ್ಯಮಿದಂ ನಾ
ಮೆಂತು ಗಳ ಬಿಸುಟು ನಗರಾ
ಭ್ಯಂತರದೊಳ್ ಕಟ್ಟಿಕೊಳ್ವ ಕಣಿಯೇನು ಗಡಿಂ ೮

ವ॥ ಆ ಪುರದೊಳ್ ಚಿಂತಾಮಣಿಯುಳ್ಳಡಂ ಕಲ್ಪವೃಕ್ಷಮುಳ್ಳಡಂ ತನಗಿಷ್ಟಮಿಲ್ಲದಂದವದೊಳೇನೆಂದು ತೊಱೆಯ ಶೋಭೆಯುಂ ಕಂಡು ನೋಡಿ ಮೆಚ್ಚುತ್ತಂ ಬರ್ಪರೆಡಂ ತಡಿವಿಡಿದು ನೀರೊಳಲೆವ ಪಲಸ್ರಂ ತೆಱದ ಪೂಮರಂಗಳ ಮಿಳಿರ್ವ ಕೊಂಬುಮಂ ಪುಣಿಲ ಸ್ಥಳಂಗಳಿಂಬುಮಂ ಪರಿವ ಬಱಿವೊಸಲ್ಗಳುಮಂ ಮಣಲ ತಿಂಟೆಯ ನುಣ್ಪುಮಂ ದರಿಯ ನೆೞಲ ತಣ್ಪುಮಂ ಮೆಲ್ಲನಪ್ಪಲರ ಕೀಟಮುಮಂ ಕೂಡೆ ಪರದಲ್ಲೊಕ್ಕ ಪೂವಲಿಯ ಜೆಳ್ಪುಮಂ ಲತೆಯ ಜೊಂಪಮುಮಂ ಪರೆ[1][ದೊಗು][1] ಮಕರಂದಮುಮಂ ಉಲಿವ ಜಲವಿಹಂಗ ನಾದಮುಮಂ ಕುಸುಮಾಮೋದಮುಮಂ ಕಂಡತ್ತಣಿಯೊಳ್ ನೋಡುತ್ತಂ ಬರೆ ಪರಿಸಱಿ ಪದ್ಮಪದದೊಳ್ ಪಣ್ಣಲಮಂ ತೀವಿ ನಡುನೀರೊಳ್ ಬಿಟ್ಟಡಲ್ಲಿ ಬಾಳೆಮೀನ್ ಪೊಳೆಯೆ ಕಡೆದೋಡಿದರಂತೆ ಗುಣದೊಳಧಿಕರಪ್ಪ ಋಷಿಯು ಪೆಣ್ಣಿಂಬಬಂಧನದಿಂ ಸಂಸಾರದೊಳಾಟ್ಟುಗುಮೆಂದು ನುಡಿಯುತ್ತಂ ಬಪ್ಪನಾ ನೀರತಡಿಯೊಳ್ ಸಣ್ಣಮಪ್ಪ ಮಣಲ ತಿಂಟೆಯೊಳೊಂದಡಿವಜ್ಜೆಯುಂ ಕಂಡಿದು ವಿಪರೀತಮೆಂದದಂ ಚಾರುದತ್ತನುಪಲಕ್ಷಿಸಿ ನೀರಿಂ ಪೊಱಮಡಲ್ ಬಂದು ಪೊಱಮಟ್ಟ ಮಗುಟ್ದು ಪೊಕ್ಕ ಪಜ್ಜೆಯುಮಲ್ಲಿದು ಪೊಱಗಣಿಂ ಬಂದ ಪಜ್ಜೆಯುಮಲ್ತು ನಿಂದ ಪಜ್ಜೆಯಿದೆಂದು ಪೇೞೆ ಕೇಳಿಯರ್ ಚಿಕ್ಕಸಮಾಗಿರೆ ಚಾರುದತ್ತನಿಂಗುಂ ಭೂಮಿಗೋಚರ ಸಂಘಟ್ಟಣಮಿಲ್ಲದಲ್ಲಿ ರಮ್ಯಸ್ಥಾನದೊಳ್ ಮಿಥುನಮಿರ್ಕುಮೆಂದಿಂತೆಂದಂ

ಮ॥ ಎಡಗಾಲುಂ ಬಲಗಾಲ ಪೆರ್ಮೊಡೆಯ ಮೇಲೂಱುತ್ತೆ ತನ್ನೊಳ್ಪಳಂ
ಮುಡಿದಿರ್ದಾ ತೊಡೆಯುಲ್ಲಿ ಕುಳ್ಳಿರಿಸಿ ಮತ್ತಂತಂತೆ ತರ್ಕೈಸಿಕೊಂ
ಡೆಡಗಯ್ಯಿಂ ಬಲಗಯ್ಯೊಳಂತೆ ಪೆಱತೇಂ ತಾಂ ಬಾಗಿ ಕೊಂಡಾ ಖಗಂ
[2][ಬಿಡದಂ][2]ದೊಯ್ಯುತೆ ಬೇಗಮಂತೆ ನೆಗೆದಾಕಾಶಕ್ಕಮಂ ಪಾರಿದಂ ೯

ವ॥ ಎಂದೊಡಿದೇಂ ಚೋದ್ಯಮೊ ನೀನೆನ್ನೊಡನೆಯ ಚಾರುದತ್ತನೆಂದು ಬಗೆದಾ ವಿದ್ಯಾಧರನೊಡನಮದಾತನಪ್ಪುದನೇಗಳಱಿದೆಂದು ಪೊಗಳುತ್ತಮಂತೆ ಪೋಪರೊಂದು ಜೊಂಪದ ಕೆಲದೊಳ್ ಮೂಱಡಿವಜ್ಜೆಯುಂ ಕಂಡಿದರಂದಮಂ ಪೇೞೆನೆ ನೋಡಿ ಮುಂದಣಿಯೊಳಡಿಯೂಡಿದಲತಗೆಯ ರಸಂ ಪತ್ತಿರ್ದುದಂ ಕಂಡಿಂತೆಂದಂ

---

1 ದೆಗೆ 2 ಭರದಿಂ

ಮ॥ ರತಿಸಂಪರ್ಕಮನಾಸೆವಟ್ಟು ಖಚರಂ ತನ್ನೋಪಳಂ ತಾನುಮಾ
ಕ್ಷಿತಿಭಾಗಕ್ಕಿೞಿವಲ್ಲಿ ಮುಂದಿೞಿದು ತಾಂ ನಿಂದಿರ್ದನಂ ಪತ್ತಿ ತ
ತ್ಪತಿ ಪೆಣ್ಣಿತ್ತಿೞಿವತ್ತಮೊಂದಡಿಯನಟ್ಟಿತ್ತಿತ್ತ ನೋಡುತ್ತೆ ದಂ
ಪತಿಯಂ ತೊಟ್ಟನೆ ಕಂಡು ಮತ್ತೆ ನೆಗೆವಂ ತನ್ನೋಪಳಂ ಕೊಂಡವಂ ೧೦

ವ॥ ಅದಱಿನೀ ಪೊೞಲಿಪಕ್ಷಿಯುಮಿಂತಾದುದೆಂದೊಡಪ್ಪುದಪ್ಪುದು ನೀನತಿವಿದಗ್ಧೆಯೈ ದಿವ್ಯಮಾನಸಸ್ತ್ರೀಯೆಂದು ಪೊಗೞುತ್ತಂ ಬಪ್ಪವರ್ ಮತ್ತೊಂದೆಡೆಯೊಳ್ ಪೋದ ವೆಱಡು ಪಕ್ಷಿಯುಮನವಱ ಮುಂದೆ ನೊಣಕಾಲ ಪಕ್ಷಿಯುಮಂ ಕಂಡಿವಱಂದಮೆಂತೆನೆ ಜಘನಭರದಿಂ ಪೆಱಗಿನಿಸಿರ್ದುದಿವು ಪೆಂಡತಿಯ ಪಕ್ಷಿಯ ಮುಂದಣ ನೊಣಕಾಲ ಪಕ್ಷಿ ಗಂಡನವೆಂದಿಂತೆಂದಂ

ಕಂ॥ ಮುಳಿದು ನಭದಿಂ[1][ದಲಿರ್ದರು][1]
ಮಿೞಿತಂದೆಡೆಯೊಳ್ ಭರದಿಂದ ತಿಳಿಪೆ ನಯದಿಂ
ತಿಳಿ[2][ಯಲ್][2] ಹರ್ಷದಿನಂಬರ
ತಳಕ್ಕೆ ತಳ್ತೊಡನೆ ನೆಗೆದು ಗಗನಕ್ಕೊಗೆದಂ ೧೧

ವ॥ ಎಂದೊಡದಕ್ಕುಮಿನ್ನಾವುದನೀಕ್ಷಿಸಗೊಳ್ಳಮೆಂದು ಮತ್ತಂತೆ ಪೋಪದೊಂದು ಕುಱುವಡೆಯೊಳ್ ವನತರುಗಳ ತುಱುಗಲಿಂದೊಪ್ಪಿರ್ದರಣ್ಯಪ್ರದೇಶದೊಳ್ ಪಾಸಿದ ಪುಷ್ಪಶಯನಮುಮನುದಿರ್ದ ಕಸ್ತೂರಿಯುಮನುಗುಳ್ದ ಕರ್ಪೂರದ ಪಳುಕಿನ ತಂಬುಲಮುಮಂ ಕೆದಱಿದ ಪೂಮಾಲೆಗಳುಮಂ ಕಂಡು ತಮ್ಮಿಚ್ಛೆಯೊಳಿರ್ದ ಮಿಥುನಂಗಳ್ ನಮ್ಮುಲಿಸಂ ಕೇಳ್ದು ಮಾಗಳ್ ಪೋದರಕ್ಕಟಾ ನಾವವರ್ಗೆ ವಿಘ್ನಂಮಾಡಿದೆವೆಂದು ನುಡಿಯುತ್ತಂ ಬರ್ಪನ್ನೆಗಂ ಒಂದು ಕದಂಬವೃಕ್ಷದ ಕೊಂಬಲೊಳ್ ಕೀಲಿಸಿರ್ದ ವಿದ್ಯಾಧರನ ಕಣಸುಗ್ರತೆಯ[3][ನೆ][3]ನ್ನು ಮುಂದೆ ಬರ್ಪ ಹರಿಣಾಯರ್ ಕಂಡು ಭಯಂಗೊಂಡು ನಿಂದಿರ್ದೊಂದು ಘನಣಿಯ ಮೇಲೆ ಬಿರ್ದಿರ್ದೆ ಚಾಮವತ್ತಂ ನೋಡಿ ಶಂಕಿಸದೆ ಬನ್ನಿ ಮಾತಂ ಮನ್ನಿನ್ಸಿತ ಮಹಾಪುಣ್ಯನುಂ ವಿದ್ಯಾಧರ ಜನಾಗ್ರಗಣ್ಯನುಮಾಗಲೆವೇಳ್ಕು ಮಾತನಂ ಪಗೆವರಾರಾನುಮುಪಾಯದಿನಿಲ್ಲಿಗೆ ತಂದು ಛಿದ್ರಿಸಿ ವಿದ್ಯಾಛೇದನಂಗೆಯ್ದು ಕೀಲಿಸಿ ಪೋದರಕ್ಕುಮೆಂದು ಸಾರೆಮದು ನೋಡಿ

ಮ॥ ಇದುವೇ ಪೌರುಷಮೆಂದು ಸುಟ್ಟಿ ನುಡಿಸಂತಿರ್ದಪ್ಪುದೀ ವಾಮಹ
ಸ್ತದ ಪಾಂಗಿಂ ಬಲಗಯ್ಯ ಪಾಂಗಿದಱಿಂ ನಿಲ್ಲಣ್ಣಮೆಂಪತ್ತಿದಂ
ದಮೊಳಿರ್ದಪ್ಪುದು ಕರ್ಜದೀಯಪುದ ಪಾಂಗಿನ್ನೆತ್ತ ಪೋದಪ್ಪುದುಂ
ಬದಟಿಂದಂ ಪಱದೆಯ್ದು ನುಂಗುನನಿತಾ[4][ಗಿ][4]ರ್ದಪ್ಪುವೀ ಗೃಷ್ಟಿಗಳ್ ೧೨

1 ದ 2 ಯಲು ಕರಮುತಿ 3 ನ 4 ನಿ

ವ॥ ಈತನಂ ಸಾವಿಂತೆ ನೋಡುತ್ತಿರ್ದನ್ ಬಾೞ್ವಿಂತು ಮಾಡುತ್ತಿರ್ದನಿವಾ ಪಾ[1][ವಾ][1]ದ್ರಿಯತ್ತಲೆ ನಾನುಮಾಗದಿರಪತ್ತ ನೋಡಿಮೆನೆಯವರ್ ನೋಡಿ ಪ್ರೇಳಿಯುತ್ತಮಿರ್ದ ಖೇಟಮಂ ಕಂಡು ವಿಚಾರಿಸಿ ನೋೞ್ಪಾಗಳಲ್ಲಿಯುಮರ್ಚಿದ ಕೀಲೋತ್ಪಾಟಿಯುಂ ಬ್ರಣಾರೋಪಿಯುಂ ಸಂಜೀವನಿಯುಮೆಂಬ ಮೂಱುಂ ಗುಳಿಗೆಗಳಂ ಕಂಡು ತಾಂ ವಿದ್ಯಾಧರಾಗಮುಮಂ ಬಲ್ಲನಪ್ಪುದಱಿಂ ಕೀಲೋತ್ಪಾಟಿನಿಯಂ ತೇದು ಪೂಸಿ ಕೀಲಣೆ ಕಳಿಪೆ ಕೆಲಕ್ಕೆ ಬೀೞ್ವ ಮೆಲ್ಲನೆ ಪಿಡಿದಿೞಿಪಿ ಬೞಿಯಂ ಬ್ರಣಾರೋಪಿಯಂ ಪೂಸೆ ಪುಣ್ ಕೆಟ್ಟೊಡೆ ಶುಚಿಮಾಡಿ ಸಂಜೀವನಿಯಂ ಪ್ರಯೋಗಿಸೆ ತಾನೊಂದು ಕೆಲದೊಳಿರ್ದು ನೋಡುತ್ತಿರೆ

ಕಂ॥ ಇನಿಸಿನಿಸಂ ಮಿಡುಕುತ್ತವ
ನಿನಿಸಿನಿಸಂ ಸುಯ್ಯುತಂ ಪೊರಳ್ದೇೞುತ್ತಂ
[2][ನೆನೆನೆನೆದುಂ ಪೆೞಿಪೆೞಿವಂ][2]
ಮುನಿಸನಿವಿಸೆ ಜೈಡೊದಱಿ ಮುಸಗಿ ಜೆಸೆ[3][ವ][3]ರಿಪಂ ೧೩

ವ॥ ಅಂತು ಪರಿವಾರಮುಮಂ ಕಾಣವೆ ಸೌಮ್ಯನಾಗಿ ಮಗುೞ್ದು ನೋಡಿ ಕೆಲದೊಳಿರ್ದವರಂ ಕಂಡು ನೀಮಾರ್ಗೆ ಖೇಟಮನೆಲ್ಲಿ ಕಂಡಿರಿ ವಿದ್ಯಾತಂತ್ರಘುಟಿಕಾತ್ರಯಂಗಳನೆಂತು ಕಂಡಿರೆಂತಿವಂ ಪ್ರಯೋಗಿಸಿದಿರ್ ಪೇೞಿಮೆಂದೊಡಾವಿಾ ಪೊೞಲಿಂ ಬಂದರ್ನೀತನಿಬ್ಭಕುಳೋದ್ಭವಂ ಚಾರುದತ್ತನೆಂಬೊಂ ನಿನ್ನಿರವಂ ಕಂಡಱಿದು ಕಾರುಣ್ಯದಿಂ ವಿದ್ಯಾಪ್ರಯೋಗಮುಂ ಬಲ್ಲನಪ್ಪುದಱಿಂ ಖೇಟಮನಱಿಯಿಾಯೌಷಧಿಯನೆತ್ತಿದ ನೆಂದಡೆ ನಿಮ್ಮ ಪ್ರಸಾದದಿಂ ಬರ್ದನೆಂಬುದುಮಂತೇಕೆಂಬೆಯಾರುಮುಂ ತಂತಮ್ಮ ಪುಣ್ಯಮೆ ಬಾೞಿಸುಗುಮಾನೇನಂ ಮಾಡಿಂಪೆ ನಿನ್ನ ಪುಣ್ಯಮೆ ಪ್ರಧಾನಮೆನೆ ನೀನೆನ್ನ ಪುಣ್ಯದ ರೂಪಾಗಿ ಬಂದೆನ್ನ ಪ್ರಾಣಮನಿತ್ತುಪಕಾರಕ್ಕೆ ಪ್ರತ್ಯುಪಕಾರಮೇಂ ನಿನಗೆ ಪ್ರಯೋಜನಮಾದ ಕಾಲಕ್ಕೆನ್ನಂ ನೆನೆವುದೆಂದು ಪೇೞ್ದು ನೀನೀ ಭವದೊಳೆನಗೆ ಪರಮಮಿತ್ರನೆಂದೆನೆ ಹರಿಸಖನಿಂತೆಂದಂ

ಕಂ॥ ನೀನಾರ್ಗೆಲ್ಲಿರ್ಪೆ ಪೆಸ
ರೇನೆಂಬುದು ನಿನ್ನವಸ್ಥೆಯೇನೆವದಿಂ[4][ದಂ
ತಾನಾ][4]ದುದೊ ಪೇ[5][ೞೆನೆ][5] ಖಚ
[6][ರಂ][6] ನುಡಿದಂ ತಿಳಿಪಿ ತನ್ನ ತೆಱನನಿತನಿತಂ ೧೪

ವ॥ ವಿಜಯಾರ್ಧಪರ್ವತದ ಮೇಗಣ ಸಿದ್ಧಮಂದಿರಮೆಂಬ ಪೊೞಲನಾಳ್ವಂ ಮಹೇಂದ್ರವಿಕ್ರಮನೆಂಬ ವಿದ್ಯಾಧರಂಗಂ ಮತ್ಸ್ಯೆಯೆಂಬ ವಿದ್ಯಾಧರಿಗಂ ಪುಟ್ಟಿದೆನಮಿತ

1 ಮ 2 ಪೞಿಪೞಿವಂ ನೆನೆನೆನೆದುಂ 3 ವರಿವ 4 ದಾ 5 ಳಿಂಪಡೆ 6 ರಪ್ರಭ

ಗತಿಯೆಂಬಿನೆನ್ನ ಪ್ರಾಣವಲ್ಲಭೆಗಾಟಿಸಿ ಗೌರಮುಂಡನುಂ ಮಾರುತಿಮುಂಡನನುಮೆಂಬ ವಿದ್ಯಾಧರರೆನ್ನೊಳ್ ಸಖಿತ್ವಮುಂ ತಾಳ್ದಿರ್ಪರೀಗಳಾಂ ವಾಸುಪೂಜ್ಯತೀರ್ಥವಂದನಾ ಭಕ್ತಿಗೆವಂದು ಪೋಗುತ್ತಮಿಾ ತೊಱೆಯ ರಮಣೀಯಮುಂ ಕಂಡಾತ್ಮವಲ್ಲಭೆಯುಮಾನುಂ ವಿಶ್ರಮಿಸಲೆಂದಲ್ಲಿಗೆ ವಿಮಾನಮನಿೞಿಪಿದೆವನ್ನೆಗಮುಪಂದಿರೆನ್ನ ಬೆನ್ನನೆ ಬಂದು ಮಱವಟ್ಟಲ್ಲಿ ಯೆನ್ನಂ ಛಿದ್ರಿಸಿ ವಿದ್ಯಾಛೇದನಂ ಮಾಡಿ ಈ ಮರದೊಳ್ ಕೀಲಿಸಿಟ್ಟೆನ್ನ ವಲ್ಲಭೆಯಂ ಕೊಂಡು ಪೋದರೆನ್ನೆನ್ನ ಸತ್ತನೆಂದೇ ಬಗೆದಾಕೆಯುಂ ಪ್ರಾಣತ್ಯಾಗಂಗೆಯ್ಯದಿನ್ನೆವರೆಗಂ ನಿಲ್ವಳಲ್ಲದಾಡೊಡಂ ಶೀಘ್ರದಿಂ ಪೋಪೆನಿಲ್ಲಿಯೆನ್ನಂ ಛಿದ್ರಿಸಿದೊಡನಲ್ಲಿಯವರ್ಗಪ್ಪುದಂ ಮಾಟ್ಪೆನಾರಾನುಮೆನಗಿದಿರಪ್ಪರಿಲ್ಲೆಂದಮಿತಗತಿಯ ಖೇಟಮುಂ ಕಂಡು ಪೊಡವಟ್ಟು ತನ್ನಾವಾಸಕ್ಕೆ ಪೋದನಾಗಳ್ ಚಾರುದತ್ತಂ ಮತ್ತಂ ತೊಱೆಯ ತಡಿವಿಡಿದು ಬರೆ ಹರಿಸಖಂ ಗೋಮುಖಂಗಿಂತೆಂದಂ

ಕಂ॥ ನೆಱೆಯೆ ಮನಂಗೊಳಿಸುವುದಿಂ
[1][ತಱಿಯಲ್ಕಿ][1]ದು ನಾಡೆ ಜೋಡ್ಯ[2][ಮಂತ][2]ಪ್ಪುದಱಿಂ
ತೊಱೆಯಂ ನೋಟ್ಪುದನೀತಂ
[3][ತೊಱೆ][3]ಯುಂ ನಾಮಾಗಿ ನಮಗೆ ಪೋಪುದೆ ಕಜ್ಜಂ ೧೫

ವ॥ ಎಂದು ಚಾರುದತ್ತಂಗೆ ನಾಡೆ ಪೊತ್ತು ಪೋಯ್ತು ನಾಮಿಂ ಪೊೞಲ್ಗೆ ಪೋಪಮೆನೆ ಮಗುಟ್ದು ಬಂದು ಪೊೞಲಂ ಪೊಕ್ಕೆಂದಿನಂತೆ ವಿದ್ಯಾಭ್ಯಾಸಂಗೆಯ್ಯುತ್ತಂ ಸುಖದಿನಿರ್ದನಿತ್ತ ದೇವಿಲೆ ಮಗಂಗೆ ಮದುವೆಯುಂ ಮಾಡಲ್ ಬಗೆದು ಭಾನುದತ್ತ ಸೆಟ್ಟಿಯುಂ ತಾನುಂ ತಮ್ಮಣ್ಣನಪ್ಪ ಸಿದ್ಧಾರ್ಥಸೆಟ್ಟಿಗಂ ಸೌಮಿತ್ರಿಗಂ ಪುಟ್ಟಿದ ಮಿತ್ರಾವತಿಯಂ ಬೇಡಿ ಪಡೆದು ಮಹೋತ್ಸಾಹದಿಂ ಶುಭಮುಹೂರ್ತದೊಳ್ ಚಾರುದತ್ತಂಗಂ ಮಿತ್ರಾವತಿಗಂ ಪಾಣಿಗ್ರಹಣಂಗೆಯ್ದಿಷ್ಟಬಂಧುಜನಕ್ಕೆ ತುಡಲುಮುಡಲುಮುಣಲುಂ ಕುಡೆ

ಮ॥ ಇದು ಚಿಂತಾಮಣಿಯುಂಟೆ ಪೇೞ್ ಪಡುಕೆಯೊಳ್ ಪತ್ತುಂ ಮಹಾಕಲ್ಪವೃಕ್ಷಂ
ಗ[4][ಮ][4] ಬೆಳ್ವಾಗಿರೆ ಪಿತ್ತಿಲಕ್ಕೊಗೆದುಮೋ ಪುಣ್ಯಪ್ರಭಾವತ್ವದಿಂ
ನಿಧಿಗಳ್ ಸಾರ್ದುವೊಯೆಂತು ನೋಟ್ಪಡಮಚಿಂತ್ಯಂ ಬೀಯಮೆಂದಿಂತು ಸ
[5][ಗ್ಗದ][5]ರೆಲ್ಲಂ ಪೊಗೞ್ವಿಂತು ನಾಡೆ ಭರದಿಂ ವೈಶ್ಯೋತ್ತಮಂ ಮಾಡಿದಂ ೧೬

ವ॥ ಅಂತು ಮಾಡಿ ವಿವಾಹಕಲ್ಯಾಣದೊಳ್ ಪೊೞಲೆಲ್ಲಂ ವಾಸುಪೂಜ್ಯ ಸ್ವಾಮಿಯ ಪರಿನಿರ್ವಾಣಕಲ್ಯಾಣೋತ್ಸಾಹದಿಂದಮಗ್ಗಳಮಾಗೆ ಸುಖದಿಂ ಕೆಲವು ದಿವಸಂ

---

1 ತಿ 2 ಮ 3 …ಱಿ 4 ಳು 5 ಜ್ಜನ

ಗಳ್ ಪೋಗೆ ಚಾರುದತ್ತನಾಗಳುಂ ವಿದ್ಯಾಭ್ಯಾಸಂಗೆಯ್ಯುತ್ತಂ ನಿಜಸ್ತ್ರೀಯುಮನೆನಸುಂ ಬಗೆಯದಿರೆ ಮಿತ್ರಾವತಿ ತವರ್ಮನೆಗೆ ಪೋದೊಡವರಬ್ಬೆ ಮಗಳ ಮೊಗಮಂ ನೋಡಿ ರಾಗಮಿಲ್ಲದಿರವಂ ಕಂಡಿಂತೆಂದಳ್

ಕಂ|| ಎಂತೀ ಮುಡಿ ಮುನ್ನಂ ಮುಡಿ
ದಂತಿರ್ದುದು ನೊಸಲೊಳೊಪ್ಪಿ[1][ದ ಕತ್ತುರಿಯು][1]ಬೊ
ಟ್ಟಂತಿಟ್ಟಳ ಮಾೞ್ಕೆಯೊಳಿ
[2][ರ್ದಂತಿರ್ದ][2]ದು ಮಗಳೆ ಮುನಿದನೇ ನಿಜದಯಿತಂ ೧೭

ಪೂಸಿದ ಕುಂಕುಮಮೆನಸುಂ
ಬೀಸರಮಾಗಿರದು ಮೊಲೆ ಪಳಂಕವು ಮೊಗಮುಂ
ಮಾಸರಿಕೆಯತ್ತ ಪೊರ್ದದು
ರೋಸವೆ ಸತಿ ಪೋಗಿಕಳೆನೆ ಪೆಱಪೆಱತೆಡೆಯೊಳ್ ೧೮

ನೀನಾತಂಗಾತಂ ನಿನ
ಗೇನುಂ ತಪ್ಪಿಲ್ಲ ತಕ್ಕನೇ ಕೂಡಿದಿರಿಂ
ತೇನುಗಡ ತಪಸಿಯಂತಿರೆ
ಮೌನಧ್ಯಾನದೊಳೆ ಕಳೆದಿರೇ ನೀಮಿರುಳಂ ೧೯

ವ|| ಎಂದು ಬೆಸಗೊಳೆ ತಲೆಯುಂ ಬಾಗಿರೆ ನೀಂ ತಾಯ್ಗೆ ಪೇೞವೆ ಮತ್ತಾರ್ಗೆ ಪೇೞ್ವೆಯೆನೆ ಕಣ್ಣನೀರ್ಗಳಂ ಸಿಡಿಯುತ್ತ ಮತ್ತಮಿಂತೆಂದಳ್

ಕಂ|| ಲತೆಗೇರದ ಮರದರ್ಪಂ
ಮತಿಯಿಲ್ಲದೆ ಮಾಡಿಸಿಟ್ಟು ಬೞಿಕಾ ಲತೆಗಿಂ
ಬಱಿಸಿದಡುಂಟೆ ಭರದಿಂ ಪಿ
ಶಾಚಪತಿ ಗಂಡನಾದೊಡಿಂಬಱಿಸುವುದೇ (?) ೨೦

[3][ಪಿರಿದೆ][3]ನಿಪ ರತ್ನಮಂ ಸಾ
ಗರಮೊಳಗಿಕ್ಕಿ[4][ಸಿ][4] ಬೞಿಕಱಿಸುವವೊಲ್ ನೀಮೆ
ಲ್ಲರುಮೆ[5][ನ್ನಂ ಭರದಿಂ][5] ಮು
ಸ್ಕರಿಕೆಯ ಮರುಳಂಗೆ ಕೊಟ್ಟು ಬೞಿಕಱಿಸುವುದೇ ೨೧

1 ಕತ್ತುರಿ 2 ರ್ದ 3 ಮಿಗಿಲೆ 4 ಕಿಡಿಸಿ 5 ನ್ನಂ

ವ|| ಎನೆ ಪೇೞದೊತಪ್ಪ ಮರುಳೆನೆ ಐತ್ರಾಪತಿ ಪುತ್ರನಿಂತೆಂಗುಂ

ಕಂ|| ಮರದೊಳ್ ಕಟ್ಟಿದ ಸೊರೆಯುಂ
ಸರಾಗದಿಂದುರದೊಳಿಟ್ಟು ಬೀವಿನ ನೇಣಂ
ಬೆರಲೊಳವನರ್ದಿ ಮಿಡಿಗುಂ
ಪೊರೆ[1][ಗುಂ ಬೞಿ][1]ಕೊರ್ಮೆ ಕೆರ್ಚುಗುಂ ಪೆರ್ಮೆದಿರಂ ೨೨

[2][ತೋೞ][2]ಲೊಳ್ ಮುಚ್ಚಿದ ಮಾೞಿಕ್ಕಯ
[3][ಕೇಲವ][3] ಮುಂದಿಟ್ಟು ಬಡಿವುತಿರ್ದಂ ಪಲರಂ
ಸೋಲಿಸುತೆ ಬೞಿಕೆ ತೊಡೆಗಳೆ
ಮೇಲಡ್ಡಂ ಕೊರಡನಿಟ್ಟು ರಾಗದೆ ಬಡಿಗುಂ ೨೩

ಪಾಡುಗುಮುಡುರ್ತುಪೋಗೆ [4][ಮಿ][4]ಗೆ
ನೋಡುಗು[5][ಮ][5]ಭಿನಯಿಸಿ ಪಲವು ರಸಭಾವನೆಯಿಂ
[6][ದಾಡು][6]ಗುಮಾಗದೆ ಕಬ್ಬಂ
ಮಾಡುಗುಮೋಲಿಗಕನಣಮು ಬ[7][ರೆ][7]ಯುತ್ತಿರ್ಕುಂ ೨೪

ನೆಲನಂ ಬರೆಗುಂ ಮತ್ತಂ
ಪಲಗೆಗಳೊಳ್ ಪಲವು ತೆಱದ ವರ್ಣಕ್ರಮದಿಂ
ಪಲ[8][ವುಂ][8] ರೂಪಂ ಬರೆಗುಂ
ಪಲನಾಡುವನಂತೆ ತಾನೆ ತನ್ನೊಳ್ ನುಡಿಗುಂ ೨೫

ಸುರಿಗೆ[9][ಯು][9]ನಾಡು[10][ಗುಮಂತಾ][10]
ಮರವಾಳಂ ಕೊಂಡು ಬೀಸುತಿರ್ಕುಂ ಪೆಱತೇ
ನಿರುಳೆಲ್ಲಮಿಂತೆ ಪೋಪುದು
ಮರುಳಪ್ಪಂಗೇನೊ ಪೇೞ ಕೋ[11][ಡೊಂದುೞಿಯುಲ್][11] ೨೬

ವ|| ಎಂಬುದುಂ ತಾಯ್ ಬಸಿಱಂ ಬಡಿದುಕೊಂಡೞ್ತು ನಿಮ್ಮ ತ್ರಿಯಪ್ಪ ಪಾಪಕರ್ಮೆಯೆನ್ನನಾೞಡಿಗೊಂಡಳ್ ನೀನಿಂತಿರೆಂದು ದೇವಿಲೆಯುಲ್ಲಿಗೆ ಪರಿತಂದು

---

1 ಗುಂ...... 2 ತೊಗ 3 ಕೆಲವಂ 4 ಪೊ......ಗೆ 5 ನ 6 ದೋಡು 7 ಗೆ 8 ವು 9 ಯೆ 10 ಗು 11 ಡೊ......

ಕಂ॥ ನಿನ್ನ ಮಗಂ ಮರುಳ[ನ]ಪ್ಪು
ದಿನ್ನುಂ ಪೆಱರಾರುಮಱಿಯದನ್ನೆಗಮೀ ಕೂ
ಸಂ ಮದುವೆಮಾೞ್ಪೆನೆಂಬು
ಕ್ಕೆಪದಿಂ ನಡುನೀರೊಳಂತು ಹಱುಗುಲ ಕೊಯ್ದ್ದ್ಲ (?) ೨೭

ಎನ್ನನ[1][ರೆ][1]ಯಿಱಿದಡೇನೋ
ನಿನ್ನೊಡವುಟ್ಟಿದನ ಮಗಳ [2][ತಂದೀ ಪಾಪಮಿ
ದಿನ್ನೆನ][2]ಗಸದಳಮಾಯ್ತುದ
ನಿನ್ನಾವ್ರಮೊ ತೆಱದಿ ನೀಗುವೌ ಪೇೞ್ ಪೊಲತೀ ೨೮

ವ॥ ಎಂಬ ಮಾತಂ ಕೇಳ್ದಿದೇನೆನೆ ನಿನ್ನ ಮಗನೆಮ್ಮಳಿಯಂ ಚಾರುದತ್ತಂ ಪಿರಿದುಂ ಬುದ್ಧಿಯೊಡೆಯನಾಗಿರ್ಪನೆನೆ ಪೇೞೆಂತು ಮರುಳಾದನೆನೆ[ಯು]ದಂ ಪೇೞ್ದು ಬೞಿಕ್ಕೆ[ಂ] ಬಯ್ಯಿಪುತ್ರಿ[ರ]ಲಾಗದೆಯಾತಂ ಮರುಳಾದೊಡೀ ಲೋಕದೊಳ್ ಪುರುಷರತ್ನಮಾರೆಂದೊಡಕ್ಕಂ ನಿನಗಿಂದಿನಿರುಳ್ ತೋರ್ಪೆನದಂ ಕಂಡು ನಂ[ಬೆಂ]ದು ಪೇೞ್ದು ಮನೆಗೆವಂದು ಮಗಳ್ಗೆ ತಕ್ಕುಪಚಾರಮುಂ ಮೆಱೆದು ಚಾರುದತ್ತನ ಮನೆಗೆ ಕಳುಪಿ ನಡುವಿರುಳಪ್ಪಾಗಳ್ ಸುಮಿತ್ರೆ ದೇವಿಲೆಯಲ್ಲಿಗೆ ಬಂದು ನೋೞ್ಪಂ ಬಾಯೆಂದಾಕೆಯನೊಡಗೊಂಡು ಪೋಗಿ ಚಾರುದತ್ತನ ಸುಸಿಲಮನೆಯ ಗವಾಕ್ಷಜಾಳಮಂ ಹತ್ತಿ ನೋೞ್ಪಾಗಳೆಂದಿನಂತಾತಂ ವಿದ್ಯಾಭ್ಯಾಸಂಗೆಯ್ಯುತ್ತಿರ್ದುದಂ ಕಂಡು ನೋಡು ನಿನ್ನ ಮಗನ ಮರುಳಾಟಮನೆಂದೊಡತ್ತಿಗೆಯುಂ ದೇವಿಲೆ ಬೇಱಿತ ತೆಗೆದಿಂತೆಂದಳ್

ಕಂ॥ ಈತಂಗೆ ಸಕಲ ವಿದ್ಯಾ
ವ್ರಾತ[3][ದ][3] ಚಿಂತೆ[4][ಯು][4]ವೆಱತೂಳತಿಕುಶಲಂ ರತಿಸಂ
ಪ್ರೀತಗೆ ಪೊನಲ[5][ಪ್ಪನುಮಂ
ತಾತಂ][5] ನೋೞ್ಪವರ್ಗೆ ಶಾಸ್ತ್ರಜಡನಾಗಿರ್ಪಂ ೨೯

ವ॥ ಆ ಜಡತ್ವಂ ಕೆಲವುದಿವಸದಿಂದ ಪೋಕುಮುಂಜದಿರೆಂದತ್ತಿಗೆಯುಂ ಸಂತೈಸಿದಿಂಬೞಿಯಮಂತಮಪೆ ಚಿಂತೆಯಾಗಿರ್ದು ತನ್ನ ಸೆಟ್ಟಿಯ ತನ್ನ ರುದ್ರದತ್ತನೆಂಬೊಂಕರಂ ವ್ಯಾಳನುಂ ಸೂಳೆಯನುಮಾಗಿಪ್ಪೊನಾತನಂ ಕರೆದಿಂತೆಂದಳ್

1 ೦   2 ತರ್ದೀ ಪಾಪಂ ನಿನ   3 ದಕಡು   4 ಮ   5 ಪ್ಪಂ...

ಕಂ॥ ಎನ್ನ ಮಗಂ ಯುವ್ವನ ಸಂ
ಪನ್ನಂ ರೂಪಸ್ವಿ ಮದುವೆಯಾಗಿರ್ದುಂ ತಾ
ನಿನ್ನುಂ ಶಾಸ್ತ್ರಜಡತ್ವಂ
ತನ್ನಿಂದಂ ಪೋಗದಿರ್ದುದಂ ಕಂಡವರ್ಗಳ್ ೩೦

ವ॥ ಮರುಳಿಂದು ಬಗೆವನತ್ತೆಸಾನಂದಿರೆನ್ನ ಬೆಳ್ಮಾಡುತಿರ್ದೊರಾತನಂ ರತಿಸುಖಾಭಿಲಾಷೆಯಂತೆ ಮಾಡೆಂಮೊಡಂತೆಗೆಯ್ವೆನೆಂದು ಬೀಯಕ್ಕೆನಿತಾನುಂ ದ್ರವ್ಯಮಂ ಕುಡೆ ಕೊಂಡು ಧೂರ್ತವಿಟಕುಮಾರನಂ ಸಮಕಟ್ಟಿ ಚಾರುದತ್ತಂಗೆ ವಿದ್ಯೋಪದೇಶಂಗೆಯ್ವುಪಾಧ್ಯಾಯನ ಸಮೀಪಕ್ಕೆನಂದು ವಿನಯದಿನಾನುಮೋದುವೆನೆಂದು ಕೆಲವು ದಿವಸಮಭ್ಯಾಸಂಗೆಯ್ದು ಮಾತನೊಳ್ ಮೇಳಮಂ ಮಾಡಿಕೊಂಡು ನಿಜ್ಜಲುಮುಪವನಮಂ ನೋೞ್ಪಂತೊಯ್ದಲ್ಲಿರ್ದೋಜೆಯ ವಿಳಾಸಿನೀಜನದಿಂ

ಕಂ॥ ನೋಡಿ ಸಲೆ ನುಡಿದು ಚದುರಿಂ
[1][ದೇಡಿ][1]ಸಿ ಪಿಡಿಮೊಯ್ದು ಸೋಂಕಿ ಕುಳ್ಳಿರ್ದುಂ ಸುಪಂ
[2][ಗೂಡಿಯೆ ಪಲತೆಱದಿಂದ
ಲ್ಲಾಡಿಯೆ][2]ಲೀಲೆಯನೊಡರ್ಚೆನಿರ್ಕುಳಿಗೊಂಡರ್ ೩೧

ವ॥ ಅಂತಾತನು ಪೋಳಿಸುತ್ತನುಂಗಡಿಗಳೊಳಮುವನೆಗಳೊಳಮಾಟಪಾಟಪೆಡೆಗಳೊಳಂ ಪರಿಚಯದಿಂ ಶೃಂಗಾರಕಥಾರಸದೊಳಂ ಗೋಷ್ಠಿಗೆಯ್ದುತ್ತಮೊಂದುದಿವಸಂ ರುದ್ರದತ್ತನೆಂಬಂ ಚಾರುದತ್ತ ನಿನ್ನ ವೈಶಿಕದ ಕಳೆಯು ಕೇಳಿಯ ಬಲ್ಮೆಯನೆಮಗೆ ತೋಱಿಮೆಂದು ಸೂಳೆಗೇರಿಯೊಳಗಂ ಪೊಕ್ಕು ನೋೞ್ಪಾಗಳಲ್ಲಿಯೊಂದು ವಿಶಾಲಮಂಟಪದೊಳ್ ನೆರೆದಿರ್ದ ಚ್ಚ[3][ರ][3]ಗಣಿಕೆಯರಂತಪ್ಪರಂ ಕಂಡು

ಕಂ॥ ತಂತಮ್ಮ ಚದುರಿನೆಣಿಕೆಯ
ಕಾಂತೆಯರುಂ ಪಲರುಮೊಂದಿ ನೆರೆದಿರೆ ಪಿರಿದುಂ
ಭ್ರಾ[4][ತಿಂ][4] ನೆರೆದರ್ [5][ಕೂಂ][5]ಟಣಿ
ಯರ್ತಂತಮ್ಮಿಚ್ಛೆಯಿಂದಮಿಂತಿಂತೆಂಬರ್ (?) ೩೨

ಮ॥ ಜಗದಂತಂಬರಮುಂ ಧರಾತಳಮುಮಂ ಪೋಲ್ವಗ್ರಪಾತಾಳ ಸೂ
ಜಿಗಳಂ ಗರ್ಜಿಪ ಭೇರಿ ತಾಟಕಿಯರಂ ಮೇಗಿಲ್ಲದಾಕಾಶಗಂ
ಟಿಗಳಂ ವಿಸ್ಮಯಮಾಗೆ ಬಂಚಿಪ ಕೃತಾಕೃತ್ಯತ್ವದಿಂ ಸಂ[6][ಗದಾ][6]
ಳುಗಳಂ ಕೊಂಟಣಿಯರ್ಕಳಂ ಪಲರುಮಂ ಕಂ[7][ಡರ್ ವ][7]ಣಿಜ್ಞಂದ[8][ನರ್][8] ೩೩

1 ಮೋಳಿ 2 ಪಲತೆಱನಲ್ಲಿಯಾಡಿಯೆ ಪಿರಿದುಂ 3 ರಂ 4 ತಿನೊಳು 5 ಕೂ
6 ದಾಗ 7 ಡರ್ವಾ 8 ನಂ

ವ|| ಕಂ[1][ಡಿಂ][1]ತಪ್ಪವರ್ ತಮ್ಮ ಜಾತಿಸ್ವಭಾವಂಗಳಳಂಕಾರದೊಳ್ ಕೂಡಿರ್ದರಂತೆ ನೋೞ್ಪಿರೊಂದೆಡೆಯೊಳ್

ಮ|| ಚದುರೊಳ್ ಜಪ್ಪನದೊಳ್ ವಿಳಾಸದೆಡೆಯೊಳ್ ಮತ್ತೊರ್ವಳಿನ್ನನ್ನಳಿ
ಲ್ಲವಲೇನಿಂದ್ರನೊಳಾದ ಬಾೞ್ ಸವತಿವಾೞೀ ಪೊಲ್ಲದಾನೊಲ್ಲೆನೀ
ಪುದುವಾೞೀ ನರಲೋಕದಲ್ಲಿಗಿೞಿವಾನೆನ್ನಿಚ್ಛೆಯಿಂ ಪೊತ್ತೆಗೊ
ಳ್ವುದು ಲೇಸೆಂದಿೞಿತಂದ ರಂಭೆಯೆನೆ ಪೋಲ್ತಿಂತೊತ್ತೆಗೆಂದಿರ್ದಳಂ ೩೪

ವ|| ಕಂಡಂತಪ್ಪುಪಮೆಗೆ ತಕ್ಕಳೆಂದು ನೋಡುತ್ತಂ ಬರ್ಪರೊಂದು ರಮ್ಯಹರ್ಮ್ಯದ ಮುಂದೆ

ಚಂ|| ಕುರುಳಳಿಗಳ್ ಮೊಗಂ ಸರಸಿಜಂ ನಯನಂಗಳ್ ಬಾಳಮೀನ್ ಪಯೋ
ಧರಯುಗಳಂ ರಥಾಂಗಯುಗಳಂ ರಸಭಾವಮನೀಕೆಯರ್ ನಯಂ
ಬೆರಸಿದ ಮಾತಿನೊಳ್ಪು ಕೊಳರ್ವಕ್ಕಿಯ ಮೆಲ್ಲುಲಿಯಾಗಿ ನಿಂದಳಂ
ವಿರಹಿಗೆ ಸೇದೆಯಂ ಕಳೆವ ಶಕ್ತಿಯ ಪೂಗೊಳನೆಂದೆ ನೋಡಿದಂ ೩೫

ವ|| ನೋಡಿ ರೂಪಕಮೆಂಬುದಿಂತಪ್ಪುದುಮೆನುತ್ತಂ ಪೋಗಿ ಮತ್ತೊಂದು ಮನೆಯ ಮುಂದೆ

ಮ|| ಎಸೆದಂತೊಪ್ಪಿರೆ ಕೆಂಕಮಾಗಿ ಘನದಂ ಕಯ್ಗೆಯ್ದು ಬಂದೊತ್ತೆಗೆಂ
ದೊಸೆದಿರ್ದೀಕೆಯ ತೊಟ್ಟ ಭೂಷಣಗಣವ್ಯೋಮಾರ್ಘ ರತ್ನಪ್ರಭಾ
ಪ್ರಸರಂ ರಕ್ತತೆಯಿಂ ಮನೋಹರ ಲಸತ್ ಪದ್ಮಾಶ್ರಯಾಲಕ್ತಕಾ
[2][ರಸ][2]ದಿಂದಂ ನಡೆಪಾಡುತಿರ್ದಿರವುಮಂಗೋದ್ಯತ್ ಧರಾಭಾವಮಂ ೩೬

ವ|| ಈ ಶ್ರೀ[3][ವನಿ][3]ತೆ ದೀಪಕಚ್ಛಾಯೆಯಿನಿರ್ದಳೆನುತ್ತಂ ಪೋಗಿ ನೋೞ್ಪಿರಲ್ಲಿ

ಚಂ|| ಸೊಗಯಿಪ ತೋರಮಲ್ಲಿಗೆಯ ಪೆರ್ಮುಡಿ ಶೋಭಿಸೆ ರಾಗದಿಂದಮು
ಟ್ಟಗಲದ ನಾಗಪಟ್ಟಣಿಗೆಯುಂ ಸುಲಿಪಲ್ ಕರಮೊಪ್ಪೆ ನಾಡೆಯುಂ
ಸೊಗಯಿಸೆ ಮುತ್ತಿನೊಳ್ದುಡುಗೆ ರಂಜಿಸೆ ಚಂದನಮಕ್ಕೆ ನಲ್ಲನ
ಲ್ಲಿಗೆ ಬೞಿಯಟ್ಟೆ ನಿಂದ ತಲೆಮಿಂದ ಲತಾಂಗಿಯನಂದು ನೋಡಿದರ್ ೩೭

---

1 ಡಿ 2 ದರ 3 ವಂ

ವ|| ಈ ವೃತ್ತದರ್ಥೋಕ್ತಿಯಂ ತಿರ್ದಪ್ಪಳಿಕೆಯಿಸುತ್ತ ಪೋಪರ್ ಮತ್ತೊಂದೆಡೆಯೊಳ್

ಚಂ|| ಸುಲಲಿತ ರೂಪೆಯೊರ್ವಳನುರಾಗದೆ ಕಂಪ್ಗೆ ಯಲರ್ದೊಡಾಕೆಗ
ಗ್ಗಲಿಸಿದ ಮೇಳದಾಕೆ ನುಡಿಗುಂ ನಿನಗಚ್ಚಿಗಮೇನೊ ಭೂಷಣಾ
ವಳಿಗಳನಿಟ್ಟು ತೊಟ್ಟು ಪಲವಂದದೆ ಪ್ರಾಸಿಯುವಿಂತಿದೇಕೆ ಪೇೞಿರ್
ಜಲಜದಳಾಕ್ಷಿ ನಿಮ್ಮ ಜಸವೌ ನಿಜರೂಪದ ಚೆಲ್ವಿನಂದಮುಂ ೩೮

ವ|| ಅಂತು ವಚನದಾಕ್ಷೇ[1][ಪ][1]ಮನವರ್ಗಜಾಪುತ್ರಂ ಪೋಗೆ ಮತ್ತೊಂದೆಡೆಯೊಳ್

ಚಂ|| ಮದನಗಜೇಂದ್ರದಂಪಡೊಳೆ ಪೆಂಪೆಸೆದಿರ್ದ ನಿದಗ್ಧೆಯುತ್ತ ಸಾ
ರದೆ ಕಡುಗೋಪದೊರ್ವನಬಿಗೆಯ್ತ್ತಡೊಳೊಂದಿದೆ ಪಾಜಿವರ್ಗದೇ
ಳಿದೆಗಿರದೊತ್ತೆಯಿಟ್ಟೊಸೆದು ಪೋದನದಂತೆಯುಮಿಲ್ಲ ತಪ್ಪನ
ಲ್ಲದ ಮನುಜಂ ಪ್ರಭುತ್ವದೆಡೆಗೊಲ್ಗುಮೆ ಸಲ್ಗುಮೆ ಪೆಂಪಿನೋಜೆಯೊಳ್ ೩೯

ವ|| ಈ ಮಾತರ್ಥಾಂತರ ನಿಜ್ಞಾನದಿಂದಜಾಪುತ್ರಂ ಪೋಗಿ ಪೆಜತೊಂದು ದಿವ್ಯಭವನೋಪವನಸುಧಾಲಯದಲ್ಲಿ ದಿವ್ಯಾಂಗನೆಯಂತಿರ್ದಳಂ ಕಂಡಿಂತೆಂಬರ್

ಮ|| ನುಡಿಯೊಳ್ ಕೆಂಪ್ತುಡೊಳೋಜೆಯೊಳ್ [2][ಸೊ][2]ಬಗಿನೊಳ್ ಸೌಂದರ್ಯದೊಳ್ ಗಾಡಿಯೊಳ್
ನಡೆಯೊಳ್ ನೋಟ್ಪಡೆಯೊಳ್ ವಿಳಾಸದೆಡೆಯೊಳ್ ಚಾತುರ್ಯದೊಳ್ ನೋಟ್ಪಡೇ
ಪಡೆಮಾತೇಕೆಯುಮುರ್ಬಸೀಲಲನೆಯುಂ ತಾಮೊರ್ಬರೆಂಬನ್ನರಾ
ಪೊಡಮೇಂ ಮಾನಸೆಯೀಕೆ ದಿವ್ಯೆಯವಳೆಂಬೀ ಭೇದಮೊಂದುಂಟೆನಲ್ ೪೦

ವ|| ಎಂದಾಕೆಯುಂ ವ್ಯತಿರೇಕಾರ್ಥದೊಳ್ ಪೊಗೞುತ್ತಂ ಮತ್ತಿನಿಸಂ ನಡೆವೊರೊಂದೆಡೆಯೊಳೊರ್ವಳ ರೂಪಿನೊಳ್ಪಂ ಕೇಳ್ದು ಬರ್ಸವರಸುಮಗನನಳ್ಗೆತ್ತೆಯುಂ ಕೊಟ್ಟೊಡಗೊಂಡು ಬನ್ನಿಮೆಂದು ಪೇಸರಿಯುಮುಂ ಕಿಜಾಂದಾಳಮನಟ್ಟಿದೊಡವರ ಮಕ್ಕಳ್ ಕರಂ ವ್ಯಾಳರುಂ ಕ್ರಿಯಾಳರುಮಪ್ಪರೆನ್ನ ಮಗಳನೆಂತಟ್ಟುವೆನೆಂದ ತಾಯನೊರ್ವಳಿಂತೆಂಬಳ್

---

1 ಮ 2 ಸು

ಮ॥ ನೊಗಸುಂ ನೋಡಪೆಯುಂ ಸ್ವಭಾವಮಜಾವಳ್ ಮೆಯ್ ಪೊರ್ದದಿರ್ದುಂ ಮನಂ
ಬುಗುವಳ್ ಭಾವಿಸದಾತನಲ್ಲದೊಡಮೇಂ ಸಂಪರ್ಕದೊಳ್ ಗಂಡನಿ
ಚ್ಚೆಗೊಳಲ್ಕಾ ರತಿಯನ್ನಳಿಂತು ಬಿಡದೆಚ್ಚಾರಿದ್ದ ಬಿಲ್ಲನ್ನಳೀ
ಕೆ[1][ಗೆ ನೀನಿಂತುರೆ][1] ಚಿಂತಿಪ್ಪೆ ಜದುರಪೆಂಪಾರಾದೊಡಂ ಗೆಲ್ಲದೇ ೪೧

ವ॥ ಎಂದ ಗಣಿಕೆಯ ಮಾತಂ ಭಾವನಾರ್ಥಮೆಂದಜಾಯೆ ಪೇಟುತ್ತಂ ಬರ್ಪ
ನೊಂದು ತಾಣದೊಳ್ ಪಲರುಂ ವಿದಗ್ಧವಿಟ[2][ರ][2]ರ್ದಲ್ಲಿಯೊರ್ವನಿಂತೆಂದಂ

ಚಂ॥ ಬರಿಪುದು ಬಾರದಿರ್ದ ನರನಂ ಬರುತಾಗಳೆ ಪೋಪಡಪ್ಪುಕೆ
ಯ್ದಿರಿಪುದು ಮೂರ್ಖನಾಗಿ ತಡೆದಿರ್ಪಡೆ ಪೋಗನೆ ಮಾಟ್ಪುದಾಗಳುಂ
ಕರಮನುರಾಗಮಂ ಪಡೆದು ಮೆಲ್ಪಿನೊಳೋತೊಡಗೊಂಡು ಪೋಗೆ ಮಾ
ಣ್ದಿರಮೊಡವೋಪುದೆಂಬಿನಿತೆ ಕೇಳಿರೆ ಕಾಣಿರೆ ಸೂಳೆಪೆಂಡಿರೊಳ್ ೪೨

ವ॥ ಎಂದು ಬಹಿರಂಗವೃತ್ತಿಯಂ ಪೇಟ್ದಂತೆ ಸಮಾಸೋಕ್ತಿಯೊಳಂತರಂಗವೃತ್ತಿ
ಯೊಳ್ ಪೆಂಡಿರ ಸುರತಕೌಶಲ್ಯಮಂ ಪೇಟ್ದಪ್ಪನೆನುತ್ತಂ ಬರ್ಪನೊಂದು ಕನತ್ಕನಕ ಕಮ
ನೀಯ ವಿಶಾಲಭಂಜಿಕಾಂಗಣದೊಳ್

ಚಂ॥ ಎಣೆಯೆನಗಾವಳೆಂಬ ಮದದಿಂ ಪೊಜಮಟ್ಟಳು ತೊಟ್ಟ ರತ್ನಭೂ
ಷಣದ ಮರೀಚಿರಕ್ತತೆಯನಾಕೆಗೆ ಮಾಡುತಮಂತೆ ಪೊಣ್ಮೆ ಮೇ
ಗಣ ಪೆಸೆಗುಣ್ಮೆ ಜೆಳ್ಮುಗಿಲನಾಗಳೆ ಕರ್ಮುಗಿಲಾಗೆ ಮಾಡಿ ಮಾ
ಣ್ದಣಮಿರದಂತೆ ನೀಳ್ದ ನಯನಕ್ಕೆಣೆಮಾಡಿಗುದಿಂದುಬಿಂಬಮಂ ೪೩

ವ॥ ಅದಂ ಕಂಡೀಕೆಯ ವಿಭವಮತಿಶಯಮೆಂದು ಪೇಟುತ್ತಂ ಪೋಪರಲ್ಲಿ
ಯೊಂದು ಗೃಹಾಂಗಣದೊಳ್

ಶಾ॥ ತಾಯಂ ಬಂಚಿಸಿ ಸಂಚಿಸಿರ್ದ ಧನಮಂ ಬಿಟ್ಟಕ್ಕಟಾ ತಪ್ಪುಕೆ
ಯ್ದೀಯೆಗ್ಗಂ ಬಿಸುಟೊತ್ತೆಗೊಂಡು ಪಡೆ ನಿನ್ನಂ ನೊಂದು ನಂಟತ್ತೆಗು
ಳ್ಳಾಯಂಬೇಟುಬ್ದಾಡೆ ಸಿಗ್ಗು ಪೊಣ್ಮೆ ಮನದೊಳ್ ಬಂಪೊತ್ತೆಗೆಂದಿರ್ದ ಪಾಂ
ಗೀಯುಂದಂ ಪೆಜದಲ್ತಿದೆಂದು ಬಗೆದಂ ಕಂಡಾಕೆಯಿರ್ದಂದಮಂ ೪೪

ವ॥ ಇಂತು ಬಗೆವುದುತ್ಪ್ರೇಕ್ಷೆಯೆನುತ್ತ ಬರ್ಪಾಗಳೊಂದೆಡೆಯೊಳೊರ್ವಂ ತನ್ನ
ಕೆಳೆಯನನೆಂಗುಂ ನೀನಾಕೆಯನಾವ ನಿಮಿತ್ತದಿಂ ಮೆಚ್ಚಿಸಿದೆಯೆಂದೊಡಾತನಿಂತೆಂದಂ

1 ಗೆ 2 ರ

ಚಂ|| ತುಱುಗೆವೆಗಣ್ಣ ನೋಟ್ಟ ನಯನಂ ಬೆಳರ್ವಾಯ ಬೆಡಂಗಿನೊಳ್ಪನು
ರ್ಕಱೆನೊಳಕೆಯ್ದ ಸಂಗರಸಭಾವದ ಕೂಟನುಮಾನಸ್ರೋತ್ರ್ರದಿಂ
ಬಱಿಪ್ರದುಮಂತೆ ಕಣ್ಣಱಿಪ್ರದುಂ ಮನವೊ[1][ಳ್ಕ][1]ಟಿಸಾಡುವಂತು ಮಾ
ತಱಿಪ್ರದುಮಿಂತವೆಲ್ಲಮೊಲವಂ ಪಡೆಯಲ್ಕೆ ನಿಮಿತ್ತಮಲ್ಲವೇ ೪೫

ವ|| ಎಂಬ ಹೇತುವಚನಂಗಳುಮನಪರ್ಗಱಿಪ್ರುತ್ತಮಂತೆ ಬರ್ಪರ್ ಪಲರು ಮೊಳುವೆಂಡಿರೊಳೊತ್ತೆಗೊಳಲೊಂದೆಡೆಯೊಳಿರ್ಪಲ್ಲಿಗೊರ್ವ ಬೋಜಗಂ ಬಂದು

ಚಂ|| ಸೊಗಯಿಪಳೊರ್ವಳಂದು ವಿಟನಂ ನಡೆನೋಡುತೆ ತನ್ನ ಗು[2][ಣ್ಪಿ][2]ನ
ಲ್ಲಿಗೆ ತರೆ ದಿಟ್ಟಿಯಂ ಬಮ[3][ರ][3]ನೆಂದಱಿತಾಕೆಯುಮೊಯ್ಯನಂತೆ ಲೀ
ಲೆಗೆ ಪಿಡಿದಿರ್ದ ನೆಯ್ದಲರಲಂ ಮುಗಿಯೊತ್ತಿ ಬೊಡೇನೊ ನಾಳ[4][ಗೇಂ
ಮಿಗೆ][4] ದಿಟನುಪ್ಪೊಡಪ್ಪುದೆನುತಂ ಮುಗುಳ್ದಿಂ ನಡೆದಿಂಗಿತೋಕ್ತಿಯಂ ೪೬

ವ|| ಅಂತವರಿಂಗಿತೋಕ್ತಿಯಂ ಕಂಡು ಸೂಕ್ಷ್ಮಾರ್ಥಮಿದೆಂದಱಿಪ್ರುತ್ತಂ ಬರುತ ಮೊಂದು ವಿಶಾಲಭವನದೊಳ್

ಉ|| ಓಪನಗಲ್ದು ಪೋದ ಬೞಿ ತಾಯಲಿ ಪಿಂಗಿರದೊತ್ತೆಗೊಂಡು ಸಂ
ತಾಪದೊಳುಣ್ಮೆ ಕಣ್ಣನಿಗ[5][ೞಂತವನಂ ಪುಗ][5]ದೊತ್ತೆಯಾತ್ರನಂ
ಚಾಪಕನೇತ್ರೆ ಕಂಡಗಿದು ಪುಷ್ಪರಜಪ್ರಜಮೆನ್ನ ಕಣ್ಣೊಳೀಂ
ಪಾಪಮೊ ಪೊಕ್ಕುದೆಂದಬಲೆ ಕೆಂದಳದಿಂದಲರ್ಗಣ್ಣನೊತ್ತಿದಳ್ ೪೭

ವ|| ಆಕೆಯ ಮುನ್ನಿನಾಣ್ಮಂಗೆ ಮಾಟ್ಟ ನಲ್ಮೆಯುಮನಾಗಳೀನೊತ್ತೆಯಾಣ್ಮನಂ ಕಂಡು ಕಣ್ಣ ನೀರಂ ಮಱಸಿದಬಲೆಯುಮಂ ಕ್ರಿಯಾರ್ಥಮೆಂದಱಿಯೆ ಪೇೞುತ್ತಂ ಬರ್ಪೋನಿಸಿಬರಾನುಂ ವಿಳಾಸಿನಿಯರೊಂದೆಡೆಯೊಳಿರ್ದವರಿವರ್ನ್ನರೆಂದುಪಲಕ್ಷಿಸಿ

ಚಂ|| ಪ್ರಿಯನ ರತ[6][ಕ್ಷೆ][6] ಚಿಂತಿಸುವ ಪಾಂಗುಮನಾವನೊಳಂ ತಗುಳ್ದ ದುಃ
[7][ಕ್ರಿಯೆ][7]ಯುಮನಾಯಮೋಜೆಯುಮನೊಯ್ಯನೆ ಭಾವಿಸಿ ನೋಡಿ ಜೇಟಕಾ
ತಿನಯರಿವರೀಕೆಗಳ್ ಬಸನಿಗಳ್ ಕಡುಬದ್ದೆಯರೆಂದುಮಿಾ ಲತಾಂ
ಗಿಯವೆನಿಸಿರ್ದವಂ ನಯವೆ ನೋಡಿದನಪ್ರತಿ[8][ವೈ][8]ಶ್ಯಸಂಭವಂ ೪೮

ವ|| ಇಂತಿವರಿನ್ನರೆಂಬುದಂ ಯಥಾಶಂಕೆಯೊಳಱಿಪಿ ಪೋಪರ್ ಮತ್ತೊಂದೆಡೆಯೊಳ್ ಪೆರ್ಮದಿಲ ಮಱತಿಗೊಂಡು ನೋೞುತ್ತಿಪ್ಪಂ

1 ಳ 2 ಣ್ಣ 3 ರಿ 4 ಗೆ 5...ಪುಗು 6 ಕೆ 7 ಕೃತಿ 8 ವೆ

ಉ|| ಉತ್ತಮನಾಯಕಂ ಮನೆಗೆವಂದೊಡತಿಪ್ರಿಯ ಪೂರ್ವರಾಗದಿಂ
ಪತ್ತಿನಿರಂ ವಿಳಾಸಿನಿಯುಮಾ ಗೃಹಚಾರರುಮೊಂದು ರಾಗಮಂ
ಮತ್ತರಮಾದುದಿಂದೆಮಗೆ ಸಂ[1][ತಸ][1]ಮಿಂದಿನ ಸಂ[1][ತಸ][1]ಕ್ಕೆ ನಿ
ಷ್ಪತ್ತಿಯುಮಿಂತೆ ಬಂದೊಡೆನಸುಂ ಪೆಱದಿಲ್ಲ ಸಮಾನಮಾವುದುಂ ೪೯

ವ|| ಎಂದು ನುಡಿದ ಪ್ರಿಯತಮಾಖ್ಯಾನಮಂ ಕೇಳ್ದು ತಾಂ ಪ್ರಿಯಮೆಂದೊಡನೆ ಯುವರ್ಗಱಿಯೆ ನುಡಿಯುತ್ತಂ ಪೋಗಿ ಪೆಱತೊಂದು ಧವಳಾರದ ಮುಂದಣೆಡೆಯೊಳ್

ಶಾ|| ಜಲ್ಲಂಬೀಱಿದ ನೋಟಮೊಪ್ಪ ನಯದಿಂ ನಾಣ್ದಾಣಮೊಪ್ಪಂಗಳಂ
ಬಲ್ಲಂದಂಪಡೆ ತೋಱುವೋಜೆಯಮರಿಂ ನಾನಾ ವಿಕಾರೋಕ್ತಿಗ
ಳ್ಗೆಲ್ಲಂ ತಾಂ ಮೊದಲಾದ ಬಾಯ ತೆಱದಿಂ ಶೃಂಗಾರಸದ್ಭಾವಮೆ
ಸ್ನಲ್ಲಿತ್ತಿಂಬವೊಲೊರ್ವಳಂಗಜರಸಂ ಕೈಗಣ್ಮೆ ಬಂದಿರ್ದಳಂ ೫೦

ವ|| ನೋಡಮಂತೆ ನೋಡಿ ರಸವಾಹದೋಜೆಯೊಳಿರ್ದಳೆಂದು ಮುಂಪೆ ಬರ್ಪಾಗಳೊರ್ವಳ್ ತನ್ನಾಣ್ಮಂ ಕರಮುರಿಯುಳಪ್ಪಗ್ಗಾಯಿಲಿಯಂ ನೋಡುತ್ತಮಿರ್ದನೆಂಬನಿತಕ್ಕೆ ಮುನಿದಾಕೆಯ ಮನೆಗೆ ಕಾದಲ್ ಬಂದಾಗಳವರ್ಷ್ಟಿ ಪೊಱಮಟ್ಟಂತೆಂದಳ್

ಉ|| ಏನಿದು ನಾಣಪುತ್ರಲಗೆ ಸೂಳೆಯರಕ್ಕಳಿ ಕಾದಮಂದೆ ಪೇ
[2][ಱತಿ][2]ನೆವವೇ ಸಮಂ ನಿನಗಮಾಕೆಗಮೇಕೆಗ ಸೂಳೆಗಾಳೆಗಂ
ಮೇನಕಿ ರಂಭೆಯೂರ್ವಸಿ ತಿಲೋತ್ತಮೆಯೆಂಬಮರಪ್ಪುದಾದೊಡಾ
ಮಾನಸಮೆಂಡಿರೆನ್ನ ಮಗಳಂ ನೆಣಸಲ್ ಬಗೆವಂತು ಪೆತ್ತಿನೇ ೫೧

ವ|| ಎನುತಮಿರ್ದಳನೂರ್ಜ[3][ಸ್ವಿ][3]ಯೆಂದಂತೆ ಬರ್ಪರೊಂದೆಡೆಯೊಳ್ ತನ್ನ

ಚಂ|| ಕೆಳದಿಯ ನಲ್ಲನಂ ನಯದೆ ತನ್ನ ಮನಿಲ್ಮನೆಯಲ್ಲಿಗೊಯ್ದು ತಾಂ
ಕೆಳದಿಯನಲ್ಲಿಗೊಂದು ನೆವದಿಂ ಬರವೇಟ್ಟುಡಗೂಡಿ ನಾಡೆಯುಂ
ಮು[4][ಳಿ][4]ಸಿನೊಳೆನ್ನ ತಾಂಟ್ ಮನೆಯುಮಂ ಬಿಸುಟೋರ್ವಳಿ ಪೋದೊಡಾಕೆಯುಂ
ತಿಳಿಸಿ ತರಲ್ಕೆ ಪೋದನೆನಲಂಕೆಯನಿಲ್ಲಿರಿಮೆನ್ನಬಪ್ಪಿನಂ ೫೨

ವ|| ಎಂದವರ್ಗಳವಂ ನೋಡುತಿರ್ದು ಪರಿಹಾಸೋಕ್ತಿಯೊಳಮೆಂದಱಿಪಿ ನಡೆವಾಗಳ್ ಬೀದಿಯೊಳ್

---

1 ತೊಪ 2 ಳೊ 3 ಷ್ಟಿ 4 ನಿ

ಚಂ॥ ನಿ[1][ಱಂ][1]ಗುಱಿತಗಂಟಲೇಟನುನುರ್ಮೊಪ್ಪಿರೆ ನಲ್ಲನೊಳೊಂದಿದಪ್ಪುಱಂ
[2][ದುಱಿತ][2] ದುಱಿಸಲ್ಕೆ ಪೋಗುತಿರೆ ದೈವಿಕನೆಂದವನಾಗಳಲ್ಲಿಗೋ
ತಱಿಸುವ ಬಳ್ಳಿ ಕಾಲೊಳದು ತಾಂ ತೊಡರ್ದಂತಿರೆ ಬಂದು ತಾನೆ ಕ
ಣ್ಣಱಿಪೆಳೆದುಯ್ಯೆ ರಾಗಿಸಿದ ನಲ್ಲಳ ರಾಗದುವೇನಳುಂಬವೋ ೫೩

ವ॥ ಅಲ್ಲಿಂ ತಳರ್ದು ಬರ್ಪವರ್ ಮತ್ತೊಂದೆಡೆಯೊಳೊರ್ವನಗ್ಗಾಯಿಲೆಯ ನೊಲಿಸಲಾರ್ಪನೆಂದು ಪೂಣ್ದು ನುಡಿವನಾಕೆಯ ಕೆಳದಿ ಕೇಳ್ದಾತನನಿಂತೆಂದಳ್

ಮ॥ ಮದನಾತ್ಯುದ್ಧತಮಪ್ಪ ದರ್ಪದವನಂ ವ್ಯಾಕೀರ್ಣರಾಗಿರ್ದ ಚಿ
ತ್ರದ ಪೆಂಪಿಂ ನೆಗಟ್ದಿರ್ದ ಬರ್ದಿನಳಪಂ ಕೇಳ್ದಲ್ಲಿ ರತ್ನಪ್ರಭಾ
ಭ್ಯುದಯ ಶ್ರೀಯುತಮಪ್ಪ ಪೆರ್ಮನೆಯುಮಂ ಕಂಡಲ್ಲಿ ನೀನೆಂತುಮೆ
ಯ್ದಿದ ಪ[3][ಣ್ಯಾ][3]ಗೃಹಮೆಂಬುದಯ್ಯ ಬಯಸಲ್ಪೇಡಾಕೆಯೊಳ್ ಗೆಲ್ಲವೇ ೫೪

ವ॥ ಎಂಬುದಂ ಕೇಳ್ದು ದಾತ್ತವಚನಮಿದೆಂದಱಪುತ್ತಂ ಪೋಗಿ ನೋಟ್ಪನೊಂದೆಡೆಯೊಳ್ ಬೇಡಕಾರ್ತಿ ವಿರಹದೊಳ್ ಸೈರಿಸದೆ ಪೊಱಗೆ ಗಾಳಿಯನಾಸೆವಟ್ಟು ದಳಿಂಬಮಂ ಪಾಸಿ ಪೊರಳುವಳಂ ನೋಡಿ

ಚಂ॥ ಮನಸಿಜನೆಂಬನಂಬುಫಲವಿಲ್ಲಿರಲಂಬುಗಳಯ್ದು ನಟ್ಟನೆಂ
ದನವರತಂ ಜಗಂ ನುಡಿಗುಮಾ ನುಡಿ ಪೆರ್ಬುಸಿಯಾದು[4][ದೀ][4]ಗಳೆಂ
ತೆನೆ ಬಿಡದೆನ್ನ ಮೆಲ್ಲೆರ್ದೆಯನೋವದೆ ಕೊಲ್ವರಲಂಬುಗಳ್ಗೆ ಮು
ತ್ತೆನಿತೆನಿತೆಂಬುದೊಂದಳವಿಗಂಡಪೆನಲ್ಲದಲೇಂ ವಿಚಿತ್ರಮೋ ೫೫

ವ॥ ಮತ್ತೊಂದೆಡೆಯೊಳ್ ಚತುರ್ಭದ್ರಮಂಟಪದೊಳ್ ಮಧುಪಾನಗೋಷ್ಠಿಯ ತಂಡದಲ್ಲಿ ಬಹುವಿಕಾರಜನಿತಮಪ್ಪನೇಕವಿಧ ಮದ್ಯಂಗಳಂ [5][ತದ್ವೀಧೀವಿಧಾನದಿಂದಂ][5] ಕುಡಿದು ಸೊಕ್ಕಿದರಂ ನೋಡಿ ಚಾರುದತ್ತನಿಂತೆಂದಂ

ಶಾ॥ ರಾಗಂ ಪೆರ್ಚಿರೆ ಲೋಚನಪ್ರಿಯರ ಸತ್ಸೌಂದರ್ಯಮಂ ವಾರುಣೀ
ಯೋಗಂ ಮಾಡಿದೊಡರ್ಕನಸ್ತದೊಳಡಂಗಿರ್ದಂ ಮದೋದ್ರೇಕದಿಂ
ಮೇಗಿಲ್ಲೆಂಬಣಲೀಕೆಗಳ್ಗೆ ನಯದಿಂ ನಾನಾ ವಿಕಾರೋದಯಂ
ಬೇಗಂ ಪುಟ್ಟಿದುದೇಂ ವಿಚಿತ್ರತರಮೋ ವಸ್ತುಸ್ವಭಾವೋದಯಂ ೫೬

ವ॥ ಅಂತು ತಾಂ ಶ್ಲೇಷಾವಿರುದ್ಧಮೆಂಗು ಮತ್ತಮಂತೆ ನೋಟ್ಪಿಂ

1 ಱು 2 ದಮೆ 3 ಣ್ಣ 4 ಡೆ 5 ತದ್ವೈಧಿವಿಧಾನಮಂದಿಂ

ಮ|| ತೊದ[1][ಳಂ][1] ಮಾಱ್ಪ ಕೊ[2][ದಳ್][2] ವಿಕಾರವಶಮಂ ಕೈಕೊಂಡ ಮೆಯ್
ನಾ[3][ಣಿ][3]ಗಿ
ಕ್ಕಿದ ಕೆಯ್ತಂ ಪುಸಿಯೊಳ್ ಪೊದಟ್ದ ನುಡಿಗಳ್ ರಾಗಕ್ಕೆ ಪಕ್ಕಾದ ಕ
ಣ್ಣೊದವುತ್ತಿರ್ದಳಿಪುಂತೆ ಮೆಯ್ಯಱಿಯದಿಪ್ಪಂತಪ್ಪ ಚಿತ್ತಂ ಕರಂ
ಮದವಿಭ್ರಾಂತತೆಯರ್ಕಳಾಗಿಯುಮಿವ[4][ರ್ಗಂ ಪ][4]ರ್ವಿ ವಿಭ್ರಾಂತಮಂ ೫೭

ವ|| ಎಂದು ಬಗೆವಳಿಪಿನ ವಿಕಾರಮಾಗೆ ನೋಡಿದರಂ ಗೆಲ್ವುದಱಂ........ ಕ್ರಿಯಂದವರಾಟಮೊಳ್ಪುಮನಂತೆ ನೋಟಿಪ್ಪಾಗಳ್

ಉ|| ಒತ್ತಿದ ಸಾರಸಂ ವಿಟರನೊತ್ತೆ ಲಸತ್ಕಟಿಚಲ್ಲಿ ಚಲ್ಲಿಸ
ಲ್ಕೆತ್ತಮೊಡರ್ಚಲಯ್ಸರನ ಬೇಂಟೆಯ ಕಯ್ಯನೆ ಕಣ್ಗಳಾಟಮೊಂ
ದುತ್ತರಮೋವಮಳ್ಕಿಱಿಯೆ ಪುರ್ವಿನ ಜರ್ವಿನ ಗಂಟು ಕೂಡೆ ಕೂ
ಗುತ್ತಿರೆ ರಂಭೆಯಾಟದೊಳು ತಾಂ ಸಮನೆಂಬಿನಮೊರ್ವಳಾಡಿದಳ್ ೫೮

ವ|| ಈ ಮಾತು ಸದ್ವಶೋಕ್ತಿಯೆನುತ್ತಮಲ್ಲಿಂ ಬರ್ಪನೊಂದೆಡೆಯೊಳೊರ್ವ ವಿಟನೊರ್ವಳ್ಗೆ ನಲ್ಲನಾಗಿ ಕೂ[5][ಡ][5]ಲ್ಪಡೆಯದೆ ಮಱುಗಿ ವಿರಹಜ್ವರಂ ಕೈಕೊಳೆ ತನ್ನ ಕೆಳೆಯಂಗಿಂತೆಂದಂ

ಮ|| ಶತಪತ್ರಂ ಸುಮೃಣಾ[6][ಳ][6] ಬಾಹು ಕದಳೀಸ್ತಂಭೋರು ನೀಳೋತ್ಪಳಾ
[7][ಯತ][7]ಲೋಳಾಕ್ಷಿ ಸುವರ್ಣಕುಂಭಕುಚೆ ಚಂದ್ರಾಕಾಂತೆ ನೋಟಿಪ್ಪಾಗಳಂ
ತತಿಶೀತೋದಯರೂಪೆಯಾಗಿಯುಮನಳ್ ತಾನೆನ್ನ ಮೆಯ್ಗಿಗಳು
ಷ್ಣತೆಯಂ ಮಾಡುಗುಮೇಂ ವಿಚಿತ್ರತರಮೋ ತತ್ಕಾಮಿನೀವೃತ್ತಕಂ ೫೯

ವ|| ಎಂಬೀ ಮಾತಂ ಕೇಳ್ದೀತಂ ವಿರುದ್ಧಾರ್ಥದೊಳ್ ನುಡಿದಪ್ಪನೆಂಬನ್ನೆಗ ಮಾತಂಗಾತನಿಂತೆಂದಂ

*ಮ|| ಜಡಿಸಂತಿರ್ಪುವು ಪುರ್ಬುಗಳ್ ಕಿವಿಗಳೊಳ್ ಕಣ್ ಪರ್ಬುವಂತಿರ್ಪುದೊ
ಳ್ನಡುವಂತಾಂ ಮುರಿವಂತಿರಿರ್ಪವು ಕುಚಂ ಮೇಗಿಲ್ಲದಂತಿರ್ಪುವೊ
ಳ್ತೊಡೆಗಳ್ ಕಣ್ಗೆಡಱುತ್ತಮಿರ್ಪವು ನಖಂ ಮೆಯ್ವೆರ್ಚೆ ತಂತಮ್ಮೊಳಿ
ಪ್ಪೆಡೆಗಂ ಮಚ್ಚರಿಸುತ್ತಮಿರ್ಪವದಱಿಂದಾ ಕಾಂತೆಗಿಂತೆಂದು ನೋ
ಟ್ಪಿಡಮೊಳ್ಪಾಪುದೊ ರೂಪಿನೊಳ್ ಮರುಳೆ ನೀನೇಕಾರಣಂ ಮೆಚ್ಚಿಮೋ ೬೦

1 ಳ 2 ದಳ್ 3 ಣ 4 ರ್ಗೆಲ್ಪ 5 ಡೆಯ 6 ಣ 7 ಮಯ

* ಇದು ಪುಚಪಾದವೃತ್ತವಾಗಿದೆ.

ವ॥ ಎಂಬ ನಿಂದಾಪ್ರಶಂಸೆಯ ಮಾತುಗಳಂ ಕೇಳ್ದದನಂತೆ ನಂಬಿಮೆಂದು ಬರುತಮಂತೆ ಮತ್ತೊರ್ವಳ್ ತನ್ನ ಕೆಳದಿಯನಿಂತೆಂದಳ್

ಉ॥ ಪೂಣಿಗಳಾಗಿ ಬರ್ದುೞ ಪೊಗೞ್ದಿಪ್ಪ ವಿದಗ್ಧೆಯನೆಲ್ಲಿಮಾತನಂ
ಕಾಣಲೊಡಂ ಕರಂ ಬಯಸಿ ತಾನೆಱೆದಟ್ಟುವನಟ್ಟೆ ಕೂಡೆಯುಂ
ನಾ[1][ಣೆ][1]ಲಿಪನ್ನರಾಪರಿಸುತೊಂದು ವಿದಗ್ಧತೆಯಿಲ್ಲ ಬದ್ದಿನೊಳ್
ಪೂಣಿಕೆಯಿಲ್ಲ ಬಾಲಕಿಯಿಯಿಂತುಗೆ ಕುಡುತೆ ಗೆಲ್ದೆಯಾತನಂ ೬೧

ವ॥ ಎಂಬುದಂ ಕೇಳ್ದೀಕೆ ತಾಂ ವ್ಯಾಜಸ್ತುತಿಯೊಳ್ ಪೊಗೞ್ದಿಪ್ಪಳೆನುತ್ತಂ ಬೞರೊಂದೆಡೆಯೊಳೊರ್ವಳ್ ತನ್ನಾಣ್ಮಂ ಪೆಱರೊರ್ವಳಲ್ಲಿಗೆ ಪೋಗಿ ಬಂದುದನಱಿದಿಂತೆಂದಳ್

ಚಂ॥ ಅಱಿಕೆಯ ಗೋವನುಂ ನಿನಗೆ ಕುರ್ತಡೆ ನೇರಿರೆಪೆಂದೊಡೇಕೆ ಪೇ
ೞಿಱದ ನೆಗರ್ತೆಗುಂದಿದೆಗಳೊಳ್ ತೆರಳಿಲ್ಲದಿದೇನೊ ನನ್ನಿಯೇ
ಕುಱಿಯೆನೆ ಕಾಡುವಂತು ತಡೆದಿರ್ದುಮದೋಷಿಪೆ ಕೆಮ್ಮನೆಂದೊಡೇ[ಂ]
ನಿಱುಗಿ ಪೊದಟ್ಟು ತೋರ್ಪಘರದಂಡಮೆ ಪೇೞಿದೆ ದೋಷಮುಳ್ಳುದಂ ೬೨

ವ॥ ಎಂದು ನಿದರ್ಶನಮಂ ತೋಱಿ ನುಡಿದು ಬೞಿಯೊಯ್ದು ಸುರತಕ್ರೋಡಚರ್ಚೆ

ಚಂ॥ ಎಡೆವಿಡವರ್ಕೆಱುಣ್ಮೆ ಗಳಸಿಸ್ವನಮೊಪ್ಪಿರೆ ಪೊಣ್ಮೆ ರಾಗದ
ತ್ತೊಡರಿಸೆ ಚಿತ್ರವಿಂಪೊದಪೆ ಮ[2][ತ್ತ][2]ಮಳುರ್ಕೆ ನಿಮಿರ್ಕೆ ವಾಡೆ ನಾ
ಣೆಡೆಗೆಡೆಗೋಡೆ ಕೂಡೆ ಬಗೆ ನಾಡೆ ಪದಂ ಮಿಗೆ ಮಾಣಪೇಳೆ ತಂ
ದೊಡನೆ ಸಮಾ[3][ಗಮುಂಬಡುತಳುರ್ತ][3]ಮದರ್ಂತೆ ಬೞಲ್ದರಿರ್ವರುಂ ೬೩

ವ॥ ಅಂತಾ ಕೆಱಿಯ ಮುನ್ನಿನ ನುಡಿದ ನಿದರ್ಶನಮೀಗಳಿನ ನೆಗೞ್ತೆ ಸಮೋಕ್ತಿಯಿಂದಂತೆ ಬಂದೊಂದು ಮನೆಯಂ ಪೊಕ್ಕು ನೋೞ್ಪಾಗಳ್

ಮ॥ ವ್ಯಸನಾತ್ಯಂತ ವಿಭೂಷಣಪ್ರಕರದಿಂ ತಾಂಬೂಳಮಿಷ್ಟಾಸನ
ಪ್ರಸರಾಮೋದ ಸುಗಂಧವಸ್ತುಚಯದಿಂ ರಾಗೋದಯಂ ಮಾಡಿ ರಂ
ಜಿಸುತಂ ಮೆಲ್ಪಿನೊಳೊಂದು ಭಾವಿಸಿ ರವಿಪ್ರಾರಂಭದಿಂದಾದ ಸಂ
[4][ತಸ][4]ಮಂ ಕಾಂತೆಗೆ ಕೊಟ್ಟು ಕಾಂತೆಯ ಮನಂಗೊಂಡಿರ್ದನೊರ್ವಂ ವಿಟಂ ೬೪

---

1 ಣ 2 ತ್ತೆ 3 ...ಡುತಳುತ 4 ತೊಷ

ವ|| ಆ ವಿಟಸಂ ಕೆಂಡೀತಂ ಪರಿವೃತ್ತಾರ್ಘದಿನಿರ್ವಸೆಂದು ಬಂದೊಂದು ಪೆರ್ಮನೆಯೊಳ್

ಮ|| ಸುರತಾರಂಭದ ಬಳ್ಳಿಯಿಂ ನೃಪವಿಟಂಗತ್ಯಂತಪೊರ್ವಳ್ ಮನೋ
ಹರಮಂ ಮಾಡಿಮೊಡಾತಸುಜ್ವಳಗುಣವ್ಯಾಕೀರ್ಣ ಸದ್ವಸ್ತ್ರಮಂ
ಪರಮೋತ್ಸಾಹದಿನಿತ್ತ್ರಡಾಕೆಯುವರ್ಗಳ್ ಬಂದೆಲ್ಲರುಂ ರಾಗದಿಂ
ಪರಮಾಶೀರ್ವಚಸಂಗಳಿಂ ಪರಸಿದರ್ ಸಸ್ನೇಹದಿಂದಾಕೆಯುಂ ೬೫

ವ|| ಅಂತಾ ಧ್ವನಿಯನಾಶೀರ್ವಚನಪೆಂಪದಱಿಪಿ ಮತ್ತಮಂತೆ ನಡೆವಲ್ಲಿಯೊರ್ವಳ್

ಚಂ|| ಸರಸಿಜನೇತ್ರೆಯೊಳ್ ಸುತಲತೋಪಸುಗಾತ್ರೆಯೊಳೊರ್ವನಟ್ಕಿಱಿಂ
ಸುರತವಿಕಾರದಿಂಪಿನ ರಸಾವಹಮುಗ್ಗಳಮಾಗೆ ರಾಗದಿಂ
ನೆರೆದು ಮನಂ ಬೆಮರ್ತ ತನುವೆಂಬವನಂತೊಡನಾರಿಸಿರ್ದರಿ
ರ್ವರ ಬಗೆಯೊಂದೆಯಾದ ಕೆಳೆಯೊಳ್ ಸುಖಮಾಗಳು ಮಾಡದಿರ್ಕುಮೇ ೬೬

ವ|| ಅವರೊಳಿಂತು ಸಂಕೀರ್ಣಾಳಂಕ್ರಿಯೆ ನೆಗಟ್ಟುದೆನೆ ವಿಳಾಸಿನೀಸಂಪರ್ಕಸುಖಂಗಲ್ಲದಾಗದೆಂದು ರುಪ್ರದತ್ತಂ ಚಾರುದತ್ತಂಗಿಂತೆಂದಂ

ಚಂ|| ಇವರ್ಗಿವು ಸತ್ವಮೀಗಳಿವರ್ಗಿಂತಿವು ಚಿತ್ತಮನೇಕರೂಪದಿಂ
ದಿವರ್ಗಿವು ಧಾತುವಿನ್ನಿವರ ಸಂ[1][ತಸಮಿಂತಿದು][1] ಹೇತುವೀ ಪದ
ಕ್ಕಿವರ್ಗಿದು [ಧ]ರ್ಮಮೀ ಕ್ರಿಯೆಗಳೊಳ್ಪಿವರ್ಗಿಂದುಮಪೋಘಮೆಂದು ಮ
ತ್ತವರ್ಗಳರನ್ನರಾಗಿಸಲೆ ಭಾವಿಸಲಾರ್ಪರಿನಾರೊ ಪೆಜ್ಜದರ್ ೬೭

ವ|| ಎಂಪೊಡಿದು ಭಾವಿಕಾಳಂಕಾರಪೆಂದಳಂಕಾರಪೆಲ್ಲಮನಱಿಪಿದೆಂ ಬನ್ನಿಪೆಂದು ಕೇರಿಯುಂ ಪೊಱಮಟ್ಟು ಪೋಗಿ ತಂತಮ್ಮಾವಾಸಂಗಳೊಳಿರೆ ಮಱುದಿವಸಂ ರುಪ್ರದತ್ತನುಂ ವಿಟಕುಮಾರರುಂ ತಂತಮ್ಮೊಳಿಂತೆಂದರ್ ಚಾರುದತ್ತಂಗೆ ರಾತ್ರಿ ಸಂಭೋಗದ ಲೇಪನಮನಿನಿತುಮರಂ ತಂದಮಿನ್ನಾನಂದಪೊಳಿನ್ನು ತಗುಳ್ವಪೆಂಮೊಡೊರ್ವನೆಂದಂ ವಸಂತಮಾಲೆಯ ಮಗಳೆ ಪೊರೆಯಾಗಿರ್ಕುಪೆಂಪೊಡಾಕೆಯುಳವನಾಂ ಬಣ್ಣಿಸಲಱಿಯೆನವರಬ್ಬೆಗೆ

1 ತೊಪವಿದು

ಚಂ|| ದಿವಿಜರನೇನುವಲ್ಲಪನರೆಂಬನಿತೊಂದು ವಿಳಾಸಮುಂಟು ಭೂ
ಭುವನಮೊಳಾರುಮಂ ಬಸನೆ ಮಾೞ್ಪ ವಿದಗ್ಧತೆಯುಂಟು ನೆಟ್ಟನಾರ್
ತವಿಸುವರೆಂಬನಿತ್ತವರಿಗಂ ಧನಮುಂಟಾ ವಿಳಾಸಿನೀ ಕುಲ
ಪ್ರವರ ವಸಂತಮಾಲೆಯ ನಿಜೋತ್ತಮಲೀಲೆಯನಾರೊ ಬಣ್ಣಿಪರ್ ೬೮

ವ|| ಎಂಬನಿತುವರಂ ಪ್ರಭುವಂತಪ್ಪಾಕೆಯ ಮಗಳ್ ರೂಪಿನೊಳ್ಪಿನೊಳಂ ಜವ್ವನ ದಳುರ್ಕೆಯೊಳಂ ಸೊಬಗಿನ ನಿಮಿರ್ಕೆಯೊಳಂ ಕಿನ್ನರಿಯರೆನಗಾಂ ಗೆಲಲ್ ಕಿನ್ನರಿಯರೆಂಬ ನಿತನೆ ಕೇಳ್ದು ಭೂಚರಿಯು[1][ರಳಸನ][1]ವಳನುಚರಿಯರಂತಪ್ಪುದರವಂ ಕೇಳ್ದು ಖೇಚರಿಯು[2][ರ್ ಮುನ್ನೆ][2]ಬೆರ್ಚಿದರ್ ನಿಶಾಚರಿಯರ ತನುವಂ ನೆರೆದುದನಱಿದು ಕುಂದಿದ ರಕ್ಕಟರೊಳವೇಕೆ ನೆಣಸುವೆನೆಂದಿರ್ಪಳ್

ಕಂ|| ಅವರಿವರೀಕೆಗೆ ದೊರೆಯ
ಪ್ಪವರೊಳರೆಂದಱಿಯೆನೊಂದನಱಿವೆನಶೇಷ
ಪ್ರವಿದಿತ ಭೂತಳಕೆ ನಿಜೋ
ದ್ಭವಕುಳಕೆ ವಸಂತತಿಳಕೆ ತಿಳಕಪ್ರತಿಮಂ ೬೯

ವ|| ಎಂದೊಡಂತಪ್ಪಾಕೆಯುಪ್ಪುದೆಂದು ಸಮಕಟ್ಟಿರ್ದು ರುದ್ರದತ್ತಂ ಮುನ್ನ ಮೊರ್ವನೆ ಪೋಗಿ ವಸಂತಮಾಲೆಯುಂ ಕಂಡು ನಿನ್ನ ಮನೆಗೆ ನಿಧಾನಂ ಬರ್ಪಂತೆ ವಣಿಕ್ಪ್ರಧಾನಂ ಚಾರುದತ್ತಂ ಬಂದು ನಿನ್ನಳಿಯನಾದಪ್ಪನೆಂದಾಕೆಗನುರಾಗಮಂ ಪಡೆದುಯೆಮ್ಮ ಸೊಸೆಯೆತ್ತಲಿರ್ದಪಳೆಂದು ಬೆಸಗೊಳೆ ಮಾಡದ ಮೇಗಿರ್ದಪಳು............ಪೆನೆಂದು ಮಾತನಂ ಪೋಗಲೀಯದಿರೆಂದೊಡಂಬಡಿಸಿ ಮಗುೞ್ದುಬಂದು ಬಯ್ಗಾದ ಪೊತ್ತು ನಾಲ್ಕಾನೆಯಂ ತಂದು ಸೂಳೆಗೇರಿಯ ಬೀದಿಯ ಕಡೆಯೊಳಾವುಮಂ ಪೋಗಲೀಯದಂತಡ್ಡಂನಿಲಿಸಿಮೆಂದಾನೆಯವಂದಿರೊಳ್ ಸಮಕಟ್ಟಿ ತಾನುಂ ತನ್ನ ಸಹಾಯರುಂ ಚಾರುದತ್ತನಂ ಮೂಱುಜಾವದಾಗಳೇನಾನುನೆವದಿನಾದೊಡಗೊಂಡುಪೋಗಿಯನೇಕ ಧವಳಾರಮಂ ನೋಡುತ್ತ[ಂ] ನೆಲೆಗಳ ಮುಂದೆ ಬೀದಿಯ ಕಡೆಯೊಳರ......ಕ್ಕಿದಾನೆಯ ಗಳಡ್ಡಬಿರ್ದವರ ಪೋಪಿನಮಾ ಮನೆಯ ಬಾಗಿಲ ಮಾಡದೊಳಿಪ್ಪವೆಂದು ವಸಂತ ತಿಳಕೆಯ ಮನೆಗೊಡಗೊಂಡು ಪೋದಾಗಳಾ ಮನೆಯ ಪರಿಚಾರಕಿಯರಿತ್ತ ಬನ್ನಿಮೆಂದು ಕರಂ ಪ್ರಿಯದಿನೊಡಗೊಂಡು ಪೋಪುದುಮೊಳಗಂ ಪೊಕ್ಕು ಮಾಡದ ಮುಂದಣ ಚೌಕಿಗೆಯ ರಂಗದೊಳ್ ವಿಸ್ತರಿಗೆಗಳ ಸೆಱಗಿಕ್ಕಿ ಕುಳ್ಳಿರ್ದರನ್ನೆಗಂ

1 ರಳ 2 ರ್ಮುಂಗೆ

ಕಂ॥ ಅತಿಶಯಮಾಗಿರೆ ಪದ್ಮಾ
ವತಿ ನೆಲದಿಂದೊಗೆದಳೆನೆ ಕೆಲಬರೀಕೆ ಸರ
ಸ್ವತಿಯೆನೆ ಕೆಲರಮರೇಂದ್ರನ
ಸತಿಯೆನೆ ಬಂದಿರ್ದಳಾಗಳವರ್ಗಳ ಕೆಲದೊಳ್ ೭೦

ವ॥ ಅಂತು ವಸಂತತಿಳಕೆ ಬಂದಿರ್ದೊ[1][ಡಾ][1]ಕೆಯು ಕಣ್ಣಱಿದಾಪೋದ ಸುಗಂಧಮಾಲ್ಯಾದಿ ತಾಂಬೂಲಾದಿಗಳಂ ಪರಿಚಾರಕಿಯರ್ ತಂದುಕೊಟ್ಟಾಗಳೊರ್ವಳ್ ನೆತ್ತದ ಚಾರಿಯುಂ ಕೊಂಡುಬಂದು ಚಾರುದತ್ತನಱಿಯದ ಬಿಜ್ಜೆಯಿಲ್ಲೆಂಬೊರೆನ್ನು ನಾಯಕಿತ್ತಿಯೊಡನೆ ನೆತ್ತಮನಱಿಯಿರೆನ್ನೊಳಾಡೊಡಮಾಡಿಪೆಂಬೊಡೆ ನೆತ್ತಮುಮಂ ನಿಮ್ಮ ನಾಯಕಿತ್ತಿಯ ಚಿತ್ತಮುಮನಾರ್ಗಂ ಗೆಲಲ್ಬಾರದಱಿನಾಡಬೆಯುಂ ನಡೆನೋಡ ಬೆಯುಮಿರ್ಪುದೊಳ್ಳಿತ್ತೆಂಬೊಡಂತೇಕೆಂಬ ಪ್ರೊಣರ್ಕೆ ಬೊರೆಕೊಂಡಲ್ಲಿ ಗೆಲಲಾಱಿಱೆಂದೋ ಸರಿಸುವುದು[ಂ] ಪುರುಷಗುಣಮೆಯೆಂಬೊಡಾ ಮಾತು ಮನಂಗೊಂಡಂತೆಗೆ[2][ಯ್ವೆ][2] ನೆಂದು ವಸಂತತಿಳಕೆಯುಂ ತಾ[3][ನುಮೊ][3]ಡ್ಡಿಯಾಡಿದರಂತಾಡಿದಾಗಳ್ ಚಾರುದತ್ತ ನೊಂದೆರಡು ಪಲಗೆಯುಂ ಗೆಲೆ ವಸಂತತಿಳಕೆ ರುದ್ರದತ್ತನತ್ತ ನೋಡೆ ಕಣ್ಣಱಿದಾತನೆಲ್ಲ ರುಮಂ ಸನ್ನೆಯೊಳ್ ಕಳೆದು ತಾನುಮೊಯ್ಯನೆರ್ದು ಪೋದನಾಗಳ್ ವಸಂತತಿಳಕೆ ನೆತ್ತದ ಬಲ್ಮೆಯೊಳ್ ಗೆಲಲಾಱದೆ ಚಿತ್ತದ ಬಲ್ಮೆಯನಱಿಪಲ್ ಶೃಂಗಾರಸಮುಂ ಭಾವಿಸಿ

ಕಂ॥ ನೋಡಿಸುಗುಮವಯವಂಗಳ
ನೋಡಿಸುಗುಂ ಚಲಮನೊಲವನವನೊಳ್ ಪಡೆದ
ಟ್ಟಾಡಿಸುಗುಂ ಮನಮಂತದು
ಮಾಡಿಸುಗುಂ ನೆತ್ತಮಾಡುತಿರ್ದವಯವದಿಂ ೭೧

ಮೆಲ್ಲನೆ ನಡೆ ನೃ……………
……………ಗಳಂತುದಾಯಮುಳಿದಾಡುತ್ತಂ
ಚಲ್ಲಮುಮಂ ನೆತ್ತಮುಮಂ
ಗೆಲ್ಲಕ್ಕೊಡನಾಡಿ ಗೆಲ್ದಳೆರಡುಮನಾಗಳ್ ೭೨

ವ॥ ಅಂತಾ ಗೆಲ್ಲದೊಳ್ ಬೇಗಮೆರ್ದು ಮುನ್ನಮೆನ್ನ ಗೆಲ್ಲಮನೀವುದೆಂದು ಕಯ್ಯಂ ಪಿಡಿದು ಮಾಡದ ನೆಲೆಯ ಮೇಗಣ್ಣಿಗೆಯುದ್ದ ರತ್ನಮಯಮುಪ್ಪರಿಗೆಯ ದಿವ್ಯ

1 ಳಾ 2 ಯಿ 3 ನು ನೊ

ಶಯ್ಯೆಯೊಳ್ ಕುಳ್ಳಿರ್ದಾಗಳ್ ತೊತ್ತಿರಿಂ ಕಾಲಂ ಕರ್ಚಿಸಿದಿಂಬೞಿಕಂ ಕೆಲರ್ ತಾಂಬೂಲ ಪರಿಚಾರಕಿಯರ್ ಭೋಗೋಪದ್ರವ್ಯಂಗಳಂ ತಂದವಟಯಿಸಿದರಾಗಳ್ ನೆತ್ತದ ಗೆಲ್ಲಮಂ ಕೊಳ್ವಂದಮಿದು ನೋಡೆಂದು ಪಿಡಿದು ತೆಗೆವುದುಂ ಮುನ್ನಮನಂಗರಾಗಮಿಲ್ಲ ಪ್ಪುದಱಿಂ ಸೆಡೆಪೆದ್ದು ಕಾಮಶಾಸ್ತ್ರಪ್ರವೀಣನಾ ಪರಿಚಯದೊಳಾದ ಬಲ್ಮೆಯೊಳ ಮಾಗಳಾದ ನಲ್ಮೆಯೊಳಮೊಡಂಬಟ್ಟು ಬೆರಸಿ ತಮ್ಮೊಳನ್ಯೋನ್ಯಾಸಕ್ತರಾಗಿರ್ದಾಗಳೆ ಪರಿ ಚಾರಕಿಯರ್ ಬಂದುಮಾತಂಗಮಾಕೆಗಂ ಸ್ನಾನಾನ್ನ ತಾಂಬೂಲಾನುಲೇಪನ ಮಾಂಗ ಲ್ಯಾದಿಗಳಿಂ ನಿಯೋಜಿಸೆ ಸುಖಮೊಳಿಸುತ್ತಮಿರೆ ಶಾಸ್ತ್ರಚಿಂತೆಯುಂ ಮಱೆದು ಮನೆಯುಂ ತೊಱೆದು ಮಾಡದ ಪೇಗಣಿಂದಿೞಿಯದೆಯುಮಾಕೆಯನುೞಿಯದೆಯುಂ

ಪೃಥ್ವಿ॥

ವಸಂತತಿಳಕಾಖ್ಯೆಯೊಳ್ ವರವಿಳಾಸಿನೀಮುಖ್ಯೆಯೊಳ್
ಪ್ರಸಿದ್ಧಗುಣ ಚಾರುದತ್ತನಭಿನೂತಚಿತ್ತಂ ಕರಂ
ಪ್ರಸನ್ನತೆಯೊಳಿಂತು ಕೂ[1][ಡೆ ಕಡು][1]ಗೂರ್ಮೆಗೊಂಡಾಡೆ ಸಂ
[2][ತ][2]ಸಿಕ್ಕೆಯ ವಿಮೋಹದಿಂದಗಲದಿರ್ದನುತ್ಸಾಹದಿಂ ೭೩

ಗದ್ಯ॥ ಇದರ್ಹತ್ಸರ್ವಜ್ಞ ಪಾದಪದ್ಮವಿರಾಜಿತೋತ್ತಮಾಂಗ ಶ್ರೀ ಬಂಧುವರ್ಮ ನಿರ್ಮಿತಮಪ್ಪ ಹರಿವಂಶಾಭ್ಯುದಯದೊಳ್ ಚಾರುದತ್ತ ಕುಮಾರೋದಯವರ್ಣನಂ

**ತೃತೀಯಾಶ್ವಾಸಂ**

1 ಡೆ 2 ತೊ

# ಚತುರ್ಥಾಶ್ವಾಸಂ

ಕಂ॥ ಮದ್ವಸಂತತಿಳಕಾಂಗನೆಯೊಳ್
ನೆರೆದಿಂತು ಚಾರುದತ್ತಂ ಸುಖಮಿರ್ಪಿನಮಾ
ಕಾಂತೆಯ ತಾಯಿ ಸೊಂಬಿನೊ
ಳಿರ್ದಪನಿಂತೀತನೆಂಬ ಬಗೆ ಪುಗೆ ಮನದೊಳ್( ?) ೧

ವ॥ ವಸಂತತಿಳಕೆಯ ತಾಯ್ [1][ಕ][1]ರಮುಮ್ಮಳಿಸಿರ್ದುಱಿಯೆವೇಟ್ಟಿಟ್ಟುವೊಡೆ ಮಗಳೊಡಂಬಡಲ್ ಬೇಱಿಯಾದುಱಿದಟ್ಟುವಡಮಾತನನಗಲಲೀಯಳೀಗೆಯ್ವೆನೆಂದು ಮಱುಕಂ ಪೆರ್ಚಿ ಮನದಭಿಮಾನಂ ಬಿರ್ಚಿ ಸ್ವೈರಿಸಪೆ ನಯದಿನಾತಂ ಪೇಟ್ಟಿಡಂತಾತನ ತಾ[2][ಯಿರ್ದ][2]ಲ್ಲಿಗೆ ನಿಚ್ಚಮಿವರಿರ್ವರ ಭೋಗಕ್ಕಂ ಮನೆಯ ಬೀಯಕ್ಕಂ ಸಾಸಿರ ಗದ್ಯಾಣಂ ಬೇಱಿಕ್ಕುಂದಟ್ಟೆ ತರಿಸಿಕೊಳ್ಳುಂ ಮತ್ತಂ ಪರ್ವಮೊಸಗೆಯೆಂದು ಿಶೇಷಮಾಗಿ ತರಿಸುಗು ಮಂತಾಱುವರ್ಷದಂದಿಗೆ ಪದಿನಾಱುಕೋಟಿ ದ್ರವ್ಯಂ ತಪ್ಪದಂತು ಭಾನುದತ್ತಸೆಟ್ಟಿಯರ ಱುದು ಪೆಂಡಿರ ಬುದ್ಧಿಗಿದು ಪಿರಿದಲ್ಲಾದೊಡೇನಾತನ ಪ್ರಾಣಕ್ಕೆ ಮುಟ್ಟಿವರಿದಂದಿನೆ ಪರಿಭವಮುಂ ಕಾಣಲಾಱಿನೆಂದು ನಿರ್ವೇಗದಿಂ ಜಿನಾಲಯದತ್ತಲ್ ಪೋಗಿ

ಕಂ॥ ತಱಿಸಂ[3][ದು][3] ಪತ್ತಿನಿಂದಿ
ತ್ರೈಱದ ಪರಿಗ್ರಹದ ತಳ್ತ ತೊಡರಂ ಮುಂದಂ
ಪಱಿದು ತಲೆವಱಿದು ಕ್ರಿಯೆಗಳ
ನಱಿದು ತಪೋಯೋಗಿಯಾಗಿ ಸುಖದಿಂದಿರ್ದಂ ೨

ವ॥ ಭಾನುದತ್ತಸೆಟ್ಟಿ ದೀಕ್ಷೆಗೊಂಡನೆಂಬ ಬುದ್ಧಿಯಂ ದೇವಿಲೆ ಕೇಳ್ದು ಪಿರಿದುಂ ಜಿನಮಹಿಮೆಯಂ ಮಾಡಿ ಮಗನ ಮೋಹದೊಳ್ ಮನೆಯೊಳಿರ್ದು ಮಗನ ಚಿತ್ತಾಭಿ ಘಾತವಾಗದಂತು ಬೀಯಕ್ಕೆಸಿತನಾದೊಡಂ ಮಾರ್ಕೊಳ್ಳದೆ ಕುಡುತ್ತಮಿರ್ದು ಬಂದವರ ನಾತನನಸ್ಥಾಂತರಮುಂ ಬೆಸಗೊಳ್ವಾಗಳವರಿಂತೆಂಬರ್

---

1 ಕೆ 2 ಯ್ದಿದ 3 ದದು

ಕಂ॥ ರತಿಯುಂ ಕಾಮನುಮೆಂತಂ
ತತಿಶಯ[1][ಮಾ][1]ಗಿರ್ದರಿಂದ್ರನುಂ ರಂಭೆಯುಮಿ
ರ್ದತಿಶಯಮೆಂತಂತಿರೆ ಸಂ
ತತಮಿರ್ದರು ಮುದದೆ ನಿನ್ನ ಮಗನುಂ ಸೊಸೆಯುಂ ೩

ವ॥ ಎನೆ ರಾಗಂ ಪೆರ್ಚಿ ಸ್ನೇಹಂ ಬಿದಿರ್ಚಿ ನೆಗೞ್ದು ಪನ್ನೆರಡುವರುಷದಂದಿಗೆ ಮೂವತ್ತೆರಡುಕೋಟಿಯುಂ ನೆಱೆಯೆ ತಪ್ಪಿದುದೊಂದು ದಿವಸದ ಬೀಯಕ್ಕೆ ಮನೆಯಂ ಮಾಱೆ ತಾನಲ್ಲಿಯೊಂದೋವರಿಯಂ ಬೇಡಿಕೊಂಡು ಸೊಸೆಯುಂ ತಾನುಮಿರ್ದು ಮಱು ದಿವಸ[ಂ] ಬೀಯಕ್ಕೆ ಕೊಂಟಣಿ ಪರಿಚಾರಕಿಯರ್ ಬಂದು ಪೇೞೆ ದೇವಿಲೆ ತಲೆಯಂ ಬಾಗಿರ್ದಳಿಂದಿಂಗೆನ್ನ ತುಡುಗೆಯೊಳವು ಚಿಂತಿಸುವಿರೇಕೆಂದು ಸೊಸೆ ತನ್ನ ತುಡುಗೆಯೆಲ್ಲಮಂ ಕಳೆದುಕುಡೆ ಕೊಂಡುಪೋದವರ ಕೊಂಟಣಿಯನಿತು ಪೊತ್ತೇಕೆ ತಡೆದಿರಂ ದೊಡಮಂತೆಂದರ್ ದ್ರವ್ಯಮಿಲ್ಲದೆ ತಮ್ಮ ಸೊಸೆಯಾಭರಣಮೆಲ್ಲಮಂ ಕೊಟ್ಟಟ್ಟಿದರೆನೆ ಸಜ್ಜನಮೆಂಡಿರ ತುಡುಗೆಯಂ ಗಂಡವರ್ಕಳಾಯುಧಮಂ ಕೊಳ್ವುದು ಪುರುಷಾರ್ಥಮಲ್ಲೆಂದು ಮಗುೞೆ ಕೊಟ್ಟಟ್ಟಿ ನಿರ್ದ್ರವ್ಯದಳಿಯನನೆಂತು[2][ಮಿರಿಸೆ][2]ನೆಂದು

ಕಂ॥ ನಯಗತಿಯಿಂ ಕಬ್ಬಿನ ಸಿ
ಪ್ಪೆಯನಲತೆ[3][ಯು][3] ಪಿೞಿದುಕೊಂ[4][ಡಮನಿರದೆ ಬಿಸುಟಂ
ತೆಯು][4] ಮುಂದಿ[5][ಕ್ಕೆ][5] ಸರಸವಿ
ಕ್ರಯಿ[6][ಯಂದ][6]ಟ್ಟಿದೊಡೆ ತಂದು ಮುಂದಿಕ್ಕಿದುಮಂ (?) ೪

ವ॥ ಕಂಡದೆಲ್ಲಮನಾತನಂ ಕಾಣಲೀಯದೋಸರಿಸಿ ತಂದಮಂದಿರಂ ಬೇಱೆ ಕರೆದೊಯ್ದು ನೀಮೆನ್ನ ಪ್ರಾಣವಲ್ಲಭನುಂ ನಿರ್ದ್ರವ್ಯನಾದನೆಂದು ಕಳಿಪುಗೆಂದಟ್ಟಿ ಕಳಿದ ಕಳಿಗೆ ಮಾರಿಬಂದುದೆ ಯಾರುಂ ತವಿಸಲಾಱದಂತಪ್ಪ ದ್ರವ್ಯಂ ಮುನ್ನಮುಂಟದಱೊಳಗೆ ಮೂವತ್ತೆರಡು ಕೋಟಿ ದ್ರವ್ಯಮಾತನೊಡವೆಯುಂ ತನಗೆ ಬಂದುದು ತನ್ನ ಸುಡಲು [7][ಮ][7]ರ್ಕಾಡಲುಮೆಸಿತು ಬೇೞ್ಪುದಿನ್ನೆಂತಪ್ಪುದುಮಂ ನುಡಿಯದಿರಿಮೆಂದು ಜಡಿದಟ್ಟಿ ಕಳಿವುದುಮವರೆಲ್ಲಮಂ ಕೊಂಟಣಿಗೆ ಪೇೞೆ ಕೇಳ್ದು ವಿಷಣ್ಣಮನಸಿಯಾಗಿಪ್ಪುದು[ಂ] ವಸಂತತಿಳಕೆ ತನ್ನ ವಲ್ಲಭನ ತನ್ನೋಳಾದುಮಂ ನಂಬಿದರೆ ಮತ್ತಂ ಕೊಂಟಣಿಯೊಂದು ದಿನಮುಪಾಯಮಂ ಚರ್ಚಿಸಿ ತೆಂಗಿನೆಳಗಾಯೊಳಗೆ [8][ಸೊ][8]ರ್ಕಂ ತೀವಿ ಮಗಳ್ಗಮೞಿಯಂಗಮಟ್ಟಿದೊಡವರಿಬ್ಬರುಮಱಿಯದೆ ಕುಡಿದು ಸೊರ್ಕಿ ಮೆಯ್ಮಱೆಯದಿರ್ದುದಂ ಕಂಡು ನಾಡೆಯುಮಿರುಳು ಪೋಪುದುಂ ಚಾರುದತ್ತನಂ ಭಾನುಸೆಟ್ಟಿಯ ಗೃಹದ ಮುಂದಣ

1 ಘಾತಮಾಗಮಂತುಮಾ 2 ಮಿರಿಸಿ 3 ಯಂ 4 ಡು ಬಿಸುಟರಲೆಯು 5 ಕ್ಕೆಂದ
6 ಯಿನ 7 ಬೆ 8 ಪೊ

ತ್ರಿಪ್ಪಿಯೊಳಿಟ್ಟುಪಿನೆಂದು ನಾಲ್ವರ್ ಮನುಷ್ಯರ ಕಂಡ್ಯೊತ್ತಿಟ್ಟಿದೊಡವರುಮಾಯಂದವರೊಳಿ ಟ್ಟಿಪಿ ಚಾರುದತ್ತನವೇಶ್ಯದ ನಾಯ ಪೇಪಂದಿಯ ಕತ್ತಿಗ! ನಡುವೊಂದೆರಡುಜಾವಂಬರ ಮಿರ್ದು ಬೆಳಗಪ್ಪ ಜಾವದಾಗಳ್ ತೆಂಗಾಳಿ ಬೀಸೆ ಸೊರ್ಕು ತಿಳಿವುದುಂ ನಾಲ್ಕುದೆಸೆ ಯುಮಂ ನೋಡಿ ತನ್ನಿರ್ದಿರವುಮನಱಿದಿಂತೆಂದಂ

ಚಂ॥ ಸೊಗಯಿಪ ಮಾಡಮೆತ್ತ ಕಸಕುಪ್ಪೆಯ ತಿಪ್ಪೆಯ ಮೇಗಿದೆತ್ತ ತ
ಳ್ತಗಲದ ನಲ್ಲಳೆತ್ತ ಮುಗುರುಕ್ಕೊಳಿಪೆತ್ತುವ ಪಂದಿಯೆತ್ತ ಮಿ
ಕ್ಕುಗುವ ಧೂಪಮೆತ್ತ ಕೊಳೆನಾಱುವ ಗತ್ತದ ನಾತಮೆತ್ತ ರಾ
[1][ಗಗಳತಿ][1]ಗೇಯಮೆತ್ತ ಬೆಳಗಾತ್ತೆಯ ಮಸ್ವರಮೆತ್ತ ಕರ್ಮವೋ ೫

ಮ॥ ಅಱಿವೆಂ ನಲ್ಲಳ ತಾಯ ಗೊಡ್ಡ ಮಿದುವೆಂದಿಂತಪ್ಪುದಂ ಚಿತ್ತದೊಳ್
ನಿಱಿ[2][ಕೆಂ][2] ಕರ್ಮದ ಗೊಡ್ಡಮಂ[3][ತಮ ಸೆಱಗಿಗೆ][3]ಕ್ಕಿರ್ದು ಸಂಪ್ರಾಪ್ತದೊಂ
ದಱಿವೆಂ ಪೌರುಷಮೊಳ್ಪುಗೆಟ್ಟು ಮಱುಕದಿಂ ತೀಕಿರ್ದೆಯೆಂಬಂತೆ ಬಂ
ದೆಱಿಸಿತ್ತೀಯೆಡೆಯೊ[4][ಳ್ಪ][4]ಕೆಯ್ಯುದೆಸಗೆಂದಿರ್ದಂ ಮನೋರಾಗದಿಂ ೬

ವ॥ ಎನುತಮಿನ್ನಿಲ್ಲಿಪ್ಪೆನೆ ದೇಶತ್ಯಾಗಂಗೆಯ್ವೆನೆಂದು ಮನದೊಳ್ ನಿಶ್ಚಯಿಸ್ಸಿ ದೆಸನ್ಮೃಷ್ಟಿಯುಂ ಕಂಡು ಪೋಪೆನೆಂದು ತಮ್ಮ ಮನೆಗೆ ಪೋಗಿ ಬಾಗಿಲಂ ತೆಱೆಯಿಮೆನೆ ನೀನಾರ್ಗೆ ನಿಮ್ಮಷ್ಟಿ ಮನೆಯುಂ ಮಾಱಿ ನಿಮ್ಮ ಮಾವನ ಮನೆಯೊಳಿರ್ದಳತ್ತಲ್ ಪೋಗು ಚೀ ನಿರ್ಭಾಗ್ಯಂ ಪುಟ್ಟಿದ ನೆಲನು ಸಗಣಿನೀರ್ದಳಿಯಿಮೆಂಬುದುಮವರ್ಗೆ ಮುಳಿದು ಕೊಲಲ್ ಬಗೆದು ತ[5][ನ್ನೊಳ್][5]ತಾನೆ ಮಂತಣಮಿರ್ದು ಬಡತನದಾಗೆ ಬಾಬಿಲಾಱದೆ ಮೇಲಿಮಾಪ್ಪನೆಂದು ಲೋಕಂ ಪಟಿಗುಮಿದನಾಂ ಗೆಯ್ವೆನೆಂದು ಮಾವನ ಮನೆಗೆನಂದು ನೋಡಿ ಎಮ್ಮಷ್ಟಿಗಳೆತ್ತಲಿರ್ದರೆಂಬ ಧ್ವನಿಯುಂ ದೇಸಿಲೆ ಕೇಳ್ದು ಪರಿತಂದು ತರ್ಕೆಯ್ಸಿ ಕೊಂಡು ಬಂದಂದಮುಂ ಕಂಡು [6][ಚಿ][6]ಚಿ ನಿಮ್ಮ ಸ್ತನಂಗಳ್ ಪೇಟ್ದುದು ತಪ್ಪಿದುದಿಲ್ಲ ವರ್ ತಪಂಬಡುವುದುಂ ನಮಗೆಡಱಾಂಪ್ತಿಂದಬ್ಬಾಗಳೆನ್ನಂತಪ್ಪ ಪಾಪಕರ್ಮರ್ ಪುಟ್ಟು ಲೆನಗಾಗದೆನುತಿಪ್ಪುದುಂ ಮಿತ್ರಾವತಿ ಪು[7][ರುಷಂ][7] ಬಂದುದುಮಂ ಕಂಡು ಬೇಗಂ ಪರಿ ತಂದು ಕಮ್ಮಣ್ಣೀರುಮಂ ತೊಡೆದು ಮಜ್ಜನಂಬುಗು [8][ಬಿ][8]ಜಯಂಗೆಯ್ಯನೆ ತನ್ನೊಳಿಂತೆಂದಂ

ಕಂ॥ ಎಂದೆನಗೆ ಮದುವೆಯಾಯ್ತಾ
ದಂದಿಂದೆತ್ತಿತೆಗೆನ್ನ ವಿಯೋಗದಿನಾದಂದ
ವಂದುಮಿವಳಗೆಯ್ದು ಪಚಾರಮಿ
ದಿಂದಿಂತಿದುವನಱಿದಂತಿರ್ಪೆಂ (?) ೭

1 ಗಾಗಳ 2 ಕಿಂ 3 ಪಱಗಿ 4 ಳು 5 ನ್ನಲ್ 6 ಚಿ 7 ಷಂ 8 ದ್ವಿ

ವ॥ ಅಬ್ಬಾ ನೀನುಂ ಮುನ್ನಮಿಾಯೆ ಕೆಡಿಸಿದೆನಪರ ಕಾಸುಮಿನ್ನುಡಿಯುಂ ಪಡೆದಲ್ಲದೆ ಬಪ್ಪೆನಲ್ಲೆನೆಂದು ಕಪ್ಪಡಮುಂ ಸೀಳ್ವಾಗ ಮಹಾಶೋಕದಿಂ ದೇವಿಲೆಯುಱುತ್ತಮಿರೆ ಸಿದ್ಧಾರ್ಥಸೆಟ್ಟಿ ಕೇಳ್ದು ಪರಿತಂದು ತಂಗೆಯುಮನಳಿಯನುಮಂ ಸಂತಯಿಸಿ ನೀಮಿದೇಕೆ ದೇಶತ್ಯಾಗಂಗೆಯ್ವಿರೊ ಪಡೆದುಮಂ ಪದಿನಾಱುಕೋಟಿ ಕನಕಮುಂಟದುಮಂ ಬೀಯಂಗೆಯ್ದು ಸುಖಮಿರಿಮೆಂದೊಡಿಂತೆಂದಂ

ಕಂ॥ ಆನಱಿದುದೆ ಕೊಕ್ಕರಿಕೆಗೆ
ತಾನಱಿ[1][ದು][1] ಸಾಲ್ದಿರ್ದುಮಱಿಪನೇೞ್ಪುದೆ ಲೋಕಂ
ಮಾನಿತೆಗೆ ಮುಟ್ಟುಪ[2][ಡ][2]ದಂ
ದೇನೊ ಪೆಱರ್ ಕಂಡಡಲ್ಲಿದಾಗದೆ ಬಿಸುಡಲ್ ೮

ವ॥ ಎನೆ ಪುತ್ರಂ ಮಾವನೆಂಗು[ಂ] ಎಮ್ಮಿತ್ತುದನೆಂತುಮೊಲ್ಲಿರಪ್ಪಡೆ ನಿಮ್ಮ ಬುದ್ಧಿಯೆಂತಾದುದಂತೆ ನೆಗೞ್ಚಿಂ

ಕಂ॥ ನೆಲೆಯಿಂದಗಲ[3][ಲ್ಕಾ][3]ಗದು
ನೆಲೆಯೊಳ್ ಬಹು[4][ವಿಧ][4]ದುಪಾಯಮುಕ್ಕುಂ ಬಾೞಲ್
ನೆಲೆವೆ[5][ತ್ತು][5]ಗೆಯ್ವುಮೆಂತುಂ
[6][ಫಲವೆತ್ತುದೆಂಬ ಮತಮ][6]ನಱಿಯಿರೇ ಮುನ್ನಂ ೯

ವ॥ ಎಂಬುದಂ ಕೇಳ್ದಾತನಿಂತೆಂದಂ

ಕಂ॥ ನೆಲೆಯೊಳ್ ಮುನಿ ಪಡೆದರ್ಥದ
ಬಲಮುೞಿದೆರ್ಬಟ್ಟೆಯುಂಟೆ ತಾನ[7][ಲ್ಲಿಂದಂ][7]
ತೊಲಗದೆ ಸಿರ್ಕುವುದೇಕಾ
ನೆಲೆಬಲೆಯೋ ಪುರುಷನೇನಮಂ ಮೃಗಕುಳಮೋ ೧೦

ವ॥ ಎಂಬುದು[ಂ] ಮಾವಂ ಮತ್ತಮಿಂತೆಂದನೆನ್ನಿ[8][ತ್ತುದು][8]ಮನೊಲ್ಲ[9][ದ][9]ಲೆವುದ[10][ವ][10]ಲ್ಲದ ಬದು[11][ಕ][11]ಲ್ಲೆಂದೊ[12][ಡ][12]ಱಿಪೆಂ ನಿನ್ನಳಿವನಾರುಂ ನಿನ್ನ ಪೊಱತಗಾರ್ಪನರಿಲ್ಲಾಮೊಡಮೆನ್ನ ವಿನಯಕ್ಕಲ್ಲಿವರಂ ಪಿಡಿದುತರಲ್ವೇೞ್ಕುಂ ತನ್ನಿಮೆಂದು ಪೊಱತಯುಂ ಕಳೆದುಕೊಳೆ ಕೊಟ್ಟು ನಡೆದು ಪಾಲಾಶಪುರಮನೆಯ್ದಿದಾಗಳ್ ಚಾರುದತ್ತಂ ಕೆಱತಯೊಳ್ ಕಾಲ್ಕಚ್ಚುತಮಿರ್ದನನ್ನೆಗಮುಮಂ ಪೊೞಲಂ ಪೊಕ್ಕು ಕಡೆಯಂಗಡಿಯ

1 ದುಂ 2 ಡಾ 3 ಲುಕಾ 4 ರಿದ 5 ತ್ತ 6 ಪರಿವೆತ್ತತೆಂಬಮಾತ 7 ಲ್ಲಿಂ
8 ತ್ತು 9 ದೆನೆ 10 ಪ 11 ರ 12 ಡೆ

ಕೆಲಪೊಳ್ ಪೊಱಱಯನಿಱಿಸಿಯಾತಂ ಪೋದಂ ಸಿದ್ಧಾರ್ಥಸೆಟ್ಟಿಯುಂ ವೃಷಭದಾಸನೆಂಬ ಸೆಟ್ಟಿ ಕಂಡು ಭಾನುಸೆಟ್ಟಿಯ ಮಯ್ದುನನೆಂದಱಿದು ಸಂಭಾವಿಸುತ್ತಿರ್ಪಿನಂ ಚಾರುದತ್ತನೆಯ್ದೆವಂದೊಡಾ ಪೊಱಱಗಳನೊಂದೆಡೆಯೊ[1][ಳಿಱಿಪೆ][1] ಇರ್ಬರುಮಂ ತನ್ನ ಮನೆಗೊಯ್ದು ತಿಪ್ರಿಯದಿನನ್ನಪಾನಾದಿಗಳಿಂ ತಣಿಪಿದಾಗಳ್ ಮಱಿಗಾಲನುಡಸಿತ್ತೀಗೆಯ್ವುದೆಮಗೊಂದಂಗಡಿಯುಂ ಬಾಡಗೆಗುಡಿಮೆಂದು ಗಂದಿಗಸಸರದೊಳಂ ಕ್ರಯವಿಕ್ರಯಂಗೆಯ್ಯುತ್ತಮಿರ್ದು ಮಱಿಗಾಲಂ ಪೋಪುದುಂ ನಾಡೆಯುಂ ನೂಲುಂ ಪತ್ತಿಯುಮುಂ ಸಂಗ್ರಹಂಗೆಯ್ದು ಕೆಲವೆತ್ತುಂ ಬಾಡಗೆಗೊಂಡು ಭಂಡಮಂ ಪೇಱಿ ವೃಷಭದಾಸನ ಪ್ರೈಸಿ ಪಿರಿದೊಂದು ಸಾ[2][ರ್ತದೊಡವೋಗಿ][2] ಪೆರ್ವಱುವಿನೊಳ್ ಬಿಟ್ಟಲ್ಲಿ ಕಾಱ್ಕಿಚ್ಚಿನೊಳ್ ಭಂಡಮೆಲ್ಲಂ ಬೆಂದತ್ತಾಗಳಾ ಬೀಡಿನವರೆಲ್ಲ[ಂ] ನೆರೆದೇಗೆಯ್ವಮೆನೆ ಚಾರುದತ್ತನಿಂತೆಂದಂ

ಕಂ॥ ಕೇಡೆಂಬುದು ಪುರುಷನನೀ
ಡಾಡಲುಮುಲಿದಲೆದು ಕಾಡಲುಂ ಪುರುಷತೆಯುಂ
ನೋಡಲುಮೆಂದಾದೊಡೆ ಚಿಃ
ನಾಡೆ ಮನಂಗೆಟ್ಟು ಮಗುಟಿಲಕ್ಕುಮೆ ಪೋಪಂ ೧೧

ವ॥ ಎಂದೊಡಂಬಡಿಸಿ ಮಱುದಿವಸಮೆತ್ತುಗಳಂ ಕೊಂಡು ಪಯಣಂಬೋಗುತ್ತಂ ಕಂಜಸ್ಥಮೆಂಬ ದುರ್ಗಾಧಿಪನ ಸೇನಾಪತಿ ಪೋಗುತ್ತಿರ್ದೊಡಾತನ ಬೀಡಿನೊಳ್ ಕೂಡಿ ಪೋಪಲ್ಲಿ ನೆರೆದಿಱಿದುಕೊಳಲ್ ಬಂದೊಡೆ ಚಾರುದತ್ತಂ ಬಿಲ್ಲಂಕೊಂಡಿದಿರಂ ಪೋಗಿ ತಾಗಿ ಶರಸಂಧಾನಂಗೆಯ್ದು ಕಾದಿ ಕಿರಾತಬಲಮು[3][ನೋಡಿಸಿ][3]ದಡೆ ಕೆಲಪೊಳ್ ಬಂದು ಕಾದುವ ಬೇಡರೆಸೆಯಲ್ಕೆ ನೊಂದು ಬೞಲ್ದು ನಿಂದು ಬೇಗನೊಂದು ಬಾಳು[4][ಮಮತ್ತ ಪರ][4]ಮುಮಂ ಕೊಡೆಯ್ದೆವಂದೊರನಾಂತಿಱಿದು ಗೆಲ್ದು ಬೞಲ್ದೊಂದು ಮರಸಂ ನೆಮ್ಮಿರ್ದಾಗಳಾ ಸೇನಾಪತಿ ಪರಿತಂದೀತನಿಂ ಬರ್ದೆಮಿನ್ನುಗಂಡನಾವನೀ ಲೋಕದೊಳೆಂದು ಪೊಗೞ್ದು ತನ್ನ ಬೀಡಿಂಗೊಯ್ದು ಪುಣ್ಣನೋವಿದೊಡೆ ಕೆಲವು ದಿವಸದಿಂ ತನ್ನ ಮುನ್ನೊಡವಂದ ಸಂಘಾತಮುಮೊಂದೆಡೆಯೊಳಿರ್ದೀಗೆಯ್ವಮಲ್ಲಿ ಭಂಡಂ ಕೆಟ್ಟುದಿಲ್ಲಿಯ ಕಾಳಗದೊಳೆತ್ತುಂ ಪೋದುವು ನಾಮುಂ ನೊಂದೆಂತಾನುಂ ಬರ್ದುಂಕಿದೆವು ತಾನುಳ್ಳೊಡೆ ಮತ್ತಂ ಪಡೆಯಲಕ್ಕುಂ ಮಗುಟ್ವಮೆನೆ ಚಾರುದತ್ತನೆಂಗುಮಿದಾವುದು ಮಾತು

ಚಂ॥ ಹರಿ ಗಿರಿಕೂಟದಿಂ ಗಿರಿಗೆ ಲಂಘಿಸಿ ನೊಂ[5][ದ][5]ಪೆನೆಂದು ಮಾಣ್ಗುಮೇ
ಖರಕರನುಗ್ರರಾಹುವಿನ ಕೋೞ್ಗಿಗೆಪಿಂ ಮಸುಳ್ದಿರ್ಕುಮೇ ಕರಂ
ಪಿರಿಯುರಿಯುಳ್ಪೆ ಚಂದನಮುಹಾದ್ರುಮಮೇಂ ಗಳ ಪೊತ್ತು ನಾರ್ಕುಮೇ
ಪುರುಷನುದಗ್ರ ಸಾಹಸದ ನೋಟ ತಗುಳ್ದೊಡೆ ಬೆಚ್ಚಿಪೋಕುಮೇ ೧೨

1 ಳಿರ್ಪೆ 2 ರ್ತನೊಡಲೋಗಿ 3 ನೊಡೆ 4 ಮುಮತ್ತ 5 ದೆ

ವ|| ಅದಲ್ಲದೆಯುಂ ಪ್ರಾರಬ್ಧಸ್ಯಾಂತಗಮನಂ ಮಹಾಪುರುಷಸ್ಯ ಲಕ್ಷಣಮೆಂಬುದದಱಿಂ ನಮ್ಮ ಭವಿಷ್ಯದಳಿವುಮಂತೆಂದು ನೋೞ್ಪೆವೆನೆ ಕೆಲಬರ್ ಮಗುೞ್ದರ್ ಕೆಲರನೊಡಗೊಂಡು ಬೇಡನಗಲ್ಕೆಯ್ಗೆ ರತ್ನಮಯಮಪ್ಪ ಕ[1][ಲ್ಗ][1]ಳಂ ಸೋರೆಯ ಗುಂಡಿಗೆಯೊಳ್ ತೀವಿಕೊಂಡು ಬರುತಿರೆ ಪುಲಿಯ ಗರ್ಜನೆಗೆ ಸಂಘಾತದವರೆಲ್ಲಂ ಮಗುೞ್ದೋಡಿಪೋದೊರ್ವನೆ ಬರ್ಪಲ್ಲಿ ಬೇಡರ್ ಕಂಡು ಬೇಹುವಂದನೆಂದು ಪಿಡಿಯಲಾ ಸೋರೆಯ ಗುಂಡಿಗೆಗಳ್ ಕೆಟ್ಟವಂತಱ್ಕಿಂ ಬರ್ದುಂಕಿಬಂದು ಮತ್ತಮನೇಕ ನಗರ ಗ್ರಾಮದೊಳಾದು ಪಾಂಸುಪಾಯದೊಳ್ ಕಿಡೆಯುಂ ಬೇಸಱದೆ ಬಂದು ಪ್ರಿಯಂಗುಪಟ್ಟಣಮೆಂಬ ವೇಳಾಪುರಮಂ ಪೊಕ್ಕಲ್ಲಿ ಭಾನುಸೆಟ್ಟಿಯ ಮರ ಯಾನಪಾತ್ರಪರಿಚಾರಕಂ ಸುರೇಂದ್ರದತ್ತನೆಂಬೊಂ ಕಂಡು ನಿಜನಿವಾಸಕ್ಕೊಯ್ದು ಸ್ನಾನಾನ್ನಪಾನಾದಿಗಳಿಂ ತಣಿಸಿ ತತ್ಪ್ರಪಂಚಮೆಲ್ಲಮಂ ಬೆಸಗೊಂಡು ಕೃಪೆಗುಂಬಟ್ಟು ಸಿದ್ಧಾರ್ಥಂಗಿಂತೆಂದನೆನ್ನ ಪಡೆದ ಧನಮಂ ಕೈಕೊಂಡು ಸುಖದಿನಿರ್ಪಂತುಮಾಡೆನಲಾತ[ಂ] ನಿನ್ನ ಪಡೆದ ವಸ್ತುವಂ ಕೊಟ್ಟೊಡನೊ[2][ಲ್ಲಿ][2]ನೆನೆ ಚಾರುದತ್ತನಿಂತೆಂದಂ

ಕಂ|| ಅಪ್ಪುದಪೆಂತುಂ ಬಂದಾ
ದಪ್ಪುದು ತನಗಾಗದಂದದಾಗದು ಮತ್ತಿರೆ
ತಪ್ಪುದನಱಿದೆ ಸಾಹಸ
ದೊಪ್ಪವೆ ಸವಿನಂಗೆ ನೆಗೞ್ವನೆಂತಿರಲಾರ್ಪಂ ೧೩

ವ|| ಅದಱಿಂ ನೀನೇನುಮಂ ಬಗೆಯದೆ ಜಲಯಾತ್ರೆಯುಂ ಸಂಘಾತಮುಳ್ಳೊಡವರ್ಗಪ್ಪಯುಷಮನಿತೆ ಸಾಲ್ಗುಮೆಂಬುದುಮಂತೆಗೆಯ್ವೆನೆಂದು ನಾವಿಕನಾಯಕಂಗಪ್ಪೈಸಿ ಬಹಿತ್ರಮನೇಱಿ ಪೋಪಲ್ಲಿಯಾತನ ಬುದ್ಧಿಪೌರುಷಮಂ ಮೆಚ್ಚಿ ನಾವಿಕಾಧಿಪಮಂದುಗೊಟ್ಟೊಡಾ ಪಣವಿಂಗನರ ಪೊಕ್ಕ ದ್ವೀಪದೊಳ್ ಕೊಂಡು ಪೆಱತು ದ್ವೀಪದೊಳ್ ಮಾಱಿ ನೀವರ್ಟ್ಟಿಯೊಳ್ ನಡೆದು ಕಳಶಪುರ ಗಜದ್ವೀಪ ಕಟಹದ ಲಂಕಾ ಅಶೋಕ ಸಿಂಹಳ ಪಾಂಡು ಕೇರಳ ಬಬ್ಬರಾದಿ ದ್ವೀಪ ದಕಪೂರ್ವಾಪರ ಸಮುದ್ರೋಪಕಂಠದ ಪಟ್ಟಣಂಗಳಂ ಪೊಕ್ಕು ಪನ್ನೆರಡುವರುಷದಂದಿಗೆ ಮೂವತ್ತೆರಡು ಕೋಟಿ ದ್ರವ್ಯಮುಂ ನೆರಪಿ [3]ಇ[3]ನಿತಕ್ಕಂ ಭಂಡಮುಂ ಕೊಂಡು ಪೋದಡಿನ್ನುಡಿಯಕ್ಕುಂ ತಂಪೆಯ ಪಡೆದಳವಿಗಗ್ಗಳನಾಗಿಕ್ಕುವಿಂ ಪೋನೆಂದಪೂರ್ವಭಂಡಮುಂ ಕೊಂಡು ಪಾವಸಗೊಳಕ್ಕೆ ಬಂದಾ ನಾವಿಕರನೊಡಂಬಡಿಸಿ ಬಹಿತ್ರದೊಳ್ ತೀವಿ ತಾನುಮೇಱಿಸಿಯುಮಂ ತಿರ್ದಿ ನಡೆಯಿಸೆ ನಾಡೆಯುಂತರಮುಂ ಪೋದಲ್ಲಿ ತೊಟ್ಟನೆ

---

1 ಲ 2 ಲ್ಲ 3 ಈ

ಕಂ॥ ಮೊರೆಮೊರೆದು ಘೂರ್ಣಿಸುತ್ತಂ
ತೆರೆತೆರೆಗಳನಟ್ಟಿಪೊಯ್ದು ನೆಗೆದೊಗೆದು ಮುಗಿ
ಲ್ವೊರೆವರೆಗಮೆಯ್ದಿ ಮಸಗುವ
ದೊರೆಯಾಯ್ತುತ್ಪಾತವಾತಘಾತ ಸಮುದ್ರಂ ೧೪

ವ॥ ಅಂತು ಸಮುದ್ರಂ ಬಹಿತ್ರಂ ಬಿದಱುವಂದು ತಿಟ್ಟನೆತಿಱಿದು ಕಲ್ಲೆಯುಂ ಕವಿಯುಮಾಗೆ ನಿರ್ಜೀವನುಮಿರ್ದು ಪೋಗೆ ಕೂಪಕಂಭಂ ಮುಱಿಯೆ ಬಂಧಂ ಬಿರಿಯೆ ರಣಂ ಮುಱಿಯೆ ಕೀಲ್ ಕೞಲೆ ಬಿಗುಪು ಬೞಲೆ ನಿಪ್ಪುಗೆಭಯಂ ಮಿಗೆ ನಾವಿಕಾಜನ ಮೆರ್ದೆಗೆಟ್ಟು ಬಾಯ್ವಿಟ್ಟು ಸುಯ್ದು ಪೊಯ್ದು ಬೞಲ್ದುೞಲ್ದು ಮಮ್ಮಲಮಱುಗೆ ಚಾರುದತ್ತಂ ಕಂಡು ಭಿನ್ನಮಾಗಲಿರ್ದ ಬಹಿತ್ರಮುಮಂ ಬನ್ನಮಾಗಲಿರ್ದ ಕಳತ್ರಮುಮಂ ನಂಬಿ ಮೆಳ್ಪಡುವುದಂ ಮಾೞ್ಕಂ ಮುನ್ನಂ ತಱಿಸಲ್ವುದು ಕಾರ್ಯಮೆಂದು ಸಮುದ್ರಮಂ ಪಾಯಲ್ ಬಗೆವುದಂ ಸಿದ್ಧಾರ್ಥನದನಱಿದಿಲ್ಲಿಪ್ಪ ಸಮಾಧಿಯೊಳ್ ಸಾಯಲುಮಱಿವುಳ್ಳಂಗಾಗದೆಂದು ಬೇಗಂ ಪ್ರಮಾದವಲಗೆಯನೇಱಿ[3]ಸಿ ತಾನು[1][ಮೊಂ][1]ದು ಪಲಗೆಯನೇಱಿ ನೂಂಕಿ ಬ[2][ಹಿ][2]ತ್ರದಿಂ ಪೊಱಗಾದಾಗಳ್

ಕಂ॥ ತೀವಿದ ಪಾಪದ ಭರದಿಂ
ಜೀವಂ ಸಂಶ್ರುತಿಯೊಳಿರ್ದು ಕಿಡುವಂತೆ ಕರಂ
ತೀವಿದ ಭಂಡದಿನೊಪ್ಪುವ
ನಾವೆ ಮರುದ್ಘಾತದಿಂದಮುರ್ಗಿದುದಾಗಳ್ ೧೫

ವ॥ ಅಂತಿರ್ಬರುಮಂತೆರಡುಂ ಪಲಗೆಯುಂ ಪತ್ತಿ ಪೋಗುತ್ತುಮನ್ಯತ್ವಮೆಂಬನುಪ್ರೇಕ್ಷೆಯನಿದಂ ಕಂಡು ನಂಬಿಸೆಂಬಂತೆ ತೆರೆಪೊಯ್ಲೊಳಿರ್ದರುಂ ಮುಗುಳ್ದಿರಂತಾ ಚಾರುದತ್ತಂ ತೀರ್ಥಕರತ್ವಮೆಂಬ ಪುಣ್ಯಮಿಲ್ಲದೆಯುಮಾಸನ್ನಭವ್ಯ[3][ನನ][3]ಗಾರಕೇವಳಿಯಾಗಿ ಮೋಕ್ಷಕ್ಕೆ ಪೋಪಂತೆ ಬಹಿತ್ರಮಿಲ್ಲದೆಯುಂ ಪ್ರಮಾದವಲಗೆಗಳ[ಂ] ಪತ್ತಿ ಸಮುದ್ರದ ತಡಿಗೆವರುತ್ತಂ ಪ್ರಮಾದಸ್ಥಾನಂಗಳಂ ಬಂಚಿಸುವಂತೆ ಜಳಚರಂಗಳಂ ಬಂಚಿಸಿ ಅಶುಭ ಪರಿಣಾಮಮುಮಂ ಗೆಲ್ವಂತೆ ತೆರೆಗಳನೊಡ್ಡೈಸಿ ಬಂದೊಂದು ಕುಱುವಮಂ ಸಾರ್ದಲ್ಲಿ ಪಣ್ಣಲಂಗಳಂ ತಿಂದು ಮೂಱುದಿವಸಮಿರ್ದು ಮತ್ತಮಾ ಪಲಗೆಯನೇಱಿ ಗಾಳಿಯ ವಶದಿಂದಂಬರಾವತಿಯೆಂಬೂರ್ಗೆವಂದಿೞಿಯೊಡೂರವರ್ ಕಂಡು ಪಳಕಿದ ಮೆಯ್ಯೆಂದವಂ ಭಿನ್ನಪಾತ್ರನೆಂದಱಿದು ಸಂಭಾಷಿಸುತಿರ್ದಂದಿಂಗೆರಡು ಮೂಱು ದಿವಸದಂದು ನಿಮ್ಮಂತೆ ಭಿನ್ನಪಾತ್ರನಾಗಿ ಬಂದಂ ಚಂಪಾಪುರದ ವಾಸವ್ಯಂ ಭಾನುಸೆಟ್ಟಿಯ ಮೈದುನಂ ಸಿಂಧುವಿಷಯದ ಶಬರಿಗ್ರಾಮದೊಳ್ ತಮ್ಮ ಭಾವನ ದ್ರವ್ಯಂ ಪದಿನಾಱುಕೋಟಿ ಇರ್ದುದೆಂದಲ್ಲಿಗೆ

1 ಮೆಂ 2 ಹು 3 ವಣ

ಪೋದನೆಂದೊಡವರಿಪ್ಪು ಮಾವಂದಿರವರ ಪೇಱು ಬರ್ದುಂಕಿದಡೆ ಸಾಲ್ಗುಮೆಂದಲ್ಲಿ ಪಿರಿಯ ಭಾನುಸೆಟ್ಟಿಯರ ಚೈತ್ಯಾಲಯದ ದಾನಶಾಲಾಪ್ರತಿಪಾಲಕಂ ವಸದತ್ತಂ ಪ್ರಿಯಂ ಗೆಯ್ದಿರಿಸಿ ನೀವಿನ್ನೆಪ್ಪೊದಱಿಂದೇನೊಳಿಪ್ಪುದೆನೆ ಚಾರುದತ್ತನಿಂತೆಂದಂ

ಕಂ|| ಅನುವರದೊಳ್ ಕಡುದುಱಿಲಾ
ಳೆನಿತುಂ ತಾಂ ನೋಗುವನಿತೆ ತಱಿಸಲ್ವರ್ಪಂ
ತೆನೆ ತಳಗುಂ ಸತ್ಪುರುಷ[1][ರು][1]
ನನಿತೆ ಜಲಂ ಪುಟ್ಟೆ ಸಾಹಸಾನ್ವಿ[2][ತರ][2]ಕ್ಕಂ ೧೬

ವ|| ಎನಗರ್ಥಮಾದೊಡಮಾಗದೊಡಂ ಸಾಹಸಪುರುಷನೆಂಬಿನಿತೆ ಸಾಲ್ಗುಮೆನೆ ಮೆಚ್ಚಿ ಭರಂಗೆಯ್ದಿರಿಸಿ ನಾಲ್ಕುದಿವಸದಿಂ ಸಿಂಧುವಿಷಯಕ್ಕೆ ಪೋಗಿ ಧನದತ್ತಸೆಟ್ಟಿಯರಂ ಕಂಡು ತಮ್ಮ ಮಾವಂದಿರಪ್ಪ ಸಿದ್ಧಾರ್ಥಸೆಟ್ಟಿಯರ ಸುಖವಾರ್ತೆಯುಂ ಬೆಸಗೊಳ್ವುದುಮಾತನೆಂದ[ಂ] ನಿಮ್ಮ ಮಾವಂದಿರ್ದಂದು ತಮ್ಮ ವೃತ್ತಾಂತಮಂ ಪೇೞ್ದು ಜಲಯಾತ್ರೆ ವ್ಯವಹಾರದೊಳ್ ಧನಂಬಡೆದು ಬರ್ಪಲ್ಲಿ ಬಹಿತ್ರಂ ಭಿನ್ನಮಾಗೆ ಪ್ರಮಾದವಲಗೆಯಂ ಪಿಡಿದು ಬಂದೆನೆಂದು ತಮ್ಮ ವೃತ್ತಾಂತಮಂ ಪೇೞ್ದು ನಿನ್ನ ದೇಶತ್ಯಾಗದ ದೆಸೆಯೊಳ್ ಪಲಕಾಲಂ ಸತ್ತನೊಳನೆಂಬ ಸುದ್ದಿಯುಂ ಕೇಳ್ದಿದಿಲ್ಲ ದೈವಬಲದಿಂ ಬರ್ದುಂಕುಗುಮೆಂದು ಪೇೞ್ದು ದುಃಖಿತನಾಗಿರೆ ನಿಮ್ಮ ಭಾವನ ದ್ರವ್ಯಂ ಪದಿನಾಱುಕೋಟಿಯಿನ್ನು ಕೈಯೊಳಿರ್ದುದದಂ ಕೊಂಡುಪೋಗೆನೆಂದಲ್ಲಿ ನೀಂ ಬಂದೆಂತಾನುಮೊಡಂಬಡಿಸಿ ಎಂಟುಕೋಟಿಯುಂ ಕೊಟ್ಟು ಚಂಪಾಪುರಕ್ಕೆ ಕಳಿಪಿದಂ ನೀನುಂ ಬರ್ದುಂಕಿ ಬಂದುದೊಳ್ಳಿತಾಯ್ತಿನ್ನೆಂಟುಕೋಟಿ ದ್ರವ್ಯಮಿರ್ದುದು ಕೈಕೊಳ್ಳೆನೆ ಚಾರುದತ್ತನಿಂತೆಂದಂ

ಉ|| ತಂದೆಯ ಮುನ್ನಿನರ್ಥಮೆಲ್ಲಮನಾಂ ಕಿಡಿಸಿಂದು ನಾಡೆಯುಂ
ನೊಂದು ಮದೀಯ ಬಾಹುಬಲದಿಂದೆ ಸಲೆ ನೋೞ್ಪೆನೆಂದು ಬಂ
ದಂದಮದಕ್ಕೆ ಬಂದ ತೆಱನಾಗದೆ ಕೊಟ್ಟುದೆ ಕೊಳ್ವೆನಲ್ಲೆನಾ
ತಂದೆಯ ಧರ್ಮದೊಳ್ಳಿಯೊಳವಲ್ಲಿಗೆ ಮಾಡು ವಣಿಕ್ಕುಲಾಧಿಪಾ ೧೭

ವ|| ಎಂದೊಡದೆಂತೆಗೆಯ್ವೆನೆಂದು ಧನದತ್ತಸೆಟ್ಟಿಯಾತನ ಪದಕ್ಕೆ ಭಾನುಸೆಟ್ಟಿಯರ್ ಮಾಡಿಸಿದ ಚೈತ್ಯಾಲಯಮೆಲ್ಲಿಯೊಳವಲ್ಲಿಗೆ ಕೊಟ್ಟುಬಿಟ್ಟ ನುತ್ತಮಿಂತೆಂದಂ

---

1 ರ 2 ತ

ಕಂ॥ ನೆರಪುವೆನೆಂದುಂ ಧನಮಂ
ಪರಪುಗುಮೆಲ್ಲಂದದಿಂ ವಿಧಾತ್ರನದಂ ಮಾ
ಣ್ದಿರು ನೀಂ ಬಲ್ಲಿದನವನೊಳ್
ಕರಮೆ ಚಲಂಗೆಯ್ದು [ನೇಪೆ]ಗಿಡದಿರು ಮರುಳೇ ೧೮

ವ॥ ಎನೆ ಚಾರುದತ್ತನಿಂತೆಂದಂ

ಕಂ॥ ಬಲ್ಲಿದನಪ್ಪೊಂ ಬಿದಿಯಂ
ದೆಲ್ಲಮನಾನಱಿವೆನಱಿದುಮಿಾ ಪ್ರಾಣಂ ತಳು
ವಿಲ್ಲದೆ ಪೋಪಿನಮಾಗಳು
ಮಲ್ಲನ ಸಾಹಸಮನಾಂ ಬಿಸುಟಿಪ್ಪನೆ ಭಯದಿಂ ೧೯

ವ॥ ಎಂದು ಮಱುಮಾತಿಂಗೆಡೆಯಿಲ್ಲದಂತು ನುಡಿದಲ್ಲಿ ಕೆಲವು ದಿವಸಮಿರೆ ದಾನ ಶೂರನುಂ ಸಾಹಸಪುರುಷನುಮಿಾ ಕಾಲದೊಳ್ ಚಾರುದತ್ತನಲ್ಲದೆ ಪೆಱನಿಲ್ಲೆಂದು ಲೋಕ ಮೆಲ್ಲಮುದ್ಭ್ರಾಂತುಗೊಂಡಿರುಳುಂಪಗಲುಂ ಪೊಗೞೆ ವೀರಪ್ರಭನೆಂಬ ವ್ಯಂತರದೇವಂ ಕೇಳ್ದಾತನ ಪ್ರಾಣತ್ಯಾಗಿಯಪ್ಪುದಂ ನೋೞ್ಪೆನೆಂದಾತನ ದೇವಗಾರ್ತಣಲು ಬರ್ಪ ಚೈತ್ಯಾಲಯದ ಪೆಱಗಣೋವರಿಯೋವರಿಯೊಳ್ ಭಕ್ತಿಸಾಮುದ್ರಿಕೆ ವೀರಪಾಂಡ್ಯ ಸಹಿತಂ ವಿಕ್ರಮಾದಿತ್ಯನ ರೂಪುಗೊಂಡು ಶೂಲಿಯಾಂತ್ಸಿಂದು ಪುಯ್ಯಲ್ಚುತಿರೆ ಚಾರುದತ್ತಂ ಬಂದು ಬಸದಿಯಂ ಬಲಗೊಳ್ವುತಂ ಕಂಡಿದೇಕೆ ಪೊರಳ್ದು ಪುಯ್ಯಲ್ಚಿದಪನೆನೆ ವೀರಪಾಂಡ್ಯ ನಿಂತೆಂದಂ

ಸ್ರ॥ ಈತಂ ಶ್ರೀ[ರೂಪ]ನಂಕಪ್ರಭು ವಿಶದಯಶಂ ನಿರ್ಜಯಕ್ಷೋಣಿಪರೋತ್ಪ
ತ್ರಾರಾಳಂಭೋಧಿಯೊಳ್ ಸಾಹಸದ ಪಡೆಮದಂ ಭಾಗಮುಂ ಪೂಣ್ದು ನಿಚ್ಚಂ (:)
ಬೂತಾರ್ಥಿನಿರ್ಕಳಾರ್ಕೆಟ್ಟಿಟಿದ ಬಡವರಾರೆಂದು ತಾನೀಯುತಂ ವಿ
ಖ್ಯಾತೋದೀತಂ ತೊಟಿಲ್ಪಂ ಧರಣಿಪತಿಯುಮುಂ ವಿಕ್ರಮಾದಿತ್ಯನೆಂಬೊಂ ೨೦

ವ॥ ಅಂತಪ್ಪಾತಂ ತೊ[ಟ್ಟ]ಸಿಲ್ಲಿಗೆಮಂದಿಂದಿನಿರುಳ್ ಶೂಲಿಯೆಂಬ ಮಹಾ ವ್ಯಾಧಿಯಾಗಿ ನೇಪೆಗೆಟ್ಟಪ್ಪನೀ ವ್ಯಾಧಿಯುಂ ಮಾನಸನ ಬಲದ ಬಱಿಯ ಎಲುವಿ ನೊಳ್ ತಾಮಂಗೊಂಡ[ಲ್ಲ]ದೆ ಪೋಗದೆಮ್ಮೊಳಾರ್ ಸತ್ತ್ವದನಿಾತಂ ಬಾೞ್ವನಲ್ಲನದಱಿ ನೀಯೆಲಾಪ್ಪನಂ ಬೇಡಿ ಪೋಗಲಿಂದಿರ್ದೆಮೆಂಬೊದಾನೀದೆನ್ನೆಗ[ಂ] ಮಾಣೆಂ ದೇವರ ದೇವಂಗೆ ಪೊಡೆಮಟ್ಟುಬಂದನೆನೆಂಬುದುಮಾತನಿಂತೆಂದಂ

1 ಸಡೆ 2 ರುಪ್ತ 3 ಟನೆ 4 ಲ

ಕಂ॥ ಈವೆಡೆಯೊಳೀವ ಬಗೆದಂ
ದೀವಂ ಮಾಣೆಂಬುದು [1][ವರ][1]ಗಂಡರ ಮಾತ
ಲ್ಲೀವೆಡೆಯೊಳವಿಱುವೆಡೆಯೊಳ
ಮಾವನುಮಿನಿಸುಗಿ[2][ಗ][2]ಮುಱಿದುಮೇಳಿಂ ಜೀಗಂ ೨೧

ವ॥ ಎನೆ ಚಾರುದತ್ತನಿಂತೆಂದಂ

ಕಂ॥ ಬೇಡುವ ಮನಮಾದಂದಾ
ಳಾಡುವ ಮನಮುಕ್ಕುಮುಱಿಯುಲಾದುದು ನಿಮ್ಮಂ
ಕೂಡೆ ನೆಗೞ್ದಿರ್ದ ನಿಜಪತಿ
ನಾಡೆಯುಮಾತುರನೊತೊಮೆ ಪಮುಳಮೊ ಪೇೞಿಂ ೨೨

ವ॥ ಎಂಬೊಡೆಮ್ಮರಸನೊಳೇಂ ನಿನ್ನ ನುಡಿಯಂ ನೀನೆಯಱಿವೈ ಪೋಗೆನೆ ಪೋಗಿ ಸರ್ವಜ್ಞಂಗೆ ಚತುರ್ಭಕ್ತಿಪೂರ್ವಕಂ ಪೊಡೆವಟ್ಟು ಬಂದಿಸಿ ಬಂದು ತಾಂ ತೋಱಿಂದು ವೀರಪಾಂಡ್ಯನ ಕಯ್ಯ ಸುರಿಗೆಯುಂ ಕೊಂಡು ಬಲದ ಬಱಿಯನರಿದು ವಿಕ್ರಮಾದಿತ್ಯನ ಕಯ್ಯೊಳಿತ್ತು ಬಂದು ಚೈತ್ಯಾಲಯುದ ಮುಂದೆ ಮೂರ್ಛೆವೋಗಿ ಬಿರ್ದನಾಗಳಾ ಬಱಿಯೊಳ್ ತಾನಂಗೆಯ್ದೊಡೆ ಶೂಲೆ ಕೆಟ್ಟಿರ್ದವೆಲ್ಲಂ ಬಂದುಸೆಂದೊ[ಡೊ]ರ್ವಂ ಪರದರ ಮಗಂ ತನ್ನ ಬಱಿಯನಿತ್ತು ಸತ್ತುಪಟ್ಟನೆನೆ ಜೀಗಂ ಬಂದು ಸಂಜೀವನ ಪ್ರಯೋಗದಿಂಪೆತ್ತಿ ಪೊವಟ್ಟಿದ್ದ ನಿಂದನಂ ವಿಕ್ರಮಾದಿತ್ಯನಿಂತೆಂದಂ

ಕಂ॥ ಧನಮಂ ಲಾಭಕ್ಕೀವುದು
ತನುವಂ ಗತಿಗೀವುದೆಸೆದು[3][ಮಿ][3]ವು ವೈಶ್ಯಗುಣಂ
ಧನಮಂ ತನುವಂ ಬೇಡಿದ
ಮನುಜಂಗೆರಡಿಲ್ಲದೀವುದಿದು ಪರದಿಕೆಯೇ ೨೩

ವ॥ ಎಂದ ಮಾತಿಂಗೆ ಚಾರುದತ್ತನೆಂಗುಮಾನುಱುಮಾಱಱಿಯದಿಂತೆನೆ

ಕಂ॥ ನಿನ್ನಿಂದಗ್ಗಳಮಾಗಿ
ರ್ಪನ್ನಂ ಮನುಜೇಂದ್ರನೊಳನೆ ಜಗದೊಳಗವಱಿಂ
ನಿನ್ನೆಡಱಿಬೂಳೆನ್ನನಿತ್ತ ಮ
ಹೋನ್ನತಿಗೀ ಮೂಱುಲೋಕಮುಂ ಬೆಲೆಯಲ್ತೇ ೨೪

---

1 ವ 2 ಗೆ 3 ವಿ

ವ|| ಅದುವಂ ಜಲೆಗೆವಾರದು ಮುನ್ನಂ ಲೇಸಲ್ತೆ ನ[ಲ]ಪ್ಪೊಡೆ ನೀನೆನ್ನಂ ಬಾಱಿಸಿದನಿತಱಿಂದೊಳ್ ಮೂಱುಲೋಕದನಿತೆ ಜಲೆಯಾದುದಱಿಂದೆನ್ನಿ[1][ತ್ತು][1]ದೊಳ್ಳಿತ್ತೆ ತುದಿಯೊಳ್ ಬಾಱಿಸಿದಗ್ಗಳಿಕ್ಕೆ ನಿನಗಾದುದೆನೆ ವಿಕ್ರಮಾದಿತ್ಯನಿಂತೆಂದಂ

ಕಂ|| ಇತ್ತೈ ಬಱಿಯೆಲುವಂ ನೀಂ
ಸತ್ತಂ ಬಱಿಕಿನ್ನಳುಂಬಮಾಗುವ ಪೊಱೆಯುಂ
ಪೊತ್ತಿರಲಾಱದೆ ಬಂದಾ
ನೆತ್ತಿದೆನೆನ್ನೊಂದು ದಿವ್ಯಶಕ್ತಿಯ ಬಲದಿಂ ೨೫

ವ|| ನಿನಗಾಯುಷ್ಯಮುಳ್ಳುದನಱಿದು ದಿವ್ಯಶಕ್ತಿಯೊಳೆತ್ತಿದೆನ್ನ ಸಾಮರ್ಥ್ಯಮಕ್ಕುಂ ತಱಿಸಲಲಕ್ಕುಮೆ

ಕಂ|| ವಸುಧಾತಳಮಂ ಕೈಯಾ
ನಿಸಿದಳವುಂ ಮಸುಳೆ ಜೇ[2][ಗಮುದು ತಾಂ][2] ಕಯ್ಯಾ
ನಿಸಿದಳವ[3][ದುಮಿಂತಿದು][3] ಚಿಂ
ತಿಸುವೊ[4][ಡೆ][4] ಸಾಮಾನ್ಯದಳವೆ ವಣಿಜಕುಮಾರಾ ೨೬

ವ|| ಇನ್ನು ಪೆಱಪೇನುಮೆನ್ನದಿರ್ ನೀಂ ಮನುಷ್ಯಲೋಕದೊಳ್ ನೀನೆ ಗಂಡನೆಯೆಂದು ತನ್ನ ದಿವ್ಯರೂಪಂ ತೋಱಿ ಸುವರ್ಣವೃಷ್ಟಿಯುಂ ಸುರಿದು ಪೋದನಾಗಳ್ ಪೊಬಲೆಲ್ಲಮಚ್ಚರಿನಟ್ಟು ಬಂದು ವಸುಧಾರೆಯ ಮಣಿಕನಕಂಗಳಂ ದೀನಾನಾಥ ಯಾಚಕಜನಕಿತ್ತು ಉಱಿದುದನಾ ಚೈತ್ಯಾಲಯದ ದಾನಮಭಿಷೇಕ ಪೂಜೆಗೆ ಕೊಟ್ಟು ಸುಖದಿನಿರ್ಪನಂ ಧನದತ್ತಂ ಬಂದು ತದ್ವೃತ್ತಾಂತಮೆಲ್ಲಮನಱಿದು ಬೆಕ್ಕಸಂಬಟ್ಟು ಮನೆಗೊಡಗೊಂಡು ಪೋದನಂತಲ್ಲಿ ಕೆಲವು ದಿವಸಮನಿರ್ದು ಧನದತ್ತನನೊಡಂಬಡಿಸಿಯೊರ್ವನೆ ಪೋಗಿ ಹೇಮಾಂಗಮೆಂಬ ನಾಡ ರಾಜಪುರದ ಸಮೀಪದ ತಾಪಸಾವಳಿಯನೆಯ್ದಿರ್ಪುದುಂ ಪೂರ್ಣಾಕ್ಷಿಯೆಂಬ ತಾಪಸಂ ಕಂಡೆತ್ತಣಿಂ ಬಂದಿರೆನೆ ಚಂಪಾಪುರವಾಸನೆನರ್ಥೋಪಾರ್ಜನಾನಿಮಿತ್ತಂ ಬಂದೆನೆಂದೊಡಾ ಭಾನುಸೆಟ್ಟಿಯರೆಮಗಿಷ್ಟರಿಂ ನೀಮುಮೆಮಗಿಷ್ಟರಿಂ ನೀಮುಮೆಮಗನರಿಂ ಬಂಧುಗಳೆಂದತಿಪ್ರಿಯದಿಂ ಮನ್ನಿಸಿ ನಿನಗಿನ್ನು ಪೆಱದುದ್ಯೋಗಂ ಬೇಡ ಸರೇಂದ್ರನಾದನುಂ ಕಲ್ಪುದದಱಿಂದೊಳಲ್ಲದರ್ಥಮುಂ ಪಡೆಯಲುಬಾರದೆಂದು ಕಿಱಿದು ಪ್ರತ್ಯಯಮುಂ ತೋಱಿ ನಂಬಿಸಿಯೊಂದು ದಿವಸಮಾ ಬೆಟ್ಟದೊಳೊಂದು ರಸದ ಕೂಪಮುಂಟು ನಾವುಂ ತಪ್ಪಬಾಯೆಂದಾತನನೊಡಗೊಂಡು ಬಿಲವಾದ ತಂತ್ರೋಪಕರಣಂಗಳಂ ಕೊಂಡು ಪೋಗಿ ಬಿಲಮನೆಯ್ದಿ ನೀನೀ ಬಿಲಂಬುಗಲ್ ಶಂಕಿಸುವೆಯಾನೀ ನೇಣಂ

1 ತು 2 ಗ 3 ದು 4 ಡಮುದು

ಪಿಡಿದಿಱಿದಪ್ಪೆಂ ನೀನಿೞ್ದುದಂ ತೆಗೆದುಕೊಳ್ಳೆಂಬುದು[ಂ] ಶಂಕಿಸುವೆಯೆಂದುದಕ್ಕೆ ಜಲಂ ಬಟ್ಟಾಸೆ ಪುಗುವೆನೆನಲಂತೆಗೆಯ್ವೆಂದೊಸೆದು ಸಕಳಿಯುಮನಿಟ್ಟ ಸೋರೆಯ ಗುಂಡಿಗೆಯುಂ ಬಿಸ್ಸೊಕ್ಕಟ್ಟಿ ಕೈನುಟ್ಟಿದೀ ರಸಮುಂ ತೀವಿಕೊಳ್ವುದೆಂದೊಡೆ ಚಾರುದತ್ತನಿೞಿದು ತೀವಿ ಕೊಟ್ಟೊಡಾ ತಾಪಸಂ ರಸಮುಂ ತೆಗೆದುಕೊಂಡು ನುಗುೞ್ದು ನೇಣನಿೞಿಯೆ ಬಿಡದಿರೆ ಸಾವೆಯುಂ ಪೊಕ್ಕು ನೇಣ ಬರಸಂ ಪಾರ್ದಿರ್ದರ್ ಬರವುಗಾಣದೆ ಬೇಸತ್ತೆಂತೆಂದಂ

ಮ॥ ರಸಮಂ ಕೊಳ್ವೆಡೆಗೆನ್ನನಿಕ್ಕಿ ಗೊರವಂ ಕೊಂಡೊಯ್ದನಿನ್ನೇಕೆ ಚಿಂ
ತಿಸುವೆಂ ಮುನ್ನಿನ ಪೋದ ಬಂದೆಡೆಗಳೊಳ್ ಸಾವೆಯ್ದಿ ಬರ್ಪನ್ನಮು
ಬ್ಬಸದೊಳ್ ಬರ್ಪನಿದರ್ಕುಪಾಯಮಣಮಿಲ್ಲೊಂದುಂಟು ದುರ್ಮೋಹಮುಂ
ಬಸುಟಿಂ ದೇವರದೇವ ನೀನೆ ಶರಣೆಂದಿರ್ಪೆಂ ಮನಶ್ಶುದ್ಧಿಯಿಂ ೨೭

ವ॥ ಎಂಬುದುಮಲ್ಲಿರ್ದನೊರ್ವ ಪುರುಷಂ ಕೇಳ್ದು ನಿನಗೆ ಪೋಗಲುಪಾಯಮುಂಟು ಚಿಂತಿಸದಿರೆಂದೊಡೆನಗುಪಾಯಮಂ ಪೇೞ್ವ ನೀನಾರ್ಗಿಲ್ಲಿಯೇ[1][ಕಿ][1]ರ್ದಯಿಂ ದೊಡಾಂ ರಾಜಪುತ್ರನೆನರ್ಥದಿಂದಾನುಮೀ ಗೊರವನ ಗೋಱಿಯೊಳ್ ಬಿರ್ದನೆನ್ನುಮಂ ಕೊಂಡುಪೋದೊಡಾಂ ತೃಷೆಯೊಳ್ ಸ್ವೈರಿಸದೆ ರಸಮುಂ ನೀರೆಗೆತ್ತು ಕುಡಿಯುಲೆಂದೆರಬಿರ್ ಕೈಯೊಳಂ ಸೊಗೆವುದುಂ ಕೈಗಳ್ ಮುರುಂಟಿ ಕೊಳೆತುಪೋದುವದಱಿಂ ಪೋಗಲಱಿಯದಿರ್ದೆನಗವಸ್ಥೆಯಾದುದು ನಿನಗುಪಾಯಮಾವುದೆಂದೊಡಿಲ್ಲಿಗೆ ಪಿರಿದಪ್ಪುದೊಂ[2][ದುಡು][2] ಬಂದೀ ರಸಮನುಂಡು ಮೆಲ್ಲನೆ ಪೋಪಾಗಳದಱ ಬಾಲಮಂ ಪಿಡಿದೊಡದು ಕೊಂಡು ಪೋಕುಮೆನ[3][ಲು][3]ಡುಮಂ ನೋೞ್ಪೆನೆಂದಿರ್ದನಮಾತಂಗಂ ಪ್ರಾಣಾವಸ್ಥೆಯಾದೊಡೆ ಪಂಚನಮಸ್ಕಾರಮುಂ ಪೇೞ್ದು ಸಮಾಧಿಯುಂ ಕುಡಿದನನ್ನೆಗಮುಡು ಬಂದು ರಸಮನುಂಡು ನೆಗೆಯಲದಱ ಬಾಲಮಂ ತಿಣ್ಣಂ ಪಿಡಿವುದುಂ ಕೊಂಡದಮಾರ್ಗಗ ಮೊನೆಕಲ್ಲ ಕೋಳ್ಗೆ ಸ್ವೈರಿಸುತ ಮಹಾ[4][ಶ್ವಾ][4]ಸಮುಂ ತಿಣ್ಣಂ ಪಿಡಿದನೂರ್ಧ್ವಗತಿಗೆ ಸಲ್ವಂತೆ ಮೇಗಣ್ಗಡರ್ವುದುಂ ಬಿಲದಿಂ ಪೊಱಮಟ್ಟು ನಮುಭೂಮಿಯಲ್ಲಿ ಪರಿವಾಗಳ್ ಪತ್ತುವಿಟ್ಟಿರ್ದರ್ ಕುಳ್ಳಿರ್ದ

ಕಂ॥ ಪೊಡವಿಯುಡಿಯೆತ್ತ ಪೊಕ್ಕಘ
ಪಡುವುದಿದೆತ್ತೊರ್ಬನಿಂತುಟಂ ಪೇೞ್ವ[5][ದದ][5]
ತ್ತುಡು ಪಿಡಿದೊಡೆ ಕೊಂ
ಡಡರ್ವುದೆತ್ತೇಂ ವಿಚಿತ್ರಮೋ ಸಂಸಾರಂ ೨೮

ವ॥ ಎಂದಲ್ಲಿಂದಮೆರ್ದ ಪೆರ್ಬುಲ್ಲೊೞಗಂ ಪುಗುತರಲಲ್ಲಿ ಪಟ್ಟೆ ಪೆರ್ಮೆನಂ ಮೆಟ್ಟಿಪೋಪುದುಂ ಪೆಱಗಣೊಂದು ವನಮಹಿಷಂ ಸೊಕ್ಕಿ ಪರಿತಪ್ಪುದುಮದಱ ರಭಸಕ್ಕಾ ಪಾವೆರ್ದ ಬಾಯುಂ ತೆಱೆದು

1 ಕಿ 2 ದು 3 ಲ 4 ಚಾ 5 ದೆ

ಕಂ॥ ಎಂತು ಬರ್ದುಂಕುವೆನೆಂದು ಕೃ
ತಾಂತಂ ಬರ್ಪಂತೆ ಬರ್ಪ ಮಹಿಷಾಧಿಪನಂ
ನೋಂತರ ಪಗೆಗಳನೆತ್ತಿಱಿ
ದಂತಾಗನಯುವವೆ ಬಂದು ನುಂಗಿತ್ತಾಗಳ್ ೨೯

ವ॥ ಅಂತಲ್ಲದೆಲ್ಲಮಂ ಮುಗುಳ್ದು ನೋಡುತ್ತಿರ್ದು ಕಂಡಾಮುನಾಯುಷ್ಯಮೆ ಕಾಗು ತಾಂ ಕಾಯಲಾಱನೆಂದಂತೆ ಪೋಪನೊಂದು ತೊಱೆಯುಂ ಕಂಡಲ್ಲಿ ಪಾದಪ್ರಕ್ಷಾಳನಂಗೆಯ್ದು ನೆೞಲೊಳ್ ವಿಶ್ರಮಿಸಿರ್ಪನಂ ರುದ್ರದತ್ತಂ ತನ್ನರಪ್ಪಯ್ವರ್ ಸಹಾಯರುಂ ತಾನುಂ ತೊಟ್ಟನೆಕೊಳೆ ಬಂದೊಸಂ ಕಂಡೞರ್ದಿರ್ದ ಚಾಕಾರಂಗೆಯ್ದಪ್ಪಿಕೊಂಡನಂ ಪರಸಿ ಕುಳ್ಳಿರ್ದುದುಮಿಂತೇಕಾಯಾಸಂಬಡುವೆಯೆನೆ ಎನ್ನ ಬುದ್ಧಿಯೊಳ್ ನಮ್ಮೊಕ್ಕಲಂತಾದೊಡವಿಂತಾದೊಡಮೆಂತಿರ್ಪೆನೆನಲಾನುಂ ನಿನ್ನ ಲೋಕಮೆ ಲೋಕಮೆಂದು ಬಂದೆನೆಂಬುದು ಮೆಮ್ಮಚ್ಚಿಗಳುಂ ನಿನ್ನ ಸೊಸೆಯುಂ ಬಳ್ಳಿನರೆ ಪೇೞೞನೆ ನಿನ್ನಂ ಕಾಣ್ಬೆ ಮೆಂಬಾಸೆಯೊಳ್ ಬಳ್ಳಿದರಲ್ಲದೆ[1][ಮ್ಮ][1]ವರ್ಗಾವಬಲಂ ವಸಂತತಿಳಕೆಯುಂ ನಿನ್ನನಗ[2][ಲ್ದು][2] ನಾಡೆ ಪೊತ್ತಿಂಗೆ ಸೊಕ್ಕು ತಿಳಿದು ತನ್ಮಚ್ಚಿಗೆಯ್ದು ಯೋಗಮುಮುಂ ನಿನ್ನ ದೇಶತ್ಯಾಗಮುಮನಱಿದೀ ಭವಕ್ಕೆ ಚಾರುದತ್ತನಲ್ಲದ ಗಂಡರ್ ಪೊಱಯಲ್ಲೆಂದು

ಕಂ॥ ರಸವರ್ಧನಂಗಳಂ ಬಿಸು
ಟಸುವೞಿ ಪಿಣಿಲಿಱಿದು ಕೇಶಮಂ ಕಾಸೆಯನು
ಟ್ಟಸಿಧಾರಾವ್ರತ್ತಿಯಾಗಿ
ರ್ದಸಿಯಳ್ ಕರಮಸಿಯಳಾದಳಂದಿಂ ಬೞಿಯಂ ೩೦

ವ॥ ಎಂದ ಮಾತಿಂಗೆ ಚಾರುದತ್ತಂ ಮುಗುಳ್ನಗೆನಕ್ಕಿಂತೆಂದಂ

ಕಂ॥ ಧನಮುಳ್ಳನೆಗಂ ವೇಶ್ಯಾಂ
ಗನೆ ಪ[ತ್ತು]ಗುಮಲ್ಲದಂದು ಮನದೊಳಗಿರಿಸಳ್
ಮನೆಗಂ ಬರಿಸಳ್ ಕೂರ್ತಂ
ಗೆನೆ[3][ಸುಂ ಮುಳಿವಳ್][3] ಕೆಲಸಱಿಯ ಕೊಂಡುಕೊಸೆಯಳ್ ೩೧

ವ॥ ಆದಱಿಂ ಸೂಳೆಗೆ ಮೇಳವಾಣ್ಮಸಿಂದಗ್ಗಳಮಪ್ಪಾತಂ ದೊರೆಕೊಳವನ್ನೆಗ ಮಿತ್ರಣ್ಗಾಗಿರ್ಪಮಾಕೆಯುಂ ನಂಬಿ ನುಡಿಯಲಾಗೆನೆ ರುದ್ರದತ್ತನಿಂದಂ

1 ಮ 2 ಲ್ದ 3 ಸುಂ

ಕಂ|| [ಇ]ನಿದನುಣಲರ್ಥಿಯುಳ್ಳಂ
ದಿಸಿಯುನ ಕೂಟ[1][ಕ್ಕೆ][1]ಮರ್ಥಿಯಕ್ಕುಂ ವೇಶ್ಯಾಂ
ಗನೆ ಸುಖಮನುಜಿಯಲ್ ತೀರ್ವಂ
ದಿಸಿಯುನಗಲ್ವಂದು ಸುಂಗಲಾರ್ಕುಮೆ ವಿಷಮುಂ ೩೨

ವ|| ಭವ್ಯನಪ್ಪಂ ನಿರ್ದೋಷಿಯಪ್ಪ ಪರಮಾತ್ಮನಂ ಬಿಸುಟು ಪಾಪಿಯಪ್ಪುಗ್ರ ದೇವತೆಯನಾರಾಧಿಸಿ ಗತಿವಡೆಯದಂತೆ ಚದುರೆ ಚದುರನಪ್ಪ ಜೇಟದಾಣ್ಮನಂ ಬಿಸುಟಳಿ ದನ[2][ಪ್ಪನಗಂ][2] ಪೊರ್ದಿದಡೆ ಸುಖಂಬಡೆಯಳದಱಿಂದನಿಷ್ಟಸಂಯೋಗಂ ದುಃಖ ಸಂಯೋಗದಿಂಪ್ರತಮೊಳ್ ಕೂಡಿದ ದುಃಖಮೊಳ್ಳಿತ್ತೇಕೆ ಮರುಳಾಗಿರ್ದಳಲ್ಲಳದಂ ಕಂಡು ನಂಬುವುದೆಂದ ಬಱಿಯುಂ ಗೋಮುಖಾದಿ ಸಹಾಯರ ಸುಖವಾರ್ತೆಗಳಂ ಬೆಸಗೊಂಡೊಡ ವರ ಸಾಂತ[3][ಮು][3]ಪೆಲ್ಲಮನಱಿಯೆಪೇೞ೩ ಕೇಳ್ದಂತಂತೆ ಪಯಣಂಬೋಗಿ ಶ್ರೀಪುರ ಮೆಂಬ ಪೊೞಲನೆಯ್ದಿಯಲ್ಲಿ ರುದ್ರದತ್ತನಂ ಪ್ರಿಯಮಿತ್ರನೆಂಬ ಸೆಟ್ಟಿ ಕಂಡತಿಪ್ರಿಯದಿಂ ದಿರಿಸಿ ಕೆಲವು ದಿವಸಮಿರ್ದಲ್ಲಿ ಚಾರುದತ್ತಂ ವಿದ್ಯೋಪದೇಶಂಗೆಯ್ಯೆ ಬಂದ ಮನ್ನಣೆ ಯೊಳ್ ಸಂಬಳಮುಂ ಮಾಡಿಕೊಂಡಲ್ಲಿಂದಂ ಪೋಗಿ ಗಾಂಧಾರವಿಷಯದೊಳ್ ಕಾಚವಳ ಯಂಗಳಂ ಕೊಂಡು ವೇತ್ರಪರ್ವತದ ಶಿಳಾಭಿಧಾನಗುಹೆಯೊಳಗನುರ್ಚಿಪೋಗಿ ಹಿಮ ಕೂಟಾದ್ರಿತಟದ ಕಿರಾತಾಶ್ರಯದೊಳ್ ಮಣಿಖಂಡಮುಂ ಮಾಱಿಯಾ ಸಂಬಳದಿಂ ಪೋಗಿ ರಜತಗಿರಿಯ ಮೊದಲ ಸಾರವಳ್ತಿಯನೆಯ್ದಿದಲ್ಲಿಯೊರ್ವಂ ಭಾಷೆಯಱಿವ ಬುದ್ಧಿ ಮಾನಸನಂ ಕಂಡು ರತ್ನದ್ವೀಪಕ್ಕೆಂತುಪೋಪುದೆಂದೊಡೆ ಅಜಪಥದೊಳ್ ಪೋಪುದು ಕರಮರಿದೆಂತೆನೆ

ಕಂ|| ಎರಡುಂ ಕೆಲದೊಳಗಾದಂ
ಕರಮೋರಂತೇಕಶಿಲೆಯ ಕ[4][ರಮುಂತದು ತಾ
ನಿರದಾ][4]ದೂರಮೊಗೆದು [5][ನಾ][5]
ಲ್ಪೆರಳಸಿ[6][ಧಾರೆಯದು][6] ಗಡಮೆಯಜಪಥದಗಲಂ ೩೩

ವ|| ಎಂದು ಪೇೞ್ವಲ್ಲಿ ಚಾರುದತ್ತಂಗೆ ನಿವ್ರೆ ಬಪ್ಪುದುಂ ಅದು ಮನಸ್ವಿಯಲ್ಲ ದೊಂಗೆ ನೋಡಲಾಗದೆಂದೊಡೆ ನುಡಿಯಲೆಂತಪ್ಪುದಾ ಬಱಿಯ[7][ಮಾ][7]ಡಪೋ[8][ರಿ][8] ಯನೇಱಿ ಸಮಭೂಮಿಯೊಳಿೞಿದು ತಿದಿಯುಂ ಪೊಕ್ಕಿರ್ದೊಡೆ ಭೇರುಂಡವಕ್ಕಿ ಬಂದು ಕೊಂಡುಪೋಗಿ ರತ್ನದ್ವೀಪದೊಳಿಕ್ಕುಗುಮಂತಲ್ಲದಗಮ್ಯಮಪ್ಪ ಸಾಹಸದೊಳಾರುಂ ನೆಗೞ್ದಿ ರಿಲ್ಲೆಂದೊಡದನಂತೆ ಕೇಳ್ದು ತಮ್ಮೊಳಾಳೋಚಿಸುವಲ್ಲಿ ಕೆಲ[ರ್] ಪ್ರಾಣಗೊಂಡಮಿಂದೆಂ ದೊಡೆ ಚಾರುದತ್ತನಿಂತೆಂದಂ

1 ಕ್ಕೆ 2 ಪ್ಪಗನಂ 3 ರಪ್ಪ 4 ರಂತದು 5 ದಮನಾ 6 ದಾಯಂತು 7 ನಾ 8 ರಿಗೆ

ಕಂ॥ ತನಗಾಯುಮುಳ್ಳೊಡೆನಿತು
ರ್ವಿನದ ನೆಗರ್ತೆಗಳುಮಳಿವು ತಾನಿಲ್ಲದೊಡಂ
ತೆನತುಪ್ಪಯೊಗಂಗೆಯ್ದೊಡ
ಪೆಸಸುಂ ಕಾಯಲ್ಕೆ ಬಾರದಿದು ಪರಮಾರ್ಥಂ ೩೪

ವ॥ ಅದಱಿಂಸಿದುಪಂ ಸೋಱೆಪ್ಪೆಮೆಂದಡೆಮಗೆ ಪೇೞದು ಬಗೆಯುಂಟೆ ನಿನ್ನಾದು ದನಪ್ಪೆಮೆಂದು ವಿಚ್ಛೇದಿಸಿ ತಮ್ಮ ಕಯ್ಯ ಸಂಬಳದ ಪಣವೆಲ್ಲಮಂ ಕೊಟ್ಟು ಸಪ್ಪಯು ತಂಗಳಂ ಪಿರಿಯಪ್ಪೇೞು ಪಿರಿಯಾಡಪೋರಿಗಳಂ ಕೊಂಡು ಕೀೞಟ್ಟಲೆದು ಪಲ್ಲಣಂ ಗಟ್ಟಿ ನಡೆಯಿಸಿ ಬೞಿಯಮೇಱಿ ಕೆಲದಸಿಯು ಕಲ್ಗಳಮೇಲೆ ನಡೆಯಿಸಿ ಪರಘಾತಂ ಗೆಯ್ದು ನಾವಿಂ ಪೋಪಮೆಂದೊಂದುದಿವಸ

ಕಂ॥ ಮೆಳ್ಳರುಮೇೞುಂ ಪಾಶ[ಂ]
ಗಳನೆಮ್ಮನಿಬರ ಪುಣ್ಯಪ್ರಭಾವಮೇಂ ಕೇವಳಮೋ* ೩೫

ವ॥ ಎಂದಡಕ್ಕುಮಿನ್ನಾವುದಱಿಂಕೂಳಮೇಂ ನಡೆಯಿಮೆಂದಜಪಥದೊಳ್ ಪುಳಿದು ಪೋಗಿ ಸಮಭೂಮಿಗೆೞಿದು ವಾಹನದಿಸೆೞಿದು ವಿಶ್ರಮಿಸಿರ್ಪನ್ನಮಂ ಚಾರುದತ್ತಂ ಪಾದ ಪ್ರಕ್ಷಾಳನಾನಿಮಿತ್ತಂ ಜಲಾಶ್ರಯಮತ್ತ ಪೋದನನ್ನೆಗಂ ರುದ್ರದತ್ತಂ ಪಾರಸಿಗನುಪ ದೇಶಮಂ ಬೇಱಿಕೆಯುಂ ಕೇಳ್ದನಪ್ಪುದಱಿಂ ತನ್ನ ಕಯ್ಯ ಕತ್ತಿಗೆಯಿಂದೇೞಾಡಪೋರಿಗಳಂ ತಲೆಯುಸರಿದು ತಿದಿಯುಗಿದು ಛಿದ್ರವಾಪೆಡೆಗಳಂ ಪೊ[ಲಿದಿ][1]ರ್ದನಂ ಚಾರುದತ್ತಂ ಬಂದಿರ್ದೇಂ ಪೊಲ್ಲಕೆಯ್ದಿರಾಂ ರತ್ನದ್ವೀಪಮೆಯ್ದುವುದಂ ಕಾಣೆಂ ಪಾಪಮೆಯ್ದುವುದಂ ಕಂಡೆ ನೆತ್ತಾನುಂ ಪೞಿಕೆಯೊಗಲ ತಿದಿಯೆಂದು ಬಗೆದೆಂ ಪ್ರಾಣವಧೆಗೆಯ್ದುದನಱಿಯೆನಾದೊಡಂ

ಕಂ॥ ಪೋಗಲರಿದಪ್ಪ ಬಟ್ಟೆಯೊ
ಳೀಗಳ್ ಪೊತ್ತಿರ್ದು ನಮ್ಮ ಸಾವಿನೊಳಿವು ತಂ
ದೀಗಳ್ ಗೆಯ್ದೀ ಯೋಗದ
ಪಾಂಗಿಂ [2][ನೀ][2]ವಿಂತು ನೆಗೞಲಕ್ಕುಮೆ ಪೇೞಿಂ ೩೬

ವ॥ ಆದೊಡಂ ನೀಮೇವಿರಾನೆನ್ನ ಸಾಹಸದ ಲಂಪಳಿಂದೊಳಿಂತಪ್ಪಂದನಾರಯ್ಯದೆ ನೆಗೞ್ದಿಸಿದೆಲ್ಲಮೆನ್ನ ದೋಷಮೆಂದೆ ಕೊಕ್ಕರಿಸುತ್ತಿರೆ ರುದ್ರದತ್ತಂ ಮುನ್ನೆ ನಪ್ಪೊಕ್ಕಲಂ ಕಡಿಸಿದ ಪೞಿಯಮಿಗಳಿನಪಾಯಮುಮೆನ್ನದಲ್ಲದೆ ಪೇೞರ್ಗಿಲ್ಲಿನ್ನೆತ್ತಲುಂ ಪೋಗಲುಂ

1 ಲಿ 2 ನಿಮುರ್ಯಾದೆಯಿ

* ಮೇಲಿನ ವಚನದಿಂದ ಮುಂದುವರಿದ ಭಾಗವಾಗಿದ್ದು ಅದರಲ್ಲಿ ಎರಡು ಪಾದಗಳನ್ನು ಮಾತ್ರ ಗುರುತಿಸಬಹುದಾಗಿದೆ.

ಪಾಂಗಿಲ್ಲದನಱುವೆಯೆಂದಾಗಳ್ ಪ್ರಾರಬ್ಧಸ್ಯಾಂತಗಮನಂ ಮಹಾಪುರುಷಸ್ಯಲಕ್ಷಣ ಮೆಂದಿಂ ಕುಸಿಯಲಾಗದೆಂದು ಖಂಡಂ ಪೊಱಗಾಗೆ ಮಗುರ್ಚಿದೇೞುಂ ತಿದಿಯುಮನೇೞುಂ ಪಕ್ಕಿ ಕೊಂಡು ನೆಗೆದು ಒಂದಕ್ಕೆ ದೊರೆಕೊಳ್ಳದೆಯುವೞ ಬೞಿಯನೆ ಬರುತ್ತಾನಿರ್ಬರುಂ ಕತ್ತಿಗೆಗಳಂ ಪಿಡಿದು ಪೊಕ್ಕು ಪೊಲ್ದುಕೊಂಡುಮುಳ್ದು ಪಟ್ಟರಂತು ನಾಡೆಯುಂ ಬೇಗಕ್ಕೆ ರತ್ನದ್ವೀಪದಿನೆಂಟು ಭೇರುಂಡಪಕ್ಕಿಗಳ್ ಬಂದಡಗಿಸ ಪುಂಜಮೆಂದುಮೇೞುಂ ತಿದಿಯು ಮನೇೞುಂ ಪಕ್ಕಿಕೊಂಡು ನೆಗೆದು ಒಂದಕ್ಕೆ ದೊರೆಕೊಳ್ಳದೆಯುವೞ ಬೞಿಯನೆ ಬರುತ್ತಂ ಚಾರುದತ್ತನಿರ್ದ ತಿದಿಯಂ ಪಿಡಿದು ಪಾಱುವ ಪಕ್ಕಿಯೊಂದು ಕಣ್ಕುರುಡ[1][ಪ್ಪ][1] ದಱಿಂದಾ ಕುರುಡಗಣ್ಣಿಸಿಱುಯುತ್ತಮುದು ಬರೆ ಮೇಗೆನೆಗೆದಾ [2][ತಿದಿ][2]ಯಂ ಬಿಸುಟ ಪಕ್ಕಿಯನೆರ್ಬಟ್ಟಿ ತಿದಿಯಂ ನೀರಂ ಮುಟ್ಟಲೀಯದೆಱಗಿ ಪಿಡಿದುಕೊಂಡು ಪೋಕುಮದು ಮತ್ತೆ ಬಂದಾ ಕಣ್ಣಸಿಱುಗುಮಿಱುದಾಗಳ್ ಮತ್ತೆಯುಮದಂ ಬಿಸುಟರೆರ್ವಟ್ಟಿ ಬಂದದಂ ಪಿಡಿದುಕೊಳಲುಮಂತು ಪಲವು ಸೂೞ್ ಬಿಡುತ್ತಂ ಕೊಳುತ್ತಂ ಪೋಗೆ ಬೞಿಲ್ದು ಪೋಪಲ್ಲಿ ಮತ್ತೆ ಬರೆ ತಿದಿಯಂ ಬಿಸುಟರೆರ್ಬಟ್ಟಿ ಮೆಲ್ಲನೆ ಬಂದೆಱಗುವಿನಮೊಂದು ಕುಱು ವದ ಕೆಲದೊಳ್ ಬಿರ್ದತ್ತಾಗಳಾ ತಿದಿಯಂ ಪೊರ್ದ ಪೊಱಮಡುವುದನಾ ಪಕ್ಕಿ ಕಂಡು ಪ್ರಾಣಮುಂ[3][ಟಿಂ][3]ದು ಪೋಯ್ತಾತನಲ್ಲಿಯಾ ಕುಱುವದ ಜಲಾಶ್ರಯದೊಳ್ ಮಿಂದುಟ್ಟುದನೊಗೆದುಮೊಂದು ಶಿಲೆಯ ಮೇಲೆ ಕುಳ್ಳಿರ್ದಿಂತೆಂದಂ

ಮ॥ ತಿದಿಯಂ ಪೊಕ್ಕಿರಪೆತ್ತ ಪಕ್ಕಿ ಪಿಡಿದೊಯ್ದು[4][ಯ್ವಂ][4]ದಪೆತ್ತೀ ಸಮು
ದ್ರದ ಮೇಗೆತ್ತೊಗೆದಲ್ಲಿ ಪೋಱತೆ ಪೆಱದೊಂದೆಪ್ಪಂದೊಡೆನ್ನಂ ಬಿಸು
ರ್ಪುದಿದೆತ್ತಂತದನಟ್ಟಿ ಮತ್ತೆ ಪಿಡಿದುಂ ಬಿಟ್ಟಕ್ಕಿಯುಂ ಕೊಂಡುಮೊ
ಯ್ವುದದೆತ್ತಿಲ್ಲಿ ಬಿಸುರ್ಪುದೆತ್ತನುಚರರ್ ತಾಮೆತ್ತಿದೇಂ ಚೋದ್ಯಮೋ ೩೭

ವ॥ ಸಾವಂತಪ್ಪ ಗೊಡ್ಡಮುನಾಡಿದೊಡಂ ಬಾೞ್ವಿರ್ಪಾೞ್ವಿನ್ನವುಪಯೋಗದೊಳ್ ನಡೆವರುಂ ಸಾವರಿಂತಿದೇಂ ಚಿತ್ರಮೊ ಸಂಸಾರಮುಮಿದೆನ್ನ ಕರ್ಮವಿಕಾರದಿಂದಾದ ಪೊರಳ್ಕೆಯೆಂದಂತೆ ನೋೞ್ಪೆನೆಂದುನ್ನತಮಪ್ಪ ಬೆಟ್ಟಮಂ ಕಂಡಿನ್ನೇಕಿರ್ಪೆಂ ಬೆಟ್ಟೇಱು ಮೃತ್ಯುಗರೆವೆನೆಂಬಂತೆ ಬೆಟ್ಟಮನಡರ್ದೇಱತೆ ಬೆಟ್ಟದ ಶಿಖರದ ಶಿಲೆಯ ಮೇಲೆ ಕಾಯೋ ತ್ಸರ್ಗದಿನಿರ್ದ ಚಾರಣಋಷಿಯುಮಂ ಕಂಡು ಸಫಲಮೆಂದೈದೆವಂದು ಬಲಗೊಂಡು ಕ್ರಿಯೆ ಸಹಿತಂ ಬಂದಿಸಿ ಕುಳ್ಳಿರ್ದ ಕಿಱುದು ಪೊತ್ತೇಱುಯಾ ತಪಸ್ವಿಗೆ ಯೋಗಿನ ಪೊತ್ತು ನೆಱತದು ಕೈಯನೆತ್ತಿಕೊಂಡು ಪರಸಿ ಕುಳ್ಳಿರ್ಪುದುಂ ದಿವ್ಯಜ್ಞಾನಿಗಳಪ್ಪುದಱುನಾತನ ತೆಱನನಱುದು ಭಾನುಸೆಟ್ಟಿ ತಪಸ್ಥರಾದುದಕ್ಕಂ ನಿನಗಿಂತಪ್ಪವಸ್ಥೆಯಾದುದ[ಕ್ಕಮುೞ್ದಿ][5]ಗಂ ಪಡಲ್ವೇಡ ಸಂಸಾರಸ್ಥಿತಿಯೇಕಾಕಾರಮಲ್ತೆಂದನಿತ್ಯತೆಯಂ ಪೇೞ್ದಿಂಬೞಿಯಂ ಭಟ್ಟಾರಾ ನಿಮ್ಮ ಪೂರ್ವಾಶ್ರಮದ ನಾಮಮೇನೆಂದೊಡಾಮಮಿತಗತಿಯೆಂಬ ವಿದ್ಯಾಧರರೆ ನಾಮು[ಂ]

1 ಪ್ಪಾ 2 ತಿ 3 ಟಳೆಂ 4 ಯ 5 ಕ್ಕಂಮುಟ್ಟಿ

ನಿನ್ನಿಂದಂ ಕೃತಾರ್ಥರಾಗಿ ಪೋಗಿ ಪಗೆವರಂ ಗೆಲ್ದು ರಾಜ್ಯಂಗೆಯ್ಯುತ್ತಿರ್ದು ನಿರ್ವೇಗಪಾಗಿ ತಪಂಬಟ್ಟೆವೆನೆ ಚಾರುದತ್ತನಿಂತೆಂದಂ

ಕಂ|| ಎನಗೆ ದರಿದ್ರ[1][ತೆಯುಮನದ][1]
ನನುಭವಿಸುತಮಿಂತೆ ಪೊ[ಱ]ಕುನಾ ಭವದಿನ್ನುಂ
ಘನಮಪ್ಪ ಪುಣ್ಯಮುಂಟೋ
ಮುನಿನಾಥಾ ಬೆಸಸಿಮೆರಡಱಿಂ ಕಿಡಲಾಱಿಂ ೩೮

ವ|| ಎನೆ ನಿನಗಿನ್ನು ಪುಣ್ಯೋದಯಮಕ್ಕುಂ ಬೇಸಱದಿರೆಂದು ನುಡಿಯುತ್ತಿಪ್ಪಿನಂ ಭಟ್ಟಾರರ ಮಗನ ಮಗನಪ್ಪ ಸಿಂಹಗ್ರೀವನೆಂಬಂ ತನ್ನೊಡವುಟ್ಟಿದರ್ವೆರಸು ಭಟ್ಟಾರರಂ ಬಂದಿಸಲ್ ವಿಮಾನಾರೂಢರಾಗಿ ಬಲಗೊಂಡು ಬಂದಿಸಿ ಮುಂದೆ ಕುಳ್ಳಿರ್ದಿವರಾರ್ಗೆನೆ ನಿಮಗಯ್ಯನಪ್ಪೊ[2][ನೆ][2]ಮ್ಮಿಂ ಕಿಱಿಯನೆಮಗುಪಕಾರಂಗೆಯ್ದ ಚಾರುದತ್ತನೆಂಬೊನೀತ ನೀತಂಗೆ ನಿಮ್ಮ ರಾಜ್ಯಮನೊಪ್ಪಿಸಿ ಬೆಸಕೆಯ್ದು ಬಾಳ್ವುದೆಂದೊಡಂತೆಗೆಯ್ವೆಂ ಮೇಲಂ ನಿಮ್ಮಿಂದಗ್ಗಳಮಪ್ಪ ತಂದೆಯಂ ಪಡೆದೆಯೆಂದು ನುಡಿಯುತ್ತಿರ್ಪಿನಂ ಕುಸುಮಶರನೆಂಬ ದೇವಂ ತನ್ನ ಪರಿವಾರಸಹಿತಂ ವಂದನಾಭಕ್ತಿಗೆ ವಂದು ವಿಮಾನದಿಂದಿೞಿದು ಭಟ್ಟಾರರಂ ಬಲಗೊಂಡು ಬರುತಂ ಚಾರುದತ್ತನಂ ಕಂಡಿಚ್ಛಾಪೂರ್ವಕಂ ಪೊಡವಟ್ಟು ಬೞಿಯಂ ಭಟ್ಟಾರರಂ ಬಂದಿಸಿ ಕುಳ್ಳಿರ್ದುದಂ ಕಂಡು ಸಿಂಹಗ್ರೀವನಿಂತೆಂದಂ

ಕಂ|| ವರ ಮುನಿಪುಂಗವರಿರ್ದಂ
ತಿರೆ ಮುನ್ನಂ ಶ್ರಾವಕಂಗೆ ನ[3][ಯದಿಂದಂ ಬಂ
ದಿರ][3]ದೆಱಗುವುದೇನುಚಿತಮೆ
ಪರಿವಿಡಿಯೇ ಸಹಜರಾಗಮೊದವಿದುದಕ್ಕುಂ ೩೯

ವ|| ಎಂಬುದುಮಾ ಪೋದ ಭವದೊಳೊಂದು ಬಿಲದೊಳಗೆ ಸಿಲ್ಕಿರ್ದನಲ್ಲಿಗೀ ಮಹಾನುಭಾವನುಂ ಪುರವರದೊಳಲ್ಲಿಗೆ ವಂದೆನ್ನಂ ಕಂಡು ಕರುಣಿಸಿ ಜೀವಿತಾಂತ್ಯದೊಳೆನಗೆ ಪಂಚನಮಸ್ಕಾರಮುಂ ಪೇೞ್ದು ಸಮಾಧಿಯಂ ಕೊಡಿದನಾ ಸಮಾಧಿಯ ಫಲದೊಳೆನಗಿನಿತು ವಿಭವಮಾದುದಾಕೃತಮನಱಿದೆಱಗಿದೆನೆಂದು ಪೇೞ್ದು ನೀಂ ಬಾ ಮಹೈಶ್ವರ್ಯಮಂ ಮಾಡಿ ನಿನ್ನ ಪೊೞಲಂ ಪುಗಿಸುವೆನೆನೆ ಸಿಂಹಗ್ರೀವನೆಂದನನ್ನೆಗಂ ಎಮ್ಮ ಪೊೞಲ್ಗೊಡಗೊಂಡು ಪೋಪೆಮಾ ಭಟ್ಟಾರರ ಬೆಸನಂತುಟೆಂದೊಡಂತಪ್ಪಡೆ ನೀಮಾತನಂ ಸುಯಿಧಾನದಿನಗಲ ಲೀಯದೆ ಕೆಲವು ದಿವಸಮಿರಿಸಿ ಕಳಿಪುವುದೆಂದು ಮತ್ತಂ ಚಾರುದತ್ತಾ ನೀಂ ಪೋಪ ಕಾಲ ಕ್ಕೆನ್ನಂ ನೆನೆವುದೆಂದಾ ದೇವಂ ಪೋದನಾಗಳ್ ಸಿಂಹಗ್ರೀವಂಗೆಂದನೆನಗುಳ್ಳುದಂ ಪೇೞ್ವೆ ನೆನ್ನಂ ಸಾಯಲೀಯದೆ ಕಾಯಲಾರ್ಪಿರಪ್ಪೊಡೆ ಬಪ್ಪೆನಲ್ಲದೊಡಿವರಾದುದನಪ್ಪೆನೆನೆ

1 ಮ 2 ನ 3 ಯ

ಸಮಸ್ತ ಭರಭಾರಮೆಲ್ಲಮಂ ಮಾಡಲಾರ್ಪೆಮೆಂಬುದುಮವರ ಮಾತಂ ನಿರಾಜಿಲಱಿಯ ದಂತೆಗೆಯ್ವೆನೆಂದಾಗಳೆಲ್ಲರುಂ ಭಟ್ಟಾರಮಂ ಬಂದಿಸಿ ವಿಮಾನಂಗಳನೇಱಿ ಚಾರುದತ್ತಂ ವೆರಸು ವಿದ್ಯಾಧರಶ್ರೇಣಿಯನೆಯ್ದಿ ಮಂದಿರಮೆಂಬ ಪೊೞಲನೆಯ್ದುವುದುಂ

ಕಂ|| ಅಮಿತಗತಿಗೆಂತು ಪೂರ್ವ
ಕ್ರಮದೊಳ್ ಬೆಸಗೆಯ್ವುದಂತೆ ಸಿಂಹಗ್ರೀವಂ
ತ್ರಮು ಖಚರಂ ಪಲಕಾಲಂ
ಬೆಸಕೆಯ್ವ ಪ್ರಮದಕ್ಕಿಂದಮನಯದಿನುಚಿತ ಖೇಚರಲೋಕಂ (?) ೪೦

ವ|| ಅಮಿತಗತಿಯುಮಿತ್ತಿದ ಚಾರುದತ್ತನೆಂಬೊನೀತನೀ ಮಹಾವಿದ್ಯಾತ್ಮಕನುಂ ಪ್ರತಾಪವಂತನುಮೆಂದಱಿ ಪಲರುಂ ವಿದ್ಯಾಧರರ್ಬಂದು ಕಂಡು ಮನಂಗೊಂಡು ತಂತಮ್ಮ ಕೂಸುಗಳಂ ಕೊಡಲುಂತು ಪದಿನಱುವರ್ ವಿದ್ಯಾಧರಕನ್ನೆಯರಂ ಮದುವೆನಿಂದು ಸಾರ ವಸ್ತುಗಳಂ ಕೈಕೊಂಡು ನಿರಾಜಂದರನೊತ್ತಿ ಕಪ್ಪಂಗೊಂಡು ನಿಧಿಪತಿಯುಂ ಖಚರಪತಿಯು ಮಾಗಿ ಕೆಲದಿವಸಮಿರ್ದು ಸಿಂಹಗ್ರೀವಂಗೆ ಪೋಪ ಬಗೆಯುಂ ಪೇೞ್ದದನಾವಲ್ಲಿರ್ದ ರೆಲ್ಲರುಮನಿಲ್ಲಿಗೆ ತಪ್ಪೆಮೆಂದುಮಿಂತೆಂದಂ

ಚಂ|| ಜನನಿಯು ಜನ್ಮಭೂಮಿಯು ಮಹಾತ್ಮ್ಯತೆ ಪುತ್ತ್ರನಿಸಲ್ಪಮಾದೊಡಂ
ನೆನೆಯದಿಲ್ಲಿ ಪುಣ್ಯನಿಜಯೋದಯಮಾದೊಡೆ ಪೋಗದಿರ್ಪರಿ
[1][ಲ್ಲೆ][1]ನೆ ಖಚರಾಧಿಪಂ ಮನೆಯೊಳಕ್ಕನಿತಾನುಮನುಱ್ವ ವಸ್ತುವಂ
ಮನವೊಸೆದರ್ತಿಯಿಂ ತರಿಸಿ ಮುಂದಿಡೆ ನೋಡಿ ವಣಿಕ್ಕುಲಾಧಿಪಂ ೪೧

ವ|| ನಿನ್ನ ಪಡೆದ ವಸ್ತುವೆಲ್ಲಮುಮನೆಯುಮಂ ಬಗೆದಾಗಳೆಲ್ಲಂ ಕೊಳಲುಂಟೆಂದೀ ಗಳೊಲ್ಲೆನೆಂಬುದುಮೆನ್ನ ಮ[2][ಗ][2]ಳ್ ಗಾಂಧರ್ವದತ್ತೆಗೀವಿದ್ಯಾಧರಲೋಕದೊಳ್ ಯೋಗ್ಯ ರಪ್ಪರಿಲ್ಲ ನೀಂ ಭೂಮಿಗೋಚರದೊಳ್ ಪತ್ತುವಡಿಸಿದು ವಿವಾಹಕಲ್ಯಾಣಮಂ ಮಾಡುವು ದೆಂದೊಡಂತೆಗೆಯ್ವೆನೆಂದಾಕೆಗಟ್ಟುವ ವಸ್ತುವಾಹನಂಗಳುಮಂ ಕೊಳಲೊಲ್ಲದಾನೆ ಸಾಲ್ವೆ ನೆಂದು ಕೈಕೊಂಡು ಪಯಣ[3][ಸಾಮಗ್ರಿ][3]ಯಿಂ ತನ್ನ ಭಂಡಾರಸಹಿತಂ ಸ್ತ್ರೀಯರ್ಕಳು ವೆರಸು ಗಾಂಧರ್ವದತ್ತೆಯುಮುಂ ತಾ[4][ನುಮಿ][4] ವಿಮಾನಂಗಳನೇಱಿ ಪೋಱಮಟ್ಟುಬರೆ ಸಿಂಹಗ್ರೀವಾದಿ ವಿದ್ಯಾಧರರಾಜರುಂ ತಂತಮ್ಮ ವಿಳಾಸಂಗಳಂ ಮೆಱೆಯುತ್ತಮೊಡವರೆ ನೀಂ ಪೋಪಂದೆನ್ನಂ ನೆನೆವುದೆಂದು ಕುಸುಮಶೇಖರದೇವನಂ ನೆನೆವುದುಮಿಂತ್ರಂ ಬಪ್ಪಂತೆ ಬಂದು ಕಂಡೊಡವರೆ ನಭೋಭಾಗದೊಳ್ ಪಯಣಂಬಂದು ಚಂಪಾಪುರಮನೆಯ್ದೆ ಪುರ ಬಹಿರಿಗೆಯೊಳ್ ಬೀಡಂ ಬಿಟ್ಟಿರ್ದು

1 ಲ್ಲ 2 ಗು 3 ಸ್ರಾಮುಗಿ 4 ನಿ

ಕಂ|| ಪುರದಧಿಪತಿಗಂತಾಯುಂ
ಸುರಪ್ರಧಾನಾತ್ಮಜಾತಿ ಸಮುದಾಯಕ್ಕಂ
ಬರವಂ ಪೇೞ್ದಿಟ್ಟೆದೊಡಾ
ದರದಿಂದಂ ಪೊೞಲೊಳೊಸಗೆ ಮಸಗೆ ಸಮಸ್ತಂ ೪೨

ವ|| ಆ ಪಟ್ಟಣದರಸಂ ವಿಮಳವಾಹನಂ ಬರ್ಪುದುಮಿದಿರೆರ್ದು ಚಿತಾಸನದೊಳಿರಿಸಿ ವಿಶೇಷ ಭೂಷಣಂಗಳಂ ಕೊಟ್ಟು ಮನ್ನಿಸಿ ಕಳಿಪಿದನತ್ತ ರುದ್ರದತ್ತಾದಿಗಳಂ ಪಕ್ಕಿಗಳ್ ಕೊಂಡುಪೋಗಿ ರತ್ನದ್ವೀಪದೊಳಿಕ್ಕೆ ತಿದಿಯಂ ಕೊಯ್ದು ಪೊಱಮಟ್ಟು ಚಾರುದತ್ತನಂ ಕಾಣದೆ ಮಹಾದುಃಖದಿಂ ಪಡೆದ ಮೋಹಮನುೞಿದು ತನ್ನಿಂ ಮುನ್ನಮೆ ಬಂದಿರ್ದರೀ ಸುದ್ದಿಗೇಳಲೊಡಂ ಪರಿತಪ್ಪುದುಂ ಪೊಡವಟ್ಟಪ್ಪಿಕೊಂಡವರ ಬಂದ ವೃತ್ತಾಂತಮುಂ ಬೆಸಗೊಂಡಜಱದಾತನಂ ತನ್ಮಯ್ಯನಿಂದಗ್ಗಳಮಾಗಿ ಕೊಂಡಾಡಿ ಬೞಿಯಂ ತನ್ನ ಮನೆಯಂ ಕೊಂಡಾತಂಗೆ ಬೇಡಿದನಿತಂ ಕೊಟ್ಟಟ್ಟಿ ಬಂದಿಸಿ ತನ್ಮಾಳ್ವಿಯುಮಂ ಮಿತ್ರಾವತಿಯುಮಲ್ಲಿರವೇೞ್ದು ಮಱುದಿವಸಂ ಪೊೞಲನಪ್ಪಶೋಭೆಗೆಯಿಸಿ ಪುರಜನಮಿದಿರ಼್ೊಳೆ ಗಜೇಂದ್ರಮನೇಱ ಛತ್ರಚಾಮರಾದಿ ಚಿಹ್ನಂಗಳ್ವೆರಸು ಮೇಗೆ ವಿದ್ಯಾಧರನಿಕರಮಲ್ಲಿಂ ಮೇಗಮುರಸಮಿತಿ ನೆಲದೊಳ್ ಭೂಮಿಗೋಚರ ಸೈನ್ಯಮಿಂತು ಜಗತ್ರಯುಮೊಡವರೆ ವಾಸುಪೂಜ್ಯ ಭಟ್ಟಾರಕರ ಮಹಾಕಲ್ಯಾಣದಂತಾಗೆ ಪೊೞಲಂ ಪೊಕ್ಕು ತನ್ನ ಮನೆಯನೆಯ್ದಿತಾ[1][ಯ್ಗಂ][1] ಮಾಂವಗಂ ಪೊಡೆವಟ್ಟು ಮಿತ್ರಾವತಿಯುಂ ತಾನುಮೊಂದು ಪಸೆಯೊಳಿರ್ದು ಸೇಸೆಯುಂ ಪರಕೆಯುಮನಾಂತುಕೊಳುತಂ ಕಿಱದುಪೊತ್ತಿರ್ದೊಡನಂಗ ಕುಸುಮಶೇಖರದೇವಂ ಪೊೞಲೊಳಗೆ ಸುವರ್ಣವೃಷ್ಟಿಯಂ ಸುರಿದು ತನ್ನ ನಿಜನಿವಾಸಕ್ಕೆ ಪೋದಂ ಸಿಂಹಗ್ರೀವಾದಿ ವಿದ್ಯಾಧರಸಮಿತಿಯೆಲ್ಲಮನತಿಪ್ರಿಯದಿಂ ತಣಿಸಿ ಮಱುದಿವಸಂ ಕಳಿಪಿದಿಂ ಬೞಿಯಂ ವಸಂತತಿಳಕೆಯುಂ ಕೂರ್ತುದುಮನೆಲ್ಲರುಂ ಪೇೞೞ ಕೇಳ್ದು

ಕಂ|| ತನ್ನೆರ್ದೆಯೊಳಹೋರಾತ್ರಂ
ತನ್ನನೆ ನೆಱಸಿರ್ದು ನೆಗಟ್ದ ಬೆಟ್ಟದ ಭರದಿಂ
ತ[2][ನ್ನಂ][2] ಬಗೆಯದೆ ನೆಟ್ಟನೆ
ತನ್ನನೆ ಬಗೆಯುತ್ತಮಿರ್ದ ನಲ್ಲಳನಾಗಳ್ ೪೩

ವ|| ಬರಿಸಿ ಕಂಡು ಮನಂಗೊಂಡು ಕಯ್ಕೊಂಡು ಜಡೆಗೊಂಡ ಪಿಣಿಲಂ ತಾನೆ ಬಿಡಿ[3][ಸಿ][3] ಕಾಸೆಯಂ ಕಳೆಯಿಸಿದಾಗಳ್ ಮಜ್ಜನಂಬುಗಿಸಿ ಕೈಗೆಯ್ದು ಸುಖಮಿರಿಸಿ ಮಱುದಿವಸಮಾ ಮನೆಯೊಳೆಡೆಯಿಲ್ಲೆಂದು ಪುರಬಹಿರಾಂತರದೊಳ್ ತನಗೆ ಪಿರಿದೊಂದು ಮಾಡಮಂ ಮಾಡಿಸಿ ವಿದ್ಯಾಧರಶ್ರೇಢಿಯಿಂ ತಂದ ಪದಿನಱುವರ್ ಪೆಂಡಿರ್ಗಂ ಮಿತ್ರಾವತಿಗಂ

1 ಯ್ತಂ 2 ನ್ನ 3 ಸು

ವಸಂತತಿಳಕೆಗಮಂತು ಪದಿನೆಣ್ಬರ್ಗಂ ತನ್ನ ಮಾಡದ ಪೆಱಗೆ ಪದಿನೆಂಟು ಬಳ್ಳಿಮಾಡಂಗಳಂ ಮಾಡಿಸಿಕೊಟ್ಟು ಮುನ್ನಂ ಕನ್ಯಾಮಾಡಮಂ ಮಾಡಿಸಿ ಗಾಂಧರ್ವದತ್ತೆಯನಿರಿಸಿ ಮಹೋತ್ಸವದೊಳಿರೆ

ಚಂ|| ವಿದಿತ ಮಹೋಜ್ವಳೋತ್ತಮ ಗು[1][ಣಾಢ್ಯ][1] ಕಳಾಢ್ಯನನಿಂದ್ಯಶುದ್ಧವೃ
ತ್ತ್ಯುದಮಿತ ಸಾಹಸೋನ್ನತನಶೇಷ ಜಗನ್ನುತನಾಗಿ ಪೆಂಪುವೆ
ತ್ತೊದವಿದ ಚಾರುದತ್ತನಭಿನೂತ ಸುಚಿತ್ರನುದಾತ್ತ ಲಕ್ಷಣಾ
ಭ್ಯುದಯ ಸುಖಪ್ರಯೋಗದಿನನಾಕುಳಮಿರ್ದನನೂನ ಭೋಗದಿಂ ೪೪

ಗದ್ಯ|| ಇದರ್ಹತ್ಸರ್ವಜ್ಞ ಪಾದಪದ್ಮವಿರಾಜಿತೋತ್ತಮಾಂಗ ಶ್ರೀ ಬಂಧುವರ್ಮ
ನಿರ್ಮಿತಮಪ್ಪ ಹರಿವಂಶಾಭ್ಯುದಯದೊಳ್ ಚಾರುದತ್ತವಿಹಾರವರ್ಣನಂ

**ಚತುರ್ಥಾಶ್ವಾಸಂ**

1 ಜೋದ್ಯನನೇಕ

# ಪಂಚಮಾಶ್ವಾಸಂ

ಕಂ॥ ಇಂತಪ್ಪ ಚಾರುದತ್ತಂ
ಗಿಂತಪ್ಪ ಮಗಳ್ ಜಗತ್ರಯಾಂತರದೊಳ್ ಮ
ತ್ತೆಂತಪ್ಪರುಮಂ ಗೆಲಲಾ
ಱಂತಪ್ಪುದು ಜಿಲ್ವಿಸಿಡೆಯೊಳಂ ವೀಣೆಯೊಳಂ ೧

ವ॥ ಎಂದಿಂತಾ ಗಾಂಧರ್ವಾಚಾರ್ಯರ್ ಪೇೞೆ ವಸುದೇವಂ ಕೇಳ್ದು ಮೆಚ್ಚಿ ತನ್ನ ಕೈಯ ವಜ್ರಧಾರೆಯ ಕಂಕಣಮುಂ ಕೊಟ್ಟೊಡೆ ಕೊಂಡೊಸೆದು ತನ್ನ ಮನೆಯಿಂ ಬೋನಮುಂ ತರಿಸಿ ಪಿರಿದುಂ ಗೌರವದಿನುಣಲಿಕ್ಕಿ ಗೋಷ್ಠಿಗೆಯ್ಯುತ್ತಿರ್ದು ವಸುದೇವನ ವೀಣಾವಾದ್ಯ ಪ್ರವೀಣತೆಯನಾರ್ಕೈದಱಿದು ನಾಳೆ ವೀಣಾಸ್ವಯಂಬರಮೆಂ[1][ದೊ][1]ಡೆ ನಾಮುಂ ಎಮ್ಮ ಬಲ್ಲಂದದೊಳ್ ಬಾಜಿಸಿ ತೋ[2][ರ್ಪೆವು ಮ][2]ಱುದಿವಸಂ ಚಾರುದತ್ತನನುಮತದಿಂ

ಕಂ॥ ಬನ್ನಿಂ ವೀಣಾವಾದ್ಯ
ತ್ಪನ್ನತರಪ್ಪವರಿರೆಂದು ಪೊೞಲೊಳಗೊಸೆದ
ತ್ಯಾನಂದೋದಯದೆ [3][ಪಲವ][3]
ರುಂ ನರಪತಿತನಯರಾಗಳಲ್ಲಿಗೆ ವಂದರ್ ೨

ವ॥ ಅಂತು ಬಂದು ನಾಟ್ಯಶಾಲೆಯೊಳ್ ತಂತಮ್ಮುಚಿತಸ್ಥಾನದೊಳಿರ್ದರಾಗಳ್ ಗಾಂಧರ್ವದತ್ತೆಯುಂ ಪೊನ್ನ ಪಣ್ಣುಗೆಯ ಪಿಡಿಯನೇಱಿಸಿ ಚಾರುದತ್ತಂ ಮುಂದೆಗೊಂಡಾಕೆಯ ವಿದ್ಯಾಗರ್ವಮನೆ ಪೊಗೞಿಸುತ್ತಂ ಬಂದು ಮಹಾಸ್ಥಾಯಿಕೆಯಂ ಪೊಕ್ಕು ವಿಳಾಸದಿ ಸಿರಿ ರಂಗದ ನಡುವೆ ವೀಣೆಯಂ ಮುಂದಿಟ್ಟು ಕಿನ್ನರಾಂಗನೆಯಿರ್ಪಂತೆ ಗಾಂಧರ್ವದತ್ತೆಯಿರ್ಪುದುಮಾ ಗಂಧರ್ವಾಚಾ[4][ರ್ಯನ][4] ಕೆಲದೊಳ್ ಛಾತ್ರನಿರ್ಪಂತೆ ವಸುದೇವನಿರ್ದನನ್ನೆಗಂ ಸಭಾಪತಿಯುಮುಮಾದಿನೊರ್ಬರೊರ್ಬರನೆ ಬಾಜಿಸಲ್ವೇೞ್ದು ಮಾರುಮಂ ಮೆಚ್ಚದಿರೆ ವಸುದೇವಂ ಕನ್ನೆಯ ಮುಂದಣೆಂಡೆ ವೀಣೆಯಂ ತರಿಸಿ ತಂತ್ರಿಯನಿಂಬುಮಾಡಿ ಸಮ ಪ್ರಹರಣ ವಿಶದ ಶಮ ಮಧುರ ಜಸ ರಸ ದವ ವೃಷ್ಟಿ ಜಿತ ಶ್ರಮ ಸ್ವೇದ ಮುಸ್ಥಿರ ನಖಂಗಳೆಂಬ

---

1 ದೊಡಾದೊ 2 ರ್ಪಮಱ 3 ಸಾಱಿದೊಡೆ ಪಲ 4 ರ್ಯಂ

ಹಸ್ತಾಂಗುಳಿಗಳೊಳ್ ಕೂಡಿ ವರ್ಣಾಲಂಕಾರ ಸ್ವರ ಪದ ಸಮಾಸೋಚ್ಛ್ವಾಸ ಸಭಾದೇಶ ತಾಳ ಲಯ ಯತಿ ಘಣಿಸ್ಥಾನ ದೇಶ ಕಾ[ಲ]ಜ್ಞತೆಗಳೆಂಬ ಚತುರ್ದಶಗುಣಂಗಳೊಳ್ ಕೂಡಿ ಬಾಜಿಸಿದಾಗಳ್

ಶಾ॥ ವೀಣಾವಾದ್ಯದ ಬಳ್ಕೆ ಬಳ್ಕೆಯುಳವಂ ಗೆಲ್ದೊಪ್ಪೆ ತೇಜೋದಯಂ
ನಾಣಂ ಪಿಂಗಿಸೆ ರೂಪಿನೊಪ್ಪು ಮನದೊಳ್ ತಳ್ಪೊಯ್ಯೆ [1][ಸೋಲ್ವಂತವಾ
ವೀಣಾಲಾಪಿನಿ][1] ಮಾಣ್ದು ದಾವ್ರದೆಸಗೀ ಜನ್ಮಾಂತರಕ್ಕಂತುಟಂ
ಪ್ರಾಣಾಧೀಶ್ವರನೀತನೆಂದು ಕೊರಲೊಳ್ ತಂದಿಕ್ಕಿದಳ್ ಮಾಲೆಯಂ ೩

ವ॥ ವಸುದೇವಂಗೆ ಗೆಲ್ಲ[ಂ]ಗೊಟ್ಟುದುಮನೆನ್ನ ಮನಂ ಕೋಳ್ಪಟ್ಟುದುಮನರಿಪುವೆನೆಂಬ ತೆರದಿನಿಂತು ಮಾಲೆಯಂ ಕೊಟ್ಟಾಗಳಾನೆವಟ್ಟುಬಂದು ಮಹಾಸಾಮಂತರುಂ ಬಿಸ್ಮರಾಗಿ ಮಗುಳ್ದು ಪೋದರಾಗಳ್ ಚಾರುದತ್ತಂ ಒಸಗೆವರೆಯುಂ ಬಾಜಿಸವೇಳ್ದು ಮಹಾವಿಳಾಸದಿಂ ಮಗಳುಮನಳಿಯನುಮನೊಡಗೊಂಡುಪೋಗಿ ವೈವಾಹಕ್ರಿಯೆಯೊಳ್ ವಸೆಯೊಳಿರಿಸಿ ಪಾಣಿಗ್ರಹಣಂಗೆಯ್ದು ಕೊಟ್ಟಾಗಳ್

ಮ॥ ಸಮಭಾವಾನ್ವಿತೆಯೊಳ್ ವಿಲಾಸವತಿಯೊಳ್ ಸಾರೂಪ್ಯಸೌಂದರ್ಯಯು
ಕ್ತೆಯೊಳುದ್ಯದ್ಗುಣರಕ್ತೆಯೊಳ್ ಮಹಿತಳಪ್ರಖ್ಯಾತಗಾಂಧರ್ವದ
ತ್ತೆಯೊಳೌದಾರ್ಯ ಸುಕಾರ್ಯನಪ್ಪ ವಸುದೇವಾಂಕಂ ಮಹಾವೈಭವೋ
ದಯದಿಂದಂ ನೆರೆದಿರ್ದನೊಪ್ಪಿರೆ ಮನಸ್ಸಂಯೋಗಮುಂ ಭೋಗಮುಂ ೪

ಕಂ॥ ಅಂತು ವಸುದೇವವಿಭು ನಿ
ಶ್ಚಿಂತಂ ಗಾಂಧರ್ವದತ್ತೆಯೊಳ್ ನೆರೆದು ಕರಂ
ಸಂ[2][ತಸ][2]ದಿನಿರೆ ಸೊಗಯಿ[3][ಪ][3] ವ
ಸಂತಂ ಬಂದತ್ತು ಸಕಳಜನಹೃದಯಕರಂ ೫

ವ॥ ಆಗಳೆ[4][ಲ್ಲ][4]ಡೆಯೊಳಂ ತೆಂಕಣ ಗಾಳಿ ಚಾಮರದಿಕ್ಕು[5][ವಂತೆ][5] ಮೆಲ್ಲನೆ ಬೀಸೆ ವನತರುಗಳ ಪಣ್ಣೆಲೆಗಳ್ ಕಲಿಲೆ ಕಳಿಂಕೆಗಳ್ ತಾರಕೆಗಳಂತೊಗೆಯೆ ಕೊನೆಗಳ್ ಜೆಂಕೊನ್ನಿಗರಪ್ಪಿಯಂತೆ ನಿಮಿರೆ ತಳಿರಸಂಗನ ಬಾಳಂತೆ ಪೊಳೆಯೆ ನನೆ ಸೊದರ ಕುಡಿ ತೆಗೆಯೆ ಮುಗುಳ್ಗಳಂಜನ್ವನೆಯ ಮೊಲೆಯಂತೆ ಬೀಗಿ ಪೊದಲ್ದಿರೆ ಅಲರ್ಗಳ್ ಘಟ್ಟಿವಳ್ಳರ ಪಸರದಂತೆ ಕಂಪಂ ಪ[6][ರ][6]ಕಲಿಸೆ ತುಂಬಿಯೆ ಪಾಟಕಾಜನಂತೆ ಮೊರೆಯೆ ಗಿಳಿ ಗಾನಿಸಿದ ನೆರವಿಯಂತೊಡನುಲಿಯೆ ಕೋಗಿಲೆಯೆ ಬಾಗಿ[7][ಲ್ಗಾ][7]ಪಿನಂತೆ ಪುಗಿಲ್ ಪುಗಿಲೆನೆ ಉಯ್ಯಲು ಪೆಚ್ಚೆಯಾಡುವರಂತೆ ತಿಟ್ಟೆಯೊಳಾಡೆ ಹಿಂದೋಳಂ ಮಹದಾನಿಯ ಕೀರ್ತಿ

---

1 ಸೋಲಂ ತಗುಳ್ದೊಡೆನಿಬೊಜನೆ 2 ತೊಷ 3 ಸು 4 ತೆ 5 ವರ 6 ಗ 7 ಲಾ

ಯಂತೆಲ್ಲಾ ಜೆಸೆಂಯೊಳಸೆಸೆಯೆ ಬಂದ ಸುಗ್ಗಿಯೊಳ್ ಪುರಮುಮರಸನುಂ ಚಾರುದತ್ತನುಂ ವಾಸುಪೂಜ್ಯಜಿನಚೈತ್ಯಾಲಯದ ಪೆಜಗಣ ಬನಮೊಳ್ ಪೋಟಲೆಲ್ಲಂ ಮಹಾಯಾತ್ರೆಗೆ ಪೋಗಲ್ ಸಮಕಟ್ಟೆ ಪೋಗೆ ವಸುದೇವನುಂ ಗಾಂಧರ್ವದತ್ತೆಯುಮರ್ತಿಯೊಳೊಡವೋಗೆ

ಕಂ॥ ನಂದನಮಂ ನಯನ ಮನೋ
ನಂದನಮಂ ಪೊಕ್ಕು ಸಂ[1][ತಸಂ][1]ಬಟ್ಟು ಕರಂ
ಸುಂದರಮಪ್ಪ ಸರೋವರ
ದಂದಮನಭಿವಂದ್ಯಮಂ ನಿರೀಕ್ಷಿಸುತಿರ್ದಂ ೬

ವ॥ ಇಂತೆಲ್ಲರುಮಾ ಕೊಳದ ತೀರ್ಥೋದಕದೊಳ್ ಮಿಂದು ಕೈಗೈದುಬಂದು ಪಲವುಪೂಜನೆಗಳಂ ತಂದು ತೀರ್ಥಜಿನಾಲಯದ ದೇವರಂ ಬಂದಿಸಿ ಮಗುಟ್ದುಬಂದಾ ಕೊಳದ ತಡಿಯೊಳ್ ಗೋಷ್ಠಿಯಾಗಿರ್ದು ತಾವರೆಯೆಲೆಯುಂ ಪಾಸಿ ರಸಾಯನಮಪ್ಪ ದಿವ್ಯಾಹಾರಮನುಂಡು ತಂಬುಲಂಗೊಂಡು ತಮ್ಮ ಮೆಚ್ಚಿದ ಲತಾಭವನಂಗಳೊಳಮದಿರ್ಮತ್ತೆಯ ಜೊಂಪಂಗಳೊಳಂ ಪಲವುಂ ಪ್ರಾಣವಲ್ಲಭರಿರೆ ವಸುದೇವನುಂ ಗಂಧರ್ವದತ್ತೆಯುಮೊಂದು ಮಾಧವೀಗೃಹದೊಳಗೆ ಪುಷ್ಪಶಯನದೊಳ್ ಸ್ವೇಚ್ಛೆಯಿಸಿರ್ದಿನಿಸುಬೇಗದಿನಲ್ಲಿಂದಮೆರ್ದು ಮತ್ತಂತೆ ನೋಟ್ಪಿಮೊಂದಶೋಕವೃಕ್ಷದ ಮೊದಲೊಳ್ ಪಲರ್ ಮಾಡೆಂಗಕನ್ನೆಯರೊಡನೆಯನೇಕ ರಸಭಾವಾಭಿನಯಂಗಳಿಂದಾಡುತಿರ್ದ ಮಾಡೆಂಗಿತಿಯಂ

ಕಂ॥ ನಿಱುದಲೆ ಬೆಳ[2][ರ್ವಾ][2]ಯ್ ಸುಲಿಪಲ್
ತುಱುಗೆಮೆಗಣ್ ವಿಳಿರ್ದ ಪುರ್ಬುಗಳ್ ಸಳಿತೋಳ್ಗಳ್
ಕಿಱುಮೊಲೆ ತೆಳ್ಪಸಿಱುತೂಪ್ಪುವ
ಪೊಱವಾಱಳವಟ್ಟ ಜಂಘೆಗಳ್ ಮೆಲ್ಲಡಿಗಳ್ ೭

ವ॥ ಎಂದು ಕಂಡು ನೋಡಿ ಸೋಲ್ತು ಕೂಡಲ್ಪಡೆಯದೆ ಮಱುಗಿ

ಕಂ॥ ಜಗಮುಂ ಮಱುಗಿಸಿ ಕೊಱಚಾ
[3][ಟಗೆಯುಲ್ ನೆಱೆ ನಾಡೆ ಕೂಡುವ][3] ಬಗೆಯಿಂ ಬಿದಿ
[ಮಿಗೆ] ಮಾಡಿದನೆಂಬಂತಿರೆ
ಪೊಗಳಲ್ ಕರಮರಿದು ರೂಪು ಮಾದಂಗಿತಿ[4][ಯಾ][4] ೮

1 ತೋಷ 2 ವಾ 3 ಜಕ್ಕೆ ನಾಡೆಸೊಪಕೊಡುವ 4 ಯಂ

ಮುಟ್ಟಲ್ಕಾಗದ ಕುಲದೊಳ್
ಪುಟ್ಟಿಸಿ ಪಲಗಱಲನಾಗಿಸಲ್ಕೆ ವಿಧಾತ್ರಂ
ನೆಟ್ಟನೆ ಮಾಡಿದನೆಂಬಂ
ತಿಟ್ಟಿಳವೊಪ್ಪುವುದು ರೂಪು ಮಾದಂಗಿತಿಯಾ ೯

ಇರುಳೊಳ್ ಸೊಡರೆಸೆವಂತಿರೆ
ಕರಮೆಸೆಗುಂ ಚೆಲ್ವು ಕಷ್ಟಜಾತಿಯದೆಂದಾ
ದರದಿಂ ಬಿದಿ ಮಾಡಿ[1][ದಂತೆ][1]
ಕರ ಕರಮೊಪ್ಪುವುದು ರೂಪು ಮಾದಂಗಿತಿಯಾ ೧೦

ನಾಡೆ ಪೊಳೆದಿಂದ್ರನೀಲದ
ಕೋಡುಂಗಲ್ಲಿಂದು ರಶ್ಮಿಯೊಳ್ ಸು[2][ಗಿ][2]ಮೊಗೆವ
ಟ್ಯಾಡುವ ಲತೆಯಂತಿರೆ ನಯ
ದಾಡುವ ರಸಭಾವಮೊಳ್ಪ ಮಾದಂಗಿತಿಯಾ ೧೧

ವ|| ಅಂತಪ್ಪ ರೂಪುಂ ಗಾಡಿಯುಂ ನುಣ್ಪುಂ ಕೆಯ್ಮಗು ಸುಂದರಿಯುಂ ವಸಂತಪುರದೊಳ್ ಕೇತುಮತಿಯುಂ ಪುಷ್ಕಳಾವತಿಯೊಳ್ ಪ್ರಭಾವತಿಯುಂ ಸುರೂಪೆಯುಂ ಸರ್ವಪ್ರೈತೆಯುಂ ಕ್ರೌಂಚಪುರದೊಳ್ ಲಲಿತಶ್ರೀಯುಂ ಕುಲಗಿರಿಯೊಳ್ ಪದ್ಮಾವತಿಯುಂ ಕಮಳಶ್ರೀಯುಂ ಕರ್ಮಣಿಜೆಯೊಳ್ ಚಂಪಕಮಾಲೆಯುಂ ಕೊಲ್ಲಾಪುರದೊಳ್ ಚಂದ್ರಾವತಿಯುಂ ಮತ್ತಮುತ್ತಂತೆ ತೊ[3][ಬಲ್ವೀ][3] ಭೂಮಿಗೋಚರ ಕನ್ನೆಯರುಂ ವಿದ್ಯಾಧರಕನ್ನೆಯರುಮಾಗಿ ಶೋಭನಕ್ರಿಯಾವಿಧಾನದೊಳಂ ಗಂಧರ್ವವಿವಾಹದೊಳಂ ತಂದ ಪೆಂಡಿರೆಲ್ಲಮುಱುಮೂಱುತೊಂಭತ್ತೆಣ್ಬರಾದರಂತವರವರಲ್ಲಿಯಲ್ಲಿಯೆ ಬಿಸುಟು ಬಂದರಿಷ್ಟಪುರಮಂ ಪೊಕ್ಕಲ್ಲಿ ಹಿರಣ್ಯಾಕ್ಷನ ಮಗಳಪ್ಪ ರೋಹಿಣಿಯುಂ

ಉ|| ರೂಪಿನ ಚೆಲ್ವು ಜವ್ವನದಳುರ್ಕೆ ವಿಳಾಸದ ಕೆಯ್ಮೆ ಸಂದ ನಾ
[4][ಣ್ಣ][4]ಪಿನ ಬಲ್ಪು ಮಾತುಗಳ ಮೆಲ್ಪು ಕರಂ ಸುಭಗುಳ್ಳುದೊಂದು ಕ
ಣ್ಣಾಪಿನ ಗರ್ವಮೆಲ್ಲ ತೆಱದಿಂದನುಪೂರ್ವವಿಳಾವಿಭಾಗದೊಳ್
ಪೋ ಪೆಱರಿಲ್ಲರಿನ್ನೆನಿಪ ಕನ್ನೆಯನುನ್ನತವಂಶಮಾನ್ಯೆಯಂ ೧೨

ವ|| ಅವರಸ್ಮಂ ಸ್ವಯಂಬರದೊಳಲ್ಲದೆ ಕುಡೆನೆಂದು ನಾಲ್ಕುಂ ದಿಶಾಭಾಗದರಸುಮಕ್ಕಳೆಲ್ಲರುಮಂ ನೆಱಪಿ ನಿರತಿಶಯ ಸ್ವಯಂಬರಶಾಲೆಯೊಳನುಕ್ರಮದಿನಿರಿಸಿ ಮಂಗಳಪ್ರಸಾದನಾಳಂಕೃತೆಯಪ್ಪ ಮಂಗಳರಥಮನೇಱಿಸಿ ತಾನೊಂದು ಭದ್ರಹಸ್ತಿಯನೇಱು

1 ದನೆಂಬಂತಿರೆ 2 ದಿ 3 ಳ್ವಲಿ 4 ಣಾ

ಹಿರಣ್ಯಾ[1][ಕ್ಷ][1]ಸತ್ಕೃತ್ಸಾಹೋದಯನಾಗಿ ಬಪ್ಪುದಂ ವಸುದೇವಂ ಕಂಡಲ್ಲಿಯೊರ್ವನಂ ಕರೆದೀಬಪ್ಪನಾವೊನೆಲ್ಲಿಗೆವೋದಪ್ಪನೆಂದು ಬೆಸಗೊಂಡೆಲ್ಲಮನಱಿಂದಮಿದಂ ನೋೞ್ಪೆನೆಂದಾ ಸ್ವಯಂಬರಶಾಲೆಯಂ ಪೊಕ್ಕು ಕಡೆಯ ಚೌಪಳಿಗೆಯೊಳಿರ್ದ ರಾಜನೊರ್ವ ರಾಜಕುಮಾರನ ಮುಂದೆ ಬಾಜಿಸುವ ಪಱಿಯವರಲ್ಲಿಗೆವಂದವರೊಳ್ ಸಂಭಾಷಿಸುತಮಿರ್ದು ಪ[2][ಟಿಗ][2]ನ ಕಯ್ಯ ಪಟಹಮಂ [3][ಕೊಂ][3]ಡು ಬಾಜಿಸುತಿರ್ದನನ್ನೆಗಂ ತಳ್ತು ನೆಗೞ್ದ [4][ಸಿೞ][4]ಗುರಿಯುಂಗಳುಂ ಬೀಸುವ ಚಾಮರಂಗಳುಮೆಸೆವ ತೂರ್ಯರವಂಗಳುಂ ಪೊಗೞ್ದು ಬಪ್ಪವಮಂ ಕಣ್ಣಱಿದು ನೆಗೞ್ವ ಪರಿಚಾರಕಿಯರುಂ ಕಾರ್ಯಮಱಿವ ವೃದ್ಧಕಂಚುಕಿಯರುಂಬೆರಸು ನೆಲನೆಲ್ಲಂ ನೆರೆದು ನೋಡಿ ರಾಜಕುಮಾರರ ಮನಮಲ್ಲಾಡೆ ರೋಹಿಣಿಯ ರಥಂ ಬಂದು ಸ್ವಯಂಬರದ ನಡುವೆ ನಿಂದತ್ತಾಗಳೆ ಕಂಚುಕಿ ಕನ್ನೆಯ ಮುಂದಿರ್ದು

ಕಂ॥ ಇವರಿವರೀ ಕುಲದರಸುಗ
ಳಿವರಿವರೀ ಪೆಸರ ನೆಗೞ್ದ ನರಪತಿಗಳ್ ಮ
ತ್ತಿವರಿವರೀ ನಾಡಾಳ್ವವ
ರಿವರಿವರೀ ಗುಣಗಣಂಗಳೊಳ್ ನೆಱಿದವರ್ಗಳ್ ೧೩

ವ॥ ಎಂದು ತೋಱುತ್ತಂ ನಡೆಯೆ ಕನ್ನೆ ನೋಡದಂತೆ ನೋಡುತ್ತುಮವರ್ಗೆಲ್ಲಂ ಸಂಕಟಂ ಮಾಡುತ್ತುಂ ಬರೆ ಕಡೆಗಣಿಸಿ ಕಡಿದುಪೋದಡೆಯರಸುಗಳೆಲ್ಲ ಮರವಟ್ಟಿರ್ದಿರನರ್ ಬೆಕ್ಕಸಂಬಟ್ಟರ್ ಮುಂದಣವರ್ ಮೆಚ್ಚಪಟ್ಟರಂತು ಮೆಲ್ಲಮೆಲ್ಲನೆಲ್ಲರುಮಂ ಕಳಿದು ನಚ್ಚಿದರ ನಚ್ಚುಗಿದು ರಥಂ ರಣಾಂಗಣದೊಳ್ ಪರಿವಂತೆ ಪಲರಂ ನೋಯಿಸುತಂ ಪರಿದು ಕಡೆಯ ಚೌಪಳಿಗೆಯ ಪಱಿಯವರಂ ನೋೞ್ಪಳಲ್ಲಿ ತನ್ನಲ್ಲಿಗೆ ಸನ್ನೆಗೆಯ್ವಂತೆ ಬಾಜಿ[5][ಸುವ][5] ವಾದ್ಯಮಂ ತೊಟ್ಟನೆ ಕಂಡು ನಡೆನೋಡುತಿರ್ದು ನೋಡಿರೆ ಕಪ್ಪಡಿಗನಾಗಿಯುಂ

ಕಂ॥ [ಈ] ಜಗದೊಳಿನ್ನರಿಲ್ಲೀ
ತೇಜನುಮೀ ರೂಪುಮಾಗಿಯುಂ ತಾಂ ಪರೆಯಂ
[ಮೂಜಗದ] ನೋಟಕ[6][ರಂ][6]
ಭ್ರಾಜಿಸುವಂ ನಾಡೆ ಸೋಲಮಂ ಯೋಜಿಸುವಂ ೧೪

ವ॥ ಎನುತಮಿರ್ದಂತುಂ ದಿಟ್ಟಿಯನಗಿಯಲಾಱದೀತನಾರಾದೊಡಮೇಂ ಪೆಱಱ ನಱಸುವ್ರಮಂ ಸಾಲಿಸಿದನೆನ್ನನುಂ ಸೋಲಿಸಿದನೆಂದು ರಥದಿಂದಮಿೞಿದು ಮಾಲೆಯ ನಾತನ ಕೊರಲೊಳಿಕ್ಕಿದಾಗಳೊಸಗೆವಱಿಯಂ ಪೊಯ್ಸೆ ಹಿರಣ್ಯಾಕ್ಷಂ ಬಂದು ನೋಡಿ ಸಾಮಾನ್ಯಪುರುಷನಲ್ಲನೀ ರೂಪದಿನಂತಲ್ಲದೆಯುಂ ಸ್ವಯಂಬರಧರ್ಮಮಿನ್ನೇನಾದೊಡಂ ಪೆಱದಂ ಬಗೆಯಲಾಗದೆಂದು ಮಗಳುಮನಳಿಯನುಮಂ ರಥಮನೇಱಿಸಿ ಮುಂದೆಗೊಂಡು

1 ಕ್ಷಯ 2 ಳಗೆ 3 ಕಂ 4 ದಸಿ 5 ಸು 6 ರಂವಿ

ಪಿರಿದೊಂದಾಶ್ಚರ್ಯ[ಮಾಗೆ] ನೆರೆದರಸುಮಕ್ಕಳ ಮನಂ ಪನ್ನನೆ ಪಾಡಿ ಸುರೇಂದ್ರ ಲೀಲೆಯುಂ ಪ್ರೌಢಿಯುಂ ಪ್ರೇಕ್ಷಾಗಳಾ ರಾಜಪುತ್ರರೆಲ್ಲಮೊಂದೆಡೆಗೆ ವಂದಿಂತೆಂಬರ್

ಕಂ॥ ಪ್ರೌಢಿಯೊಳೆಂತಪ್ಪರುಮಂ
[1][ಕಡುಮೆಚ್ಚದೆ ಬಿನ್ನಣಿಯುಹ ಪಡಿಇಯುಂಗೊಸೆದಿ
ದೊರ್ಡಡೆಗೆ][1] ತಾನುಣಲಿಕ್ಕುವ
ರೊಡಂಬಡಿಂ ಪಾಲಿಯುಕ್ಕುವನ್ನರುಮೊಳರೇ ೧೫

ವ॥ ಇದೆಲ್ಲಮವರವ್ಮನ ಮಾನಗರ್ವಮೆಂದು ಮುಳಿಸು ಪೆರ್ಚೆ ರಾಜಗೃಹ ಪುರಾಧೀಶ್ವರಂ ತ್ರಿಖಂಡಮಂಡಳಾಧಿಪತಿಯಪ್ಪ ಜರಾಸಂಧಚಕ್ರವರ್ತಿಗೆ ಪೇೞ್ದಟ್ಟಿ ದೊಡಾತನುಮಂತೆ ಮುಳಿದು ಬಂದುಮವರೆಗಳ್ ಕೂಡಿರ್ದು ರೋಹಿಣಿಯನೊಪ್ಪಿಸುವು ದೊಪ್ಪಿಸವಡೆ ತನ್ನ ತಲೆಯುಮುಮಾ ಪಡಿಇಯನ ತಲೆಯುಮಂ ಕೊಳ್ವೆನೆಂದು ಚಕ್ರವರ್ತಿ ಬಂದನೆಂದು ಪೇೞ್ದಟ್ಟಿದೊಡೆ ಹಿರಣ್ಯಾಕ್ಷನೆಂಗುಮಾರ್ವಂದಡಮೇಂ ಸ್ವಯಂಬರಧರ್ಮ ಮುಳಿವೆಸಲ್ಲೆನೆಂದು ಪೆರ್ಗಡೆಗಳಂ ಕಳಿಪಿ ತಾನುಂ ತನ್ನ ಮಂತ್ರಿಗಳುಂ ವಸುದೇವನುಮೇ ಕಾಂತಮೊಳಿರ್ದೇಗೆಯ್ವಮಿಾ ಸ್ವಯಂಬರಂ ಪ್ರಾಣಂಬರವಾಯಿತ್ತೆನೆ ವಸುದೇವನಿಂತೆಂದಂ

ಕಂ॥ ನೆರೆದಾರ್ವಂದಡಮೇವರ್
ಧುರದೊಳತಿ ಕ್ರೋಧದಿಂ[2][ದಿದಿ][2]ರ್ಚಲ್ ದನುಜೇ
ಶ್ವರನುಂ ಸುರನುಂ ವಿದ್ಯಾ
ಧರನುಂ ನೆಡಿಇಯುರ್ ನರರ್ಕಳೆನಗಾರ್ ನೆಡಿಇನರ್ ೧೬

ಕಪ್ಪಡಿಗನಾಗಿ ಬಂದೆಂ
[3][ತ][3]ಪ್ಪದೆ ಪಡಿಇಕಾಜನಾಗಿ ನಿಂದೆಂ ರೂಪಿಂ
ದಪ್ಪುದನೆ ಕಂಡಿರಳವಿಗ
ಳಪ್ಪುದನಾಂ ತೋರ್ಪೆನಳ್ಕದೆನ್ನನೆ ನೋಡಿಂ ೧೭

ಆನಿನ್ನೇನೆನಲಕ್ಕುಮೆ
ಮಾನನನೆಂಬವರ್ಗಳೀವರೆನಗತಿಬಲದಿಂ
ದಾನವರುಂ ಗೆಲ್ವೆನಿಭಂ
ಡಾನವರಂ ಗೆಲ್ವ ಮಾಟಿಕ್ಕಯಿಂದಾನವರಂ ೧೮

ವ॥ ನೀಮಿನ್ನೇನುಂ ಸಂಕಿಸಲ್ವೇಡೆಂದೊಡಂತೆಗೆಯ್ವೆಮೆಂದು ಯುದ್ಧಸನ್ನದ್ಧರಾಗಿ ತಮ್ಮ ಬಲಮುಂ ಸನ್ನಣಂಗೆಯ್ಯಲ್ವೇೞ್ದು ಸಮಸ್ತಾಯುಧಂಗಳಂ ತೀವಿದ ರಥಮುಂ

1 ಮೆಚ್ಚದೆ ಕಡು ಬಿನ್ನಾಣಿಯಪ್ಪ ಪಡಿಇಯುಂಗೊಸೆದೊಡೆ 2 ದಿ 3 ತ

ವಸುದೇವಂಗೆ ಕೊಟ್ಟು ತಾನಾನೆಯನೇಱಿ ಸಮಸ್ತಬಲಂಬೆರಸೊಡ್ಡಿ ನಿಂದನಿತ್ತ ಕೌರವ ಪಾಂಡವ ಯಾದವಸಂಕುಲಾದ್ಯನೇಕ ದೇಶಾಧೀಶ್ವರರೆಲ್ಲರುಮಂ ಕೂಡಿ ಜರಾಸಂಧನೊಡ್ಡಿ ನೀರವನಂತೆರಡು ಪಡೆಗಳುಮೊಡ್ಡಿ ನಿಂದು ಪಱೆಯುಂ ಪೊಯ್ಸಿ ಕಯ್ಯಂ ಬೀಸಿದಾಗಳ್ ಬೀೞ್ವಿಡೆ ತಾಗಿ ಪಡಲ್ವಡೆ ಕಾದಿ ದೞಂ ದೞದೊಳ್ ತಟ್ಟುತೀರಿದಿಂಬೞಿಯುಂ ರಥದೊಳ್ ಪರಿದು ತಾಗಿದಲ್ಲಿ ತಮ್ಮ ಬಲದ ರಥಸಮೂಹಂ ಗೆಲೆ ಕಾದಲಾಱದುದಂ ಜರಾಸಂಧನ ತಮ್ಮನಪರಾಜಿತಂ ಕಂಡು ಹಸ್ತಿಸಾಧನಮುಂ ಬೆಸಸಿದಾಗಳ್ ಹಿರಣ್ಯಾಕ್ಷಂ ತಾನುಂ ಕರಿ ಘಟೆಗಳೊಡನೆ ಗಜಾರೂಢನಾಗಿ ನೂಂಕಿ[1][ಕಾದೆ][1] ಮಾರ್ಬಲದ ಘಟೆ ಪೆಱಱಿಮೊಡ ಪರಾಜಿತಂ ಜರಾಸಂಧನನುಮತದಿಂ ಸಮುದ್ರವಿಜಯನುಂ ಪೇೞ್ದಾಗಳ್ ತಾನುಂ ತಮ್ಮಂದಿರುಂ ಚಾತುರ್ದಂತಬಲಮುಂ ನೂಂಕಿ ಕಾದಿ ಹಿರಣ್ಯಾಕ್ಷನ ಬಲಮನಂದಂತಿರೆ ಮಾಡಿ ಘಟೆಯುಮನಲ್ಲಾಡಿ ಕಾದುವುದಂ ವಸುದೇವಂ ಕಂಡು

ಕಂ॥ ಎಲ್ಲರುಮನುರದೆ ಪಱೆಯವ
ನಲ್ಲನಿವಂ ತಕ್ಕನೆಂದು ಮಾಲೆಯನಿತ್ತಾ
ನಲ್ಲಳ ನೆವದನುವರಮಿದು
ಬಲ್ಲಾಳೊಳ್ ತೊಡರ್ದುಮಂತು ಕಯ್ವಾರ್ದಿರ್ಪಂ ೧೯

ವ॥ ಎಂದು ರಥಮುಂ ಪರಿಯಿಸಿ ಮಾವನಂ ಪೆಱಗಿಕ್ಕಿ ಶರಸಂಧಾನಂಗೆಯ್ದು ಕಾದುವಾಗಳಂಬಿನ ಮೞೆ ಕೊಂಡಂತೆ ನೆತ್ತರ ಪೊನಲ್ ಪೊನಲನಟ್ಟಿಯಟ್ಟಿಯಾಡುವಿನ ಮಿದಿರ್ಚಿದ ಬಲಮುಳ್ಕಾಡುತ್ತಮಿರ್ಪ್ಪಡೆ ಸಮುದ್ರವಿಜಯಂ ತನ್ನ ಬಲದಾನೆಯಾರೋಹಕ ರಾತನಂ ಪೇೞಲುಂಗಳ್ಕಿದುದುಮಂ ನಿನಿಸುಳ್ಕಿದುದುಮಂ ನಱಿದು ತನ್ನ ರಥಮನೆಯ್ದೆ ನೂಂಕಿ ಕಾದೆ

ಕಂ॥ ಈತನೆ ಸಮನೀ ನರಪತಿ
ಗೀತನೆ ಪೌರುಷಪುರು[2][ಷ][2] ನರೇಂದ್ರನೆ ದೊರೆಯೆಂ
ದಾತಂಗಳನೆರಡು[ಂ] ಪಡೆ
ಯಾತಂಗಳು ನಿಂದು ನಿಳ್ಕಿ ನೋಡುತ್ತಿರ್ದರ್ ೨೦

ವ॥ ಅಂತು ಪಡೆಯೆಲ್ಲಂ ನೆ[3][ಱೆ ಕಾದುವಾ][3]ಗಳ್ ಸಮುದ್ರವಿಜಯನೆಂತು ನೋಡೆಚ್ಚೊಡಂ ತಲೆಯ ಮೇಗಂ ನೆಗೆದು ಪೋಕುಂ ವಸುದೇವನುಂ ವಿನಯಮುಳ್ಳನಂತೆ ಮುಂದೆ ಬಿರ್ದಿಕ್ಕುವದಂ ಕಂಡು ವಸುದೇವನಾನೆಂತೆಚ್ಚೊಡಮಿ[4][ರ್ದೀ][4]ತನಂ ಕೊಳ್ಳನೀತ ನಾರ್ಗೆಂದು ಸಾರಥಿಯುಂ ಬೆಸಗೊಂಡೊಡಾತನೆಂಗುಮೀತಂ ಸೂರ್ಯಪುರಾಧಿಪತಿ ಸಮುದ್ರವಿಜಯನೆಂಬೊನೆಂದಾಗಳ್

1 ಕಾ 2 ಷಮಾ 3 ಡೆ ಕಾದವ 4 ರ್ದು

ಕಂ॥ ಅಂತೆ ಪಿರಿಯಣ್ಣನೊ[1][ಳಮಿ][1]ಱಿಂ
ಪಂತಾಯ್ತು ಪಾಪಮೆನಗೆ[2][ರ][2]ಡುಂ ಪಡೆ ನೋಡ
ಲ್ಕೆಂತು ತೊಲಗಿರ್ಪೆನಾನಿ
ನ್ನೆಂತಱಿಪುವೆನೆಂತು[3][ಮಾಣ್ಬೆ][3]ನೆಂತಾಂ ಕಾಣ್ಬೆಂ ೨೧

ವ॥ ಎನೆ ಸಾರಥಿಯೆಂಗುಮಿಂತೆ ಚಿಂತಿಸುತಿರ್ದಡೆ ನೋೞ್ಪರ ಕಣ್ಗೆ ಕಿಱಿದಾಗಿಕ್ಕುಮಾಗಳೆ ರಥದಿನಿೞಿದು ಪೋಗಿ ಕಾಣ್ಗೆಂಪೊಡಂತೆಗೆಯ್ವೆವೆಂದಿರ್ಬರುಮಿೞಿದು ನೀಂ ಮುಂಪೆ ಪೋ[4][ಗೆ][4]ಮಗುೞ್ದಿಗಂಬಟ್ಟ[5][ಲ್ಲಿ][5]ಯಗ್ನಿಪ್ರವೇಶೋಪಾಯದಿಂ ಪೋಗಿ ದೇಶಾಂತರಂಗಳಂ ತೊೞಲ್ದೀಗಳಿಲ್ಲಿ ನಿಮ್ಮವರಂ ಪೊಣರೆ ಕಾದುತ್ತಿರ್ದು ತನ್ನಂಬಿನ ಪಾಯುಂಪಕೆನ್ನಂ ಬೆಸಗೊಂಡಱಿದು ಬೇಗಬಾಯೆಂದು ನಿಮ್ಮ ತಮ್ಮಂ ವಸುದೇವಂ ನಿಮ್ಮಡಿಯಂ ಕಾಣಲ್ಬಂದಪನೆಂದು ಪೇೞೆಂದಾತನನಟ್ಟಿ ತಾಂ ಪೆಱಗು ಬರ್ಪಾಗಳ್ ಸಮುದ್ರವಿಜಯಂ ಕಂಡಿವರಿರ್ವರುಮಿದಿರ್ವಂದರಾಗಿ ನಮ್ಮವರಾರುಮಿದಿರ್ಚದಿರಿಮೆನಲಂತೆ ನೋೞ್ಪಂ ಪೆಱಗಣಾತನುದಮಂ ನಡೆನೋಡಿ

ಕಂ॥ ವಸುಧಾತಳದೊಳಗೆಲ್ಲಿಯು
ಮಸದೃಶಮಾಗಿರ್ಪ ರೂಪಿನೊಳ್ಪಿನೊಳಾತಂ
ವಸುದೇವನಂದದಂತೆಂ
ದೊಸೆದು ನೃಪಂ ನೋಡಿ ಕೂಡೆ ಸಾರಥಿ ಬಂದಂ ೨೨

ವ॥ ಬಂದು ಪೇೞ್ದಿಟ್ಟದಂದಮೊಱೆಯೆ ಪೇೞ್ದಾಗಳೊಸೆದು ತನ್ನ ಕೊರಲ ಪದಕಮನಾತಂಗೆ ಕೊಟ್ಟು ನುಡಿಯುತಿರ್ಪಿನಂ ವಸುದೇವನೆಯ್ದೆವಂದು ಮೆಯ್ಯನಿಕ್ಕಿ ಪೊಡಮಟ್ಟಾತನನಪ್ಪಿಕೊಂಡು ನಾಡೆ ಪೊತ್ತುವರಮು[6][ಗ][6]ಲ್ದುೞ್ಬಿ[7][ಗ][7]ದೊಳ್ ಮನ್ನ್ಯಮಿಕ್ಕು ಕಂಡ ಸಂತೋಷದೊಳ್ ಪಸೆ ಮಗುೞ್ದುಮೞ್ಚಿಱಿನೊಳ್ ನೋಡುತಿರ್ದನನ್ನೆಗಂ ವಸುದೇವಂ ಬಂದನೆಂಬುದಂ ಕೇಳ್ದಾತನ ಮತ್ತಿನೆಣ್ಬರಣ್ಣಂಗಳ್ ಪರಿತಂದೊಡವರುಮಂ ಕಂಡು ಪೊಡಮಟ್ಟಪ್ಪಿಕೊಳುತ್ತಮಿರೆ ಸಮುದ್ರವಿಜಯನೊಸಗೆವಱೆಯುಂ ಪೊಯ್ಸೆ ಜರಾಸಂಧಂ ಕೇಳ್ದು ಸಂತೋಷಂಬಟ್ಟು ಯುದ್ಧಮನುಪಸಂಹರಿಸಬರೆ ವಸುದೇವನುಮಣ್ಣ[8][ನಭಿಮತ][8]ದಿಂ ಪೊಡೆವಟ್ಟು ಕಾಣ್ಬುದುಮವನನೊಡಗೊಂಡು ಮಹೋತ್ಸವದಿಂ ಪೊೞಲಂ ಪೊಕ್ಕು ರೋಹಿಣಿಗಂ ವಸುದೇವಂಗಂ ಮದುವೆಯುಂ ಮಾಡಿ ಹಿರಣ್ಯಾಕ್ಷಂಗೆ ಪ್ರಸನ್ನನಾಗಿ ಸಮುದ್ರವಿಜಯನನಿರಿಸಿ ಬಂದರಸುಮಕ್ಕಳೆಲ್ಲರುಮನೊಡಗೊಂಡು ಜರಾಸಂಧಂ ಪೋದಂ ಸಮುದ್ರವಿಜಯಂ ತಮ್ಮನೊಡನೆ ಕೆಲವು ದಿವಸಮಿರ್ದು ವಸುದೇವಾ ನೀಂ ತಡೆಯದೆ ಬಪ್ಪುದೆಂದು ತನ್ನ ಪೊೞಲ್ಗೆ ಪೋದಂ

1 ಳ 2 ಮೆರು 3 …ಬ 4 ಗಿ 5 ಲಿ 6 ಗು 7 ರ 8 ನ…

ಕಂ॥ ವಸುದೇವಂ ರೋಹಿಣಿಯೊಡ
ನೊಸೆದನುದಿನಮುಮಿತ ವಿಭವಯುತನಾಗಿರ[1][ಲು
ದ್ವ][1]ಸನ ಲಸದಶನ ವಿವಿಧ ನಿ
ವಸನ ಸುಭೋಗೋಪಭೋಗದಿಂ ಸುಖಮಿರ್ದಂ ೨೩

ವ॥ ಅಂತಿರುತಮೊಂದುದಿವಸಂ ಮಾಡದ ಮೇಗಣ ನೆಲೆಯೊಳ್ ಪವಡಿಸಿರ್ದ ವಸುದೇವನನೊರ್ವಳ್ ವಿದ್ಯಾಧರಿ ಬಂದು ವಿದ್ಯಾಶಕ್ತಿಯಿನೆತ್ತಿಕೊಂಡುಪೋಗಿ ವೇದಂಡ ಮೆಂಬ ಪರ್ವತದ ಮೇಗಣ ಗಗನಾನಂದಪುರಕ್ಕೊಯ್ದು ಉಪವನದೊಳಿರಿಸಿ ವಾಯು ವೇಗಂಗಱಿಪಿದೊಡಾತನಿದಿರ್ಗೊಂಡೊಯ್ದು ತನ್ನ ಮಗಳಂ ಬಾಳಚಂದ್ರೆಯೆಂಬೊಳಂ ವಿವಾಹವಿಧಿಯಿಂ ಕೊಟ್ಟೊಡಲ್ಲಿ ಕೆಲವು ದಿವಸಮಿರ್ದು ಪೋಪ ಬಗೆಯೆಂತೆಂದೊಡಾ ವಾಯುವೇಗಂ ನಾನಾವಿಧ ವಸ್ತುವಾಹನಂಗಳುಮಂ ಮಗಳುಮಂ ಅಳಿಯನುಮಂ ವಿಮಾನದಿಂ ಕಳುಪೆ ಬಂದಂ ಅರಿಷ್ಟಪುರಮಂ ಪೊಕ್ಕು ಸುಖದಿನಿರ್ದು ಸೂರ್ಯಪುರವಿಂಗೆ ಪೋಪ ಬಗೆಯಂ ಹಿರಣ್ಯಾಕ್ಷಂಗಱಿಪಿದೊಡಾತನೆನಿತಾನುಮನುಮೂಲ್ಯವಸ್ತುಗಳಂ ಬಱಿ ವಱಿಗೊಟ್ಟು ಕಳಿಪೆ ಪಯಣಂಬರುತ್ತಮಲ್ಲಲ್ಲಿ ಮದುವೆನಿಂದನಲ್ಲಲ್ಲಿರ್ದ ಪೆಂಡಿರೆಲ್ಲರುಮಂ ಬರಿಸಿಕೊಂಡು ದೇವನಿಕಾಯಮುಮನೊಡಗೊಂಡು ಬರ್ಪ ದೇವೇಂದ್ರನಂತೆ ಪಯಣಂ ಬಂದು ಸೂರ್ಯಪುರಮನೆಯ್ದಿ ತನ್ನ ಬರವಂ ತಮ್ಮಣ್ಣಂಗೆ ಪೇಳ್ದಟ್ಟಿ ಮಹಾವಿಭೂತಿ [2][ಯಿಂ][2] ಪೊಟಿಲಂ ಪೊಕ್ಕು ತಮ್ಮ[3][ಣ್ಣಂಗಳ್ಗ][3]ಮತ್ತಿಗೆಗಳ್ಗಂ ಯಥಾಕ್ರಮದಿಂ ವಿನಯ ಪೂರ್ವಕಂ ಕಂಡತ್ಯಂತ ಸಂತುಷ್ಟನಾಗಿ ಕೆಲದಿವಸದಿಂ ರೋಹಿಣಿ[ಗ]ಗ್ರಮಹಿಷಿಪದಮಂ ಮಾಡಿದಿಂಬಱಿಯುಮೊಂದು ದಿವಸಂ ತಲೆನೀರ್ಮಿಂದು ಸೂಟಿಗ್ಗನಂದು ಸುಖದಿ ನಿದ್ರಿತೆ ಯಾಗಿ ಬೆಳಗಪ್ಪ ಜಾವದಾಗಳ್

ತ್ರಿವಿಧಿ॥

ತೊಳಗು[ಗು]ಪೆಲ್ಲಿಗಂ ಬೆಳಗುತ್ತಮೊಪ್ಪುವಾ
ಕಳೆಗಳುಂ ನೆಱೆದು ಸೊಗಯಿಪ್ಪ ಚಂದ್ರನಂ
ನಳಿನಾಸ್ಯೆ ಕಂಡು ಕನಸಿ[4][ನೊಳು][4] ೨೪

ಕ್ಷೋಣಿಗೆ ಚೆಲ್ವಪ್ಪ ಮಾಣಿಕವೊಂದನು
ಮಾಣದೆ ನುಂಗಿದ[ನ]ದನಾಗ ಕನಸಿನೊಳು
ಕಾಣುತ್ತೆ ರಾಗವೊದವಿರ್ದಳು ೨೫

1 ಲಿದ್ಯ 2 ಯಂ 3 ಣಂಗಪ್ಪಿಳ್ಗೆ 4 ನಲು

ಇಂತಪ್ಪ ಕನಸನಾ ಕಾಂತೆ ಕಂಡೆೞ್ಚತ್ತು
ಕಾಂತಂಗೆ ತಿಳಿಪೆ ಕರಮೊಸೆ[1][ದಂ][1]
ತಾತನಾತ್ಮಗತಮೊಳೊಸೆದಿರ್ದಂ ೨೬

ವ|| ಪೂರ್ಣಚಂದ್ರನಂ ಕಂಡುದುಂ ಮಾಣಿಕಮಂ ನುಂಗಿದುದುಂ ಲೋಕ ಪ್ರಸಿದ್ಧಮಪ್ಪ ಮಹಾಪುರುಷನೊರ್ವಂ ನಿನ್ನ ಗರ್ಭದೊಳವತರಿಸುಗುಮೆಂದೊಡೊಸೆದಿರ್ದು ಕೆಲವು ದಿ[2][ನ][2]ದಿಂ ಗರ್ಭಚಿಹ್ನಮಾಗೆ ನವಮಾಸಂ ನೆಱೆದು ಶುಭದಿನದೊಳ್ ಮಗನಂ ಪೆತ್ತೊಡಾ ಕೂಸಿಂಗೆ ಬಲದೇವನೆಂದು ಪೆಸರನಿಟ್ಟಂತು ವಸುದೇವಸ್ವಾಮಿ ಸುಖದಿನಿರು ತಮಾಯುಧವಿದ್ಯೋಪದೇಶಂಗೆಯ್ವಲ್ಲಿಗೊರ್ವನಾಗಂತುಕಂ ತೇಜೋಮೂರ್ತಿಯುಂ ರೂಪಸ್ವಿಯುಮಪ್ಪಂ ಬಂದು ಕಂಡ[3][ನಂ ನೀವೆಲ್ಲಿಂ][3]ಬಂದಿರೆನೆ ಕೌಶಂಬೆಯಿಂ ಬಂದೆಂ ಕಂಸನೆಂಬಂ ನೀಮುಂ ಸಕಳಕಳಾಕುಶಳರೆಂಬುದಂ ಕೇಳ್ದು ಚಾಪವಿದ್ಯೆಯುಂ ಕಲಿಯಲ್ ಬಂದೆನೆಂದೊಡಂತೆಗೆಯ್ವೆಂದು ಧನುರ್ವಿದ್ಯೋಪದೇಶಂಗೆಯ್ಯುತ್ತಿರ್ದನಿತಂ ವೇದಂಡ ಪರ್ವತೋಪಕಂಠದೊಳಿರ್ದ ಪೌದನಪುರಾಧಿಪತಿ ಸಿಂಹರಥನೆಂಬಂ ತನ್ನ ಪೆರ್ಚಿನೊಳಂ ಮನದ ಬೆರ್ಚಿನೊಳಮಿಂತೆನುತಿರ್ದಂ

ಕಂ|| ಏನಾನುಂ ನೆವದಿಂ ತಾಂ
ಮ[4][ನಿ][4]ದಿಱಿವಡೆ ಖಚರರಾಜರುಂ ದೈತ್ಯರುಮಿ
ದಾರ್ನಲ್ಲಿನಿಸಾರ್ವರೆ ಪೇೞ್
ಮಾನಸರಿವರೆಂದು ಗಜಱಿ ಗರ್ಜಿಸುತಿರ್ದಂ ೨೭

ಉ|| ಕೋಟೆಗಳೆಂಬುವೇಂ ತ್ರಿವಿಧಮಲ್ಲದೆಯುಂ ಪೆಱಪಂದಮುಕ್ಕುಮೇ
ಕೋಟಿಭಟರ್ಕಳೆಂಬಿವರ್ಗಳಾ ಪರಿಸಂಖೆಯಿನತ್ತ[ಲೊ]ಲ್ವರೇ
ಕೂಟದ ನ[5][ಚ್ಚಿನೊಳ್ ಮು][5]ಲಿವನೆಂಬವರ್ಗಿಂದ್ರನೆ ಕೂಡಿ ನಿಲ್ವನೇ
ಕೀಟಸಮಾನ ಮರ್ತ್ಯರೆನಗಳ್ಕದೆ ಬಳ್ಕದೆ ನಿಲ್ವ ಗಂಡರೇ ೨೮

ವ|| ಎಂದುಚ್ಚಾಟಿಸಿಯುಮಾಸ್ಫೋಟಿಸಿಯು[ಂ] ನುಡಿದು ಕೆಲದ ನೆಲದರಸುಗಳುಮಂ ನೋಡಿಸಿಯುಮೆಱೆದುಕೊಳುತಂ ಮೇಗಿಲ್ಲದೊಟ್ಟೈಸಿ ಬಾೞ್ವಿನಂ ಜರಾಸಂಧ ಚಕ್ರವರ್ತಿ ಕೇಳ್ದು ಮುಳಿದಾತನ ಮೇಲೆ [6][ದಂ][6]ಡಂ ಪೇೞ್ದೊ[7][ಡಾ][7] ದಂಡು ಕಾದಿ ಪಡಲ್ವಟ್ಟು ಸೋಲ್ತುಱಿಯೆ ಮುಟ್ಟುಗೆಟ್ಟು ಬಾಯ್ವಿಟ್ಟೋಡಿದೊಡೆ ಜರಾಸಂಧನದುವಂ ಕೇಳ್ದುೞಿದ್ದಿಂತಪ್ಪದಮಾತನಂ ಗೆಲ್ದಂಗೆನ್ನ ಮಗಳುಮಂ ಮೆಚ್ಚಿದ ನಾಡುಮಂ ಕೊಡುವೆನೆಂದಿಂತೆಲ್ಲಾ ನೆಲದೊಳಂ ಘೋಷಣೆ[ಯಿಡಿಸಿ] ಸೂರ್ಯಪುರಕ್ಕೆ ವಂದಲ್ಲಿ ವಸುದೇವಂ

1 ದೂ 2 ವ 3 ನನಿನೆಲ್ಲಿ 4 ಳಿ 5 ಚಿನೊಳ್ಮ 6 ದ 7 ಡ

ಪಿಡಿವನವನವರಣ್ಣಂ ಸಮುದ್ರವಿಜಯನಱಿದು ತಮ್ಮನ ಪರಾಕ್ರಮಮಂ ಮೆಚ್ಚಿ ತನ್ನ ಚತುರಂಗಬಲಮಂ ಪೇೞ್ದ ವಸುದೇವಂ ಕಂಸನನೊಡಗೊಂಡು ಯುದ್ಧಸನ್ನದ್ಧನಾಗಿ ನಡೆದು ಪೌದನಪುರಕ್ಕಾಸನ್ನನಾಗಿ ಬಿಟ್ಟು ಸಿಂಹರಥನಲ್ಲಿಗಣ್ಮುವಡಿದಿರೊಡ್ಡಿ ನಿಲ್ವು ದೆಂದೊಡಾತಂ ಮುಳಿದು ಪೊಱಮಟ್ಟು ಚತುರಂಗಬಲಮನೊಡ್ಡಿದವಮಂ ತನ್ನ ಬಲನು ನೊಡ್ಡಿ ಕೈವೀಸುವುದುಮೆರಡು ಬಲಮುಂ ತಾಗಿ ತಳ್ತಿಱಿದು ಪಡಲ್ವಟ್ಟುದುಮಂ ಕಂಡು ವಸುದೇವಂ ಮುಳಿದು ನೂಂಕಲ್ ಬಗೆದುದಂ ಕಂಸಂ ನಾಂ ಬಿಲ್ಗಲ್ವೆಯ ಚಟ್ಟನೆನ್ನೀ ಜನನುಮರಪೊಳ್ ಕುಸಿದಿರಲಾಗದೆಂದು ರಥಮಂ ಬೇಡಿಕೊಂಡು ಸಮರಸನ್ನದ್ಧನಾಗಿ ಸಿಂಹರಥನ ಬಲಕ್ಕೆ ಪರಿಯಿಸಿದಾಗಳ್

ಕಂ|| ಕಂಸಂಗಾ ಸಿಂಹರಥಂ
ಕಂಸಂ ರಭಸದಿನಿದಿರ್ಚೆ ನಿನಗೇ ತ[1][ಕ್ಕಂ
ತಾಂ][1]ಸಮನಲ್ಲೆ ಸಮರದೊ[2][ಳ್][2]
ನೀಂ ಸಾಯುವೆ ತೊಲಗು ತೊಲಗು ಕಾಯ್ವರು[3][ವೊಳ][3]ರೇ ೨೯

ವ|| ಎಂದು ಮನಂ ಪೆರ್ಚಿ ಮೇಗಿಲ್ಲದ ಗ[4][ರ್ವ][4]ದಿಂ ರಥಮನೆಯ್ದೆ ಸಾರ್ಚಿ ಪೆರ್ಚಿ ನುಡಿಯೆ ಕಂಸನೆಚ್ಚಂ

ಕಂ|| ಒಡರಿಸೆ ಶರಸಂಧಾನದಿ
ನೆಡೆಯುಡುಗದೆ [5][ಬಂ][5]ದು ಪಲವುಮಂಬುಗಳಂಬಂ
ಕಡಿಯೆ ಧನುವುಡಿಯೆ ಹ[6][ಯಗಳ್][6]
ಕೆಡೆ[7][ಯೆ ರಥಂ ಕಡಿಯೆ][7] ತಡೆಯದಿರದಾರ್ದೆಚ್ಚಂ ೩೦

ವ|| ಅಂತೆಚ್ಚು ಭಿನ್ನಚಾಪನುಂ ಭಿನ್ನರಥನುಮಾದುದಂ ಕಂಡು ಮೇಲ್ವಾಯ್ದು ಪಿಡಿದು ಕಟ್ಟಿಕೊಂಡು ಬರ್ಪಾಗಳಾತನ ಬಲಮೋಡೆ ತಮ್ಮ ಬಲ ನೋಡೆ ಸಿಂಹರಥನಂ ವಸುದೇವಂಗೊಪ್ಪಿಸುವುದಂ ವಿಜಯಪಟಮಂ ಪೊಯಿಸಿ ಸಾರಮಪ್ಪ ವಸ್ತುವಾಹನಂಗಳಂ ಕೊಂಡು ಮಗುಟ್ಟಿ ಬಂದು ಸಮುದ್ರವಿಜಯನಂ ಕಂಡಾಗಳ್ ತಮ್ಮನ ಪರಾಕ್ರಮಕ್ಕೆ ಮೆಚ್ಚಿ ನೀನೆ ಕೊಂಡು ಪೋಗಿ ಜರಾಸಂಧಂಗೊಪ್ಪಿಸೆಂದೊಡಂತೆಗೆಯ್ವೆನೆಂದು ಸಿಂಹರಥನಂ ಕೊಂಡು ಪೋಗಿ ಚಕ್ರವರ್ತಿಗೊ[8][ಪ್ಪಿಸುವು][8]ದುಮಿಂತಪ್ಪ ಬಲ್ಲಾಳಂ ಪಿಡಿದ ಮಹಾಸತ್ವ ನೀನೆ ಪಿರಿಯನೆಂದಮವೆ ಮುಹೂರ್ತಮಾಗೆ ಮದುವೆನಿಂದು ಮೆಚ್ಚಿದ ನಾಡಂ ಬೇಡಿ ಕೊಳ್ಳೆನೆ ವಸುದೇವನಿಂತೆಂದಂ

---

1 ಕ್ಕ 2 ಳುಂ 3 ಮುಳ್ಳ 4 ವ್ವ 5 ಯ್ತಂ 6 ಯಂ 7 ಯೆ 8 ಸೂ

ಕಂ॥ ಸನ್ನುತ ಧನುರ್ವಿದ್ಯೆಯು[1][ಮದ][1]
ನೆನ್ನೊಳ್ ನೆಱೆ ಕಲ್ತ ಚಟ್ಟನೀತಂ ಬಲಸಂ
ಪನ್ನಂ ದ್ವಿಪನಂ ರಣದೊಳ್
ಛಿನ್ನರಥಂ ಮಾಡಿ ಪಿಡಿದು ತಂದಪನಗಿತ್ತಂ ೩೧

ವ॥ ಅದಱಿಂ ನಿನ್ನ ಕೂಸುಮಂ ನಾಡುಮಂ ಈತಂಗೆ ಕೊಡುವುದೆಂದು ಕಂಸನಂ ತೋಱುವಾಗಳ್ ಜರಾಸಂಧನಾತನಂ ನೋಡಿ ನೀನೆಲ್ಲಿರ್ದುಬಂದೆ ಯಾರ ಮಗನೆನೆ ಕಂಸನೆಂಗುಮಾಂ ಕೌಶಂಬಿಯೆಂಬ ಪೊೞಲೊಳ್ ಕಪಿಳನೆಂಬ ಮಾಂಗುಲಿ ಗಂಗಂ ಅಂಬೋಧಿಯೆಂಬ [2][ಕಳ][2]ಪತಿಗಂ ಮಗನಾಗಿ ಪೆಳೆದು ನಿಚ್ಚನಿಚ್ಚಂ ತೊಂಡಿಕೆ ಗೆಯ್ದು ಪ್ರಯ್ಯಲಮಾಡುತ್ತಿರೆ ಮನರಿಸ್ಸಂ ಪೇಗಮುಟ್ಟಿಕಳೆದೊಡೆ ತೊಲಲುತ್ತಂ ಬಂದು ಸೂರ್ಯಪುರದೊಳ್ ವಸುದೇವನ ಸಮೀಪದೊಳ್ ಬಿಲುವಿದ್ಯೆಯನಭ್ಯಾಸಿಸುತ್ತಮಿರ್ದೆ ನಿಮ್ಮ ಕಲನಿಂತುಟು ನಿಮ್ಮ ಕೆಯ[3][ಳ್ಕೊ][3]ಡೆಗೆ ತಕ್ಕನಲ್ಲಿಂ ಬಿಸದೆಡೆಗೆ ತಕ್ಕನೆನೆ [4][ಯುಂ][4]ತಪ್ಪ ರೂಪುಂ ತೇಜಮುಂ ವಿದ್ಯಾಕೌಶಳಮುಮು[5][ಲಿಗಂ][5]ಗಕ್ಕುಮೆಂಬುದಂ ಪರೀಕ್ಷಿಸಿಮೆಂದಾಗಳ್ ಕೌಶಂಬಿಯೊಳಪರಂಬ್ಯ ಸುಮಗ್ಗಿ ಯುಮಿರ್ದವನ ಪಿಡಿದುಕೊಂಡು ಬನ್ನಿಮೆಂದವರ್ ಪೋಗಿ ಕೌಶಂಬಿಯೊಳಾರ್ಬಿದು ಕಳಪತಿಯುಂ ಕಂಡು ನಿಮಗೆ ಚಕ್ರವರ್ತಿಯಮುಟ್ಟಿಪಂ ಪೇಗಂಬಪ್ಪುದೆಂದಡವಂಜಿ ನಡುಗುತ್ತಮೇಕೆ ಬಱಿಯುಟ್ಟಿದನೆಂದಡೆ ಕಂಸ[ಂ] ನಿಮ್ಮ ಮಗನೆಂದಾರಂಬ್ಯಲಟ್ಟಿದನೆಂದೊಡವರಿಂತೆಂದರ್

ಕಂ॥ ಆತಂಗೆ ತಾಯ್ ಜಗುನೆಯಿ
ದಾತನ ತಂದೆಯಿದೆ ರತ್ನಮಂಜುಷೆ ಪಿಡಿಯೆಂ
ದಾತತಚಿತ್ರರ್ ಭಯದಿಂ
ದಾತಂಗಳ ಮುಂದೆ ತಂದು ತೋಱಿದರಾಗಳ್ ೩೨

ವ॥ ಜಗುನೆಯೊಳ್ ಮಂಜುಷೆಯುಂ ಕಂಡು ತಂದಪಱಿ ಕೀಲಂಗಳಂ ನೋಡೀಸಂ ಕಂಡು ನಡಪಿ ಪೆಳೆದು ತೊ[6][ಡು][6]ಗ್ಗೆದಡೆ ತೊಱಿದಟ್ಟಿದೆನೆಂದು ಮಗನಲ್ಲನಿದಱಿ ಮಗನೀತಂ ಕೊಂಡು ಪೋಗಿಮೆಂದೊಡವರಮಂ ಕೊಂಡುಬಂದು ಜರಾಸಂಧಂಗೆ ತೋಱಿದೊಡಂ ನೋೞ್ಪಲ್ಲಿ ಬರೆದಿರ್ದಕ್ಕರಂಗಳಂ ಬಾಜಿಸನೇೞ್ದಾಗಳ್

ಗದ್ಯ॥ ಸ್ವಸ್ತಿ ಸೂರಸೇ[7][ನಾ][7]ನಾಮುಲಂ[8][ಕಲಿ][8]ಷ್ಣುರಸ್ತಿ ಮಥು[9][ರಾ][9] ನಾಮನಗರೀ ತತ್ಪತಿಃ ಕೌರನ ಶ್ರೀಮದುಗ್ರಸೇ[10][ನೋ][10] ಮಹಾರಾ[11][ಜಃ ತ][11]ಸ್ಯಾಗ್ರ

---

1 ಮುಂ 2 ಕಾಳಾ 3 ಳ್ಕ 4 ಮಿಂ 5 ಲಿಂ 6 ಡಿ 7 ನ 8 ಕಾವಿ 9 ರ
10 ನ 11 ಜಸ್ತ

ಮಹಿಷೀ [ಪ]ಪ್ರಾಪತೀನಾ[1][ಮ][1] ಕುಮಾರಗರ್ಭೋತ್ಪತ್ತಾವಲೋಕನ ಸಂಜನಿತ ಭಯಾಭ್ಯಾಂ ಪಿತೃಭ್ಯಾಂ ಮಂತ್ರಿಭಿಸ್ಸಾಯಂ ದಾರಕಃ [2][ಕಾಂಸ್ಯ][2]ಮಂಜೂಷಾಯಾಂ ಪಸುವಾಸಿನಾಪಃ ನಿರ್ವಾಪ್ಯ ಯಮುನಾಪ್ರವಾಹೇ ನಿರ್ಮುಕ್ತಃ ಯಿ ...ದುಪ[3][ಗೃಹೀ][3]ತ ದಾರಕ ವಿಶಾವಮಾಂಕನುನೇನಾರ್ಥೇನ ಸುಪ್ರಯತ್ನಂ ಪೋಷಯತಿ ಭಗ್ನಂಭವತಿ

ವ|| ಎಂದು ಬಾಜಿಸುವಾಗ[ಳ್] ಜರಾಸಂಧನಂ ರಾಗದಿಂ ನೀನೆಂ [4][ತುಸೆ][4]ವ್ಯಾಳಿಯನೆ ಇವರಮ್ಮಸ್ಸಪ್ಪ ಪಾಪಕರ್ಮನೀತನಂ ಕೊಂಡು ಮುಳಿಸಿನಿಂ ಮಂಜೂಷೆಯೊಳಿಟ್ಟು ಜಗುನೆಯೊಳ್ ಬಿಟ್ಟೊಡಾಯುಷ್ಯಬಲದೊಳ್ ಬರ್ದುಂಕಿನನೆಂದು ಮಹೋತ್ಸವಂ ಮಾಡಿ ಶುಭದಿನಮುಹೂರ್ತದೊಳ್ ಜೀವಂಜಸೆಯುಂ ಕಂಸಂಗೆ ಕೊಟ್ಟು ವಸ್ತುವಾಹನಂಗಳಂ ಬಱಿವಱಿಗೊಟ್ಟು ನೀಂ ಮೆಚ್ಚಿದ ನಾಡಂ ಬೇಡಿಕೊಳ್ಳೆಂಬುದುಂ ಎನಗೆ ಕೂರ್ಪಾತಂ ಉಗ್ರಸೇನಮಹಾರಾಜನಪ್ಪೊಡಾತನ ನಾಡಂ ದಯಗೆಯ್ಯಿಮೆಂ ದೊಡಿದು ಕ್ರೋಧೋದ್ರೇಕಮೆಂದಱಿದು ನುಡಿದು ತಪ್ಪಲಾಗದೆಂದಾ ನಾಡಂ ಕೊಟ್ಟಡೆ ಕೊಂಡು ಪೊಡೆವಟ್ಟು ಕೈಕೊಂಡು ಪಗೆ ಕೈಗೆವಂದಂತೊಪ್ಪಿದುದಂ ಕಂಡರಸನುಂ ವಸು ದೇವನುಮಿದೇಂ ಚೋದ್ಯಮೊ ತಂದೆಗಂ ಮಗಂಗಮಿಂತಾದ ಮುಳಿಸಾವ ಭವದೊಳಾದುದೊ ದಿವ್ಯಜ್ಞಾನಿಗಳಂ ಬೆಸಗೊಳ್ವಮೆಂದವರ್ದಲ್ಲಿಗೆ ಪೋಗಿ ಮುನಿಗಳಂ ಬಂದಿಸಿ ಕೇಳ್ದೊರ್ ಭಟಾರಾ ಕಂಸಂಗಂ ಅವರಮ್ಮಂಗಂ ಆವ ಭವದೊಳಾದ ಮುಳಿಸೆನೆ ಭಟಾರರಿಂತೆಂದರ್

ಕಂ|| [5][ಕೌ][5]ಶಿಕ[6][ಮೆಂ][6]ಬೊಂದೂರೊಳ್
ಭಾಸುರ ಪಂಚಾಗ್ನಿಯೆಂಬ ತಪದ ನಿಯೋಗಾ
ಭ್ಯಾಸದಿನಿರುಳುಂ ಪಗ[7][ಲುಮು][7]
ಪಾಸಕನಿರ್ದಂ ವಶಿಷ್ಟನೆಂಬೊಂ ಪೆಸರಿಂ ೩೩

ವ|| ಮೇಗಾದಿತ್ಯನ ಬೆಂಕೆ ಸುಡಲ್ ನಾಲ್ಕುಂ ದೆಸೆಯೊಳಂ ಕಿಚ್ಚನೊಟ್ಟಿ ನಡು ವಿರ್ದಗ್ಗಳದ ತಪಮಿದಲ್ಲದೆ ಪೆಱತಿಲ್ಲೆಂದಿರ್ಪಿನನೊಂದುದಿವಸಂ ಚಾರಣಋಷಿಯರ್ ಕಂಡಹೋ ಕಷ್ಟಮಜ್ಞಾನ ತಪಮೆಂದು ಪೋಪಾಗಳಾ ತಾಪಸಂ ಎರ್ದು ಮುಳಿದು ನಿಚ್ಚಂ ಪುಳ್ಳಿಗಡಿವ ತನ್ನ ಕೊಡಲಿಯುಂ ಕೊಂಡು ನಿಮಾಗಡಂ ಬಂದೆನ್ನ ತಪದೊಂತಜ್ಞಾನಂ ಪೇೞ್ದಿ ಲ್ಲದೆ ಪೋಗಲೀಯೆನೆಂದಿರ್ದಡೆ ನಿಸ್ಸೊಟ್ಟಿದ ಕಿಚ್ಚಿನೊಳ್ ಜೀವ ಸಮಿಧೆಯೊಳಗಣ ಪೋಟಲೊಳಗೆ ಸೀಳ್ದು ನೋಡೆ ಮಿಡಮಿಡಮಿಡುಕುತ್ತ[ಂ] ಮಿಟ್ಟೆ ಪಾವಿನ ಮಱಿಗಳಂ ಕಂಡು ಚೋದ್ಯಂಬಟ್ಟು ಬಾಯಂಬಿಟ್ಟು ಬೇಗಮಾ ತಪಮುಂ ಕೊಡಲಿಯುಮಲ್ಲಿಯೆ ಬಿಸುಟು ಮಹಾತಪೋಧನರ ಬಱಿಯನೆ ಪೋಗಿ ದೀಕ್ಷೆಯಂ ದಯೆಗೆಯ್ಯಿಮೆಂದು

---

1 ಮ ತಯೊತರಸ್ತಿ ಸೂತವಃ 2 ಕಂಸ 3 ಗ್ರಹ 4 ತುಂವೆ 5 ಕಾಂ 6 ಮಂ 7 ಲಂ ಮ

ಕೈಕೊಂಡು ಪಲವುಂ ಕ್ರಿಯಾಶಿಕ್ಷೆಯುಂ ಬಱಿಯುಂ ಕಾಯಕ್ಲೇಶಮುಂ ರುಚಿಯಾಗಿ[1][ಯು][1] ಪವಾಸಿಯಾಗಿ ವಿಹಾರಿಸುತಂ ಬಂದು ಮಥುರೆಯೊಳಿರ್ದಡವರ ತಪದ ಮಹಾತ್ಮ್ಯಮನುಗ್ರ ಸೇನಮಹಾರಾಜಂ ಕೇಳ್ದಂತಪ್ಪಡವರನಾನಲ್ಲದೆ ಪೊಱಲೊಳಗಾರುಂ ನಿಲಿಸಲಾಗದೆಂದು [2][ಗೋ][2]ಸನೆವಿಡಿಸೆ

ಮ॥ಸ್ರ॥ ಮುನಿಪಂ ಮಾಸೋಪವಾಸಾಂತರದೊಳನುನಯಂ ಪಾರಿಸಲ್ಕೆಂದು ಪೊಕ್ಕೊ
ಯ್ಯನೆ ಚರ್ಯಾಮಾರ್ಗದಿಂದಂ ಬರೆ ಪೊಱಲವರ್ಗಳ್ ನೋಡುತಿರ್ದೆಲ್ಲರುಂ [3][ಗೋ][3]
ಸನೆಗಳ್ಕಿರ್ದರ್ ಮದೇಭಂ ಮಸಗಿ ಕೊಲೆ ಕೆಲರ್ ಬೆಚ್ಚಿ ಪುಯ್ಯಲ್ಚಿದಾಗಳ್
ಜನನಾಥಂ ತನ್ನ ಜವ್ವಾಜದೆ ಮಱೆದಯೆ ಮಗುೞ್ದಂದಸಂದಾ ಮುನೀಂದ್ರಂ ೩೪

ವ॥ ಅಂತು ಮಗುೞ್ದುಬಂದು ಮ[4][ತ್ತೆ][4] ಮಾಸೋಪವಾಸ ಪ್ರತ್ಯಾಖ್ಯಾನಂಗೊಂಡು ಪಾರಣೆಯ ದಿವಸದಂದಿಗೆ ಮತ್ತಂ ಚರಿಗೆವರೆ

ಕಂ॥ ಅರಮನೆಯೊಳ್ ಕಿರ್ಚಿರ್ದಡೆ
ಪಿರಿದುಂ ಸಂಕಟದೊಳಾಕುಳವ್ಯಾ[5][ನನುಮಾ][5]
ನರನಾಥಂ ನಿಱಿಸಲ್ ಮಱೆ
ದಿರೆ ಮುನಿಯುಮಲಾಭದಿಂದಮಂದೆ ಮಗುೞ್ದಂ ೩೫

ವ॥ [6][ಬಂ][6]ದು ಜಿನಾಲಯದೊಳಿರ್ದು ಪೊಱಲನಾಳ್ದರಸನ ಭಕ್ತಿಯುಮನೆನ್ನ ಕಾಯಕ್ಲೇಶದ ಶಕ್ತಿಯುಮಂ ನೋೞ್ಪೆನೆಂಬಂತೆ ಮತ್ತಮೊಂದು ತಿಂಗಳ್ ನೋಂತು ಪಾರಿಸುವ ಬಗೆಯಿಂ ಪೋಗೆ ಪೊಱಲವರಳ್ಕಿ ನಿಲಿಸದಿರ್ದ[7][ರ][7]ಲ್ಲಿ

ಕಂ॥ ಮಂಡಳಿಕಂ ಬರೆ ನೃಪನಿದಿ
ರ್ಗೊಂಡು ಮನೋಮುದದೆ ಕಂಡು ಸತ್ಪ್ರಿಯದೆ ಮನಂ
ಗೊಂಡು ಕಡುರಾಗಮುಂ ಕ
ಯ್ಕೊಂಡು ಮುನೀಶ್ವರನನಾತನಂದುಂ ಮಱೆದಂ ೩೬

ವ॥ ಮಱೆದೊಡಾ ಋಷಿ ಮಗು[8][ೞ್ದು][8]ಪೋಗುತ್ತಂ ಪೋಗಲಾಱದೊಂದೆ ಬೀದಿಯ ಕೆಲದೊಳ್ ಕರಂ ನೆಮ್ಮಿ ಬೞಲ್ದಿರೆ ಕಂಡವರ್ಗಳಿಂತೆಂದರ್

1 ಮು 2 ಘೊ 3 ಘೊ 4 ತ್ತ 5 ನಾ 6 ಎಂ 7 ನ 8 ಳ್ದಂ

ಕಂ|| ಆರುಂ ನಿಲಿಸದಿರಿಂ ಗಡ
ಮಿಾ ರುಷಿಯರಸೆಂದು ಮೂಱು ಪಾರಣೆಯೊಳವಿಂ
ತಾರಯ್ಯದಿರ್ದು ಕೊಂದನ
ರಾರಯ್ಯ ನರೇಂದ್ರನಂತೆನಲ್ ಮುನಿ ಮುನಿದಂ ೩೭

ವ|| ಮುನಿದೊಡವರ ಸಾಧ್ಯವಾದ ವಿದ್ಯಾದೇವತೆಗಳುಂ ಬಂದು ಬೆಸನೇನೆಂ [1][ದಡೆ][1]ನಗೀಗಳ್ ಪ್ರಾಣಾವಸ್ಥೆಯಾಗಿರ್ದುದು ಮಱುಭವದೊಳ್ ಬೆಸಕೆಯ್ಯಿಮೆಂದೊ ಡಂತೆಗೆಯ್ವೆಮೆಂದು ಪೋದಿಂಬೞಿಯಮಿವರೆಲ್ಲಿಯುಂ ನಿಲ್ಲದೆ ನಾಮೆ ನಿಲ್ವೆ[2][ಮಂ][2]ತೆ ಕಣ್ಣುಂ ನಿಲೆ ಮುಳಿದ ಚಿತ್ತಮುಗ್ರಸೇನನ ಮೇಗಾಗಿ ಸತ್ತು ಆತನರಸಿಯಪ್ಪ ಪದ್ಮಾವತಿಯ ಗರ್ಭದೊಳವತರಿಸಿದೊಡಾಕೆ ತನ್ನ ಭರ್ತಾರನ ನೆತ್ತರಂ ಕುಡಿಯಲ್ ಬಯಸಿ ಬಯಕೆಯ ಪೊಲ್ಲಮೆಗಱಿಲ್ದು ಪೆಱರಾರ್ಗಂ ಪೇೞಲಱಿಯದೆ ಚಿಂತಾಕ್ರಾಂತೆಯಾಗಿರ್ದುದನರಸಂ ಕಂಡಿಂತೆಂದಂ

ಕಂ|| ಅಳವು[3][ಂ][3] ದಕ್ಷಿಣ ಭುಜಬಳ
ದಳವದ ನೀಂ ಬಲ್ಲೆ ಬಗೆಯೆ ನೆಟ್ಟನೆ ನಭದೊಳ್
ನೆಲದೊಳ್ ಜಲನಿಧಿಯೆಡೆಯೊಳ್
ಬಗೆವಡೆನಗಮರಿಯರುಮೊಳರೇ (?) ೩೮

ವ|| ಎನೆ ಭರ್ತಾ[4][ರಂ][4] ಬೆಸಗೊಂಡೊಡಂ ಪೇೞದಿರಲಾಗ ಪಾತಕಿಯ ಬಯ ಕೆಯ ಪೇೞಲಾಗದೆಂದು ಬೆಚ್ಚನೆ ಸುಯ್ದು ಪೊಲ್ಲದಂ ಬಯಸಿದುದು ನಿನ್ನ ದೋಷಮಲ್ತು ನಿನ್ನ ಬಸಿಱೊಳಿ[5][ರ್ದ][5] ಪ್ರಾಣಿಯ ಬಯಕೆಯಕ್ಕುಮದಕ್ಕೆ ಸಂಕಿಸದೆ ಪೇೞೆಂದು ಕೇಱೆ ಬೆಸಗೊಂಡೊಡಿಂತೆಂದಳ್

ಕಂ|| ಸುರಿಗೆಯೊಳಂ ದೊಕ್ಕನೆ ನಿ
ನ್ನುರಮಂ ಪಿಡಿದಿಱಿದು ತೆಗೆಯೆ ಭೋರ್ಗರೆದು ಕರಂ
ಸುರಿ[6][ದ್ವೆ][6]ತಪ್ಪ ಬಿಸಿಯ ನೆ
ತ್ತರ ಗಟಗಟನಾಂ ಕುಡಿಯ[7][ಲೆ][7] ಬಯಸಿದೆನರಸಾ ೩೯

ವ|| ಇದೆನ್ನ ಪೊಲ್ಲವಗೆಯೆಸಗೆ ಬಲ್ಪಗೆಯಾ[8][ದು][8]ದಱಿನೀ ಬಯಕೆಯ ಭಯ ದಿಂಗೇ ಕಾರಣಮಪ್ಪ[ದ]ದಱಿಂ ನಿನ್ನಂ ಕೊಂದೆನ್ನಂ ಕಾವುದೊಳ್ಳಿತ್ತೆ ಮುನ್ನಂ ಸಾವು ದೊಳ್ಳಿತ್ತು ನೀ ಮನಃಕ್ಷತಂಬಡದಿರೆಂದೊಡಾತನಿಂತೆಂದಂ

1 ದುಡೆ 2 ಸೊಂ 3 ಮ 4 ರುಂ 5 ದ್ದು 6 ಯೆ 7 ಲಂದು 8 ದ

ಕಂ|| ಕಿಸುಗಣ್ ಬಿಟ್ಟ ಕರ್ಣಂ ಕಾ
ಯ್ಪೆಸೆದಿರೆ ಪಿಡಿಕೆಯ್ಸಿ ನಿಮಿರ್ದ ಕೈ ಕಿಱುಕದಪು
ಮುಸದಳದ ಮುಳಿಸಿಡಿಮ್ಮುಂ
ಬಿಸುನೆತ್ತರನೊರ್ವ ಕುಡಿವೆಯಿನ್ನುಂ ತಣಿಯಾ (?) ೪೨

ವ|| ಎಂದಂತೆ ಬಂದು [1][ಕಂ][1]ಸಂ ಮಂಜೂಷೆಯುಂ ನೆಮಿಯುಬಿ ಕೂಸನಲ್ಲಿಟ್ಟು ಪೊನ್ನ ಪೊಟ್ಟಣಮಂ ಕಟ್ಟಿ ಕೆಲದೊಳಿಟ್ಟು ಪೊನ್ನಂ ಕೊಂಡೀ ಕೂಸನಾರ್ ಕಂಡವಂ ನಡಪುಗೀತನೆಂತೆಂಬಾತನ ಮಗನೆಂದಕ್ಕರಂಗಳಂ ಬರೆದು ಮಂಜೂ[2][ಷೆ][2]ಯಂತು ಮದ ಜೊಕಮುರ್ಚಿ ಜಮುನೆಯೆಂಬ ತೊಱೆಯೊಳ್ ಬಿಟ್ಟೊಡಂ ಕೌಶಂಬಿಯ ಕಳನ[ತ್ತಿ][3] ಕೊಂಡು ನಡಪಿದವಳೆಂಬೆಲ್ಲಮಂ ದಿವ್ಯಜ್ಞಾನಿಗಳ್ ಪೇೞೆ ಕೇಳ್ದು ಮಗುೞ್ದು ಬಂದಿರ್ದ ಕೆಲವು ದಿವಸದಿಂ ಕಂಸಂ ವಸುದೇವನಲ್ಲಿಗೆ ವಂದು ನಿಮ್ಮಡಿಯಿಂದೆನಗಿನಿವಿರಿದು ಪವಣಿ ಯಾಂಪ್ಪಿನ್ನ ವಿನಯದಿಕ್ಕೆಱೆನಕಲಿಗಿನ್ನಿನ್ನ ಪೊೞಲ್ಗೆ ಪೋಪೆನೆಂದು ಬಿನ್ನವಿಸೆ ಇನ್ನು ಕೆಲವು ದಿವಸಮಿರ್ದೊಡಲ್ಲದೆನಗೆ ಸಂತೋಷಮಿಲ್ಲೆಂದು ಭವಂಗೆಯ್ದುದಂತೆನೆಯ್ವೆನೆ ಕಂಸಂ ಪೋಪ ಬಗೆಯುಂ ಜರಾಸಂಧಂಗೆ ಪೇೞ್ದು ಪೋದತಿಪ್ರಿಯದಿಂ ಮಗಳುಮನಳಿಯನುಮಂ ಕಳುಪಿ ವಸುದೇವ ಸಹಿತಂ ಪಯಣಂಬೋಗಿ ಮಥುರೆಯನೆಯ್ದೆ ಕಂಸಂ ತನ್ನ ತಂದೆಯುಗ್ರಸೇನ ನಲ್ಲಿಗಿಂತೆಂದಟ್ಟಿದಂ

ತರಳ||

ನೆಱೆಗೆ ಪುಟ್ಟಿದ ಮಕ್ಕಳಂ ಕೊಲಲಾಗ ಬೇಡರ ಜಾತಿಗಂ
ಮಱದು ಜಾತಿಯ ಪೆಂಪನೋವದೆ ಪಾೞಿಯಂ ಬಿಸುಟೊಳ್ಪಿ ತ
ಪ್ಪ[4][ಱೆ][4]ವನಾತ್ಮತನೂಜನಂ ಕಡುಪಾಪದಿಂ ಮುಳಿಸುಣ್ಮೆ ತಾಂ
ತೊಱೆಯೊಳಿಕ್ಕಿದ ಪಾತಕಂ ಪೊಱಮಟ್ಟು ಕಾದುವುದೆಂಬುದಂ ೪೩

ವ|| ನುಡಿದು ಜಡಿದಟ್ಟಿದೊಡೆ ಪೊಱಮಟ್ಟಿದ್ದ ದಿವಸಮಂ ಕಂಸ[5][ನುಂ][5] ತನ್ನ ಚತುರಂಗಬಲಮನೊಡ್ಡಿ ತಂದೆಯಪ್ಪುದುಗ್ರಸೇನ ಮಹಾರಾಜನುಮಂ ತಮ್ಮಬ್ಬೆಯಪ್ಪ ಪದ್ಮಾವತಿಯುಮಂ ಪೊೞಲ ಬಾಗಿಲ್ಮಾಡದ [6][ಮೇ][6]ಗಸಿಪಂಜರದೊಳ್ ಸೆಱೆಯಿಟ್ಟು ತಾನುಂ ವಸುದೇವಸ್ವಾಮಿಯುಮುತ್ಸವೋತ್ಸಾಹದಿಂ ಪೊೞಲಂ ಪೊಕ್ಕು ಸುಖದಿಂದಮಿರ್ದ ಬೞಿಯಂ ಉಗ್ರಸೇನನಿಂ ಕಿರಿಯ ದೇವಸೇನನ ಮಕ್ಕಳ್ ದೇವಕಿಯುಮತಿಮುಕ್ತ ನೆಂಬರ್ದರೊಳತಿಮುಕ್ತಕುಮಾರಂ ವೈರಾಗ್ಯದಿಂ ತಪಂಬಟ್ಟುಪೋದನಾ ದೇವಕಿಯೆಂಬ ಕನ್ನೆಯುಂ ಕಂಸಂ ಬಱಿಯಟ್ಟಿ ಬರಿಸಿ ಗುರುದಕ್ಷಿಣೆಯೆಂದು ವಸುದೇವಂಗೆ ಮಹಾ ವಿಭೂತಿಯಿಂ ವಿವಾಹಂ ಮಾಡಿಕುಡೆ

---

1 ಕಾಂ 2 ಸ 3 ತಿ 4 ೞ 5 ನಂ 6 ಬ

ಮ|| ಪಸುರ್ವಂದ[1][ರ್ತಳಿರಾ][1]ತ್ರಪೂರ್ಣಕಳಶಂ ಶ್ರೀಖಂಡಮಂಭೋರುಹಂ
ಪಸೆ ತೂರ್ಯಧ್ವನಿ ದರ್ಪಣಂ ದ[2][ಧಿ][2] ವಿಳಾ[3][ಸಿನ್ಯು][3]ತ್ಕರಂ ಚಾಮರಂ
ಕುಸುಮಂ ಮಂಗಳಗೇಯಮೆಂಬಿವಜಿಬೂಳಾದತ್ಯಂತ ತಚ್ಛೋಭೆಯಿಂ
ವಸುದೇವಪ್ರಭು ದೇವಕೀಲಲನೆಯೊಳ್ ಕೂಡಿರ್ದನುತ್ಸಾಹದಿಂ ೪೪

ಗದ್ಯ|| ಇದರ್ಹತ್ಸರ್ವಜ್ಞ ಪಾದಪದ್ಮವಿರಾಜಿತೋತ್ತಮಾಂಗ ಶ್ರೀ ಬಂಧುವರ್ಮ
ನಿರ್ಮಿತಮಪ್ಪ ಹರಿವಂಶಾಭ್ಯುದಯದೊಳ್ ಕಂಸಭವಾಂತರಂ

**ಪಂಚಮಾಶ್ವಾಸಂ**

---

1 ತ್ರಳಿರ 2 ದೆ 3 ಸನ್ಯೊ

# ಷಷ್ಠಾಶ್ವಾಸಂ

ಕಂ|| ವಿಭವದ್ವಿಭ[ಪತಿ]ವಿಕ್ರಮ
ನಭಿನುತ ದುಗ್ಧಾಬ್ಧಿವಿಭ್ರಮಾಭಯಶಂಕಾ
ಶುಭಭೂಷಣ ಭೃದ್ಧ್ವಾವಜ
ಸುಭಗಂ ವಸುದೇವನಿಂತು ಸುಖಮಿಪ್ಪಿನೆಗಂ ೧

ವ|| ಅತಿಮುಕ್ತಋಷಿ ವಿಹಾರಿಸುತ್ತಮಾ ಪೊೞಲ್ಗೆವಂದಿರ್ದುಪವಾಸದ ಪಾರಣೆಯೊಳ್ ಚರ್ಯಾಮಾರ್ಗದಿಂ ಬರುತ್ತಿರೆ ಕಂಸನ ಮನೆಯ ಮುಂದೆ ಬಪ್ಪಾಗಳವರ ಬರವಂ ಜೀವಂಜಸೆ ಕಂಡು ಸ್ವಮನಋಷಿಯ ಕಾಡಲೆಂದು ಪರಿವಡ್ಡವಿರ್ದು ನಿಮ್ಮೊಡಪುಟ್ಟಿದ ದೇವಕಿಯ ಮಾನಂವಸ್ತ್ರಮಿವು ನೋಡಿಮೆಂದು ಪಡಲಿಗೆಯೊಳಿಟ್ಟು ತೋಱಂ [ದೊ][1]ಡೆ ನಾಣ್ಚಿ ತೊಲಗಿಪೋಗುತ್ತಿರೆ ಮತ್ತಮಡ್ಡಂಬಂದು ತೋಱಿತೋಱಿಕಾ......

ಕಂ|| ದೇವಕಿಗೆ ಪುಟ್ಟಿದಾತಂ
ಭೂವಿದಿತಂ ನಿನ್ನ ಗಂಡನು[ಂ] ತಂದೆಯುಮೇಂ
ದೇವರ್ ಕಾವಡಮವನಣ
ಮೋವದೆ ಕೊಲ್ಲುಂದಲೇಕೊ...... ೨

ವ|| ... ನಸು ತಾನಮಯುಸುತಮಂತೆ ಭಟ್ಟಾರರ್ ಪೋದರಾ ಮಾತಂ ಕೇಳುತ್ತಂ ಜೀವಂಜಸೆಯು ಜೀವಂ ಪೋಗೆ ಬೆಕ್ಕಸನಾಗಿ ಮಗುೞ್ದು ಬಂದು ಪಾಸಿನೊಳ್ ಮೆಯ್ಯ ನೀಡಾಡಿ ಋಷಿವಾಕ್ಯಂ ತಪ್ಪದೆಂದು ಬೆಚ್ಚನೆ ಸುಯ್ದು ಮಱುಗುತಿರ್ಪಾಳನ್ನೆಗಂ ಕಂಸಂ ಬಂದು ಇಂತೇಕೆ ಚಿಂತಿಸುತಿರ್ಪೆಯೆಂದು ಕೇಳಿ ಬೆಸಗೊಂಡೊಡೆಮ್ಮ ಮಯ್ದುನನಪ್ಪ ಅತಿಮುಕ್ತಕಋಷಿಯರ್ ಬಂದವರಂ....ತ್ರಂ ತೆಗಳ್ದು ಕಾದಿಪೊಡೆ ನಿಗ್ರಾಗಿ ದೇವಕಿಗೆ ಪುಟ್ಟಿದಾತಂ ನಿನ್ನಾಣ್ಮ[ನುಮಂ][2] ನಿಮ್ಮಮ್ಮನುಮಂ ಕೊಂದು ನೆಲನೆಲ್ಲಮನಾಳ್ಗುಂ ನೀಂ ಬೆಸೆಯುದಿರಂ ಮೊದೆಸಗೆ ಮಹಾಪ್ರಳಯಂ ಕವಿದಂತಾಗಿರ್ದುದೆನೆ ಕಂಸನಂತೆಂದಂ

1 ತೊ 2 ನುಂ

ಕಂ|| ಉಪವಾಸಪರಿಶ್ರಮದಿಂ
ವ್ಯಪಗತಮತಿಯಾಗಿ ನುಡಿದೊಡವರದನಂತ
ಪ್ಪುಪವಾದಕಂಜಲಕ್ಕುಮೆ
[1][ಮು][1]ಪಾಯಮಂ ಬಲ್ಲೆನೆಂದು ಸಂತೈಸಿರ್ದಂ ೩

ವ|| ಇರ್ದು ಕೆಲನಾನುಂ ದಿವಸದೊಳ್ ಕಂಸಂ ವಸುದೇವಸ್ವಾಮಿಯಲ್ಲಿಗೆ ಪೋಗಿ ದೇವಕಿ ಬೆಸ[ಲೆ]ಯಪ್ಪಂದೆನ್ನ ಮನೆಯೊಳ್ ಬೆಸಲೆಯಪ್ಪುದಂತಲ್ಲದೆ ತವ[2][ರ್ಮ][2]ನೆಯ ಪೆಂಪುಮೆನ್ನ ಸೌಧರ್ಮಿಕೆಯ ಕೊಂಡಾಟಮುಮೆಸೆಯದೀ ಸ್ಥಿತಿಯನೀಯಲ್ವೇೞ್ಪುದೆಂದು ಭಯಂಗೆಯ್ದು [ನು]ಡಿದೊಡಿತ್ತೆನೆಂದೊಡಂಬಟ್ಟು ಮಗುೞ್ದು ಬಂದಿರ್ದೊಂ ವಸುದೇವನುಮಾ ಪ್ರಪಂಚಮಂ ದೇವಕಿಗೆ ಪೇೞ್ದೊಡೆ ಪೊಲ್ಲಕೆಯ್ದರವನಾವ ಕಾರಣದೊಳ್ ಬೇಡಿದನೆಂದಱಿಯದೇಕೊಡಂಬಟ್ಟಿರೆಂದೊಡದನತಿಮುಕ್ತಕಋಷಿಯರಂ ಬೆಸಗೊಳ್ವಂ ಬಾಯೆಂದಿರ್ವರುಂ ಪೋಗಿ ಭಟ್ಟಾರರಂ ಬಂದಿಸಿ ಮುಂದೆ ಕುಳ್ಳಿರ್ದು ಕಂಸನುಂ ಬೇಡಿಕೊಂಡ ಬಗೆಯುಮದನುಂ ಬೆಸಗೊಂಡೊಡದಕ್ಕಂಜದಿರಿಂ ಮೂಱುಸೂೞ್ ಪುಟ್ಟಿದ ಮಕ್ಕಳುಮಂ ಮಾಯಾಶಿಶುಗಳಂ ನಿನ್ನ ಮುಂದಿಕ್ಕಿ ನೈಗಮದೇವಂ ನಿನ್ನ ಕೂಸುಗಳಂ ಕೊಂಡುಪೋಗಿ ನಡಪುಗುಂ ಬೞಿಕಿನ ಗರ್ಭದೊಳೊರ್ವಂ ಕಾರಣಪುರುಷನೇೞುತಿಂಗಳೊಳ್ ಪುಟ್ಟುಗುಮಾತನಂ ನೀಂ ಪುಟ್ಟಿದಾಗಳೆ ಕಳಿಪುವುದೆನೆ ಬಂದಿಸಿ ತಮ್ಮಾವಾಸಕ್ಕೆ ಬಂದಿರ್ದು ಕೆಲವು ದಿವಸದಿಂ ಗರ್ಭಮಾಗಿ ನವಮಾಸಂ ನೆಱೆದಂದು ಕಂಸಂ ದೇವಕಿಯುಂ ತನ್ನ ಮನೆಗೊಯ್ದಿರಿಸಿದೊಡೆ

ಕಂ|| ಅಮಳಂ ಪೆತ್ತಾಗಳ್ ನೈ
ಗಮದೇವಂ ಕೃತಕಶಿಶುಗಳಂ ತಂದಂದಾ
ಕಮಳಾಸ್ಯೆಯ ಮುಂದೊ[3][ಯ್ದಿ][3]
ಟ್ಟು ಮಾಯದಿಂ ಕೊಂಡುಪೋದನಾ ಕೂಸುಗಳಂ ೪

ವ|| ಅಂತೆ ಮತ್ತೆರಡುಂ ಸೂೞ್ ಪೆತ್ತಮಕ್ಕಳನಾ ದೇವಂ ಕೊಂಡುಪೋಗಿ ಮಳಯಪರ್ವತದೊಳ್ ನಡಪುತಿರ್ದನಿತ್ತ ಕಂಸಂ ದೇವಕಿಗೆ ಬೆಸಲೆಯಾದಂದೆಲ್ಲಮಾಕೆಯ ಮುಂದಿರ್ದ ಮಾಯಾಶಿಶುಗಳನಾಕೆ ಪೆತ್ತ ಕೂಸುಗಳೆಂದೆ ಬಗೆದು ಕೊಂಡೊಯ್ದು ಶಿಲೆಯೊಳ್ ಪೊಯ್ದು ಕೊಂದತಿಮುಕ್ತಕರಾದೇಶಮಂ ಪುಸಿಮಾಡಿದೆನೆಂದು ಸಂತೋಷದೊಳಿರ್ದು ಮತ್ತಮಾಕೆಗೆ ನಾಲ್ಕನೆಯ ಗರ್ಭದಂದು ಕಂಸನ ಕಾಪಂ ಕೈಕೊಳ್ಳದೆ ಏೞನೆಯ ತಿಂಗಳೊಳ್ ಬಸಿ[4][ಱ=][4]ಸಗಿ ಭಾದ್ರಪದಮಾಸದ ಶುದ್ಧ ದ್ವಾದಶಿಯುಂ ಶ್ರವಣನಕ್ಷತ್ರದಂದರ್ಧರಾತ್ರದ ಶುಭಲಗ್ನದೊಳ್ ಮಗನಂ ಪೆತ್ತಾಗಳ್ ದೇವಕಿ ಮುನ್ನಿನ

1 ಮು 2 ರ್ಮ 3 ಯ್ದು 4 ಱು

ಕೂಸುಗಳಂ ಕಾಯಲಾರ್ತಪಿಲ್ಲಿನ್ನಪ್ರೊಡಜಿಾ ಕೂಸಂ ಕಾಯಲಾಪ್ರೊಡೊಳ್ಳಿತೆಂದು ವಸುದೇವಂಗೆ ಪೇಟಿಱ್ದಾಡಾತನಾಗಳೆ ಬಂದು ಕೂಸನೆತ್ತಿಕೊಂಡಿೀಗಳ್ ಮನೆಯೊಳ್ ನಡೆವಾಗಳ್ ಬಲದೇವಕುಮಾರನಜ಼ುದು ಪರಿತಂದು ಕೊಡೆಯುಂ ಪಿಡಿದುಬರೆ ಪೊಱ ಮಟ್ಟು ಪೊಱಲ ಗೋಪುರದ್ವಾರಮನೆಯ್ದುವಾಗಳಿನ್ನೆಂತೀ ಬಾಗಿಲಂ ತೆಱವುದೆಂಬ ಚಿಂತೆ ಯೊಳಿರೆ ಕೂಸು ಗಂಭೀರಧ್ವನಿಯಿಂ ಸೀಂತಡದನಾ ಗೋಪುರದ ಬಾಗಿಲ್ಮಾಡದ ಮೇಗಸಿ ಪಂಜರಮೊಳ್ ಸಂಕಲೆಯೊಳಿರ್ದುಗ್ರಸೇನಮಹಾರಾಜಂ ಕೇಳ್ದು

ಕಂ॥ ಜೀವಂ ಸ್ಥಿರಾಯು ಸತ್ಸಾ
ಮ್ರ್ಯಾಜ್ಯಮಹಮರಿನೃಪತಿಮರ್ದನೋದಯ ವಿಪುಳ
ಶ್ರೀವರಸತ್ವಗಮಖಿಳ ಧ
ರಾವಳಯ ವಿಭುತ್ವಮಕ್ಕೆ ನಿನಗೆಂದಾಗಳ್ ೫

ವ॥ ಅದಂ ಕೇಳ್ದು ಕರಸೊಳ್ಳಿತ್ತಾಯ್ತು ಎಂದು ಬಾಗಿಲಸೆಯ್ದಿ ನಿಂದಾಗಳ್ ಕೂಸಿನ ಕಾಲುಂಗುಟಂ ಪ[1][ಡಿ][1]ಯಂ ತಾಗಿದಾಗಳ್ ನ[2][ಗರ][2]ದೇವತೆ ಸನ್ನಿಹಿತಮಾಗಿ ಪುಣ್ಯ ಪುರುಷನೀತನ ಪೋಗಿಂಗೆ ವಿಘ್ನಮಾಗಲೀಯೆನೆಂದು ಪಡಿಗಳಂ ತೆಱೆದಾಗಳ್ ಪೊಱ ಮಟ್ಟು ಕತ್ತಲೆಯೊಳ್ ಪೋಪ ದೆಸೆಯನಱಿಯದೆ ನಿಂದೊಡೆ ದೇವತಾಪ್ರೇರಣೆಯಿಂ ಧವಳ ವೃಷಭೇಂದ್ರನೊಂದು ಬಂದೆರಡುಂ ಕೋಡತುದಿಯೊಳ್ ಬೆಳಗಿವ ಸೊಡರ್ವೆರಸು ಮುಂದೆ ನಡೆವಾಗಳದಱ ಬೆನ್ನನೆ ನಡೆದು ನಾಡೆಯುಂತರಮುಂ ಪೋಪಾಗಳ್ ಕಾಳಿಂದಿಯೆಂಬ ತೊಱೆಯ ತಡಿಯ ಕಲ್ಲೋಳ್ ಕಳಕಳಮಪ್ಪ ಧ್ವನಿಯುಂ ಕೇಳ್ದು ನವಿಲ ಸರಮುಂ ಕೇಳ್ದ ಪಾವಿನಂತ[3][ಗಿ][3]ದಿನ್ನೆಂತು ಪೋಪ ಬಗೆಯಿನೆಯ್ದೆ ಬರ್ಪಾಗಳಾಕುಳತಾವರ್ತ ನಿವರ್ತನ ಪರಿತಾವರ್ತನ ವಿಭಿನ್ನತರಂಗ ಭಂಗುರ ಸಫೇನ ಬುದ್ಬುದ ಚಟುಳ ಕುಟಿಳ ಭುಜಂಗ ಝಷ ನಕ್ರ ಶಿಂಶುಮಾರಾ[4][ದಿ][4] ಜಲಚರ ಸಂಕೀರ್ಣೋಭಯ ತಟಪ್ರಾಪ್ತ ಪೂರ್ಣ ಮಹಾ ನದಿಯನಾ ವೃಷಭಂ ತೊಟ್ಟನೆ ಪಾಯ್ದು ನಡೆವಾಗಳೆರಡುಂ ಕೆಲಕ್ಕೆ ನೀರುಡುಗಿ ಕೇರ್ಗಟ್ಟಿ ದಂತೆ ನಿಲೆ ಕಂಡದಱ ಬಱಿಯನೆ ನಡೆದು ತೊಱೆಯುಂ ಕಳಿಪೊಂದು ಕೃಷ್ಣಯಕ್ಷಿ ನಿವಾಸಮನೆ[5][ಯ್ದಿ][5]ದೊಡಾ ವೃಷಭಮದೃಶ್ಯಮಾಪ್ಪುದುವರಾ ದೇವತಾಸ್ಥಾನದೊಳಗಂ ಪೊಕ್ಕಿಪ್ಪಿನಮಲ್ಲಿಗೆ ಸಮೀಪದೊಳೊಂದು ತುಱುಪಟ್ಟಿಗೆಲ್ಲಂ ಪ್ರಧಾನ ನಂದಗೋಪನೆಂಬಂ ತನ್ನ ಪೆಂಡತಿ ಗಂಡುಗೂಸುಪಡೆವೆನಕ್ಕೆಂದಾ ಬಳಾರಿಗೆ ಪರಸಿ ಪೆಣ್ಗೂಸಂ ಪೆತ್ತಿದನಾ ನೊಲ್ಲೆನಾ ದೇವತೆಗೊಪ್ಪಿಸೆಂದು ತನ್ನಾಣ್ಮನ ಕಯ್ಯೊಳ್ ಕೊಟ್ಟೊಡಾತಂ ಕೊಂಡು ಬಂದು ದೇವತೆಗೆ

---

1 ಡಿ 2 ಗಂ 3 ನಿ 4 ಟ 5 ಯ್ದ

ಕಂ|| ಎನಗಕ್ಕೆ ಗಂಡುಗೂಸಂ
ದನುನಯದಿಂ ನಿನಗೆ ಪರಸಿ ಪೊಡವಟ್ಟಂ ಮ
ತ್ತೆನಗಾದುದು ಪೆಣ್ಮಗುವಿದೆ
ನಿನಗಕ್ಕಾನೊಲ್ಲೆನೆಂದು ಮಡಗಿಟ್ಟಾತಂ ೬

ವ|| ಮಗುೞ್ದು ಪೋಗೆ ವಸುದೇವಂ ಕೇಳ್ದು ನಮ್ಮ ಗೋಪನೀತಂಗೆ ದೇವತೆ ಕೊಟ್ಟಂತೊಪ್ಪಿಸುವನೆಂದು ಬಲದೇವನೊಳಾಳೋಚಿಸಿ ತಮ್ಮ ಗೋಪನಾ ದೇವತೆಯ ಮುಂದಿಟ್ಟು ಗೋಪನೆತ್ತಿಕೊಂಡಾ ದೇವತೆಯು ಕೆಳಗುೞಿದಿರ್ದ ಬಾ ಬಾ ನಿನಗೆ ಗಂಡು ಗೂಸನೀವೆನೆಂದೊಡಾ ದೇವತೆಯೆ ಕರೆವುದೆಂದು ಮಗುೞ್ದು ಬಂದಾ ಗಂಡುಗೂಸನೆ ಎತ್ತಿಕೊಂಡು ಪೋಗಿ ತನ್ನ ಪೆಂಡತಿಗೆ ದೇವತೆ ಗಂಡುಗೂಸನಿತ್ತುದೆಂದೊಡೊಸಗೆಯಂ ಮಾಡಿ ಕೃಷ್ಣಯಕ್ಷಿ ಕೊಟ್ಟುದೀತನನುತೆ ಕೃಷ್ಣನೆಂಬ ಪೆಸರಕ್ಕೆಂದು ಪರಸಿ ನಡಪುತ್ತಿರ್ದನಿತ್ತ ವಸುದೇವನುಂ ಬಲದೇವಕುಮಾರನುಂ ಆ ಕೂಸಂ ಕೊಂಡುಬಂದು ದೇವಕಿಯ ಮುಂದಿಕ್ಕಿ ನಿಶ್ಚಿಂತ[ದಿ]ನಿರ್ದರನ್ನೆಗಂ ಬೆಳಗಪ್ಪುದುಂ ಕಂಸಂ ದೇವಕಿಯು ಬೆಸಲೆ ಯಾದುದಂ ಕೇಳ್ದು ಬಂದು ಕಂಡದಂ ಪೆಣ್ಗೂಸಪ್ಪುದಱಿಂ ಕೂಸಿನಾಣ್ಮನಿಂದ ಮೆತ್ತಾನುಂ ಕೇಡಕ್ಕುಮೆಂಬ ಬಗೆಯೊಳಾ ಕೂಸಿನ ಮೂಗನಡಂಗೊತ್ತಿ ವಿಕಟಂಮಾಡಿ ಪೋದನಿಂತಾ ಕೂಸು ಬಳೆದು ಜವ್ವನೆಯಾದಂದು ತನ್ನ ವಿರೂಪೆಯಾದುದಕ್ಕೆ ಪೇಸಿ ನಿರ್ವೇಗನಾಗಿ ತಪಂಬಟ್ಟು ಪೋಗಿ ತೀರ್ಥಯಾತ್ರೆಗೆಯ್ಯುತ್ತಂ ಪೋಗಿ ವಿಂಧ್ಯಪರ್ವತಮಂ ಪೊಕ್ಕಲ್ಲಿರ್ದು

ಕಂ|| ಓವದೆ ಮೆಯ್ಯಂ ದಂಡಿಸಿ
ಭಾವವಿಶುದ್ಧಿಯೊಳೆ ನೆಗಳೆ ಕಂಡು ಕಿರಾತರ್
ದೇವತೆಯೆ ನೆಟ್ಟನೆಂದು
ಧ್ಯಾವಿಸಿ ಪೂಜಿಸುತಮಿರ್ದರನ್ನೆವರಂ ೭

ವ|| ಒಂದು ದಿವಸಂ ಪುಲಿ ಬಂದು ಪಾಯ್ದು ಕೊಂದು ತಿಂದು ಪೋದಡವರ್ ಮುನ್ನೆ ಪೂಜಿಸುವ ಬೇಡರಾ ದೇವತೆಯಂ ಕಾಣದೆ ಮೂಱುಬೆರಳಿರ್ದುವಂ ಕಂಡವಂ ನಿಱಿಸಿ ಪೂಜಿಸುತಿರ್ದರನ್ನಂ ಕೊಱಡೊಡೆ ಮೂಱು ದಕ್ಕಂ ನಿಱಿಸಿ ಮನ್ನಿಸುತ್ತಿರೆ ವಿಂಧ್ಯವಾಸಿನಿ ಭಗವತಿಯೆಂದಡಿತ್ತ ಪೆಸರ್ ನೆಗೞ್ದಲ್ಲಿಯೊಳಂ ಪ್ರಸಿದ್ಧಮಾಗಿ ನಡೆದತ್ತಿತ್ತ ಕಂಸನ ಪೊೞಲೊಳ್

ಚಂ|| ಉರಿದುವು ಧಾತ್ರಿಯಿಂ ಪೆಸೆಗಳಂಬರದಿಂ ರುಧಿರಾಂಬುಧಾರೆಗಳ್
ಸುರಿದುವು ತಾರಕಾವಳಿಗಳುಳ್ಕಿ ಪಗಲ್ ಬಿಡಪತ್ತ್ರಮಿತ್ತ್ರಲುಂ
ಪರಿದುವು ಭೂಮಿ ಕಂಪಿಸುತಮಿರ್ದುದು ದೀಪ್ತದೊಳಿರ್ದ ಬಳ್ಳುಗಳ್
ಕರೆದುವು ಪೊಲ್ಲನಪ್ಪ ಕನಸಂ ಪರಿವೀಕ್ಷಿಸಿದಂ ನರಾಧಿಪಂ ೮

ವ|| ಅಂತಾದುತ್ಪಾತಂಗಳ್ಗಂ ಪ್ರೊಲ್ಲಗನಸಿಂಗಮೇಪಯ್ಸಿ ಚಿಂತಾಕ್ರಾಂತನಾಗಿರ್ದು ತನ್ನ ನಚ್ಚುವ ವರುಣನೆಂಬ ನೈಮಿತ್ತಿಕಂಗೆ ಬೞಿಯಟ್ಟಿಬರಿಸಿ ಮನ್ನಿಸಿರ್ದನಗೆ ಪಗೆವರೊಳರಾದರೆ ಪೇೞಿಮೆಂದೊಡವರ್ ಬಗೆದು ನೋಡಿ ಪಗೆವನೊರ್ಬಂ ಬಳೆದಪ್ಪನಾತಂ ಪೆರ್ಚಿದೊಡಾರ್ಗಮಸಾಧ್ಯನಕ್ಕುವಿನಾಗಳೆ ಕೆಡಿಸು...... ರುಮೆ ಬಗೆಯಿಮೆಂದು ಪೋದ ಬೞಿಯಮಲ್ಲಿ ಪುಟ್ಟಿದನೆಂಬುದನೆಂತು ಭೇದಿಸುವೆನೆಂತು ಭೇದಿಸುವೆನೆಂದು ಬಗೆದು ಶುಚಿರ್ಭೂತನಾಗಿ ದರ್ಭಶಯನದೊಳಿರೆ ಮುನ್ನಿನ ಭವದೊಳ್ ಸಾಧ್ಯಮಾದೇೞುಂ ವ್ಯಂತರದೇವತೆಗಳ್ ಬಂದು ಬೆಸನೇನು ನೀನೇಕೆ ಚಿಂತಿಸುವೆಯೆಮೆ ರಾಗದಿನೆನ್ನ ಪಗೆವನೊರ್ವಂ ಬಳೆದಪ್ಪಂ ಗಡವಾತನನೆಲ್ಲಿಯಪ್ಪೊಡಮಾರಯ್ದು ಮಱಿಮಂ ಬೇಗಂ ಕೊಲ್ಲಿಮೆಂದೊಡಮಂತೆಗೆಯ್ವೆಮೆಂದು ಪೋಗಿ ವಿಭಂಗಜ್ಞಾನದಿಂ ನಂದಗೋಪನ ಮನೆಯೊಳ್ ಬಳೆದಪ್ಪನೆಂಬುದಂ ಬಗೆದಱಿದು ಬಾಳನ ಮೇಗಿನಿಬ[1][ರುಮೊ][1]ಡವೋಪಂತೇಗಹನವೊರ್ವರೊರ್ವರೆ ಪೋಗಿ ಸಾಧಿಸುವಮೆಂದು ಸಮಕಟ್ಟಿರ್ದು ಮುನ್ನ ಮಾಯೆ ಎಂಬ ದೇವತೆ ನಂದಗೋಪನ ತುಱುಪಟ್ಟಿಗೆ ಪಂದಾ ಕೂಸಿನ ದಾದಿಯ ರೂಪಂ ಕೈಕೊಂಡು ಮಾಯದ ಮಾತುಗಳಿಂ ತಡೆದೆನ್ನ ಕೂಸು ಪಸಿದುದೆಂದೆತ್ತಿಕೊಂಡು ವಿಷಮಂ ಪೂಸಿದ ಮೊಲೆಯನೂಡುವಾಗಳಾತನ ಮೆಯ್ಯ ಪುಣ್ಯದೇವತೆ ಶತ್ರುದೇವತೆಯಪ್ಪುದನಱಿದು ಮುನಿಸನೊಡರ್ಚಿ

ಕಂ|| ಮೊಲೆಯನೆರೞ್ಕಯ್ಯಿಂ ಪಿಡಿ
ದಲಂಘ್ಯಬಲನೊತ್ತಿ ನೆತ್ತರಂ ಪೀರ್ವಾಗಳ್
ಕೊಲಲಿವನಂ ಬಗೆದೆನ್ನೀ
ಕೊಲೆ ಕೊಲೆಯಾ[2][ಯ್ತೆಂದೆ][2]ನುತ್ತಮೋಡಿದಳಾಗಳ್ ೯

ವ|| ಆ ದೇವತೆ ಭಯಂಗೊಂಡು ಕೋಳ್ಕೊಂಡು ಬಿಱುತೋಡೆ ಮತ್ತೆ ಕೆಲವು ದಿವಸದಿನೆಂಬ[3][ಳಿಕ್ಕಿ][3]ಯಾಡುವಂದು ಕೂಸಂ ಮಿಸಿಸಿ ಮನೆಯ ಮುಂದೊಂದು ಪೊರಸಿನ ಮೇಲೆ ಪಟ್ಟಿರಿಸಿದಾಗಳ್ ಮಹಾಕಾಳಿಯೆಂಬ ದೇವತೆ ಕಾಗೆಯ ರೂಪಾಗಿ ಬಂದಿಱಿಯಲೆಱಗಿದಡೆ

ಮ|| ಎಡಗಯ್ಯೊಳ್ ಪಿಡಿದೊತ್ತಿ ಚಂಚುಪುಟಮಂ ಸುರ್ಗಪ್ಪಿನಂ ಗಂ[4][ಟ][4]ಲಂ
ಪಿಡಿದೆತ್ತಂ ಬಲಗಯ್ಯೊಳೊತ್ತಿದೊಡೆ ಕಣ್ಪೋತಪ್ಪಿನಂ ಮುಟ್ಟಿನಂ
ಡೊಡಿದೇಂ ಪೊಕ್ಕಿಱಿಯಲ್ಕೆ ಪೋಗಿ ವಿಧಿಗೊಳ್ಪಟ್ಟಂತುಟಾಂಪ್ತೆಂದು ಮೆ
ಳ್ಪಡಪಾ ದೇವತೆ ಕಾಗೆಗಾಗೆಗರಪುತ್ತೋಡಿತ್ತು ಭೀತಾರ್ಥದಿಂ ೧೦

1 ಎಸ್ಮೊ 2 ಯ್ತಿ 3 ಳ್ಕಿ 4 ಡ

ತ್ರಿವಿಧಿ॥

ಅಂತಪ್ಪ ವಯಸದೊಳಂತಪ್ಪ ಬಲವ್ವೈರಿ
ಗಂತಪ್ಪ ತೆಱನೆ ಪೆಱದೇನೊ ಬಗೆದೊಡಿ
ನ್ನೆಂತಪ್ಪುದವನ ಬಲಗರ್ವಂ ೧೧

ವ॥ ಎಂದು ಬಾಳನ[ಂ] ಪಲರ್ ಪೊಗಳೆ ಬಲಂ ನೆಗೞ್ದು ನಡೆದಾಡುವಂದು ಪೃಥುಕನೆಂಬ ದೇವತೆ ಮಹಾರಭಸದಿಂ

ಕಂ॥ ಚಂಡಕ್ರೋಧದೆ ಭೋಂಕನೆ
ಬಂಡಿಯ ರೂಪಾಗಿ ಮಸಗಿ ಪರಿತರೆ ಬಾಳಂ
ಕಂಡು ಮುಳಿದೊದೆವುದುಂ ಕಾ
[1][ಲ್ಪೊಂ][1]ಡದು ಶತಖಂಡಮಾಗಿ ಕೆಡೆಪತ್ತಾಗಳ್ ೧೨

ವ॥ ಅಂತಾ ದೇವತೆ ಕೞಿಲ್ದು ಬೞಿಲ್ದೆೞಿಲ್ದು ಪೋದೊಡಂದಿಂದಿತ್ತ ಪರಿವ ಬಂಡಿಯೊಳ್ ಕಾಲಂ ಕೋದನೆಂಬುರ್ವಿನದ ಮಾತು ಪರೆಯೆ ಪರಿದಾಡುವ ದೆವಸದಂದೂರ ಮಕ್ಕಳನಾಟಂದು ಬಡಿದುಪೊತ್ತಿ ಪಿಡಿದುಮುವ್ಪುಂಕಿಯುಮುಡಸಿ ಕಟ್ಟಿಯುಮಿಕ್ಕಿಮೆಟ್ಟಿಯುಂ ಪುಯ್ಯಲಿಡಿಸೆ ನಿಚ್ಚನಾತನ ಕಾರಣದಿನೆಲ್ಲರುಂ ಮನೆಗೆವಂದು ಗಾರಣಂಗುಡೆ ಯಶೋದೆ ಯೆಂಬೊಳಾತನ ತಾಯ್ ಬೇಸತ್ತೊಂದು ದಿವಸಂ ನೀರ್ಗೆಪೋಗುತ್ತಮಾತನನೊಂದು ಪಿರಿದಪ್ಪೊರಲೊಳ್ ಕಟ್ಟಿಪೋದಡೆ

ಕಂ॥ ಬೞಿಯಕ್ಕೆಯ[2][ೞಲ][2] ಸೈರಿಸ
ದೞಿಲ್ದು ಕುಸಿದಿರದೆ ಬಾಳಕಂ ಕಡುಪಿಂದಂ
ಕೊೞೆ ದಕ್ಕನೆೞಿವ ತೆಱದಿಂ
ದೆೞೆದೊರಲಂ ಪಿರಿದನಾಗಳಜ್ಜೆಯ ಬೆನ್ನೊಳ್ ೧೩

ವ॥ ಪರಿವನನೂರ ಪೊಱಗಣೆಯೊಳಜರ್ುನಿಯೆಂಬ ದೇವತೆ ತಾನೆರಡು ಮತ್ತಿಯ ಮರಂಗಳ ರೂಪಾಗಿ ಬಿಡವಡಸಿದವುಂಕಿದಾಗಳ್

ಕಂ॥ ಒಡನೆರಡುಂ ಕಯ್ಯಿಂದಂ
ಪಿಡಿದೆರಡುಂ ಮರನನೊತ್ತಿ ನೂಂಕಿದ ಭರದಿಂ
[3][ದಡಸಿಯೆ ಬೇ][3]ರ್ಕಿತ್ತೆರಡುಂ
ಕೆಡೆದವು ಪಡೆದವು ಜನಕ್ಕೆ ಪಿರಿದುಮುಗುರ್ವಂ ೧೪

1 ಲೊಂ 2 ಳು 3 ಬಿ

ವ|| ಆ ಮಹಾವ್ಯಂತರದೇವತೆಯನಂತು ಗೆಲ್ದುದಕ್ಕೆ ಗೋಪಾಲಜನಂ ಬೆಕ್ಕಸಮಾಗಿ ನೋಡುತ್ತಿರೆಯಿರೆ ತಾಯ್ ಮಗುೞ್ದು ಬರುತ್ತಂ ಕಂಡಿದೇನಬ್ಬಾ ಕೂಸಲ್ತು ರಕ್ಕಸನೆಂದೊಡಗೊಂಡು ಬಂದು ಮನೆಯೊಳಿರಿಸೆ ಕೆಲವು ದಿವಸದಿಂ ನೆರಮನೆ ಮುಮ್ಮನೆಯಾಕೆಗಳ್ ಯಶೋದೆಯಲ್ಲಿಗೆವಂದು ನಿನ್ನ ಮಗನ ಗೊಡ್ಡಮಂ ಕೇಳೆಂದಿಂತೆಂದರ್

ಕಂ|| ಎಮ್ಮೆಮ್ಮ ಮಕ್ಕಳಂ ನಿಸ
ದಸ್ರೋಡೆ ಕನಲ್ದು ಮುಸಗಿ ಪಱಿವೆಯಂ ಪೊ
ಕ್ಕೆಮ್ಮುಮನೆಮ್ಮಣ್ಮಂದಿರು
ಮುಮ್ಮಳಿಸಿಂ ಕೆಡೆಯೆ ನೂಂಕಿ ತೊತ್ತೞಿದುೞಿವೊಂ ೧೫

ವ|| ಇದೇನಾ[1][ಳ][1]ನೆಯುಳ್ಳರಾನೆಯಂ ಕಟ್ಟಿಯಾಳರೆ ನಿಮ್ಮ ಮ[2][ಗ][2]ನುರ್ವಿಸಂ ನಾಡಿಂ ಪೊಱಗೆಯೆಂದೊಡಾಕೆಯಿಂತೆಂದಳ್

ಕಂ|| ಓವಿದನಂದಮನಱಿಯಿರೆ
ದೇವತೆಗಳ್ ಕೊಲಲು ಬಂದೊಡಱಿದಡಸಿ ತಗು
ಳ್ದೇವದವಂ ನಿಗ್ರಹಿಸಿದೊ
ಡೋವೋವೆಂದೊಳಱಿ ಪೆಳಱಿ ಪೋದವು ಭಯದಿಂ ೧೬

ಇವನಾರಮೂರ್ತಿಯೊಳ್ ಸಂ
ಭವಿಸಿದನೆಂದಱಿಯೆನಬ್ಬ ಬಳೆದೊಡಿವಂಗೀ
ಭುವನಮುಹಿಭುವನಮುಮರರ
ಭುವನಂ ಮುಳಿಸಿಂಗೆ ನೆಱೆಯವೆಂಬಂತಕ್ಕುಂ ೧೭

ವ|| ಏಪೆನೆನಗೆ ಬಸವಲ್ಲಂ ಕೂಸೆಂದು ಸೈರಿಸುವೊಡಂ ಸೈರಿಸದೊ........ ಪೋದಬೞಿಯಂ ಕೆಲದಿವಸದಿಂದೊಂದೆಡೆಯೊಳ್ ಕೂಸುಗಳೊಡನಾಡುತ್ತಿರ್ದಲ್ಲಿ ತಾಳಜಂಘಿನಿಯೆಂಬ ದೇವತೆ ತಾೞಮರನಾಗಿರ್ದು ಕೊಡದಿಂ ಪಿರಿಯವು ಪಣ್ಗಳೊಳ್ ಸಿಡಿಲ್ವೊಡೆದಂತೆ ಫಣಿಲ್ಫಣಿಲೆಂದೆಡೆವಿಡದೆ ತಲೆಯನೊಡೆವಿನಂ ಬೀೞ್ತಿರೆ ಬಾಳಕಂ

ಕಂ|| ಕಡುಮುಳಿದು ಬೀೞ್ವ ಪಣ್ಗಳ
ನೊಡೆಯೆ ಕರಾಗ್ರದೊಳೆ ಪೊಡೆಯೆ ಮಾಣವಗುರ್ವ್ಗಂ
ಪಡೆಯೆ ಪಿಡಿದೊತ್ತಿದಾಗಳ್
ಕೆಡೆಯೆ ಮರಂ ಬೆರ್ಚಿ ತಾಳಜಂಘಿನಿ ಪೋದಳ್ ೧೮

---

1 ಳ 2 ಗಂ

ವ|| ಅಂತು ಛಲಂಗೆಟ್ಟು ಬಾಯಂಬಿಟ್ಟು ಪತ್ತುವಿಟ್ಟು ಮಾಯುವಾಗಿ ಪೋಗೆ ಜನಕ್ಕೆ ವಿಸ್ಮಯಮಾಗೆ ಬಾಳನ ಸಹಸಂ ಕಾಳನ ಸಾಹಸಮಂತಗುರ್ವಾಗೆ ಮತ್ತಂ ಕೆಲವು ದಿವಸಕ್ಕೆ ಗಾರ್ದಭಿಯೆಂಬ ದೇವತೆ ಕತ್ತೆಯ ರೂಪಾಗಿ ಗಾಳಿಗೊಂಡಂತೆ ಮಸಗಿ ಬಾಯಂ ತೆಱೆದು ಕೇಳ್ದಱಿರ್ದ ತೆಱನಂತೆ ಮಹಾರಭಸದಿಂ ಮೂಳುತ್ತಂ ಪರಿತರೆ ಜನಮೆಲ್ಲಂ ಬೆರ್ಚಿ ಬೆಗಡುಗೊಂಡಮೆ ಕೆಲದೊಳಂಗಡಗಿ ನೋಡೆ ಕುಮಾರಂ ಕಂಡದಕ್ಕಿದಿರಂ ನಡೆದು ಪೊಯ್ಯೆ ಪೆಪ್ಪಳಿಸುವುದಂ ಕಂಡು ತಪ್ಪಿಮೆಟ್ಟಿ ಮಗುೞ್ದು

ಶಾ|| ಪಿಂಗಾಲಂ ಪಿಡಿಪೆತ್ತಿಕೊಂಡಸಗಪೊಂಯ್ದೊಯ್ಯುತ್ತಮಿರ್ದಾಗಳಾ
ತಂಗಾ ದೇವತೆ ಬೆರ್ಚಿ ಪೋಗೆ ಪಲರುಂ ನೋಡುತ್ತಮಿರ್ದೆಂಬರೀ
ತಂಗೀ ಪ್ರಾಯದೊಳಿಂತುಟಾದುದು ಬಲಂ ತಾಂ ಜನ್ಮನಂ ಪೊರ್ದಿದಂ
ದೇಂ ಗಂಡರ್ ಪೆಜರಾಂಪರೆಂಬರೊಳರೇ ಭೂಲೋಕದೊಳ್ ನಾಕದೊಳ್ ೧೯

ವ|| ಅಂತಾ ಗಾರ್ದಭರೂಪಮಗ್ರದೇವತೆಯುಂ ಗೆಲ್ದೊಡೆ ತನ್ನ ತುಱುಗಜ್ಜದೊಳ್ ಪಾಸುರೇನು ಕತ್ತೆಯು ಕಾಲ್ಪಡಿವಸೆಂಬ ಮಾತಂದಿ[1][ದಮಿಷ್ಟ][1]ಮಾಗೆ ನಾಡೆಯುಂ ಪೋದೊಡೊಂದು ದಿವಸಂ ಕೇಶಿಯೆಂಬ ದೇವತೆ ದುಷ್ಟಾಶ್ವದ ರೂಪದಿಂ ಸುಂಗುನಂತೆ ಕೆಳರ್ದು ಕೆಕರುತ್ತಮಿರುತ್ತಪ್ಪುದನೊಂದೆಡೆ ವೀದಿಯೊಳ್ ಕುಮಾರಂ ಕಂಡು

ಕಂ|| ಎಡಗಯ್ಯೊಳುತ್ತರೋಷ್ಠದ
ಕಡೆಯಂ ಪಿಡಿದೊತ್ತಿ ಕಬ್ಬಮಂ ಬಲಗಯ್ಯೊಳ್
ಪಿಡಿದು ತೆಗೆದೊಂಗೆ ಪಕ್ಷಿಮ
ದೆಡೆವರೆಗಂ ಸೀಳ್ದುದೇಂ ಬಲಿಷ್ಠನೊ ಕೃಷ್ಣಂ ೨೦

ವ|| ಎಂದೆಲ್ಲಂ ಪೊಗೞ್ವಿನಂತು ಸೀಳ್ದೀಡಾಡಿದೊಡೆ ದೇವತೆ ಮಾಯಮಾಯ್ತು ಹರಿಯ ಸಾಹಸಮುಗುರ್ವಾಯ್ತು

ಕಂ|| ಅಂತರಿಭೂಪಾಳನ ಬೆಸ
ದಿಂ ತಡೆಯದೆ ಕೊಲಲು ಬಂದ ನೆಗೞ್ದಿರ್ದೇಟುಂ
ವ್ಯಂತರಮುಂ ತದ್ವಿಷಯಾ
ಭ್ಯಂತರಮುಂ ಸಾರಲೀಯದಂತಿರೆ ಕಳೆದಂ ೨೧

ವ|| ………………ಮೊಂದೆಡೆಗೆ ಮದಿರ್ದು ಮತ್ತೆ ವಿಜೃಂಭಿಸುವ ಬಗೆಗೆಟ್ಟು ಬಾಯಂಬಿಟ್ಟು ಸೋಲ್ತಂಕದಂತೆ ತಲೆಯಂ ಬಾಗಿ ಸಿಗ್ಗಾಗಿ ತನ್ನೊಳಿಂಗುಂ ಸಮ್ಮಂ ಸಾಧಿಸಿದಾಳ್ದಂಗೆರಡುಂ ಭವದೊಳುಪಕಾರಮುಂ ಮಾಡಲಾರ್ತೆನಿಲ್ಲಿನ್ನಾ ಪಗೆವನಂ ಪುಟ್ಟಿ

1 ದತ್ತ

ವಂದು ಕೊಲಲೆಂತುಮಾರ್ತೆವಿಲ್ಲಮಾಕಾಶಾಂತರದೊಳ್ ಗೆಂಟಾಗಿರ್ದು ಸಿಳಾವರುಷದಿ ನೊರ್ಮೆ ಘಾತಿಸಿ ನೋಟಿಸೆಂದುಮಿರ್ದರುವೊಂದಾಗಿ ಬಂದು ಜ್ಯೇಷ್ಠಮಾಸದೊಳೊಂದು ತ್ಪಾತವಾತಪ್ರಘಾತಮಾಗೆ ಮೊಟಿಗಂ ಮಿಂಚಂ ಸಿಡಿ[1][ಲಂ][1]ಜಿರಸು ಮಳೆ ಕೊಳ್ವಂತೆ ಮಸಗಿ

ಕಂ|| ಕಲ್ಲಮಳೆ ಕರೆಯೆ ಪು[2][ಗ][2]ಲಿಡೆ
ಯಿಲ್ಲವೆ ಕಡುನೊಂದು ಜೀವಧನ[3][ಮುಂ][3] ಜನಮುಂ
ತಲ್ಲಟದಿಂ ಕೋಳ್ಗುದಿಗೊ
ಳ್ಪಲ್ಲಿ ಕುಮಾರಂ ಭಯಸ್ಥರಾಗದಿ[4][ರೆಂ][4]ದಂ ೨೨

ವ|| ಎನುತ್ತಂ ಬೇಗಮಾ ತುಱುಪಟ್ಟಿಯ ಕೆಲದೊಳಿರ್ದ ಗೋವರ್ಧನಮೆಂಬೇಕಶಿಲೆಯ ಬೆಟ್ಟಕ್ಕೆ ಬಂದು

ಹರಿಣಿ||

ಭರದಿನೊಗೆದಂತಾಗಳ್ ಶೈಲಂ ಸಿಡಿಲ್ದಿರೆ ಪೊತ್ತು ಬಂ
ದಿರದೆ ಮೊಣಕಾಲಿಕ್ಕಿ[5][ರ್ದಿನ್ನೊ][5]ತ್ತಿ ಮೂರ್ಧದೆ ಬೇಗದಿಂ
ಕರಮನಡಿಯೊಳ್ ನೂಂಕುತ್ತಾರ್ದೆತ್ತಿಕೊಂಡುರದಿಂದಮಾಂ
ತುರದ ಜಿಸೆಯಿಂ ಮುಯ್ವಿಂಗಾ ಮುಯ್ವಿನಿಂ ತಲೆಗೆತ್ತಿದಂ ೨೩

ಕಂ|| ಎತ್ತುತ್ತೆ ನಿಂದು ಕರೆಕರೆ
ದತ್ತಿತ್ತ ಕೊ ಮನುಜ ಗೋಕುಲಂಗಳುಮಂ ತ
ನ್ನತ್ತಣ್ಗೆ ಬರಿಸಿ ಹರಿ ತಾಂ
ಪೊತ್ತಿರ್ದಂ ಗಿರಿಯನೇೞುದಿವಸಂಬರೆಗಂ ೨೪

ವ|| ಅಂತು ದಿನಸಪ್ತಕದಿಂ ಬೞಯಮಾ ದೇವತೆಗಳೀತನನೆಂತುಮಸಾಧ್ಯನು ಮಜಾ[6][ತ][6]ನುಮೆಂದು ಬೇಸತ್ತು ಪತ್ತುವಿಟ್ಟುಪೋದಡಲ್ಲಿರ್ದ ಮನುಷ್ಯ ಗೋಕುಲಂಗಳುಮಂ ತೊಲಗಿಸಿ ಮೆಲ್ಲನಾ ಗಿರಿಯನಲ್ಲಿೞಪಿ ಬಂದಿರೆ ಗೋವರ್ಧ[ನ]ನೆಂಬ ಪೆಸರೆಸೆಯೆ ದೇವೋಪಸರ್ಗವಿಜಯಮಂ ಕೇಳ್ದು ಶತ್ರುಗಳತ್ತ ಜಿಸೆಯೆ ನಂದಗೋವನ ಮಗನೊರ್ವನತಿ ಬಲಗರ್ವಿತನುಮಚಿಂತ್ಯ ಸಾಹಸಾನ್ವಿತನುಮೆಂಬೀ ಮಾತು ಪರೆಯೆ ದೇವಕಿ ಕೇಳ್ದತ್ಯಂತ ಹರ್ಷಚಿತ್ತೆಯಾಗಿ ಮಗನಂ ನೋಟ್ಪ ಮೋಹಂ ತಿಣ್ಣಮಾಗೆ ಸೈರಿಸದೆ ವಸುದೇವ ಸ್ವಾಮಿಗಂ ಬಲದೇವಕುಮಾರಂಗಮುಱಪಿದೊಡವರುಮೊಂದುಪಾಯದೊಳ್ ನೋಟ್ಪ ಮೆಂದೊಡಂಬಟ್ಟಿರ್ದು ಗೋಮುಖಿಯೆಂಬ ನೋಂಪಿಯಂ ದೇವಕಿ ನೋನಲ್ ಪೋದ

1 ಲುಂ 2 ರ 3 ಮಂ 4 ರಿಮೆಂ 5 ರ್ದನೊ 6 ದ್ಯ

ಪಳಿಂಬ ಮಾತು ಪರಿಂಪಿ ನುಡಿದು ತೊಟ್ಟನೊಂದು ದಿವಸಂ ವಸುದೇವನುಂ ದೇವಕಿಯುಂ ಬಳಭದ್ರನುಂ ತನ್ನ ನಿಜತಂತ್ರಮನೊಡಗೊಂಡು ತುಱುಪಟ್ಟಿಗೆವಂದು ಕೃಷ್ಣಯಕ್ಷಿಯು ಮುಂದಿರ್ದ ನಂದಗೋಪನುಂ ಬರಿಸಿ ತಾಮುಂ ಗೋಮುಖಿಯೆಂಬ ನೋಂಪಿಗೆ ಬಂದುದ ನಱಿಪಿ ನಾಳೆ ನೀಮೆಲ್ಲಂ ನೋಂಪಿಗೆ ಬಪ್ಪುದಿಲ್ಲಿರ್ದಱಂಬುಗಱವುದರ್ಶಿಸುವುದೆಂದು ಪೇೞ್ದಾತನುಂ ಪೋಗವೇೞ್ದಂದಿನ ದಿವಸಮಾ ದೇವತಾಗೃಹದೊಳತಿಶಯದಿಂ ಜಾಗರ ಮಿರ್ದು ಬೈಗಿರುಳು ನೋಂಪಿಯ ವಿಭೂತಿಯುಂ ಮಾಡಲುಮಾತ್ಮಜನಂ ನೋಡಲು ಮೆಂದಿರ್ಪನಮಿತ್ತ ವಿದ್ಯಾಧರಶ್ರೇಣಿಯೊಳ್ ಮುನ್ನಿನಂಗಾರನೆಂಬ ಖೇಚರಂ ತನಗೆಂದಿರ್ದ ಕೂಸಂ ವಸುದೇವಂಗೆ ಕೊಟ್ಟಬಲೊಳಮಾಕೆಯೊಳ್ ಕಾದಿ ನೋಲ್ತು ಬನ್ನದೊಳಂ

ಕಂ|| ಅಂಗಾರದ ಕಲಿತನಮುಮ
ನಂಗಾರಕ ಚಕ್ರಚಾರದುಗ್ರತೆಯುಮನಾ
ಶ್ವಂಗಾರವೇಗನಂಗಾ
ರಂಗಾರಕ ಸದೃಶಮಾದನಂದಿಂಬಳಿಯಂ ೨೫

ವ|| ಅಂತಾಗಿರ್ದೊಡೊರ್ವಂ ನೈಮಿತ್ತಿಕಂ ನಿನಗೊರ್ವಂ ಪಗೆವನೊಳನವಾರಿಂ ದೊಡೆ ವಸುದೇವನ ಮಗಂ ಬಲಗರ್ವಿತನೆಂದೊಡಾಗಳೆ ತನ್ನ ನೆಗೞ್ದೆಯುಂ[2][ಮುಷ್ಟಿನಂ ಜನದಿಂ][2] ಪೋಗಿ ವಸುದೇವನ ಮಗಂ ತುಱುಪಟ್ಟಿಯೊಳ್ ಬೆಳೆಯುತ್ತಿರ್ದನಾತನಂ ನೀನಾವುದಾನುಮುಪಾಯದೊಳಂ ಕೊಲ್ಲೆಂದಟ್ಟುವುದುಮಾತಂ ಮನೋವೇಗದಿಂದಂ ಬಂದಾ ತುಱುಪಟ್ಟಿಯೊಳ್ ವೃಷಭರೂಪದಿಂ ಕೆಂಗಲ್ಮುಸಗಿ ಪೋಪ ಬರ್ಪ ಜನ ಮನಟ್ಟಿಕೊಲುತ್ತುಮಿರೆ ಪೊಱಬೆಳ್ಳಿಮಲ್ಲಿಕಲ್ಲೋಳಮಾಗಿ ಕುಮಾರನಲ್ಲಿಗೆ ಪರಿದೆಯ್ದೆ ಪೇೞೆ

ಕಂ|| [1][ಚ][1]ಲದಿಂದಿದಿರಿದಿರು ಪೊ
ಕ್ಕಲಘುಭುಜಂ ಕೋಡನವಸಿ ಪಿಡಿಪಿದಗಯ್ಯೊಳ್
ಬಲಗರ್ವದಿಂ ಮುಸುಂಬಂ
ಬಲಗಯ್ಯೊಳ್ ಪಿಡಿದುಕೊಂಡು ಗೋಣ್ಮುಱುದಿದೊಂ ೨೬

ಪಿಡಿದಂತು ಮುರಿಯೆ ಗೋಣಡಿ
ದುಡಿಮುಡಿಯಾಗಳ್ಕಿ ನಡುಗಿ ತಡದಡಿಸಿ ಪೊಡ
ರ್ಪುಡುಗಿ ಕಡುಭಯದೆ ಗೋಳ್ಗರೆ
ದಡಿಮೊದಲೊಳ್ ಕೆಡೆದು ಮಾಯಮಾಯ್ತ್ತು ವೃಷಭಂ ೨೭

ವ|| ಆ ಮಹಾಮಾಯಾವೃಷಭನಂತೆ ಗೆಲ್ದ ಗೆಲ್ದೆಲ್ಲಿಗಂ ಪರೆಯೆ

1 ಚಲಚ 2 ಮುಂಷ್ಟಿನಂಜನಗಿ

ನಂದಗೋಪಂ ಪರಿತಂದು ರಾಗದಿಂ ಮಗನನಪ್ಪಿಕೊಂಡು ಮನೆಗೆವಂದು ಬನ್ನಿಮರಸರ ನೋಂಪಿಯಂ ನೋೞ್ಪೆಮೆಂದು ಸಮಸ್ತಮುಳ್ಳ ತುಱುವುಂ ಕಱುವುಂ ಗೋಪಾಳಕರುಂ ಸ್ತ್ರೀಜನಮುಂ ತಾನುಂ ತನ್ನ ಪೆಂಡತಿಯುಂ ಕುಮಾರಸಹಿತಮಾ ದೇವತೆಯ ಮನೆಗೆವಂದು

ಕಂ॥ ಗೋಪಾಳಕಜನತತಿಯುಂ
ಗೋಪವಧೂಜನಮುಮವರ ನಾಯಕರುಂ ತ
[1][ದ್ರೂ][1]ಪಾಂಕನೋಪವಾಸ
ವ್ಯಾಪಾರದೊಳೊಸೆದಜಂಬುಗೞಿಂದರ್ಚಿಸಿದರ್ ೨೮

ವ॥ ಅರ್ಚಿಸಿದ ಬೞಿಯಂ ದೇವಕಿ ಮಂಗಳ ಪ್ರಸಾದನಾಳಂಕೃತೆಯಾಗಿ ದೇವತಾ ಗೃಹದ ಮುಂದೆ ಮಹಾಸ್ಥಾಯಿಕೆಯೊಳಿರ್ದ ವಸುದೇವಸ್ವಾಮಿಯ ಕೆಲದೊಳ್ ಕುಳ್ಳಿರ್ದ ನಂದಗೋಪನಂ ಯಶೋದೆ[2][ಯುಂ][2] ಕೃಷ್ಣಕುಮಾರನಂ ತಮ್ಮ ಮುಂದೆ ಕುಳ್ಳಿರ ವೇೞ್ದು ನೋಂಪಿಯೊಳ್ ಗೋಪಾಲನಾಯಕರಂ ಮನ್ನಿಸಲ್ವೇೞ್ಕುಮೆಂದಿರ್ದವರ್ಗೆ ಮುಡಲುಂ ತುಡಲುಂ ಕೊಟ್ಟು ಬೞಿಯಮಱಿಯದಂತೀ ಕೂಸಾಪ್ರೊಸೆಂದೊಡೆಮ್ಮ ಮಗನೆನೆ ನಿಮ್ಮ ಮುದ್ದುಗಣ್ಗಳನಿಂತು ಮನ್ನಿಸುವಿರಂತೀತನುಮಂ ಮನ್ನಿಸುವುದೆಂದು ಅಮೂಲ್ಯಮಪ್ಪಾಭರಣವಸ್ತ್ರಂಗಳಂ ತುಡಿಸಿಯುಮುಡಿಸಿಯುಂ ದಿವ್ಯಪುಷ್ಪಂಗಳಂ ತುಱುಂಬಸಿಕ್ಕಿ ನೋಡಿ ಸ್ಪರಿಸಿದ ಕುಮಾರನಂ ತನ್ನ ತೊಡೆಯಮೇಲಿರಿಸಿಯಕ್ಕಱಿನೊಳ್ ದೇವಕಿಯುಂ

ಕಂ॥ ಮೊಲೆ ತೊರೆಯೆ ಸುರಿಯೆ ಪಾಲೊ[3][ಳ್
ಪೊ][3]ಲೆಗಳ ಪೋಲಿಸಿದ ದುಕೂಲಮದು ನಾಂದೊಡದಂ
ಬಲದೇವನಱಿದು ಕಜ್ಜದ
ಬಲಮೞಿದಂತೆಂದು ಮನದ ಬಗೆಯಿಂದಾಗಳ್ ೨೯

ಗೋಮುಖಿಯ ನೋಂತವರ್ಗಳ್
ತಾಮರ್ತಿಯೆ ಪಾಲೊಳಲ್ಲಿ ಮೀವುದು ಗಡಮೆಂ
ದಾ ಮಹಿನುತ ಬಲದೇವಂ
ಪ್ರೇಮದಿ ದೇವಕಿಯ ಮೇಲೆ ಪಾಲಂ ಸುರಿದಂ ೩೦

ವ॥ ದೇವಕಿಯ ಪುತ್ರಸಂಬಂಧಮಂ ಬಲದೇವಂ ಪ್ರಕಾಶ್ಯಮಾಗಲೀಯದಂತು ಕಾದು ಕುಮಾರನನಸಂಗೊಪ್ಪಿಸಿ ಪೊೞಲ್ಗೆ ವಂದಿರ್ದರಂತಾ ನಾಡೊಳಮಾ ದೇವರ ನೋಂಪಿಯಂ ಕೊಂಡಾಡುವುದುಮದಂ ನೋಂತವರ್ ಪಾಲೊಳ್ ಮೀವುದುಮಾಯ್ತನ್ನೆಗ

1 ದೂ 2 ಯುಂ 3 ಳುಮೆ

ಮತ್ತ ವಿಜಯಾರ್ಧಪರ್ವತದ ರಥನೂಪುರಚಕ್ರವಾಳಪುರಮನಾಳ್ವ ಸುಕೇತುವೆಂಬ ವಿದ್ಯಾಧರಂಗಂ ಸ್ವಯಂಪ್ರ[1][ಭೆಯಿಂ][1]ಬರಸಿಗಂ ಪುಟ್ಟಿದಂ

ಚಂ|| ಅತಿಶಯಮಪ್ಪ ರೂಪು ಕಡುಗಾಡಿ ಪವಣ್ಣಿಲೆ ತೀವದಿರ್ದುಮೊಂ
ದತಿಸುತ ಯನ್ನಸಂ ತನಗದಿಟ್ಟಳಮೊಪ್ಪಮಸೀಯುತಿರ್ದಳಂ
ಕೃತ ಮು[2][ಹಸೀ][2]ಯ ಹಾಸರಸಭಾವವಿಳಾಸ ಸುವಿಭ್ರಮೋದಯಾ
ಸ್ಥಿತೆ ಗುಣಧಾಮೆಯುಂ ಸದಭಿರಾಮೆಯುಮುತ್ತಮ ಸತ್ಯಭಾಮೆಯುಂ ೩೧

ವ|| ಒಂದೆವಸಮವರಯ್ಯಂ ಮಗಳ ಮೊಗಮಂ ನೋಡಿ ಪೇಱುಮಿವಾಕೆಗೆಂತಪ್ಪ ಭರ್ತಾರನಕ್ಕುಮೆಂದು ನೈಮಿತ್ತಕರಂ ಬೆಸಗೊಂಡಡವರಿಂತೆಂದರ್ ತ್ರಿಖಂಡಮಂಡಳಾಧಿಪತಿಯಪ್ಪ ಚಕ್ರವರ್ತಿಗಗ್ರಮಹಿಷಿಯಕ್ಕುಮೆಂದೊಡಂತಪ್ಪಾತನನೆಂತಱಿಯಲಕ್ಕುಮೆನೆ ನಿನ್ನ ಮನೆಯೊಳಿರ್ದ ದಿವ್ಯಮಪ್ಪ ನಾಗಶಯ್ಯೆಯೊಳ್ ಪಟ್ಟಿರ್ದಡಂ ಶಾರ್ಙ್ಗವೆಂಬ ಬಿಲ್ಲನೇಱಿಸಿದೊಡಮುಯ್ಯಾಯಶಂಖಮನೊತ್ತಿದೊಡಮಱಿಯಲಕ್ಕುಮೆಂದೊಡಂತಪ್ಪೊ[3][ಡೀ][3]ಗಳ್ ಭರತಕ್ಷೇತ್ರದೊಳ್ ಪ್ರಚಂಡನಾಗಿರ್ದೊಂ ಕಂಸನಾತನಲ್ಲಿಗಟ್ಟುವಮೆಂದು ಸಮಕಟ್ಟಿ ಪೆರ್ಗಡೆಗಳ ಕಯ್ಯೊಳವನಟ್ಟಿದೊಡೆ ಬಂದು ಮಧುರೆಯೊಳಿರ್ದ ಕಂಸಂಗೆ ತೋಱಿ ಮನೆವಾರ್ತೆಯುಂ ಪೇೞ್ದುದೆನಗಸಾಧ್ಯಂ ಪೆಱನೊರ್ವಂ ಸಾಧ್ಯಪುರುಷನು ಳ್ಳೊಡಾರಯ್ವೆನೆಂದು ಕೈಕೊಂಡಿರಿಸಿ ನಾಡೊಳೆಲ್ಲಂ ಗೋಸನೆವಿಡಿಸಿದೊಡಾಗೋಸನೆ ತುೞಿಪಟ್ಟಿಯುತ್ತ ಬಂದಲ್ಲಿ ಕೃಷ್ಣಕುಮಾರಂ ಕೇಳ್ದಲ್ಲಿಗೆಯ್ದೆ ಪೋಗೆ ಗೋಸನೆಯೊಡನಂದ ಪೆರ್ಗಡೆಯುಮೇತಱ ಗೋಸನೆಯೆನೆ ದೃಷ್ಟಿವಿಷಮಪ್ಪ ನಾಗಶಯ್ಯೆಯನೇಱಿ ಶಾರ್ಙ್ಗಧನುವನೇಱಿಸಿ [4][ಪಾಂ][4]ಚಜನ್ಯಮೆಂಬಯ್ಯಾಯಶಂಖಮನೊತ್ತಿದೊಂಗೆ ವಿದ್ಯಾಧರರಾಜಂ ತನ್ನ ಮಗಳಂ ಕುಡುವನಂತಪ್ಪನನಾರಯ್ವ ಗೋಸನೆಯೆನೆ

ಕಂ|| ಅದನೇಱುವೆನದನೇಱಿಪೆ
ನದನೊತ್ತುವೆನೆನಗೆ ದಿವ್ಯವಸ್ತುಗಳಂ ಮು
ಟ್ಟಿದೆನಿದನಿಂತೆನ್ನಂಬಿ[5][ನೊ
ಳಂ][5]ದಭ್ಯುದಿತ ಬಲಂ ಪಿಡಿದೆನೆಂ[6][ದ][6]ನಾ ಗೋಸನೆಯುಂ ೩೨

ವ|| ಎನೆ ಗೋಸನೆಯಲುಂ ಪೆರ್ಚ್ಚಿ ನುಡಿಯಲಕ್ಕುಂ ಪೊಣರ್ದಲ್ಲಿಗೆವಪ್ಪುದು ವಾರ್ಪಂ ತೋರ್ಪುದುಮುರಿದೆಂದೊಡೆ ನಿಮ್ಮಡಿ ದಿವ್ಯಂಗಳನರ್ಚನಕ್ರಿಯಾಸಹಿತಮಿರಿಸಿ ನಾಳೆ ಬಂದಪ್ಪೆನೆಂದೊಡಾತಂ ಮಗುೞ್ದು ಪೋಗಿ ಕಂಸನಂ ಕಂಡು ನಂದಗೋವನ ಮಗಂ ಗೋಸನೆಯುಂ ಪಿಡಿದನೀಗಳಿವಂ ಪಿಡಿವುದುಮುಮಂಗಾಂತಮ್ಮಡಿಪುದುಮೇವಿರಿದು

1 ಭಮೆಂ 2 ಹಾನಿ 3 ದಿ 4 ಪಂ 5 ಮೊಂ 6 ದಾ

ಕಂ|| ತೊಟ್ಟಿಲೊಳಿರ್ದಂದದಿನಂ
ತೊಟ್ಟಂಬಱಿಗೊಂಡು ಕೊಲಲು ಬಂದಸುರರ್ ಬಾ
ಯ್ವಿಟ್ಟು ಬಲ[ಂ]ಗೆಟ್ಟು ಚಲಂ
ಗೆಟ್ಟು[ಂ ಸಲೆ] ಮುಟ್ಟುಗೆಟ್ಟು ಪೋದರ್ ಪಲಬರ್ ೩೩

ಈಗಳವನೀಧರಿತ್ರಿಯು
ಮಾಗಸಮುಮನೊಂದನೊಂದು ಕಯ್ಯೊಳ್ ಪಿಡಿದಿಂ
ಬಾಗಿರೆ ತಾಳಂಬಾರಿಸು
ವಾಗಳ್ ಮಾರ್ಕೊಳ್ವರಿಲ್ಲ ಮೞಿಯುಂ ಜಗದೊಳ್ ೩೪

ವ|| ಇಂತಳವುಮವನ ದೋರ್ವಳಮುಮನರಸನಱಿಯಂ ನೀಮೋಕಱಿಯಿರೆ ಪೇೞಿಮೆಂದು ಕೆಲದೊಳಿರ್ದವರಂ ಸುಟ್ಟಿ ನುಡಿದೊಡವರಿಂತೆಂಬರ್

ಕಂ|| ಅವನ ಜವನಳವಿಯುಳವಿಯೆ
ಯುವರುಪರಱಿ[1][ದಪರಿಸ][1]ದಿರಿಪೆಂದುಂ ತಾನೇಂ
ಬವ[2][ರದಿ][2] ಮುಳಿದೊಡೆ ಮೂಱುಂ
ಭುವನಂಗಳನೊಂದೆ ಕೊಳ್ಳಿಯೊಳ್ ಸುಡಲಾರ್ಪಂ ೩೫

ವ|| ಎನೆ ಕಂಸನವೆಲ್ಲಮಂ ಕೇಳ್ದುಮೆಂದು ನಿಮ್ಮ ತಮ್ಮ ಮಾತೆಲ್ಲಮನವನೊಳ್ ಕಂಡು ನಂಬಲಕ್ಕುಮನ್ನೆಗಮಿೀ ಪೂಣ್ಕೆಯಂ ನೋೞ್ಪೆನೆಂದು ಮನದೊಳ್ ನೊಂದು ನೊಂದುದನಾರ್ಗಮಱಿಯಲಾಗದಂತು ಪೆಱಪೆಱದನೆ ನುಡಿಯುತ್ತುಮಿರ್ದು ದಿವ್ಯಪ್ರತಿಪಾಳಕರುಂ ನೀವಾದಿತ್ಯವಸ್ತುಗಳನಧಿವಾಸಿಸಿ ದೇವತಾರ್ಚನಕ್ರಿಯೆಯಿಸಿರಿಸಿಮೆಂದು ಮಱು ದಿವಸಂ ಕಂಸಂ ತನ್ನ ಮಾಡದ ಮುಂದಣ ಪಿರಿಯ ಬಯಲೊಳ್ ಪಲವುಮರಸುಗಳ್ವೆರಸು ತಾಂ ಬಂದು ಮಹಾಸ್ಥಾಯಿಕೆಯ ನಡುವೆ ಶುಚಿರ್ಭೂತನಾಗಿರ್ದಲ್ಲಿ ನಾಗಶಯ್ಯೆಯುಮಂ ಶಾರ್ಙ್ಗಾಯುಧಮುಮನುಯ್ವಾಯಶಂಖಮುಮಂ ತರಿಸಿ ಬರಪಂ ಪಾರುತ್ತಿರ್ಪಿನಂ ಹರಿತ[3][ನ್ನೊ][3]ಡನಾಡಿಗಳಪ್ಪ ಗೋಪಕುಮಾರರನೊಡಗೊಂಡು ಪೊೞಲ್ಗೆ ವಂದವಮನೆಯುಂ ಪೊಕ್ಕಾ ಸಭೆ ನಡುವೆ ನಿಂದು ನೋಡಿಂ ನೋಡಿಮೆಂದು ನಾಗಶಯ್ಯೆಯು ಸಾರೆಬರೆ ಮುನ್ನಂ ಪೊಗೆಯುಂ ಕೆಂಡಮುಮನುಗುಳುತ್ತುಂ ಭಯಂಕರಾಕಾರವಾಗಿರ್ದುದುಂ ಪೊರ್ದೆ ಶಾಂತಾಗಾರದಿನಿರೆ ಹಾಸಿನ ಮೇಗೆ ನಿಮಿರ್ದು ಕೊಂಕಿದ ಮಲ್ಲಿಗೆಯ ಬಾಸಿಗದ ಮೇಗೆ ಮೆಯ್ಯನಿಕ್ಕುವಂತೆ ಪಟ್ಟಿರ್ದಾಗಳ್

---

1 ವರಿನ್ನ 2 ರವೊದಿ 3 ನ್ನನೊ

ಕಂ॥ ಕ'[ಟ್ಟಾ][1]ತ್ತನದುರ್ವಿಸದಿಂ
ತೊಟ್ಟನೆ ಕೊಳೆ ತನ್ನ ಮೇಗೆ ಪಟ್ಟಿರ್ದಾಗಳ್
ದಿಟ್ಟ ವಿಷಮಪ್ಪ ಫಣಿಪತಿ
ಮಿಟ್ಟನೆ ಮಿಡುಕದೆ ಬೞಲ್ದು ಪಟ್ಟಿದು ಭಯದಿಂ ೩೬

ವ॥ ಆ ಮಹಾನಾಗನ ಮೇಲೆ ಪಟ್ಟಿರ್ದೆಡಗಯ್ಯೊಳ್ ಶಾರ್ಙ್ಗಾಯುಧಮನೊಂದುಂಗುಷ್ಠದೊಳೆತ್ತಿ ಕೊಂಡೇಱಿ ಬಲದ ಕಯ್ಯೊಳಮ್ಮಾಯ ಶಂಖಮುಂ ಕೊಂಡೊತ್ತಿದಾಗಳ್

ಕಂ॥ ನೆರೆದ ಜನಮುರುಳೆ ಬಾಯ್ವಿಡೆ
ಪುರದ ಜನಂ ಬೆರ್ಚೆ ನಡುಗೆ ಜನಪದದ ಜನಂ
ಸುರ ನರ ವಿದ್ಯಾಧರ ಜನ
[2][ನಿರದೆಯದಂ][2] ಕೇಳ್ದು ಬೆಕ್ಕಸಂಬಡೆ ಭಯದಿಂ ೩೭

ವ॥ ಆ ಮಹಾನಾಗನ ಮೇಗೆ ಪಟ್ಟಿರ್ದಾ ಶಾರ್ಙ್ಗಾಯುಧಮನೇಱಿಸಿಯಾ ಶಂಖಮುಂ ಪೂರಿಸಿದ ಸ್ಫುರಕ್ಕೆ ಕೃಷ್ಣನೆಂತಿರ್ದನೆಂದಡೆ

ಚಂ॥ ಹರಿ ಕರಿದಪ್ಪುದೊಂದು ಮುಗಿಲಂತಿರೆ ಸರ್ಪಫಣಾಮಣಿಪ್ರಭಾ
ಸುರರುಚಿ ಮಿಂಚಿನಂತಿರೆ ಸುಶಾರ್ಙ್ಗಮಹಾಯುಧಮಿಂದ್ರಚಾಪದಂ
ತಿರೆ ಮಹನೀಯ ಶಂಖರವಮಭ್ರಮಹಾರವದಂತಿರಿಲ್ಲಿಗಂ
ಪಲಿವಿರೆ ಶೋಭಿಸಿತ್ತು ಪೊಸಗಾರ್ಗಣೆಯಾದುದು ತತ್ಸಭಾಜನಂ ೩೮

ವ॥ ಅಂತಲ್ಲಿಂದಮೆರ್ದು ನಿಂದಿಂತಪ್ಪುದೆಂದು ನಾರಾಯಣಂ ಗೋಪಕುಮಾರರ್ ಸಹಿತಂ ತುಱುಪಟ್ಟಿಗೆಪೋದನಿತ್ತ ಕಂಸ[ಂ] ನೆಟ್ಟನೆ ತನ್ನ ಪಗೆವನಪ್ಪನೆಂದೇವಂಬ್ಸಿ ಜೀಗ ಮಲ್ಲಿಂದಮೆರ್ದಪೋಗಿ ಕೊಲ್ಲುಪಾಯಂಗಳನೆ ಬಗೆಯುತ್ತಿರ್ದೊಂದು ದಿವಸಂ ಕಾಳ ಮಹಾನಾಗ ಸಂರಕ್ಷಿತಮಾಗಿ ಕಾಳಿಂದಿಯ ಮಡುವಿನ ನಡುವಣ ಶತಪತ್ರಪುಷ್ಪಮನಟ್ಟುಗೆಂದು ನಂದಗೋಪಂಗೋಲೆಯನಟ್ಟಿಯಾತನಾ ಬೆಸಂ ತನಗಸಾಧ್ಯಮಪ್ಪುದಱಿಂ ಮಲ್ಕಲಂ ಮಱುಗಿ ತುಱುಪಟ್ಟಿಯ ವೃದ್ಧಗೋಪರಂ ಬರಿಸಿಯೇಗೆಯ್ವಮಾ ಪೂವನಟ್ಟುಗೆಂದು ಕಂಸಂ ಬೆಸಸಿದನಾ ಪೂವಂ ಕಾಳಿಂದಿಯ ಮಹಾನಾಗಂ ಕಾದಿರ್ದನಾ ಪಾವಿನ ಕಯ್ಯೊಳ್ ಸಾವು ತಾವಾಗಳಸಂ ಕೊಲ್ವನೆಂತುಂ ಬಾೞಿಲ್ಲೆಂದು ಸಂಕಟಂಬಡುವುದುಮಂ ಬಾಯಂ ಬಿಡುವುದುಮಂ ಕುಮಾರಂ ಕಂಡು ನಿಮಗೆನ್ನಂತಪ್ಪ ಮಗನಂ ಪಡೆದು ನಡಪುತ್ತಿರಲಾವ ಭಯಮುಮಾಗದಂಜದಿರಿಮದನಾನೆ ತಿರ್ದಪೆನೆಂದು ಬಾರಿಸೆಬಾರಿಸೆ ಪೋಗಿ ಗೋಪಾಳ

1 ಟ್ಟ 2 ......

ಜನಮೆಲ್ಲಂ ನೆರೆದು ನೋಡೆ ಮಡುವಂ ಪಾಯ್ದಾಸಿಪೋಗಿ ತಾವರೆಯನೆಯ್ದೆಪೋಗಿ ಮುನ್ನಂ ಫಣಿಪತಿಯುಂ ಕೊಂದಲ್ಲದೆ ಪೂವಂ ಕೊಳ್ಳೆನೆಂದು ಪನ್ನಗೇಂದ[1][ನಂ][1] ಬಳಸಿ ಯುಮುಱಿಸುವಾಗಳ್

ಕಂ|| ಕರಿದು ಮಡು ಕರಿದು ಫಣಿಪತಿ
ಕರಿದು ಕರಂ ಹರಿಯ ದೇಹಮುದಱಿಂದೆಱೆಯ
ಲ್ಕರಿ[2][ದು][2]ರಗನ ಸಾಹಸಮಿದು
ಪರಿಯುಮುವತ್ತಿ ತೊಱತಿಯ ತೆರೆಯಿಂ[3][ತೆಂತಾ][3]ಗಳ್ ೩೯

ಹರಿಯುಂ ಭ್ರಾಂತಿಸಿ ನೋೞ್ಪ
ಗ್ಗರಿಯುಂ ಪೊಗೆಯುಂ ಸಿಡಿಲ್ವ ಕೆಂಡಮುಮುಗುಳ್ವಿ
ತ್ತಿರವಂ ಫಣಾಮಣಿಪ್ರಭೆ
ಪರೆದಿರೆ ಕಂಡಾ ಮಹೋಗ್ರತರ ವಿಷಧರನಂ ೪೦

ಕಂಡು ಮುಳಿದೆಯ್ದೆ ಬೇಗಂ
ಕೆಂಡದವೊಲ್ ಪೊಡೆಯೆ ಮಾಣಿಕಂ ಕೆದಱುವಿನಂ
ಚಂಡಭುಜಂ ಪೊಯ್ದೊಡೆ ನೊಂ
ದಂಡಜಪತಿ ಬಿರ್ದು ಪೊರಳುತಿರ್ದರೆ ಬೇಗಂ ೪೧

ಪಿಡಿದು ತೆಗೆದೆತ್ತಿ ಬೀಸು
ತ್ತಡಸಿ ತಗುಳ್ದಱಿಯ ಮೇಲೆ ನೀಲಾಂಬರಮುಂ
ಪಿಡಿದೊಗೆವಸಗನ ತೆಱದಿಂ
ಪೊಸೆದಂ ವಿಷಧಾರಿ ಸೊಪ್ಪುಸೊವಡಪ್ಪಿನೆಗಂ ೪೨

ವ|| ಆ ಕುಳಿಕಾಹಿಯನಂತು ಕೊಂದು ನೆಗೆಗೇಡಾಡಿ ಶತಪತ್ರಕುಟ್ಮಲಂಗಳಂ ಕೊಯ್ದುಕೊಂಡು ಮಗುೞ್ದೀಸಿ ಪೊಱಮಟ್ಟುಬಂದು ನಂದಗೋಪಂಗೊಪ್ಪಿಸಿದೊಡಕ್ಕೆ ಮಿಮ್ಮೆಯ್ಯಂಗಕ್ಕುಮೆನ್ನ ತಲೆಯುಂ ಕಾವಡಂ ಪಿರಿದಪ್ಪ ಸಂತೋಷಮನೀವಡಂ ನೀನಲ್ಲದೆ ಪೆಱರಾರೆಂದೊಸೆದಾತನ ಕಯ್ಯೊಳ್ ಸತ್ತ ಪಾವನುಂ ಮಗನುಮಂ ಕೆಲ ಗೋಪಕುಮಾರರು ಮನೊಡಗೊಂಡು ಪೋಗಿ ಮಗನಂ ನೆಱತೊಂಪೆದೆಯೊಳಿರಿಸಿ ನಂದಗೋಪಂ ಪೋಗಿ ಕಂಸಂಗೆ ಸತ್ತ ಪಾವಂ ತೋಱಿ ಪೂವನೊಪ್ಪಿಸಿದೊಡೆ ಜೋದ್ಯಂಬಟ್ಟು ಬಾಯೊಳ್ ಕಯ್ಯನಿಟ್ಟು ನೋಱುವನೆಂತು ಕೊಂದೆ ಈ ಪೂವನೆಂತು ತಂದೆಯೆನೆ ತನ್ನ ಮಗನ

1 ದ 2 ದೆನೆನೆಗಳ್ದು 3 ದಾ

ಸಾಹಸಮಂ ಪೇೞ್ದು ಪೊಸಗೆವಡೆದು ಮಗುೞ್ದು ಬರುತ್ತಂ ಮಗನನೊಡಗೊಂಡು ಬಪ್ಪಾಗ ಳೊಂದೆಡೆಯ ವೀಥಿಯೊಳ್

ಕಂ॥ ಅಜಿತಂಜಯನೆಂಬ ಮಹಾ
ಗಜೇಂದ್ರಪ್ಪೆಡವನೆಯು ಮದಮೊಳ್ಕೊದವಿದ ಕಾಯ್ಪಿಂ
ಪ್ರಜನಿತ ಕೋಪಾನ್ವಿತನಾ
ದ ಜವಂ ಬರ್ಪಂತೆ ಬರ್ಪುದಂ ಕಂಡವರ್ಗಳ್ ೪೩

ವ॥ ಭಯಂಗೊಂಡೋಟಂಗೊಂಡೊಡೆ ಕೃಷ್ಣಕುಮಾರಂ ತೊಲಗದೆ ನಿಂದು ಸಿಂಹನಾದಂಗೆಯ್ದು ಡಾಸೆಗೆ ಮಡವೊಡೆದ ಸಾಹಸಮನಱಿದು ಹಸ್ತಪ್ರಹಾರಂ[1][ಗೆಯ್ದಿಡಾಂ][1]ತು ಪೋಕೆಡದ ಕೈಯೊಳ್ ಪೂರ್ವಕಾಯಮನೊತ್ತಿ ಬಲದ ಕೋಡಂ ಪಿಡಿಯಲ್ಕೆ

ಕಂ॥ ಭೋಃರೆಂದು ಸುರಿಯೆ ಕಣ್ಣೆ
ತ್ತರು ಭೋರ್‌ಭೋಃರೆಂದು ಸುರಿಯೆ ತೆಗೆ
ದಾ ರೌದ್ರೇಭದ ಕೋಡಂ
ಕಿಟ್ಟಿಕೊಂಡು ಮೋದಿದನಾಗಳ್ (?) ೪೪

ವ॥ ಆ ನೋವಿನೊಳ್ ಕರಿ ನೀಲಗಿರಿ ಕೆಡೆವಂತೆ ಕೆಡೆದತ್ತದ[ಂ] ಕಂಡು ನಂದ ಗೋಪಂ ಪರಿತಂದು ಪೊಲ್ಲಕೆಯ್ದಿಯುಂತೆಯಾಡುಮಂಗೆಱಿಯುಪಸಾದುದೆಂಬಂತೆ ನೆವ ಮಿಲ್ಲದೆ ಮುಳಿವವಸನಿದಂ ಕೇಳ್ದಡೇಕೆ ಸೈರಿಸುವ[ಂ]ಪಾಪಂ ಪೆತ್ತವರ್ ಜೀಲಿಯುಂ ಪೊಕ್ಕಂ ತಾಯ್ತೆಂದು ಮಗನನೊಡಗೊಂಡು ತುಱುಪಟ್ಟಿಗೆ ಪೋದನನ್ನೆಗಮಿತ್ತಲ್

ಕಂ॥ ಬಂದು ಕೆಲರ್ ಕಂಸಂಗಿಂ
ತೆಂದರ್ ನಿಮ್ಮಡಿಯ ನಚ್ಚುವಜಿತಂಜಯಮಂ
ನಂದನ ನಂದನನೀಗಳ್
ಕೊಂದು ಜಯಾನಂದನೋದಯಂ ಪೋದನವಂ ೪೫

ವ॥ ಎಂಬುದಂ ಕೇಳುತ್ತೆ ಕುತ್ತನೆತ್ತ ಮದಹಸ್ತಿಯಂತೆ ಮುನಿದಾ ಕುಮಾರ ನೆಂತುಂ ಮುಂತುಂ ಪಗೆವನಾವನೆಂದು ಮನದೊಳ್ ನಿಶ್ಚಯಿಸಿ ಕೆಲಸಱಿಯೆ ಕೊಲ್ವೆನ ಪ್ಪೊಡೆ ವಸುದೇವಂ ಮೊದಲಾಗಿ ಯಾದವರೆಲ್ಲಮೊಂದಾಗಿ ನಿಲ್ವರವಱಿನುಪಾಯಮೊಳ ಕೊಲ್ವೆನೆಂದು ಬಗೆದಿರ್ದು ಮಲ್ಲಯುದ್ಧವ್ಯಾಜದೊಳ್ ಸಾಧಿಸುವೆನೆಂದು ನಿಶ್ಚಯಿಸಿ ಚಾಣೂರನುಂ ಮುಷ್ಟಿಗನುಂ ವಜ್ರಜಂಘನುಂ ಕೇಸರಿಯುಮೆಂಬ ನಾಲ್ವರ್ ಮಲ್ಲ

1 ಗೈಯೊಳಾಂ

ಪ್ರಧಾನರನೇಕಾಂತದೊಳ್ ಬರಿಸಿ ಮಲ್ಲಯುದ್ಧಮಂ ಮಾಡಿದಪ್ಪೆಂ ನೀಮೆಲ್ಲಂ ನಂದಗೋಪನನೆಂತಪ್ಪೊಡಂ ಪೊಡರ್ದು ಕೊಂದಿಕ್ಕಿಂ ನಿಮಗೆ ಮೆಚ್ಚಿದ ಗ್ರಾಮಂಗಳಂ ಕುಡುವೆನೆನೆಯಮಂದಿರ್ ತಮಗೆ ಮೃತ್ಯುವಂ ಕೈಕೊಳ್ವಂತೆ ಕೈಕೊಂಡು ಮಲ್ಲಯುದ್ಧಮಂ ಸಮಕಟ್ಟಿ ನಾಡಪ್ರಭುಗಳ್ಗಮರಸುಮಕ್ಕಳ್ಗಂ ಮಲ್ಲಯುದ್ಧಮಂ ನೋಡಲ್ ಬಪ್ಪುದೆಂದು ತನ್ನ ನಾಡೊಳಗೆಲ್ಲಂ ಗೋಸನೆವಿಡಿಸಿ ವಿಶಾಲಮಪ್ಪೆಡೆಯೊಳ್ ತನಗೆ ಮಿತ್ತುವಂ ಮಾಡಿಕೊಳ್ವಂತೆ ರಂಗಭೂಮಿಯಂ ಸಮೆಯಿಸಿ ಬಳಸಿಯುಮರಸುಮಕ್ಕಳ್ಗಂ ಜನದ ನೆರವಿಗಂ ನೋಡುವಂತು ಮಾಡಿಸುತ್ತಿರ್ದನಿರ್ಪಿನಮಾ ಸಮಕಟ್ಟುವ ಕಜ್ಜಮನಿನಿಸಿನಿಸು ಪೊಣ್ಮೆ ವಸುದೇವಂಗಱಿಪಿ ನಾವಿನ್ನೆಗಂ ಮುಚ್ಚಿಟ್ಟಿರ್ದನಿನ್ನಿಕ್ಕೆಯುಂ ಕೊಲ್ವುದನಱಿದಿನ್ನೆಂತಿರ್ಪಂ ನಮ್ಮ ಸಂಬಂಧಮುಂ ಕೂಡಿ ಕೂಸಿಂಗಱಿಪಿ ಕೂಡಿನಿಲ್ವಮೆಂದು ತಮ್ಮೊಳಾಳೋಚಿಸಿ ನಂದಗೋಪಂಗಂ ಕೃಷ್ಣಕುಮಾರಂಗಂ ಬಱಿಯನಟ್ಟಿ ಮೂವರುಮೇಕಾಂತದೊಳಿರ್ದು ನಂದಾ ಕೇಳೀ ಕುಮಾರನಂ ಕಂಸಂ ಮುನ್ನೆ ದೇವಕಿಗೆಱನಟ್ಟಿ ಬಱಿಯಮೆನಿತಾನುಮುಪದ್ರವಂಗಳನೊಡರ್ಚಿ ಮತ್ತಂ ಕಾಳಾಹಿರಕ್ಷಿತ ಪುಷ್ಪಂಗಳಂ ತರವೇೞ್ದಂತೆಂತುಂ ಕೊಲಲಾಱದೆ ಮಲ್ಲಯುದ್ಧದ ನೆವದೊಳ್ ಕೊಲ್ವುದಂ ಪಣ್ಣಿ ನಿಲೆಯುಂ ಬರ್ದುಂಕಿದೊಡೆ ಮೇಲೆವಿರ್ದು ಕೊಂದಪ್ಪನೆನೆ ಕುಮಾರನಿಂತೆಂದಂ

ಕಂ॥ ಗೋವುಳಿಗನ ಮಗನೆಂ [1]ಪೋರೆ
ಪಾ[1]ವುದುಮಿಲ್ಲೇಕೆ ಮುಳಿವನಂತುಂ ಮುಳಿವಂ
ದೇವುದೊ ಚಾತುರ್ದಂತಂ
ಕಾವುದೆ ಕಾವಡಮೆ ಪುಣ್ಯಮೊಂದೇ ಕಾಗುಂ ೪೬

ವ॥ ಎನೆ ವಸುದೇವನೆಂಗುಂ ಪುಣ್ಯಮೆ ಕಾಗುಮೆಂಬೀ ಮಾತಪ್ಪುದು ಪಗೆ ಸಂಬಂಧಮುಂಟು ಕೇಳೆಂದು ಕಂಸನುತ್ಪತ್ತಿ ಮೊದಲಾಗೆ ಅತಿಮುಕ್ತಕರಾದೇಶಂ ನಡುವಾಗೆ ಕೃಷ್ಣನ ಭವಾನಸಾನಂಬರಂ ಪೇೞ್ದಂತುಂ ನಿನ್ನ ಪುಣ್ಯದಿಂದಾಗದಿಂತು ತಂದೀತಂಗೊಪ್ಪಿಸಿದೊಡಿಂತು ನೀಂ ಬಂದೆಡೆಯೆಂದು ಪೇೞ್ವಾಗಳ್ ನಂದನಗೋಪನುಂ ಮಗನೆ ತಪ್ಪಿಲ್ಲಿದುವನಿಂತು ನಂಬಿದೆನೆನಗಿಂತಪ್ಪ ಪಗೆಯನುೞಿಯದೆಮ್ಮ ಕಯ್ಯೊಳಿಂತು ಬರ್ದುಂಕು[ವು]ದೊ ನಾನೆ ಮುನ್ನಮವನಂ ಕೊಲ್ವೆನೆನ್ನನವ[ಂ] ಕೊಲ್ಕನೆಂದು ಸಂಕಿಸದಿಂ

ಕಂ॥ ಮೊಲೆಯುಣ್ಬ ದಿವಸದಂದೇಂ
ಕೊಲಲಾರ್ತನೆ ದಿವ್ಯನಿಕರಮುಮಂ ಕೇಳ್ ದೋ
ರ್ವಲಮುಂ ಪೊದಟ್ಟಿ ಮುಂಗೈ
ವಲಮುಂ ಬಿರಿದಾದುದೆನ್ನನಿನ್ನಾರ್ ಕೊಲ್ವರ್ ೪೭

1 'ಪಡೆವು' ಎಂಬ ಪಾಠವಿರಬಹುದೆ ?

ವ॥ ಎಂಬೊಡಕ್ಕುಂ ನಿನ್ನಳವನೊಳ್ಪೆತ್ತ್ರಜೀವಿಮಾಡೊಡಮಿನ್ನುಬಿಳ್ಗೆಂತುಮುದಾಸೀನಂಗೆಯ್ಯಲ್ಕಾರದು ಸೀನುಮಜೀವದು ನೆಗಟಿತಲ್ಲಮನಿಲ್ಲಿಯೆ ಕಾಣ್ಬಮೆಂದು ಸಮಕಟ್ಟಿರ್ದವರಂ ಕಳಿಪಿ ಕಜ್ಜದುದಮನಜೀವದುಂ ನೆರೆಯುಮಿರ್ದ ಕಂಸನುಂ ಮಲ್ಲಪ್ರೇಕ್ಷಣದ ದಿವಸದಂದು ಕೆಯ್ಗೆಯ್ದು ಬಂದು ಬಂದ ನೆರವಿಯೆಲ್ಲಮುಂ ಚೌಪಳಿಗೆಯೊಳಂ ಬಯಲ್ಗಳೊಳ[ಮ]ವರ್ಗೆ ತಕ್ಕಂತಿರಿಸಿ ಮಲ್ಲರಂ ಬರಿಸಿ ತಾನೊಂದೆಡೆಯೊಳುದ್ಧತವಿಳಾಸದಿಂ ಕುಳ್ಳಿರ್ದ ವಸುದೇವಸ್ವಾಮಿಯುಂ ತನ್ನ ಮಕ್ಕಳಪ್ಪ ಗಜಕುಮಾರ ಜರತ್ಕುಮಾರ ಸಾರವಿರ ದುಂದುಭಿ ಬಲದೇವಾದಿಗಳುಮನಾತ್ಮತಂತ್ರಮುಮನೊಡಗೊಂಡುಬಂದು ನಂದಗೋಪನ ಕೃಷ್ಣನ ಕೆಲದ ಚೌಪಳಿಗೆಯೊಳಿರ್ದರಾಗಳ್ ಕಂಸನರಸುಮಕ್ಕಳ್ಗೆಲ್ಲಮುಡಲುಂ ತುಡ[1][ಲುಮ][1]ಟ್ಟ ನಂದಂಗಂ ಕೃಷ್ಣಂಗಮಜೀವು ಪುಟ್ಟಿ ಕಲಿಗಂಟಿಕ್ಕಿ ತೆರಳ್ದಿ ಬಿಗಿದುಟ್ಟು ಪೊಯಿಕೆಯ್ಯನೆಂಬಂತಿರ್ದನಂತಿರ್ಪನಂ ಮಲ್ಲರೆಲ್ಲಮತಿಶಯಮಪ್ಪಾಗೆ ಕೆಯ್ಗೆಯ್ದು ಬಂದು ಪಂಚಾತೋದ್ಯವಾದ್ಯಕಾಜರಜೀವದು ಬಾಜಿಸೆ ರಂಗಮಂ ಪೊಕ್ಕು

ಕಂ॥ ಎನಿತವಯವಮೊಳವು[ಮವು]
ಳ್ಳನಿತಂ ರಸಭಾವದಿಂದ ಮಾಡೆ ನಯಂಬೆ
ತ್ತೆನಿತಾನುಂ ಲಯ[ವಿಲಯ]ಗ
ಳಿನಂಬರಮ[2][ನಡರ್ದ][2] ಪಾತ್ರದಂತಾಡುವವಂ ೪೮

ವ॥ ಮುನ್ನೆ ಕಂಸನಿದು ನಿನ್ನು ಪೂರ್ವರಂಗಮಾಡೊಡವಿಂತಾಡುವುದ ಜತಿಯೊಳೆಂ ಪೋರ್ಕುಳಿಯಾಡುವುದಂ ನೋಡಲ್ ಬಂದೆಮೆನೆ ಚಾಣೂರನೆಂಬಂ ಪ್ರಧಾನ ಮಲ್ಲಂ ಮೆಯ್ಯ[3][ಳ][3]ವಿನೊಳಂ ಸತ್ವದ ಬಂ[ಧ]ದೊಳಂ ಪಿರಿಯ ಗಾಯದೊಳಮುಪಾಯದೊಳಮರಿಯನಂತಾಗಿಯುಂ ಪೊಯ್ದಡೆ ಸಿಡಿಲ್ ಪೊಯ್ದಂತೆ ಪಿಡಿದೊಡೆ ಬಲುಗ್ರಹಂ ಪಿಡಿದಂತೆ ಒತ್ತಿದೊಡಾನೆಯೊತ್ತಿದಂತೆ ಪೊಕ್ಕಡೆ ಮಾರಿ ಪೊಕ್ಕಂತೆ ಸೊಕ್ಕಿದೊಡುಗ್ರದೇವತೆ ಸೊಕ್ಕಿದಂತೆ ನೂಂಕಿದೊಡಬ್ಧಿವಡೆಯ ಮೇಲೆ ಚಾತುರ್ದಂತಬಲಂ ನೂಂಕಿದಂತಕ್ಕುಮೆಂದು ಸಂದೇಹಮುಂ ಮಾಡುಗುಮೆಂಬಂತಪ್ಪಾತನು ಬರಿಸೆ ಬಂದು ದೇವ ಬಿನ್ನಪಮಿಲ್ಲಿಯಾರೊಳ್ ಪೊಣರ್ವೆಂ

ಕಂ॥ ದಾನವ ಖಚರರ್ಕಳೊಳೇ
ನಾನುಂ [ತಾಂ] ನೆಱತನುಳ್ಳರಪ್ಪುದು ಮತ್ತೀ
ಮಾನವರೆನ್ನೊಳ್ ಪೊಣರ್ವಂ
ದಾನೆಯೊಳೊಡೆಕೊಂಡ ಮಾಡುನಂತಾಗಿಕ್ಕುಂ (?) ೪೯

1 ಲ್ಕ 2 ಡನೊಂದೆ 3 ದಳ

ವ|| ಎಂಬುದಂ ಕೇಳ್ದು ಕಂಸನೆಂಬುದೀ ನೆರೆದ ನೆರವಿಯೊಳ್ ಭಿನ್ನರಾಗದಂತೊರ್ವನೊ[1][ಳ್ ಪೊ][1]ಣರ್ದು ಪೋರ್ವುದಾರ್ಪಂ ತೋರ್ಪುದೆಂದೊಡಂತೆಗೆಯ್ವೆನೆಂದು ಬಳಸಿರ್ದ ನೆರವಿಯೆಲ್ಲಮನಂತಂತೆ ನೋಡಿ ನಂದನ ನಂದನನತ್ತ ನೋಡಿ

ಕಂ|| ಬಲಮುಂ ನಚ್ಚುವೆಯಾಪಡೆ*
ಚಲದಿಂ ಪುಗುತಪ್ಪುದಲ್ಲದಂದಿಪ್ಪುದಿದೇಂ
ಬಲಮುಂ ಚಲಮುಮವೆನ್ನಿಂ
ತೊಲಗಿಪೊ[2][ಡಂತ][2]ಳ್ಕಿ ಬಳ್ಕಿ ಪೋಪುದು ನೆಱೆದೇಂ ೫೦

ವ|| ನೀನಿನಿಸಾನುಂ ಬಲ್ಕಣೆಯ ಗಂಡನೆ ನಿನ್ನಂ ಕೊಱೆದ ದಕ್ಕ ಬಲ್ಕಣೆಯ ನೊತ್ತಿದಂತೆ ನುಗ್ಗುಮಾಡುವೆಂ ಬಾಯೆನೆ ಕುಮಾರನೆ[ಂ]ಗುಮೞಿಸಿ ತಿಂಬ ದೆಪ್ಪಕ್ಕೆ ಪಾಟಿಂಬಡುವುದುಮೆನ್ನಲ್ಲಿ ಮೂದಲಿಸಿ ನುಡಿವುದುಮೀತಂಗೇನರ್ತಿ ಪೇೞೆಂದು ನುಡಿಯಿಂ ಮುನ್ನ ರಂಗಮಂ ಪೊಕ್ಕು ಭುಜಾಸ್ಫಾಳನಂಗೆಯ್ದಿರ್ದೊಡೆ ಚಾಣೂರನುಂ ಲಂಘನ [3][ವಲ್ಗನ][3] ಪ್ಲವನ ವಿಕ್ರಮ ಭ್ರಮರಿ ಕರಣಂಗಳಂ ಸಾರ್ಚಿ ಮುನ್ನಂ ಘರ್ಮಹಸ್ತಮಂ ನೀಡಿ ಪೊಕ್ಕಮರ್ದು ಸಮಲತಾ ಬಹುಕಳಿ ಕತ್ತರಿಗಳಿಂ ಗಾಯಮೞಿಪೊತ್ತಿ ನೋಡಿ ಬಲ್ಲಿದನಪ್ಪುದನಱಿದು ಸಿಡಿಲ್ದುಗಿದುಕೊಂಡು ಪೊಳೆದು ಪೋಗಲ್ ಬಗೆವುದಂ ಕುಮಾರನಱಿದೊಂದು ಕೈಯನುಗಿದುಕೊಂಡು ಬಹುಕತ್ತರಿಯೊಳ್ ಕಿವಿಯುಂ ಮೂಗುಮನಡಸಿ ಮೊಗಮನೊತ್ತಿದಾಗಳ್

ಕಂ|| ಮೂಗಿಂದಂ ಬಾಯಿಂದಂ
ಬೇಗಂ ಕನ್ನೆತ್ತರೊಡನೆ ಪಾಯ್ತರೆ ಕಣ್ಗಳ್
ಮೇಗೊಗೆದು ಸೂಸೆ ಹರಿ ಕಡು
ವೇಗದಿ ಪಿಡಿದೊತ್ತಿ ಕೊಂದು ಬಿಸುಟುಸಿರ್ದಿರ್ದಂ ೫೧

ವ|| ಆಗಳ್ ಕಂಸನ ಮೊಗಂ ಕಿಱಿದಾದುದನಱಿದು

ಕಂ|| ಮುಷ್ಟಿಗ ಮಲ್ಲಂ ಪಾಯ್ದರೆ
ಕಟ್ಟಾಳ್ ಪಱಿಕೆಡೆಯೆ ನೂಂಕಿ ಬೇಗಂ ಕಾಲೊಳ್
ಘಟ್ಟಿಸಿ ಕೊಂ[4][ದಿನ್ನಾ][4]ರ್ ಪೇ
ಳ್ದಟ್ಟಿಂದಾ ಕಂಸನತ್ತ ನೋಡುತ್ತಿರ್ದಂ ೫೨

ವ|| ಅದಂ ಕಂಡು ಭಯಂಗೊಂಡು ಸುಗಿದ ವಜ್ರಜಂಘನುಂ ಕೇಸರಿಯುಂ ಮೆಂಬಿರ್ದರ್ ಮಲ್ಲರು[5][ಮೊ][5]ಡನೆದ್ದಾಗಳ್

1 ಳ್ಪ 2 ಡ 3 ವಲ್ಗಘ 4 ದಿನಾ 5 ಮನೊ * [ಸಚ್ಚುವೆಯಾವಡೆ?]

ಕಂ|| ಇರ್ವರುಮೊಡವಾಯ್ತಂದಡೆ
ಗರ್ವಿತನಿರ್ವರುಮನೆರಡು ಕಯ್ಯೊಳ್ ಪಿಡಿದಂ
ತೊರ್ವರಿನೊರ್ವರನಾಗಳೆ
ಗುರ್ವಾಗಿರೆ ಪೋದಿ ಕೊಂದು ಮುಂದಿಕ್ಕಿದೊನಂ ೫೩

ವ|| ಕಂಸಂ ಕಂಡು ಮುಳಿದು ಮಲ್ಲರೆಲ್ಲರುಮನೊಡನೆ ಪಾಯಿಸೆಂದಾಗಳ್

ಮ|| ಇರದೆಯ್ತಂದೊಡವಾಯ್ದು ಕಂಡು ಕರಮಂ ನೀಡಿರ್ದ ಮಲ್ಲರ್ಕಳೆ
ಲ್ಲರುಮೊಳ್ಕಿತ್ತು ಕಱುತ್ತು ಪತ್ತುವಿನಮಂತಿರ್ದಂ ಕರಂ ತಿಣ್ಣಮಾ
ಗಿರೆ ಮೆಂದಚ್ಚರಿಯಪ್ಪಿನಂ ಭ್ರಮಣಿಯೊಳ್ [1][ನಿಲ್ಪಂತೆನಿತ್ತಾನು ಮ
ಲ್ಲರು][1]ಮಂ ಬೀಸಿ ಬಿದಿರ್ಚಿ ಮತ್ತೆ ತಱಿದೊಂ ನುಗ್ಗಾಗಿ ಸಾಸನ್ನೆಗಂ ೫೪

ವ|| ಅಂತಾ ರಂಗಭೂಮಿ ರಣರಂಗಭೂಮಿಯಂತೆ ಪೆಣನುಮುಮಾಗೆ ಪೆಣಂಗಳ ನಡುವೆ ರಕ್ಕಸನಿಪ್ಪಂತಿರ್ದ ಕೃಷ್ಣನ ಪ್ರತಾಪಮೊಳ್ ಕರಮುಷ್ಣನಂ ಕಂಸಂ ನೋಡಿ ಕನಲ್ದು ಸೈರಿಸದೆ ತನ್ನ ಮೆಯ್ಕಾಪಿನಾಳೆಲ್ಲಮಂ ಕರೆದೀತನಂ ಬೇಗಮಿಕ್ಕಿಮೆಂದು ತಾನೆರ್ದ ಪೋಗಲ್ ಬಗೆವಾಗಳ್ ವಸುದೇವನುಂ ಬಲದೇವಾದಿ ಕುಮಾರರುಂ ಕೈದುಗೆಯ್ದಿರೆ ಕುಮಾರನಂ ಪೆಱಗಿಕ್ಕಿ ನಿಂದಾಂತಿರ್ಪ್ಪ[ಂ]ದು ಮೆಯ್ಕಾಪಿನಾಳ್ನಿಱಿವಾಗಳ್ ಕುಮಾರನಂ ಕಂಡು ಕಡುಮುಳಿದುಮಿದಿರ್ಚಿದರಂ ಪಡಲ್ವಡಿಸಿ ಪರಿತಂದು ಕಂಸನನುರುತ್ತರೆ ಪೊಯ್ದು ಕೈದು ಪೆಣನಂ ಬಿಸುಟು ಮುಳಿದಿರ್ದ ಮಾವನನಿಂತೆ ತಿರುಪುವೆನೆಂದು ಕಾಲಂ ಪಿಡಿದು ನೆಗಪಿ ಬೀಸುತ್ತಮಿಂತೆ ಬಂದು

ಕಂ|| ಎನ್ನೊಡವುಟ್ಟಿದರನಿವಂ
ಮುನ್ನೀ ಸೆಲೆಯಲ್ಲಿ ಪೊಯ್ದು ಕೊಂದಂ ಗಡಮಾ
ನಿನ್ನಿವನುಮನೀ ಸೆಲೆಯೊಳ್
ಪನ್ನತನಂ ಪೊಯ್ದು ಕೊಲ್ವೆನೆಂದತಿಕುಪಿತಂ ೫೫

ಕಂ|| ಬೀಸಿ ಕರಮೆತ್ತಿ ಪೊಯ್ದಡೆ
ಸೂಸೆ ವಿ[2][ದು][2]ಳ್ ಪೊಟ್ಟನೊಡೆಯೆ ತಲೆ ಕಂಸನಿಂತೊಂ
ದಾಸುರಮಾಗಿರೆ ಕೊಂದು ವಿ
ಭಾಸುರತೇಜದೊಳೆ ತಂದೆಯಲ್ಲಿಗೆ ಮಗುಟ್ದಿಂ ೫೬

ವ|| ಅನ್ನೆಗಮುಮರುಮಿದಿರ್ಚಿದರನಿಕ್ಕಿ ಜಿಚಿದರನೋಡಿಸಿ ಬಂದು ಹರಿಯ ವಿಕ್ರಮಮುಂ ಕೇಸರಿಯ ವಿಕ್ರಮದಿಂದಗ್ಗಳಮಪ್ಪುದಂ ಕಂಡು ಮಗನನೊಡಗೊಂಡು

1 ಕರ್ಣ ನಿಲ್ಪಿನಂತೆನಿತಾನುಂ ಜನ 2 ದ

ತನ್ನ ಮನೆಗೆವಂದಾಗಳ್ ನಾರಾಯಣಂ ದೇವಕಿಗೆಱಗಿ ಪೊಡೆವಟ್ಟಂತೆ ಬಂದು ತನ್ನಯ್ಯ ನೊಡನಂದ ತನ್ನ ಪಿರಿಯಬ್ಬೆಗ[1][ೞಮ][1]ಣ್ಣಂಗಳ್ಗಂ ಪೊಡೆವಟ್ಟು ಪರಕೆಯುಂ ಸೇಸೆಯು ಮನಾಂತು ವಸುದೇವನನುಮತದಿಂ ಪೆರ್ಗಡೆಗ[2][ಳ್ ಪೇೞ][2]ಲಾ ಕಂಸನ್ಮೃತಕನಂ ಶೋಭೆಯಿಂ ಸಂಸ್ಕರಿಸಿ ಜೀವಂಜಸೆಯುಂ ಲೌಕಿಕಕ್ರಿಯೆಯೊಳ್ ನೆಗೞ್ಚಿ ಕಂಸನ ಮನೆಗೆ ಶಾಪಂ ಪೇೞ್ದು ಬೞಿಯಮುಗ್ರಸೇನನ ಪದ್ಮಾವತಿಯ ಬಂಧನಮಂ ಕಳೆದು ಬರಿಸಿ ಪಾಪ ಕರ್ಮನಿಂದಿಂತಾಯ್ತೆಂದವರನಾಱಿಸುಡಿದು ಸ್ನಾನ ವಸನಾನ್ನಾದಿ ಕ್ರಿಯೆಯಿಂ ಸಂತೈ ಸಿರ್ದು ಮಱುದಿವಸಮವರ ಪರಿವಾರಮೆಲ್ಲಮಂ ಬರಿಸಿ ಕಂಸನ ಮರು[3][ಳ್ತ][3]ನದಿನಾಯ್ತೆಂದು ಮುಗ್ರಸೇನಮಹಾ[ರಾ]ಜಂಗೆ ರಾಜ್ಯಮನೊಪ್ಪಿಸಿ ತನಗೆ ಕರಮನುಕೂಲಂ ಮಾಡಿ ದೊರ್ಂದು ದಿವಸಂ ತನ್ನನಿಬರುಂ ಮಂತ್ರಿವರ್ಗಸಹಿತಮೊಂದೆಡೆಯೊಳಿರ್ದು

ಕಂ॥ ಮಿಕ್ಕಿರ್ದ ಜರಾಸಂಧನ
ತಕ್ಕಿನ ಪಿರಿಯಳಿಯನಂ ಬಲಾಧಿಕನಂ ಕೊಂ
ದಿಕ್ಕಿ ಮಗುೞ್ದಿಲ್ಲಿ ನಮಗಿರ
ಲಕ್ಕುಮೆ ಪೋಗಿರ್ದು ನಮ್ಮ ಪೊೞಲೊಳ್ ಬಗೆಸಂ ೫೭

ವ॥ ಎಂಬ ಕಜ್ಜಮನಾಳೋಚಿಸಿ ವಿಷಯಸಾಮಗ್ರಿಯುಂ ಮಾಡಿ ತನ್ನ ಪೋಗು ಮನುಗ್ರಸೇನಂಗಱಿಪಿದೊಡಾನೇಕಿಲ್ಲಿಪ್ಪೆನೊಡನಿರ್ದಪೆನೆಂದೊಡೆಮ್ಮಟ್ಟಿದ ಬೞಿಗೆ ಬರ್ಪೆನೆಂ ದಿರಿಸಿ ನಾಗಶಯ್ಯೆಯುಂ ಶಾರ್ಙ್ಗಾಯುಧಮುಮಪ್ಪಾಯಶಂಖಮುಮಂ ಕೊಂಡು ಪಯಣಂಬೋಗಿ ಯಥಾಕ್ರಮದಿಂ ಸೂರ್ಯಪುರಮನೆಯ್ದಿದಾಗಳ್ ವಸುದೇವಾಗ್ರಜರಿ ದಿರ್ವಂದು ಕಂಡೊಡವರಿ ಪೊೞಲೆಲ್ಲಮತಿಶಯಾಷ್ಟಶೋಭಾವಿಧಾನದಿನಿದಿರ್ಗೊಂಡು

ಮ॥ ಪಿರಿಯಣ್ಣಂಗಳುಮೊಪ್ಪಿತೋರ್ಪ ಪಲರುಂ ತಾಯ್ಪರ್ಕಳು[ಂ] ತಂದೆಯುಂ
ಪಿರಿದುಂ ಕೂರ್ಮೆಯೊಳೊಂದಿ ಬಂದ ಧರಣೀನಾಥರ್ಕಳುಂ ಭೃತ್ಯರುಂ
ಬೆರಸಿಂದ್ರಂ ಕಡುರಾಗದಿಂದ್ರಪುರಮಂ ಪೊಕ್ಕಂದಮೊಂದಂದದಿಂ
ಹರಿ ಸೌಂದರ್ಯಸಮೇತ ಸೂರ್ಯಪುರಮಂ ಪೊಕ್ಕಂ ಮಹೋತ್ಸಾಹದಿಂ ೫೮

ವ॥ ಪೊಕ್ಕು ಸೇಸೆಯುಂ ಪರಕೆಯುಮನಾಂತಂತೆ ಬಂದರಮನೆಯಂ ವಾಹನಂ ಗಳಿಂದಿೞಿದು ವಸುದೇವಂ ಮುನ್ನಂ ಸಮುದ್ರವಿಜಯರ್ಗೆ ಪೊಡೆವಟ್ಟಂತೆ ಮತ್ತಿನಣ್ಣಂ ಗಳ್ಗಂ ಪೊಡೆವಟ್ಟು ತನ್ನ ಪೆಂಡಿರುಂ ಮಕ್ಕಳುಮಂ ಪೊಡೆವಡಿಸಿ ಬಂದೆಲ್ಲರುಂ ಸಮುದ್ರ ವಿಜಯಮಹಾರಾಜನ ಮುಂದೆ ಕುಳ್ಳಿರ್ದೋಲಗಿಸುತಿರ್ದ ಹರಿಯನರಸನ ಮುಂದಿರಿಸಿ ನಿಮ್ಮ ಕಿಱಿಯ ಮಗಂ ಸಾಮಾನ್ಯನೆಂದಿಂತೆಂದಂ

1 ಳುಮನ  2 ಳ್ಬಿ  3 ಳ

ಕಂ|| ಆಕ್ರಮಿಸಲಾಱರಹಿತರ್
ವಕ್ರಂ ಬರ್ಪನ್ನರಿಲ್ಲ ಭೂಪತಿಗಳ್ ಭೂ
ಚಕ್ರದೊಳಗೆಂತುಮಿವನ ಪ
ರಾಕ್ರಮಮುಮರಿದಾರ್ಗೆ ಪೇೞಲಿನ್ನುಂ ಮುನ್ನಂ ೫೯

ವ|| ಅದನಾಂ ಬಿನ್ನವಿಸವೇಡ ನೀಮೆ ಕಂಡುಂ ಕೇಳ್ದುಮಱಿಯದಿರ್ದಪಿರಲ್ಲಿರೆಂದು ಮಧುರಾಪ್ರವೇಶಮಾದಿಯಾಗಿ ಕಂಸವಿಧ್ವಂಸನಾಂತಂಬರಮಾದುದೆಲ್ಲಮಂ ಪೇೞ್ದುಂ ಬೞಿಯುಂ ಸ್ನಾನ ವಸನಾನುಲೇಪನಾನ್ನಪಾನಾದಿಗಳಿಂ ತಣಿದು

*ಮ|| ಹರಿವಂಶೋನ್ನತ ಪದ್ಮಷಂಡಹಿತಕೃದ್ವಿದ್ವಿಷ್ಟಸೇನೋ[ದ್ಧತೋ]
ತ್ಕ[1][ರ][1] ಭಸ್ಮೀಕೃತ ಶಕ್ತಿಯುಕ್ತಹತ ಭೋ[2][ಗಾಂತೋ][2]ಪಭೋಗೋ[ತ್ತರೋ]
ತ್ತರ ಸೌಂದರ್ಯಮಹಾವಿಳಾಸಿ ಬಳಭೃತ್ಸಂಕ್ರಾಂತ ವಿಕ್ರಾಂತಕೇ
ಸರಿ ಕೃಷ್ಣಂ ಸುಖದಿಂದಮಿರ್ದನಭಿ[3][ಸೂ][3]ತ್ಮೈಶ್ವರ್ಯದಿಂ ಧೈರ್ಯದಿಂ ೬೦

ಗದ್ಯ|| ಇದರ್ಹತ್ಸರ್ವಜ್ಞ ಪಾದಪದ್ಮವಿರಾಜಿತೋತ್ತಮಾಂಗ ಶ್ರೀ ಬಂಧುವರ್ಮ
ನಿರ್ಮಿತಮಪ್ಪ ಹರಿವಂಶಾಭ್ಯುದಯದೊಳ್ ಕಂಸವಿಧ್ವಂಸನಂ

**ಷಷ್ಠಾಶ್ವಾಸಂ**

---

1 ರೋದಯ 2 ಗೊ 3 ನೋ

* ಇದೇ ಪದ್ಯ ಒಂದೆರಡು ಪದಗಳ ಬದಲಾವಣೆಗಳೊಡನೆ ಸಪ್ತಮಾಶ್ವಾಸದ ಕೊನೆಯಲ್ಲಿಯೂ ಬಂದಿದೆ.

# ಸಪ್ತಮಾಶ್ವಾಸಂ

ಕಂ॥ ಅಂತಾತ್ಮವರ್ಗದೊಡನೆ ಸು
ಖಂ ತನ್ನನ್ವಯದ ಸೂರ್ಯಪುರದೊಳ್ ಹರಿ ನಿ
ಶ್ಚಿಂ[1][ತೆಯಿನಿ][1]ರೆ ವಂಶಜರೆ
ಲ್ಲಂ ತಡೆಯದೆ ನೆರೆದು ಮಂತ್ರಿಸಹಿತಂ ಬಂದರ್ ೧

ವ॥ ಬಂದನಿಬರುಂ ಸಮುದ್ರವಿಜಯರ ಮುಂದೆ ಏಕಾಂತದೊಳ್ ಮಂತಣ ಮಿರ್ದು ನಾಮ ಪರಿಚ್ಛೇದಿಸಿದೊಡಾತಂ ಬಱಿಕೊಡಂಬಡನೀಗಳ್ ಕರೆದಾಳೋಚಿಸುವ ಮೆಂದು ಹರಿಯುಂ ಕರೆಯಿಸಿ ಏಗೆಯ್ವಂ ಚಕ್ರವರ್ತಿಯ ಸಿರಿಯುಳಿಯನಂ ಕೊಂದು ಬಂದಿಂ ತಿರಲಾಗದು ಸಂಧಿವಿಗ್ರಹ ಯಾನ [ಆಸನ] ಸಂಶ್ರಯ ದ್ವೈ[ಧೀ]ಭಾವಮೆಂಬ ಷಾಡ್ಗುಣ್ಯ ದೊಳಂ ನೆಗಟ್ಟಿ ಬುದ್ಧಿವಂತರೆಲ್ಲಂ ಬಗೆದು ಪೇಱಿಮೆಂದೊಡೆಲ್ಲಂ ತಂತಮ್ಮ ಕಂಡ ನಯಂಗಳಂ ಪೇಱಿಭ್ಜೊಡೆ ಸಮುದ್ರವಿಜಯನುದ್ಧಾವನೆಂಬ ಮಂತ್ರಿಮುಖ್ಯನನೆಂದಂ ನೀನ ಪ್ಪಡೆ ರಾಜಕಾರ್ಯವಿಚಾರಪರನೆ ಈಯೆಡೆಗೇಗೆಯ್ವಂ ಪೇಱಿಮೆಂದೊಡಾತನಿಂತೆಂದಂ ದುರ್ಬುದ್ಧಿ [2][ಆ][2]ಹಾರ್ಯಬುದ್ಧಿ [ಬುದ್ಧಿಮಾನ್]ಯೆಂಬ ಮೂವರುಮರಸುಗಳೊಳಂ ನೀನೆ ಬುದ್ಧಿವಂತನೇನಂ ಪೇಱಿಪ್ಪನಂತುಮೆನ್ನಱಿವನಿತಂ ಪೇಱಿಪ್ಪನೇಕಚಿತ್ತದೊಳ್ ಕೇಳಿ ಮೆಂದಿಂತೆಂದಂ ಮುನ್ನಂ ಕಾಮ ಕ್ರೋಧ ಲೋಭ ಮಾಯ ಮದ ಮಾತ್ಸರ್ಯಮೆಂಬರಿ ಷಡ್ವರ್ಗಮನಡಂಗಿಸಿ [3][ದ್ಯೂ][3]ತಂ ಪಾನ ವೇಶ್ಯಂ ವೃಗ[4][ಯಾ][4] ವಾಕ್ಪಾ[5][ರುಷ್ಯ][5] ಅರ್ಥದೂಷಣ[ಂ] ದಂಡಪಾ[5][ರುಷ್ಯ][5]ಮೆಂಬೇೞುಂ ಬೆಸನಂಗಳುಮಂ ಪೊರ್ದದೆ ಸ್ವಾಮ್ಯ ಮಾತ್ಯ ಜನಪದ ದುರ್ಗ ದಂಡ ಕೋಶ ಮಿತ್ರರೆಂಬ ರಾಜಪ್ರಕೃ[ತಿ]ಗಳೇೞುಮನುಂಟು ಮಾಡಿ ಪ್ರಭು ಮಂತ್ರೋತ್ಸಾಹ ಶಕ್ತಿತ್ರಯಂಗಳೊಳ್ ನೆಱೆದು ರಾ[6][ಷ್ಟ್ರ][6]ಪಾಳ [7][ಅಂತ ಪಾಲ][7] ಪ್ರತ್ಯಂತವಾಸಿಗಳೆಂಬ ಬಾಹ್ಯಪ್ರಕೃತಿಗಳುಮಂ ಕರ್ಮಣ್ಯ ಮಂತ್ರ ಲಾಭ ದಾಯಕಂ ಸಂಗ್ರಾಮಿಕಮೆಂಬ ನಾಲ್ಕುಂ ತೆಱದ ಭೃತ್ಯರುಮಂ ಪೊರೆದು ಭೃತ್ಯಪೋಷಣಂ ಪ್ರಜಾಪಾಳನಂ ಧರ್ಮರಕ್ಷಣಂ ಆತ್ಮಪ್ರಯತ್ನಮೆಂಬ ನಾಲ್ಕುಂ ನೀತಿಗಳುಮಂ ಸಾ[8][ಮ][8] ಭೇದಮುಪಪ್ರದಾನ ದಂಡಮೆಂಬ ನಾಲ್ಕುಂ ನಯಂಗಳನಱಿದು ಗಿರಿದುರ್ಗ ವನದುರ್ಗ

1 ತತೆಯಿಂದಿ 2 ವಂತಸ 3 ದೂ 4 ವ್ಯಂ 5 ಶ್ರ್ವ 6 ಷ್ಪ 7 ದಂತೋಪನ
8 ಮಾನ್ಯ

ಜಲದುರ್ಗಮೆಂಬ ಮೂಱುಂ ದುರ್ಗಂಗಳುಮಂ ಭೂ[1][ರಿ][1]ಕರ್ಮಣಾಮಾರಂಭೋಪಾಯ ಪು[2][ರುಷ][2]ದ್ರವ್ಯಸಂಪತ್ ದೇಶಕಾಲ ವಿ]ಭಾಗ ವಿನಿಪಾತಪ್ರತೀಕಾರಮನೊಡರ್ಚಿ ಪಗೆ ವಂಗುಚ್ಚಾಟನ ಬಂಧನ ಕರ್ಮಣಾಮುಪನಯನ ಸಾಪತ್ನ ವಾಸ್ತುಜಂ ಸ್ತ್ರೀಜಂವಾಗ್ಭೂತಮ ರಾಜಮೆಂಬ ನಾಲ್ಕುಂ ಪಗೆಗಳೊಳಪ್ಪಪರಾಧಜಮದಱಿಂ ಸಂಧಿಯೆಂದುಮಾಗದು ವಿಗ್ರಹಂ ಗೆಯ್ವೊಡೀಗಳ್ ನಾಮಲ್ಪಬಳರೆನುದುಮುಮಾಗದು ನೆಟ್ಟನಾತಂ ಮುಳಿದು ಬಾರನನ್ನೆಗಂ ಯಾನಮುಂ ಮಾಡಿ ದುರ್ಗಾಶ್ರಯದೊಳ್ ಆಸನಂಗೆಯ್ದು ಮತ್ತಮೊಂದು ದ್ವೈವಬಲ ಮುಳ್ಳೆಡೆಯೊಳ್ ಸಂಶ್ರಯಮುಂ ಮಾಡಿ ಸಿಂದು ಬೞಿಯಂ ದ್ವೈಧೀಭಾವದೊಳಿಂತಾ ದೊಡಮಕ್ಕುಮೆಂದೊಡೆಲ್ಲರುಮದನೆ ಮೆಚ್ಚಿ

ಕಂ|| ನೀತಿಯುತಂ ನವ್ಮೊಳತಿ
ಪ್ರೀತಿಯುತಂ ಖ್ಯಾತಿಸಂಯುತಂ ಪ್ರವಿಮಳಸಂ
ಜ್ಞಾತಿಯುತನೀತನದಱಿಂ
ದೀತನ ಬಗೆಗೊಂಡ ಕಜ್ಜಮಭ್ಯುದಯಕರಂ ೨

ವ|| ಇಂತು ಪೆಱದಂ ಬಗೆಯದಿರಿಮೆಂದಾ ಕಜ್ಜಮನೆ ಕೈಕೊಂಡಿರ್ದು ಬಹುವಿಧ ದಾನಸನ್ಮಾನಂಗಳಿಂ ಪ್ರತ್ಯಂತಾಟವಿಕರ್ಕಳಂ ತಮ್ಮೊಳ್ ಪತ್ತಿಸಿ ನೆಗೞ್ದ ಉದಾಸೀನನಂ ಕಲ್ಯಾಣಮಿತ್ರರ್ ಮಾಡಿ ಮಿತ್ರವರ್ಗಮನಾತ್ಮಸ್ನೇಹಸಮಾನಂ ಮಾಡಿ ಕರಮುಪಯೋಗಿ ಯಾಗಿರ್ಪಿನಮತ್ತ ಮಧುರೆಯೊಳ್ ಕಂಸನ ಪೆಂಡತಿ ಜೀವಂಜಸೆ ತನಗೊದವಿದಬಳೆಯೊಳ್

ಕಂ|| ಒಂದನೆ ಕೇಳಿಂ ಕಂಸಂ
ಗೊಂದಾತನ ತಲೆಯನೇಱ ಮಿಾಯದೆ ಮಿಾಯೆಂ
ಸಂದೆಯಮೇನೀ [3][ಪ][3]ಗೆ ಮಡಿ
ದಂದಲ್ಲದೆ ನೆಟ್ಟನೆನ್ನ ತಲೆಯಂ ಮುಡಿಯೆಂ ೩

ವ|| ಎಂಬ ಪ್ರತಿಜ್ಞೆಯನಱಿಯೆ ನುಡಿದುಗ್ರಸೇನನಂ ಬಂಚಿಸಿಪೋಗಿ ರಾಜಗೃಹ ಮನೆ[4][ಯ್ದಿ ತಮ್ಮ][4]ಯ್ಯನಪ್ಪ ಜರಾಸಂಧನಲ್ಲಿಗೆವಂದು ಪಱಿವ ತಲೆನೆರಸೊದಱ ಯಬೞುತ್ತಂ ನಿನ್ನಳಿಯಂ ಜೆಸಂದಪ್ಪಿದನೆಂದು ಪುಯ್ಯಲನಿಕ್ಕಿದಾಗಳ್ ತಂದೆಯುಂ ತಾಯುಂ ಮಾಕೆಯೊಡವುಟ್ಟಿದರುಂ ಬಂದು ಮಹಾದುಃಖಂಗೆಯ್ದು ಮೂರ್ಛೆವೋಗಿಯದಱಿಂದೆ ಚ್ಚತ್ತುಯೆಂತುಸತ್ತನಾರ್ ಕೊಂದರ್ ಪೇೞಿಮೆಂದು ಬೆಸಗೊಂಡು ಕೇಳ್ದಕ್ಕುಮಾತ ನೊರ್ವರುಮನೆತ್ತಿತರಲಱಿಯೆಂ (?)

1 ಮಿ 2 ಜ್ಞ 3 ಬ 4 ಯ್ದು ತಂಮ

ಉ॥ ಕೊಂದವನೆಲ್ಲಿಯುಂ ಪುಗುವನೀ ಸಕಳಾವನಿಯಾ[1][ದಿ][1] ಱಿಂಪಿನೊಳ್
ಸಂದ ನಗಂಗಳೆಂಬಿನಿತ ಪೊಕ್ಕಿರಲೇನಿವಱಿಂದಮತ್ತ ಮು
ತ್ತೊಂಪೆಡೆಯುಂಟೆ ಮಾನಸರ್ಗೆ ಮತ್ತಿವಱತೊಳ್ ನಿಲೆ ಕಾಯಲಿಂದ್ರನುಂ
ಬಂದೊಡಮೇನೊ ಕಾದಪನೆ ಪೇೞಿವರಾಂ ಮುನಿದಂದು ಬಾೞ್ವರೇ ೪

ವ॥ ಎಂದು ಸಂತೈಸಿ ತನ್ನ ಮಗನನಾಕೆಯೊಡವುಟ್ಟಿದನಂ ಕಾಲಯವನನೆಂಬನಂ ಪೋಗಿ ಯಾದವರೊಳ್ ಕಾದಿ ನಾರಾಯಣನೆಂಬೊನ ತಲೆಯುಂ ತಪ್ಪದಂತಲ್ಲದೆ ನಿಮ್ಮಕ್ಕನ ಪ್ರತಿಜ್ಞೆಯುಮೆನ್ನಟಿಲುಂ ಪೋಗವೆಂದು ಬೆಸವೇೞ್ವುದುದಾತಂ ಮಹಾಬಲಪರಾಕ್ರಮನಾಗಿ ಪೊಱಮಟ್ಟು ಪಯಣಂಬೋಗಿ ಸೂರ್ಯಪುರದ ಸಮೀಪಕ್ಕೆ ಬಂದಾಗಳೆ ಮುನ್ನಮೆ [ಚ]ರರಿಂದವನ ಬರವನಱಿದೀ ಕೂಸುಗಳ್ಗೆ ನಾಮೆ ಸಾಲ್ವೆಮೆಂದು ಬಲದೇವ ವಾಸುದೇವ ಕುಮಾರರ್ ಪೊಱಮಡೆ ನಿಮಗಿದಾವ್ರದನುವರ ನಾಮೆ ಸಾಲ್ವೆವೆಂದು ಕೆಲಂಬರಸುಮಕ್ಕಳಿದಿರಂ ನಡೆದು ಕಾಲಯವನನೋಡಿಸಿ ಮಗೞ್ದು ಬಂದಿರ್ದನಂತು ಮಗನೋಡಿಬಂದುದಂ ಜರಾಸಂಧಂ ಕೇಳ್ದು ಮುಳಿದ ಮೊಗನುಂ ಕಂಡು ಆತನ ತಮ್ಮನಪರಾಜಿತನೆಂಬಂ ಬಂದು ಬೆಸನಂ ಬೇಡಿಕೊಂಡು ಚಾತುರಂಗಬಲಸಹಿತಂ ಪಯಣಂಬರಲೆಯ್ದೆವಂದುದನಱಿದು ಸಮುದ್ರವಿಜಯಾದಿ ಯಾದವರೆಲ್ಲಂ ಸಮಸ್ತಸೇನಾಸಹಿ[ತ]ರಾಗಿ ಪೊಱಮಟ್ಟೊಡ್ಡಿದೊಡಪರಾಜಿತನುಂ ತನ್ನ ಬಲಮುಮಂ ಬಾಗೊಡ್ಡಿ ಕಯ್ಯಂ ಬೀಸಿದಾಗಳ್

ಶಾ॥ ಬಿಲ್ಲೊಳ್ ಬಿಲ್ಲು ಹಯಂ ಹಯಂದೊಳಂ ಮದದಂತಿಯೊಳ್ ರಥಂ ರಥ
ದೊಳ್ತಾಗಿಕ್ಕೊನುಳಿಯಾಗದರ್ತು ಪಲವುಂ ಶಸ್ತ್ರಂಗಳಿಂ ಕಾದುತಂ
ಪೆಲ್ಲಾ ಪೆಲ್ಲಿಯೊಳಗ್ಗಿ ತಗ್ಗಿ ಪೊಡರ್ದೆರ್ದೆಯಸ್ತ್ರಂದು ಮತ್ತಂ ಕರಂ
ಮಲ್ಲಾಮಲ್ಲಿ ತಗುಳ್ದುರುತ್ತರಿ ಪಡಲ್ಪಟ್ಟಿತ್ತು [ತ]ತ್ಸಾಧನಂ (?) ೫

ವ॥ ಅಂತು ಪಡಲ್ಪಟ್ಟ ತನ್ನ ಬಲಮುಮಪರಾಜಿತಂ ಕಂಡು ಭಯಂಗೊಂಡು ಮನಮಲ್ಲಾಡುತ್ತಿರೆ ಬಲದೇವ ನಾರಾಯಣ[2][ರ್ಕಳ್][2] ನೂಂಕಿದೊಡಪರಾಜಿತನಳ್ಕಿ ಬೇಗಂ ಪತ್ತೆಂಟು ಕುದುರೆಯೊಳೋಡಿದನಾತನ ಬಲಮುಮಂತೆ ಪರೆದು ಪೋಯ್ತಂತಾ ಕಾಳೆಗಮುಂ ಗೆಲ್ದು ಕೊಪ್ಪಂ...ಗೊಂಡು ಬಂದು ತಮ್ಮ ಪೊೞಲೊಳಿರ್ಪೊಂದು ದಿವಸಂ ತಮ್ಮೊಳ್ ಕಾಂತಮಿರ್ದು ಜರಾಸಂಧ[3][ನೊಳ್][3] ನಮಗಿನ್ನೆಂತುಂ ಪಗೆಯಾದುದಿನ್ನೇಗೆಯ್ವೆಮೆನೆ ಮತ್ತಮುದ್ಧವನೆಂಬ ಮಂತ್ರಿಮುಖ್ಯನಿಂತೆಂದಂ

1 ದ್ದ 2 ಕ್ಕಳು 3 ನನೊಳು

ಕಂ|| ಕೊಂದಂ ಮುಸ್ಟಳಿಯನನೆ
ಯ್ದಂದ ತನೂಜನುಮನಿಱಿದು ಬೆರ್ಚಿಸಿ ಬಱಿಯಂ
ಬಂದೊಡವುಟ್ಟಿದನುಮನಾ
ಗೆಂದಿರದಿದಿರಾಂತು ರಣದೊಳಿಱಿದೋಡಿಸಿದಂ ೬

ವ|| ನಾವಾತಂಗೆ ಭೃತ್ಯರಾಗಿ ನಡೆವುದುಗೆಟ್ಟು ದುರ್ವೃತ್ತನಾಗಿ ನೆಗೞ್ದುದಱಿಂದೀ ಗೆಲ್ಲಮನೆ ಕೈಕೊಂಡೀಗಳ್ ಪೋಪುದು ನಯಮಾಯ್ತೆಂದಾಗಳ್ ಪೋಪುದಾಯಮಲ್ಲೆಂದಾಗಳ್ ನುಡಿಂದು ನಿನ್ನ ಪೇೞ್ದುದೆ ಕಾರ್ಯಂ ನೀನಱಿವೆಯೆಂದು ಪೋಪ ಕಜ್ಜಮನೆತ್ತಿಕೊಂಡು ಪಯಣಕ್ಕೊಡರಿಸಿ ಮಿತ್ರವರ್ಗಮೆಲ್ಲಮಂ ಬರಿಸಿ ಶುಭದಿನದೊಳ್ ಪೊಱಮಟ್ಟು ಪಡುವಣೊಗದೆ ಪಯಣಂಬೋಗಿ ಕೆಲವು ದಿವಸದಿಂ

ಚಂ|| ಕುರವಕ [1][ಚಂಪ][1]ಕಾರ್ಜು[2][ನ][2] ತಮಾಳ ಕುಟಂದನ ಚಂದ ನಾಗ ಜಂ
ಬಿರ ಪನಸಾಮ್ರ ನಿಂಬ ಕುಟಜಾದಿ ಮಹಾಕುಜಸಂಕುಳಂಗಳಿಂ
ಕರೆವ ಖಗಂಗಳಿಂ ನೆರೆವ ಖೇಚರದಿವ್ಯಯುಗಂಗಳಿಂ ಮನೋ
ಹರಮನನಂತಮಂ ದಿವಿಜಲೋಚನಕಾಂತಮನುಜ್ಜಯಂತಮಂ ೭

ವ|| ಅಂತೆಯ್ದೆ ವಂದವಱಿಕೆಯನರ್ತಿಯೊಳ್ ನೋಡುತ್ತಮಂತೆ ಪೋಗಿ ಪದ್ಮಾವತೀವಿಷಯದೊಳ್ ತೃಣಕಾಷ್ಠತೋಯಬಹುಳಮಪ್ಪೆಡೆಯೊಳ್ ನಿಂದಿರಿತ್ತಂ

ಕಂ|| [3][ಬ][3]ಡವಡೆ ಪಡಪಡಲ್ಪಡ (?)
ಕೆಡೆ ಪಸುಗೆಗಳಾ ಮುಖದೊಳ[ಮ]ಪರಾಜಿತನೆಂ
ಬೊಡವುಟ್ಟಿದಧಿಕಬಲನೊಂ
ದೊಡಲನೆ ಕೊಂಡೋಡಿ ತಂದಡಂಗಿರ್ದಿರವಂ ೮

ವ|| ಜರಾಸಂಧಚಕ್ರವರ್ತಿ ಕೇಳ್ದು ಮುಸ್ಟಳಿಯನ ಸತ್ತುದುಮಂ ಮಗನ ಬೆನ್ನಿತ್ತುದುಮನೀಗಳೊಡವುಟ್ಟಿದಂ ಪರಿಭವಂಬೆತ್ತುದುಮುವವ[4][ಬಿಲಂ][4] ಮಾಡೆ ಮುಳಿಸು ಪೆರ್ಚಿಯಾನುಂ ಬರಲುಮರಿಯರಾರೆಂಬುದನವ[5][ರ್ಗ][5]ಮಿಳಿಯನಾದೆನೆಂದು ಮತ್ತಮಾ ಕಾಲಯವನೆಂಬ ಮಗನಂ ಕರೆದು ಇನ್ನು ನಿನ್ನ ಭಾವನ ಸತ್ತ ಸಾವುಮಂ ನಿಮ್ಮ ಕಿಱಿಯಯ್ಯಂ ಬನ್ನಂಬೆತ್ತುದುಮಂ ನೀನೆ ನೀಗಲ್ಕೆ...ಳ್ವುದಂ ಕರಂ ಕೂರಿದರಪ್ಪ ಪಲರುಮರಸುಮಕ್ಕಳುಮಂ ನಿನ್ನೊಡನೆ ಪೇೞ್ದಪೆಂ ನೀಂ ಪೋಗಿ ಪಗೆವರ ತಲೆಯುಂ ತಂದಡಂ ಪೇೞಾ ನಿನ್ನ ತಲೆಯುಮನ್ಪ್ರಂ] ಕೊಂಡಪಂ.........ಗುೞ್ದು ಬಂದಡೆ.........ರ ಮೇಗೆ ನಡೆಯೆನೆಂದು...ಳ್ದುದಂತೆಗೆಯ್ವೆನೆಂದು ಬೆಸನು ಕೈಕೊಂಡು ಒಂಭತ್ತಕ್ಷೋಹಿಣೀಬಲಂಬೆರಸು

1 ಪುಂಚ 2 ನು 3 ವ 4 ಳಂ 5 ರ್ಗ

ಕೊಡಿಕೊಂಡು ಪಯಣಂಬರುತ್ತಿರ್ದನನ್ನ ಹರಿವಂಶಜರುಮಾ ಪನ್ನಾನತೀವಿಷಯದಿಂ ಪೊಱಮಟ್ಟು ನಡೆವನೇಕಗ್ರಾಮ ಸರಿತ್ಪರ್ವತಂಗಳಂ ಕಳಿದವಂತೀವಿಷಯದೊಳ ಗುಜ್ಜಯಿನಿಯ ಪಶ್ಚಿಮಭಾಗದೊಳ್ ವಿಶ್ರಮಿಸಿರ್ದು ಮತ್ತೆ ನಡೆದು ಸಮುದ್ರತೀರಂ ಸಮೀಪ ವಿನ್ಧ್ಯೋಪಕಂಠಮಂ ಸಾರ್ದು ಬೀಡಂಬಿಟ್ಟಿರೆ ಹರಿವಂಶ ಮಹಾಪುರುಷರಕ್ಷಣ ಕುಳದೇವತೆ ಕಾಳಯಮುನ ಮುಸಗಿಬರ್ಪ ಬರವನಱಿದು

ಕಂ॥ ಹರಿವಂಶ ನರಾಧಿಪರಂ
ಪರಿರಕ್ಷಿಪೆನಾನುಪಾಯದಿಂದೆಲ್ಲ[ರುತಿ]
ಪ್ಪರಿಭೂಪಾಳತನೂಜರ
ಬರವಿನ ಮುಂದಱಿದು ಪೋಗಿ ಗಹನಾಂತರದೊಳ್ ೯

ವ॥ ಮುನ್ನೆ ನಾರಾಯಣ[ಂ] ಬಿಟ್ಟು ಪೋದೆಡೆಯೊಳ್ ಚಕ್ರವರ್ತಿಯ ಪಡೆ ಬಪ್ಪುದನಱಿದೆ[1][ನಿ][1]ತಾನುಂ ಕೊಂಡಂಗಳಂ ಮಾಡಿ ಪಲವುಂ ಪುಳ್ಳಿಗಳನಸಿತು ಕೊಂಡ ದೊಳಮೊಟ್ಟಿ ಜಾಜ್ವಲ್ಯಮಾನಮಾಗುರುಪಿ ನಾರ್ಪ [2][ಕಂ][2]ಪುಮಂ ಪಣ್ಣಿ ಕೊಂಡಂಗಳ ಮೊದಲೊಳೆಲ್ಲಂ ಕಿಡಱಿದ ಪುಷ್ಪಾಕ್ಷತಂಗಳಂ ಮಾಡಿ ದೇವತೆ ತಾನೊಂದು ಕೊಂಡದ ಮೊದಲೊಳ್ ಬಡಬಿದ್ದಿಯ ರೂಪುಗೊಂಡು

ಕಂ॥ ಹಾಹಾ ಸಮುದ್ರವಿಜಯಾ
ಹಾಹಾ ಕೂರ್ತಗಲದಿಪ್ಪ ನೃಪತನುಜರಿರಾ
ಹಾಹಾ ನು[3][ತ][3] ವಸುದೇವಾ
ಹಾಹಾ ಬಲದೇವ ವಾಸುದೇವರ್ಕಳಿರಾ ೧೦

ಹಾಹಾ ವನಿತಾಜನಮೇ
ಹಾಹಾ ಕುಲಜಾತ ಸತ್ಕುಮಾರರ್ಕಳಿರಾ
ಹಾಹಾ ನಿಜಪರಿಜನಮೇ
ಹಾಹಾ ಬಲ್ಲಾ[4][ಗ್ಗ][4]ಳಪ್ಪ ತುಱುಲಾಳ್ಗಳಿರಾ ೧೧

ಅಳವಱಿಯದಿನಿಬರುಂ ಪ್ರ
ಜ್ವಳನಾಗ್ನಿಯೊಳಿಂತು ಪೊಕ್ಕು ಕೆಮ್ಮನೆ ನಿಮ್ಮ
ಗ್ಗಳಿಕೆಗಿಡೆ ಹೊಕ್ಕು ಕೆಟ್ಟ
ರ್ತಳವೊದವಿನಮಿಱಿದು ಸಾಯಲಾಗದೆ ಕೆನ್ನಂ ೧೨

---

1 ನೆ 2 ಕರು 3 ತು 4 ಳ

ವ॥ ಎಂದಿಂತು ಪಳ[1][ವಿ][1]ಸುತ್ತಿಪ್ಪಿನಂ ಕಾಲಯಮನ ಮುಂಗೋಳನಾಯಕ ರುರಿವ ಕೊಂಡಂಗಳಂ ಕಂಡು ತಮ್ಮರಸಂಗಂ ಪೇಳ್ದಟ್ಟಿ ತಾಮಲ್ಲಿರ್ಪಿನಂ ಕಾಲಯಮುಂ ಬಂದೆಲ್ಲಾ ದೆಸೆಯೊಳಮುರಿವ ಕೊಂಡಂಗಳಂ ಕಂಡು ಬೆಕ್ಕಸಂಬಟ್ಟು ನಿಂದಂತೆ ನೋೞ್ಪಲ್ಲಿ ಪಳವಿಸುತ್ತಿರ್ದ ಒಡಬಿದ್ದಿಯುಂ ಕಂಡೆಲೆಗಿಂತೇಕೆ ನೀಂ ಹರಿವಂಶದವರ ಪೆಸರೊಳ್ ಪಳವಿಸಿದಪ್ಪೆಯೆಂದೊಡಾಕೆಯಾನವರ ದಾದಿಯೆನೊಡಸಾಯಲಾಱದಿಂತು ಕುದಿದಪ್ಪೆನೆಂ ದೊಡವರೆಂತು ಸತ್ತರೆನೆ

ಕಂ॥ ಅರಸಂಗೆ ಕೈದುವಿಡಿದೀ
ಪಿರಿದಾಗುವ ಪಾಪಮುಟ್ಟೆತಿನ್ನದ ಮುನ್ನಂ
ಪರಿಭವಿಸಿ ಸಾವೆನೆಂದಾ
ಹರಿವಂಶಜರೆಲ್ಲಮಿಲ್ಲಿ ಕಿಚ್ಚಂ ಪೊಕ್ಕರ್ ೧೩

ವ॥ [2][ಎನೆ ಕೇಳ್ದು][2] ನೆರೆದ ನೆರವಿ ನಾವಿನ್ನಾರಂ ಪಿಡಿತಪ್ಪಮಿಾ ವಂಶಂ ವಿಧ್ವಂಸ ಮಾಯಿ[3][ತ್ತು][3]ನಾಡತ್ತ ಪೋಪುದುಂ ಚಕ್ರವರ್ತಿಯ ಪಗೆವರೊಳಾಳಾಗಿದುಮಿನ್ನಣಮೆ ಪೋಗಲಾಗ[4][ದೆಂದು][4] ದ್ವೀಪಾಂತರಂಗಳಂ ಪುಗುವಮೆಂದು ಪರೆಯೋಡಿದರೆಂದು ಮತ್ತಮ ಱುತ್ತಂಕೊಂಡಂಗಳ ಪೊದಲೊಳೆಲ್ಲ ಪೋಗಿ ಪೆಸರ್ವೇೞ್ದು ಪಳವಿಸುವುದುಂ ವಿಸ್ಮಯಂಬಟ್ಟು ಕಿಚ್ಚುವಾಯ್ದ ವಿಧಿಗಳಂ ಕಂಡು ನಂಬಿ ಕೆಲವು ದಿವಸಮಿರ್ದವರ ಬೀಡುವಿಟ್ಟು ಪೋದೆಡೆ ಯಪ್ಪುದನಱಿಯದಱಿದು ನಿಶ್ಚೈಸಿ ತಪ್ಪಿಲ್ಲ ಹರಿವಂಶಜರೆಲ್ಲಮಿಲ್ಲಿ ಸತ್ತರೆಂದು ಮಗುೞ್ದು [5][ಪ][5]ಯಣಂಬೋಗಿ ಜರಾಸಂಧಂಗಾ ವೃತ್ತಾಂತಮೆಲ್ಲಮಂ ತಿಳಿಯೆವೇೞ್ದುದುಮಾತನು ಮಾ ಮಾ[6][ತಂ][6] ನಂಬಿ ರಾಗದಿಂ

ಕಂ॥ ಈ ವಸುಧಾತಳದೊಳ್ ನರ
ನಾವನುಮಿರ್ಪನ್ನನಿಲ್ಲಮುಳ್ಳೊಡಮವನಂ
ತಾವೆಡೆಯುಂ ಪುಗುವನೊ ದೆಸೆ
ದೇವತೆಗಳೆ ಪಿಡಿದು ನುಂಗುಗುಂ ಪೆಱವೇನೋ ೧೪

ವ॥ ಅವರ್ ತಾಮೆಂತುಂ ಬರ್ದುಂಕದುದನಱಿದು ತಾವೆ ಸತ್ತು ಜಮರರಾದ ರೆಂದು ಶತ್ರುಕ್ಷಯಮಾದುದಕ್ಕೆ ಮುಯ್ವಂ ನೋಡಿಯುಮೊಸಗೆಯುಂ ಮಾಡಿ ಪೇಗಿಲ್ಲದ ಗರ್ವದಿಂ ಮೆಯ್ಯಱಿಯದಿರ್ದನಿತ್ತ ನಾರಾಯಣಾದಿಗಳ್ ಕಾಳಯಮನ ಮಗುೞ್ದು ಪೋದುದಂ ಕೇಳ್ದು ನಮ್ಮ ಪುಣ್ಯದೇವತೆಯ ಗೊಡ್ಡಮೆಂದೊಸೆದು ಮತ್ತಂ ನಡೆದು ಸಮುದ್ರ ತೀರಮನೆಯ್ದಿ ಬೀಡುವಿಟ್ಟಿರ್ದಿನ್ನೆಲ್ಲಿ ಪಱಮೆಂದು ತಮ್ಮೊಳಾಳೋಚಿಸುವಲ್ಲಿ ಪುತ್ರಮುದ್ದಾ ಮನೆಂಬಮಂತ್ರಿಯೆಂದಂ ನಾರಾಯಣನಂ ದರ್ಭಶಯನದೊಳಿರಿಸುವಮಾತನ ಪುಣ್ಯದೇವತೆ

1 ವಿ 2 ಕೇಳಿ 3 ತು 4 ದೆಂ 5 ಬ 6 ತನು

ಪೇೞ್ಗೆಂದು ಸಮಕಟ್ಟಿ ನಾರಾಯಣನುಂ ಶುಚಿಭೂತನಾಗಿಯುಪವಾಸಂಗೆಯ್ದು ದರ್ಭ ಶಯ್ಯೆಯೊಳ್ ಪವಡಿಸಿದಾತನುಂ ಚಕ್ರವರ್ತಿ ಮಾಡುವ ಪುಣ್ಯಮುಮಂ ಹರಿವಂಶದೊಳ್ ನೇಮಿಭಟ್ಟಾರಕನೆಂಬ ತ್ರಿಭುವನಸ್ವಾಮಿ ತಾನುದಯಂಗೆಯ್ವ ನಿರತಿಶಯ ಪುಣ್ಯಮುಮಂ ದೇವೇಂದ್ರನಂ ನೆನೆಯಿಸಿ ಬಗೆದು ನೋಡಿ ದೇವೇಂದ್ರಂ ಬೇಗಮವರ್ಗಿರಲಿಡೆಮಾಡುವೆನೆಂದು ಬಗೆದು ಹರಿವಂಶಕ್ಕಿರಲಿಡೆಗುಡುಗೆಂದು ವರುಣನಲ್ಲಿಗೆ ನೈಗಮದೇವರನಟ್ಟಿದೊಡಾ ದೇವಂ ಬಂದು ನಾರಾಯಣನ ಬಲದ ತೋಳಂ ಪೊಯ್ದಿತ್ತ ನಿನ್ನ ಮನೆಯ ಮಣಿಕನಕ ಯೋಗಾಳಂಕೃತಮಾಗಿ ಬಂದಿರ್ದ ದಿವ್ಯ ಧವಳಾಶ್ವಮುಂ ನೀನೇಱಿ ಸಮುದ್ರದೊಳಗೆ ನಿನ್ನ ಮೆಚ್ಚುವನಿತಿದೆಯುಂ ಪರಿಯಿಸು ಪರಿಯಿಸಿ[ದ]ನಿತಿದೆಯುಂ ನಿನಗಿರಲಿಡೆಮಾಡುವೆನೆಂದು ಪೇೞ್ದು ಪೋದಿ ನಿಸುಬೇಗದಿನೆೞ್ಚತ್ತು ತನ್ನ ಕಂಡ ದರ್ಶನಮಂ ಪ್ರಭುಗಳ್ಗೆಲ್ಲಮಱಿಯೆ ಪೇೞ್ದೊಸೆದಿರ್ದ ಪೇೞ್ದಂದದೊಳ್ ದಿವ್ಯಮಪ್ಪ

ಚಂ॥ ತುರಗದ ಮೇಲೆವಾಯ್ದು ಕಡಿಕೆಯ್ದು ಮಹಾಶರದಿನ್ಸಮುದ್ರದೊಳ್
ಪರಿಯಿಸೆ ಬೆಚ್ಚಿ ನೀರುಡುಗಿ ಪೋಯ್ತು ಕಲಣ್ಮಡೆ ಕಟ್ಟಿಗಟ್ಟಿದಂ
ತಿರೆ ನಿಱಿ ಭೂಮಿಪಂ ನೆರೆದು ಯೋಜನಮಾಗಿರೆ ವಾತ್ರೆಗೇಱಿ ಬಂ
ದಿರೆ ಕಡುರಾಗಮಾಗಿ ಸುರಿದರ್ ಸುರರೊಪ್ಪಿರೆ ಪುಷ್ಪವೃಷ್ಟಿಯಂ ೧೫

ವ॥ ಆಗಳ್ ಹರಿಯ ಮೇಗಣಿಂದಮಿೞಿದೊಡಶ್ವರೂಪ[ಮದೃಶ್ಯ]ಮಾಗಿ ನಿಂದು ಪರಸಿ ಪೋದನಾಗಳ್ ಹರಿವಂಶಜರೆಲ್ಲಂ ನಾರಾಯಣನುಂ ಪಸೆಯೊಳಿರಿಸಿ ಸೇಸೆಯನಿಕ್ಕಿ ತಮ್ಮ ಬೀಡಿನೊಳೆಲ್ಲಂ ಪಿರಿದುಮೊಸಗೆಯಂ ಮಾಡಿರ್ದನಮಿಂದ್ರನ ಬೆಸದಿಂದ[1][ಮಡ್ಡಂ][1] ಬಂದು ಸಮುದ್ರದುಡುಗಿದ ನೀರೆಲ್ಲಂ ಪನ್ನೆರಡು ಯೋಜನಮೆಂಬ ನಾಲ್ವತ್ತೆಣ್ಗಾವುದ ಪರಿಪ್ರಮಾಣಮದಱ ಮಧ್ಯಪ್ರದೇಶದಲ್ಲಿ ಮುನ್ನಂ ತೀರ್ಥಕರ ಸಮವಸರಣಮುದಯಿಸುವ ದೆಱಂದಂ ಸಮುದ್ರವಿಜಯ ಬಲದೇವ ವಾಸುದೇವರ್ಗೆಂದು ರತ್ನಮಯಮಾಗಿ ಸಪ್ತತಳಮಪ್ಪ ಕರುಮಾಡಂಗಳಂ ಮೂಱಂ ಮಾಡಿ ಬಳಸಿ[2][ಯುಮಂತಃಪುರ][2] ಪ್ರಸಾದಾದ್ಯನೇಕವಿಧ ಪರಿಕರಲಸದ್ಗೃಹಾಳಿಗಳಂ ಸಮೆದು ಮಕರತೋರಣಾಳಂಕೃತಚತುರ್ಗೋಪುರೋದ್ಭಾಸಿತ ತ್ರಿವೇದಿಕಾಪರಿವೃತ ರಾಜಾಲಯ ಬಹಿರ್ಭಾಗದೊಳ್ ಸ್ವಗೋತ್ರಪ್ರಧಾನನಿವಾಸಮಪ್ಪೇಕಶಾಲ ದ್ವಿಶಾಲ ತ್ರಿಶಾಲ ಚತುಶ್ಶಾಲ ಪಂಚತಳ ಮಹಾನಾಟ ಕೂಟಸ್ವಸ್ತಿಕ ವಳಭಿಸದ್ಮ ಗುಳ್ಮೋತ್ಪಳ ನಂದ್ಯಾವರ್ತ ಶ್ರೀಭದ್ರ ಶಾಲಾದ್ಯನೇಕವಿಧ ರಮ್ಯಭವನಂಗಳು ಮನಸ್ಥಾನದ ಪ್ರಕೋಷ್ಠ ಪ್ರಕೃತಿಭವನಂಗಳುಮನತಿಶಯ ಬಹುಪ್ರಕಾರಮಪ್ಪ ಭವನಂಗಳುಮನಪೂರ್ವಮಾಗೆ ಸಮೆದಾ ಪೊೞಲ್ಗೆ ದ್ವಾರಾವತಿಯೆಂದು ಪೆಸರನಿಟ್ಟಂತು

---

1 ನಡಂ 2 ಯುಮಂತಕ್ಪುರ

ಕಂ॥ ಚಕ್ರಿಗಿರಲ್ಕಂ ಧರ್ಮಸು
ಚಕ್ರೇಶ್ವರ ನೇಮಿಗುದಯದೆಡೆಯಾಗಲ್ಕಂ
ಶಕ್ರಂ ಮಾಡಿಸಿದೊಡೆ ಭೂ
ಚಕ್ರದೊಳಾ ಪೊೞಲನಾರೊ ಪೊ[1][ಗೞಲ್ಕ][1]ಱಿಪರ್ ೧೬

ವ॥ ಧನದನಂತು ಮಾಡಿ ಬಂದು ಸಮುದ್ರವಿಜಯಾದಿ ಹರಿವಂಶಪ್ರಭುಗಳುಂ ಉಗ್ರಸೇನಾದಿ ಬಂಧುವರ್ಗಮುಂ ಮಂತ್ರಿಪುರೋಹಿತಶ್ರೇಷ್ಠಿ ಸೇನಾಪತಿಗಳುಮಂ ಮುಂದಿಟ್ಟು ನಾರಾಯಣನನೊಡಗೊಂಡು ಮಹಾವಿಭೂತಿಯಿಂ ಪುಗಿಸಿ ಕರುಮಾಡದೊಳ್ ವಿಷ್ಣುಗೆ ರಾಜ್ಯಾಭಿಷೇಕಂಗೆಯ್ದು ಸಿಂಹಾಸನದೊಳಿರಿಸಿ ತ್ರಿಖಂಡಮಂಡಳಾಧಿಪತಿಯಾಗೆಂದು ಪರಸಿ ಪಟ್ಟಂಗಟ್ಟಿ ಧನದಂ ಪೋದಿಂ ಬೞಿಯಂ ಪಿತೃಮಾತೃಗಳುಮಂ ಬಂಧುವರ್ಗಮೆಲ್ಲಮಂ ಮಪ್ಪಪರಸಿಸೇಸೆಯನಿಕ್ಕಿ ಕಿಱಿದು ಬೇಗದಿಂ ಸಮುದ್ರವಿಜಯಾನುಮತದಿನೆಲ್ಲಂ ತಮಗುಚಿತಮಾ[2][ಡಂ][2]ಗಳೊಳಂ ಮನೆಗಳೊಳಂ ಪೊಕ್ಕು ಸುಖದಿನಿರ್ದು ಕೆಲವು ದಿವಸದಿಂ ವಿಜಯಾರ್ಧಪರ್ವತದ ರಥನೂಪುರಚಕ್ರವಾಳಪುರಾಧಿಪಂ ಸುಕೇಶನೆಂಬ ವಿದ್ಯಾಧರರಾಜಂ ಮುನ್ನೆ ಕಂಸನಲ್ಲಿ ತನ್ನಟ್ಟಿದ ನಾಗಶಯ್ಯೆಯುಂ ಶಾರ್ಙ್ಗಾಯುಧಮುಮನುಯ್ವಾಯ ಶಂಖಮುಮಂ ಸಾಧಿಸಿದುದುಮಂ ಕಂಸಂ ಕೊಂಡುಪೋಗಿ ಸಮುದ್ರದೊಳಗೆ ದ್ವಾರಾವತಿಯೆಂಬ ಪೊೞಲಂ ಮಾಡಿ ಸಂತೋಷದಿನಿರ್ದುದುಮಂ ಕೇಳ್ದು ತನ್ನ ಮಗಳಂ

ಕಂ॥ ನಿರುಪಮಿತ ಸತ್ಯಭಾಮಾ
ವರ ಕನ್ನೆಯುಮನಖಿಲಲೋಕಮಾನ್ಯೆಯನೆಂತುಂ
ಹರಿಗೆ ಕುಡಲೆಂದು ಮಹಿತ
ನುರುಮಹಿತಂ ಪ್ರಕಟವಸ್ತುವಾಹನ ಸಹಿತಂ ೧೭

ವ॥ ಮಹಾನುರಾಗದಿನೊಡಗೊಂಡು ಬಂದು ಸಮುದ್ರವಿಜಯಾದಿಗಳುಂ ಯಥೋಚಿತಕ್ರಮದಿಂ ಕಂಡು ಶುಭಮುಹೂರ್ತದೊಳ್ ಹರಿಗಂ ಸತ್ಯಭಾಮೆಗಂ ಪಾಣಿಗ್ರಹಣಂಗೆಯ್ದು ಅಮೌಲ್ಯವಸ್ತುಗಳಂ ಬೞಿವೞಿಗೊಟ್ಟು ಕೆಲವು ದಿವಸಮನಿರ್ದತಿಪ್ರಿಯದಿಂ ಕಳಿಪೆ ಪೋದಂ

ಕಂ॥ ಅಂತು ಹರಿ ಸತ್ಯಭಾಮಾ
ಕಾಂತೆಯೊಳೊಡಗೂಡಿ ನಿಂದು ಪಲದಿವಸಂ ನಿ
ಶ್ಚಿಂತತೆಯಿನಿರ್ದನಿರೆ ಹರಿ
[3][ಸಂ ತರೆ][3] ಸುಖಮಂತನೆಯ್ದಿಯಖಿಳಖ್ಯಾತಂ ೧೮

ವ॥ ಅಂತಿರ್ದೊಂದು ದಿವಸಂ ಮಹಾಸ್ಥಾಯಿಕೆಯೊಳ್

1 ೞಲನೆ 2 ದ್ವಂ 3 ಕುಬೇರಂ

ಕಂ|| ತೊಳತೊಳತೊಳಗುವ ಮಿಂಚಿನ
ಬಳಗಮನಿಸಱಿಪೊಂದು ತೇಜಮುಗ್ಗಳಿಕೆ ಮನಂ
ಗೊಳುತಿರೆ ನಭದಿಂ ನಾರದ
ನಿೞಿತಂದಂ ಭೋಜನಾಮನಲ್ಲಿಗೆ ವಂದಂ ೧೯

ವ|| ಬಂದುವನಱಿದು ನಾರಾಯಣನುನುತಿಪ್ರೀತಿಯಿನೇಱಲಿಕ್ಕಿ ಕುಳ್ಳಿರ್ದೋನ ನಿನ್ನೆಗಮೆಲ್ಲಿರ್ದು ಬಂದಿರೇ ಬಾರ್ತೆ ಬೆಸನೇನೆನೆ ವಿದರ್ಭವಿಷಯದೊಳ್ ಕೂಂಡಿನಪುರಮೆಂಬ ಪೊೞಲದನಾಳ್ವಂ ವಿಶ್ವಾವಸುವೆಂಬನರಸನಾತಂಗಂ ಶ್ರೀಮತಿಯೆಂಬರಸಿಗಂ ಪುಟ್ಟಿದಂ ರುಗುಮಿಣಕುಮಾರನೆಂಬೊನಾತನಿಂ ಕಿಱಿಯಳ್ ನಿರತಿಶಯ ರೂಪಲಾವಣ್ಯ ಮಹಾ ಪುಣ್ಯಸಮೇತೆಯಂ

ಕಂ|| ಎಣೆಯಿಲ್ಲೆನಿಸುವ ಸಲ್ಲ
ಕ್ಷಣಯುತ ಕುಲಜನಿತ ವಿನುತ ವನಿತೆಯನಗಧಾ
ರಿಣಿಯಂ ನಯನಮನೋಹಾ
ರಿಣಿಯಂ ರುಗ್ಮಿಣಿಯನಖಿಳ ನಯಕಾರಿಣಿಯಂ ೨೦

ವ|| ಕಂಡು ಮನಮೆಗೊಂಡು ನಿನಗೆ ಮನೋಹಾರಿಣಿಯಾಗಲ್ಕೆ ತಕ್ಕಳೆಂದು ಬಂದೆಮೆನೆ ಹರಿ ರಾಗದಿಂ ಪೇೞಿಮಾಕೆಯವಯವಂಗಳೇನೊಳ್ಳಿದವೆಯೆನೆ ಮತ್ತಂ ನಾರದ ನಿಂತೆಂದಂ

ಕಂ|| ಮೆಲ್ಲಿದವಾಗಿ ನಯಂಬಡೆ
ದೆಲ್ಲಿಯುಮಾ ತಾಮ್ರಭಾವಮೆಸೆದಿರೆ ಪಲವುಂ
ಸಲ್ಲಕ್ಷಣಂಗಳಿಂದು
ತ್ಫುಲ್ಲಾಂಬುಜವದನೆಯಡಿವಳಿರ್ ಸೊಗಯಿಸುಗುಂ ೨೧

ಬಿರ್ದ ಪೊಸದಳಿರ ಮೇಗೊರ
ಗಿರ್ದೆರಡಾಮೆಗಳ ಮಾೞ್ಕೆಯೆಂತಂತೆ ನಯಂ
ಪೊರ್ದೆ ಕಡುಚೆಲ್ವಿನತ್ತೊಲೆ
ದಿರ್ದುವು ಪೊಱವಡಿಗಳೆರಡುಮಬ್ಜಾನನೆ[1][ಯಾ][1] ೨೨

ನಿರುಪಮ ಲಲಿತ ಲತಾಂಗಿಯ
ಚರಣ ಲಸತ್ಕಿಸಲಯಾಗ್ರ ಪರಿಶೋಭಿತ ಭಾ
ಸುರ ನಖಕಿರಣಾವಳಿಗಳ
ನಿರತಿಶಯಾಕಾರಮೊಪ್ಪನೇವಣ್ಣಿಸುವೆಂ ೨೩

1 ಯಂ

ಉಂಗುಟನುನುಗುರ್ಗಳುಂ ನೆಱಿ
ದಿಂಗಳ[1][ನ][1]ಸುಕರಿಪು[2][ವ][2]ರ್ಘನಾದಂ[3][ದಿ][3]ನ ಜಂ
ದ್ರಂಗೆಣೆ ತಾನೆಂ[4][ದು ಕರಂ
ಸಿಂ][4]ಗದೆ ಸುಟ್ಟಿಸವು ನೊಸಲನಾ ಕನ್ನಿಕೆಯಾ ೨೪

ಪಡೆಗುಂ ವಿರಹವ್ಯಥೆಯುಂ
ನಡೆನೋಡಿದ ದೇವರಾಜನಿಭನುನುಜಂಗಂ
ಪಡೆಗುಂ ಜಯಮಂ ಮದನಂ
ಗುಡುಪಾಕ್ಕೆಯು ಜೆಲ್ಪಸಪ್ಪ ಕಿಱುದೊಡೆಯು ಸಸಂ ೨೫

ಮನವೊಸೆದು ನೆರೆಯೆ ನೋವೇ
ನನುನೆಯುದಿಂ ಬಾಸದಾಕೆಯು[5][ಳ್ದೊ][5]ಡೆಯುಂ ಮು
ನ್ನೆನಸುಂ ನೋಡಲ್ಪ[6][ಡದೇ][6]
ಕೆನೆ ನೋಡಲ್ ಬೞಿಕೆ ಬಾಸಮುಱಿದನಯನನುಂ ೨೬

ಮದನನಿಧಾನಮನೊಳಕೆ
ಯ್ದುದಱಿಂ ಕನ್ನೆಯ ನಿತಂಬಮುನ್ನತಿಕೆಯಿನೊ
ಪ್ಪಿದುದಂತೆಯುಮಲ್ತೆ ನಿಧಾ
ನದ ಮೇಗಿರ್ದ[7][ಡವನಾವನು][7]ನ್ನತನಾಗಂ ೨೭

ಮೃದುತರ ಭಂಗಿಯೊಳಲ್ಲಾ
ಟದೊಳಱಿದಪ್ಪುದೆಱಕೊಳಂತೆ ನಡುವುಂ ಲತೆಯುಂ
ಸುದತಿಯ ನಡು ತನ್ನಂ ನೋ
ಡಿದನಂ ಸೋಲಿಸುಗುಮಿಂತಿದಗ್ಗಳದ ಗುಣಂ ೨೮

ತಿವ[ಳಿಯೊ]ಳೊಳುಪು ನಿಜಂ ತಳು
ಪವಿರಳಮತಿನುತಮಕೃತ್ರಿಮಂ ನುಣ್ಪೆನೆ ನೋ
ಟ್ಟವರ ಮನಂಬುಗುವಂತೊ
ಪ್ಪುವ ಬಸಿ[8][ಱುಂ ತೊ][8]ಳಪ ವಿಮಳ ಕನಕಾಸನೆ[9][ಯಾ][9] ೨೯

---

1 ವ 2 ಮ 3 ಡಿ 4 ದರಮುಸ 5 ಳ್ದೊ 6 ಡೆ 7 ವನಾವನಾಗಲು
8 ತೊರ್ 9 ಯುಂ

ಅತಿಲಲಿತ ಲತಾಮಧ್ಯ
[1][ಸ್ಥಿ][1]ತ್ರೈಕ ಕುಸುಮಕ್ಕೆ ಸೆಣಸಿ ನಂದ್ಯಾವರ್ತಂ
ಪ್ರತಿಯಣಮಲ್ಲದೆಯುಂ ತಾಂ
ಪ್ರತಿಯಾಗಲ್ ಪಡೆದುದಕ್ಕೆ ಚೋದ್ಯಂಬಡುವೆಂ ೩೦

ಸ್ತನ ಜಘನಂಗಳ ನಡುವೆಂ
ಬನಿತಱನುಂಟೆನಿಪ ನಡುವಿನೊಳ್ ಬಾಸೆಯ[ದೇ]
ನೆನೆ [2][ಅಸಿದಲ್ಲದು][2]ದಿಲ್ಲೆಂ
ಬನಿತಾಗಿರ್ದಪು[3][ವು][3] ಬಾಸೆ [4][ನೀಳಾಳಕಿಯಾ][4] ೩೧

ಮೃಗನೇತ್ರೆಯ ಮೊಲೆಗಳ ಬಿಗಿ
ದೊಗೆದಂದಂ ರೋಮರಾಜಿಯೆಂಬೆಳನಾಗಂ
ಮೊಗಮೆಂಬುದು ಪತಿಗೆಯ್ತರೆ
ಪುಗಲೀಯದೆ ತಾಗುವಂದಮೆಂದಾಂ ಬಗೆವೆಂ ೩೨

ಅಳಿಕುಳಕುಂತಳೆಯೊಪ್ಪುವ
ನಳಿತೋಳ ಬೆಡಂಗಿನಿಂದಮಿಂತೀ ಲೋಕಂ
ಗಳನಲೆವುದೊಂದು ದರ್ಪಮ
ನೊಳಕೆಯ್ದುದಱಿಂ ಪ್ರಸಿದ್ಧಮಾದನನಂಗಂ ೩೩

ಆ ಸತಿಯ ಮನದ ಮೆಲ್ಪಂ
ಭಾಸುರಗುಣರಕ್ತೆಯಪ್ಪುದಂ ಕರತಳವಿ
ನ್ಯಾಸದ ಮೆಲ್ಪಂ ರಕ್ತಾ
ಭಾ[5][ಸದ][5] ನಯದಿಂ[6][ದಮಱ][6]ಪೆನುಂತೆತ್ತಱಪೆಂ ೩೪

ಸರಸಿಜ ಸನ್ನಿಭ ನಯನೆಯ
ಜಿರಳ್ಗೆ ಮನುಮಥ[7][ನ ಸರಳೆ][7] ಸೆಣಸಾ[8][ಡಿ][8] ಸಮಂ
ಬರಲುಂ ನೆಱೆಯದೆಯದೆ ಮೆ
ಯ್ಗರೆದಿರ್ದಗೊ[9][ಳ್ವಾ][9]ಯುಮೇಂ ಮನಂಗೊಳಿಸಿಕ್ಕುಂ ೩೫

---

1 ಖ 2 ಶಪಪು 3 ಪತ್ತಿ 4 ನಿನ್ನಾಳಕಿಯು 5 ರಪ 6 ಪಂ ಮತಿ 7 ಸರಳ್ಗಿ
8 ಗಿ 9 ಳ್ಪುದುಪಾ

ಅಂಗನೆಯ ಹಸ್ತನಖಮೆ[1][ಳ್][1]
ದಿಂಗಳ್ ಕೇದಗೆಯ ಸುಳಿಯ ಮಧುವೆಂಬುದನೆ
ತ್ತಂ ಗೆಲ್ದಿರ್ದವು ತೊಳಗುವ
ಪೊಂಗಿನೊಳಾಕೃತಿಯೊಳೆಸೆವ ವರ್ಣಕ್ರಮದೊಳ್ ೩೬

ಬೆಳರ್ವಸುರಿಂದ[ಮು]ಣ್ಕೆಯ
ನಿಳಿಸುವ ಸುಣ್ಪೊಗರ ತೋಳ ಮೊದಲಂ ಕಂಡಾ
ಗಿಳಿ ನೊಂದು ಸಂ[2][ತ][2]ಸಿಕ್ಕೆ[ಯು]
ಯೆಳೆದಳಲಿಗೆ ಮುಗುಟ್ದು ಕಂಡ ಸಂ[3][ತಸ][3]ಮೆ ಸಮಂ ೩೭

ಆಕೆಯ ಕೊರಲಂದಮನವ
ಲೋಕಿಪೆ ತುಂಗಂಗಳಂತೆ ಶೃಂಗಾರರಸಾ
ದ್ರ್ಕಾಸ್ತ್ರಿಯುಕ್ಕುಮದಱಿಂ
ದಾಕೆಗೆ ಸುತಲಾಭಮುಪ್ಪುದದು ಸಂದೇಹಂ (?) ೩೮

ಎನ್ನಂ ನೋಡಲ್ ಮಾಱು
ತ್ತುನ್ನತಿಕೆಯುಮನುಂಟುಮಾಡಿ ನೋಡಿದರೆರ್ದೆಯುಂ
ಭಿನ್ನಂ ಮಾಡುವೆನೆಂಬಂ
ತುನ್ನತಕುಚಯುಗೆಯ ಬಾಯ್ ಕರಂ ಸೊಗಯಿಸುಗುಂ ೩೯

ಲಲನೆಯ ದಶನದ್ಯುತಿಯೊಳ್
ಮಲೆದೆಡಱುತೆ ಕುಸಿದ ಮಿಂಚಿನಂದಮನೆಱಿದಿಂ
ಜಲವರ್ಷಕಾಲಮುಪ್ಪಿನ
ಮಲಸದ ಗಂಡಂಗೆ ಶಿಶಿರರಿತು ಕಳೆವುದದಂ ೪೦

ಮುನ್ನಮೆ ಸಂಪಗೆಯಂ ಗೆ
ಲ್ವನ್ನವು ಲಕ್ಷಣಮೊಳೊಂದಿ ಸೊಗಯಿಪ ಮಧುರಾ
ಸನ್ನುತೆಯ ಮೂಗಿನೊಳ್ಪಮ
ನಿನ್ನಾನೇನೆಂದು ಪೊಗೞ್ವೆನುಪಮಾತೀತಂ ೪೧

1 ಳು 2 ತೊ 3 ತೊಷ

ಆ ವಧುವಿನ ಕಿವಿಗಳೊಳೊ
ಪ್ಪಾವಗಮೆಂದಿರ್ದಡದುವೆ ನೋಟ್ಪವರೆರ್ದೆಯಂ
ಪೌವನೆ ಪಾಱಿಸುಗುಂ ಪೆಱ
ದಾವುಮೊ ಬಾಟಿಸುವ ವಸ್ತು ನರರ್ಗೀ ಜಗದೊಳ್ ೪೨

ಬಿಳಿಯುವತಿಸ್ನಿಗ್ಧಂಗಳ್
ಪೊಳೆಮೊಪ್ಪುವುವಾಯತಂಗಳವಱಿಂ ಮತ್ಸ್ಯಂ
ಗಳ ತೆಱದಿಂದಂ ಸೊಗಯಿಪು
ವಳಿಕುಳಕುಂತಳೆಯ ಪೊಳೆವ ನಿಡಿಯಲರ್ಗಣ್ಗಳ್ ೪೩

ತೊಳಗುವನಿತಿಲ್ಲ ಪಿಱಿದ
ಪ್ಪಳವಿಯುಮಿಲ್ಲಮುಭವಂಗಮಣಮಲ್ತಂತುಂ
ಮಿಳಿರ್ದಾಯಮೆಂಬನಿತ್ತಱಿಕೂ
ಳೊಳಕೆಯ್ದುವು ಪುರ್ವು ಜಯಮುನಾ ಮಾನಿನಿ[1][ಯಾ][1] ೪೪

ನೀರೇಜಾಸ್ಯೆಯ ನೊಸಲುಂ
ಚಾರುತವರ್ಧೇಂದುವಂ ಜಗತ್ಪ್ರಣುತೆ ನಿಜಾ
ಕಾರದೊಳಂ ತೊಳಪುದಱಿಕೂಳ
ಪೋರನ್ನವೆ ಬಗೆದು ನೋಟ್ಪಿಡಿಂತಾಯೆರಡುಂ ೪೫

ಕರಿಯವೆನಿಸಿರ್ದು ಪೊಳೆವುವು
ಸುರುಳ್ದು ಕುಸಿದಿರ್ದುವರಳುತಿಪ್ಪುವು ಬೇಱಾ
ನಿರುತಂ ಬಂಬಲೊ[2][ಳೊಪ್ಪುವ][2]
ಕುರುಳಂದಮಿದೇಂ ವಿರುದ್ಧಮೋ ಕಾಮಿನಿ[3][ಯಾ][3] ೪೬

ವಿಳಸದನೂನೈಶ್ವರ್ಯಂ
ನೆಲಸೆ ಮಹಾದೇವಿಯಪ್ಪ ಪುಣ್ಯಕ್ಕೆಂದುಂ
ನೆಲೆಯಪ್ಪುದನಾ ಕನ್ನೆಯ
ನೆಲೆಯುಳವಿಯೆ ಬುಧಜನಕ್ಕೆ ಪೇಟ್ಗುಂ ಪೆಱವೇಂ ೪೭

1 ಯುಂ 2 ಳ್ಪುವ 3 ಯುಂ

ಅತಿಮಧುರ ಗೀತ ಲಕ್ಷಣ
ಯುತಮಾಗುಸ ಬಣ್ಣಮೆಸೆವ ತೆಱದೊಳ್ ಸುಸ್ವ್ನೇ
ಹತೆಯೊಡಗೂಡಿ ತಗುಳ್ದೆಸೆ
ದತಿಶಯಮಿಪೆನಿ[1][ಪು][1]ದು ಬಣ್ಣಮಂಬುಜಮುಖಿ[2][ಯಾ][2] ೪೮

ನೋಡಿದ ಮನುಜಂಗಱಲಂ
ನೀಡಿಲ್ಲದೆ ಕೊಟ್ಟು ಗೆಲ್ಲಮಂ ಕೀರ್ತಿಯುಮಂ
ನಾಡೆಯುಮೆಸೆದಿರೆ ಕೊಂಡುದು
ಗಾಡಿ ಮಹೋತ್ತುಂಗ ವೃತ್ತಘನಕುಚಯುಗೆ[2][ಯಾ][2] ೪೯

ಸುಂದರಗಜೇಂದ್ರಗತಿ ಸತಿ
ಬಂದಾವನ ಮನೆಯೊಳಿಕ್ಕುಮಾತಂಗೆ ಕರಂ
ಸಂದಿರ್ದಾಯುಮ[ದೈಸಿರಿ]
ಪೊಂದಿ ನಿರಂತರಮೆ ನಿಲ್ಕುಮೆಂಬುದನಱಪೆಂ ೫೦

ಕೋಮಳಲತಾಂಗಿ ಗಜನಿಭ
ಗಾಮಿನಿ ಪೊಗಟ್ವಂಗಳುಂಬಮೆಂತುಂ ಪೊಗಟ್ವಂ
ದೇಮಾತಹಿಪತಿ ನೆಱಿಯಂ
ವ್ಯಾಮೋಹಿಗೆ ನೆಗಟಿಲಾಗಮೆಂಬುವುಮೊಳವೇ ೫೧

ಏನಾನುಂ ನೆವದಿಂದಂ
[3][ಮೇ][3]ನಕೆ,ಸುರಪತಿಗೆ ಮುಳಿದು ಸುರಗತಿಯಿಂದಂ
ತಾನಿೞಿದು ಬಂದಳಲ್ಲದೆ
ಮಾನಸರಿಂತಾಗರೆಂದು ಭಾವಿಸುತಿರ್ದ[ಂ] ೫೨

ವ|| ಇಂತು ಸ್ವಭಾವಾಖ್ಯಾನೋಪಮಾ [4][ರೂ][4]ಪಕ ದೀಪಕಾ[5][ಧಿಕಾ][5]ಕ್ಷೇಪಾರ್ಥಾಂತರನ್ಯಾಸ ವ್ಯತಿರೇಕ ವಿಭಾವನಾ ಸಮಾ[6][ಸೋಕ್ತ್ಯ][6]ತ್ಪ್ರೇಕ್ಷಾ ಹೇತು ಸೂಕ್ಷ್ಮ [7][ವಕ್ರೋಕ್ತಿ][7] ಪ್ರೇಯೋ ರಸವದೂರ್ಜಸ್ವಿ ಪರ್ಯಾಯೋಕ್ತಿ ಸಮಾಹಿತೋದಾತ್ತಾಪ[8][ಹ್ನುತಿ ಶ್ಲೇ][8]ಷ ವಿಶೇಷ ಸದೃಶೋಕ್ತಿ ವಿರೋಧ [ಅ]ಪ್ರಸ್ತುತಸ್ತೋತ್ರ [9][ವ್ಯಾಜ ವ್ಯಾಜನಿಂದೆ ವ್ಯಾ][9]ಜಸ್ತುತಿ ನಿ[10][ದರ್ಶ][10]ನ ಸಹೋಕ್ತಿ ಪರಿವೃ[11][ತ್ತಿ][11] ಸಂಕೀರ್ಣ ಭಾವಿಕಂಗಳೆಂಬ ಮೂವತ್ತೈದುಮರ್ಥಾಳಂಕಾರ ಭಿತ್ತಿಯೊಳ್ ಪೊಗೞೞ ಮೆಚ್ಚಿ

1 ಸು 2 ಯಂ 3 ಮಾ 4 ಲೊ 5 ದ್ರಿತಾ 6 ಕ್ಯೊ 7 ವಕ್ತ್ರಮ
8 ಹ್ನಾತಿಶೇ 9 ಮಾ 10 ಶದಶ 11 ತ್ಯಾಸಿ

ಪೇೞಿವಾಕೆಯನೆಂತು ತಪ್ಪದೇಗೆಯ್ವುದೆಂದೊಡೆ ಯಮನ ಮಗನಪ್ಪ ಶಿಶುಪಾಲಂಗೆ ಪತ್ತೆಂಟು ದಿವಸದೊಳಗೆ ಕುಡಲ್ ಬಗೆದಿರ್ದರಂ ಬೇಗಂ ಕಯ್ಗೆ ಮಾಡಿಮೆಂತಪ್ಪೊಡಮೆಱ ದೊಡಂತೆಗೆಯ್ವೆಮೆಂದು ನಾರದನನತಿಪ್ರೀತಿಯಿಂದಂ ಮನ್ನಿಸಿ ಕಳಿಪಿ ತಾನುಂ ಬಲದೇವ ನುಮೇಕಾಂತದೊಳ್ ರುಗ್ಮಿಣಿಯಂ ತಪ್ಪ ಕಜ್ಜಮನಾಳೋಚಿಸಿ ಅರ್ಜುನಂಗೆ ಬಱಿಯ ನಟ್ಟಿ ಸತ್ಯ[1][ಕಿಯು][1]ಮರ್ಜುನನುಮನೊಡಗೊಂಡು ಪತ್ತೆಂಟು ರಥದೊಳ್ ಕಿಱುದು ಸಾಮಗ್ರಿಯಿಂ ಪೊಱಮಟ್ಟು ತಮ್ಮ ಬಲಮುಂ ಪೆಱಗನೆಯ್ದೆ ಬರವೇೞ್ದು ದಾೞಿಮಾರ್ಗದಿಂ ಕುಂಡಿನಪುರಮನೆಯ್ದೆ ಬಹಿರ್ಭಾಗದೊಳ್ ವಿಶ್ರಮಿಸಿರ್ದು ಸತ್ಯಕಿಯುಮರ್ಜುನನುಮಂ ಪೊೞಲಂ ಪೊಕ್ಕಾರೈದುಬನ್ನಿಮೆಂದಟ್ಟಿದೊಡವರಿರ್ವರುಂ ಪೋಗಿ ನೋೞ್ಪರಾ ಪೊೞಲ ಪೊಱಗೊಂದು ದೆಸೆಯೊಳ್

ಕಂ॥ ಇಂತೆಂಬುದೊಳವೆ ಪೆಂಪೆಂ
ಬಂತಿರೆ ನೋೞ್ಪವರ ನೋೞ್ಪ [2][ಕಂಗಳ್][2] ಕೋರೈ
ಪಂತಿರೆ ಚಿಂತಿಸಲಾಗೆಂ
ಬಂತಿರೆ ಬಿಟ್ಟಿರ್ದ ಪಿರಿಯ ಬೀಡಂ ಕಂಡರ್ ೫೩

ವ॥ ಕಂಡಲ್ಲಿಯೊರ್ವನನಿದಾರ ಬೀಡೆಂದೊಡಿದು ಮುಳಿವಂಗೆ ಜವನ ಕಣ್ಬೇಡು ಪೆಱದಲ್ಲೀ ಪೊೞಲನಾಳ್ವರಸನ ಮಗಳಂ ಶಿಶುಪಾಲನೆಂಬೊಂಗೆ ಮದುವೆಗೊಳಲ್ ಬಂದಿರ್ದಂ ಯಮನೆಂಬ ಮಂಡಳಿಕನಾ ಶಿಶುಪಾಲನಳವದೆಂತೆಂದೊಡೆ

ಕಂ॥ ಬಲದ ಬಲಗರ್ವದಿಂ ತೋ
ಳ್ವಲದ ಕರಂ ಚಲದಳುರ್ಕೆ[3][ಯಿಂ][3] ಸುರರೊಳ್ ಮಾ
ರ್ಮಲೆವಂ ಖೇಚರರನಡು
ರ್ತಲೆವಂ [4][ತ][4]ನಗೇಕಭೋಗನಾಗಿರಲೊ[5][ಲೆ][5]ವಂ ೫೪

ವ॥ ಅಂತಪ್ಪ ಬಲ್ಲಾಳ್ಗೆ ನಾಡಿದು ಮದುವೆಯೆಂಬುದನಱಿದು ಪೊೞಲೊಳಗಂ ಪೊಕ್ಕು ರಾಜಾಲಯದ ಮುಂದಣಲ್ಲಿದ್ದಾರಯ್ಯುತ್ತಿರ್ಪನಮಾ ರಾಜಕನ್ಯೆ ಜಿನಾಲಯದ ಯಕ್ಷನನರ್ಚಿಸಿ ಮಗುಟ್ದಿರನುಸೆಗೆ ಬಪ್ಪುದಂ ಕಂಡಱಿದು ಕಾಪಿನವರನಿರಿದು ಬೆರ್ಚಿಸಿ ಕನ್ನೆಯನೆತ್ತಿಕೊಂಡು ಸತ್ಯ[6][ಕಿಯಂ][6] ಬೆಱಗಂ ಕಾದು ಬರವೇೞ್ದು ಅರ್ಜುನನಿಂತೆಂದು ಸಾಱುತ್ತಂ ಮಗುಟ್ದಂ

1 ಕನು 2 ಕಣ್ 3 ಯಿಾತಾಂ 4 ದ 5 ಲ 6 ಕನಂ

ಮ॥ ಕುಡಲೆಂದಿರ್ಪ ನರೇಂದ್ರನಕ್ಕೆ ಕೊಳಲೆಂದುತ್ಸಾಹದಿಂದಿರ್ದನ
ಪ್ಪಡಮುಕ್ಕಿರ್ಪರ ಬೀಡಿನಲ್ಲಿ ಛಲಮಂ ಕೊಂಡಾಡುವೊಲ್ ಗಂಡರು
ಳ್ಪಡಮುಕ್ಕನ್ಮುಪರಡ್ಡಮಾಗಿರೆಳಿಕೊಳ್ಗೊಂಡೊರ್ವನೊಯ್ದಪ್ಪನೇ
ಪಡೆಮಾತೆನ್ನಯ ಪೈದುನಂಗೆ ಕುಡಲೆಂದೀ ಕನ್ನೆಯಂ ಮಾನ್ಯೆಯಂ ೫೫

ವ॥ ಎನುತಮಂತೆ ಪೊಱಲ ಬೀದಿಯೊಳ್ ಬರ್ಪರ್ ಗಂಡರ್ ಬೆಕ್ಕಸಮಾಗಿರೆ ನಿಲೆ ಕಂಡವರಂ

ಕಂ॥ ಗಂಡರ ಮಿಸೆಯ ಮಾಱ್ಕಯೆ
ಗಂಡರಗಲ್ದುರಮೆ ಪಿಡಿದ ಕೈದುಗಳಿಂದಂ
ಗಂಡರ ಕೆಯ್ತುಮೆ ಭಯದಿಂ
ಪೆಂಡಿರ ತೆಱದಿಂದ ನೋಡುತಿರ್ಪರದೆಂತೋ ೫೬

ವ॥ ಎಂದಲೆಯುತ್ತಮುರದೆ ಮಲೆಯುತ್ತಂ ಬರೆ ಕೆಲ[1][ರ್ ಕೆಳದರ್ು][1] ಮೇಲ್ವಾಯಲ್ ಬಂದರನೊಂಪೆ ಕೈಯೊಳ್ ಪಿಡಿದೀಡಾಡುತ್ತಂ ಪೆಣನುಯಂ ಮಾಡುತ್ತಮಂತೆ ಬಂದು ವೀರಶ್ರೀಯಂ ತಂದುಕೊಡುನಂತೆ ರುಗ್ಮಿಣಿಯಂ ಹರಿಯ ರಥದೊಳಗಿರಿಸಿ ತಮ್ಮುಕ್ಕನಿಬರುಂ ಯುದ್ಧಸನ್ನದ್ಧರಾಗಿರ್ಪಿನಂ ಪೆಳಱಿದ ಕಾಪಿನವರ್ ಪೇೞೆ ವಿಶ್ವಾವಸು ಮಹಾರಾಜಂ ಕೇಳ್ದು ಕೆಳ[2][ರ್ದಂ][2]ತೆ ಪರಿತರಲ್ ಬಗೆದೊಡೆ ಪೆರ್ಗಡೆಗಳ್ ಬೇಡಿದಂತೆ ಪರಿಯಲಾಗ ನಿಮ್ಮ ಮಗಳಪ್ಪುದುಮಂ ಬಲ್ಲಾಳಪ್ಪ ಶಿಶುಪಾಲಂಗೆ ಕುಡಲಿರ್ದುದನಱಿಯುತ್ತಮೇೞೆದುತರಿಸಿದಾತಂ ಸಾಮಾನ್ಯನಲ್ಲಂ

ಕಂ॥ ಏಪಡೆಮಾ[3][ತೊ][3] ವಿನೂತನು
ಹಾಪರವಾರಿಧಿಯೊಳಮರರುಚಿತ ಲಸದ್ದ್ವಾ
ರಾವತಿ ಪುರಪತಿಯಾಗಿ (?)
ರ್ದಾ ಪರಮೇಶ್ವರನ ಗೊಡ್ಡಮಾಗಲೆವೇೞ್ಕುಂ ೫೭

ವ॥ ಅದಱಿಂ ನೆಲದ ಕೆಲದ ಭೃತ್ಯವರ್ಗಮೆಲ್ಲಮಂ ಬರಿಸಿ ನಾಳೆ ಕಾದುವ ವರಂ ಬೆನ್ನಂ ತಗುಳೆ ಪೋಪ ಗಂಡರಲ್ಲರೆನುತಮಿರೆ ಕನ್ನೆಯನೆೞೆದುಕೊಂಡು ಪೋದುದುಮಂ ಪುರಕ್ಷೋಭಮಾದುದುಮಂ ಶಿಶುಪಾಲಂ ಕೇಳ್ದು ಬಂದು ನೀಮಿದಕ್ಕೇನುಂ ಸಂಕಟಂಬಡದಿರಿಮಾತನೆನಿತಾದಡಮೇನಾಂ ಬರಲ್ ಗಂಡರೊಳರೆ ನೋಡುತ್ತಿರಿಮಿಾಗಳ ವಸಂ ಕೊಂದು ಕನ್ನೆಯಂ ತಂದಪೆನೆಂದು ಪೊಱಮಡಲ್ ಬಗೆದೊಡಾಗದೆಂದೆಲ್ಲಮನೋಸರಿಸಿ ನೆರವಿಯಂ ಬರಿಸಿ ನಾಳೆ ಕಾದುವಮೆಂದೊಡಂಬಡಿಸಿ ತಂತಮ್ಮ ಬೀಡಿಂಗೆ ಪೋಗಿ

---

1 ರಳಲ್ದು 2 ಲ್ದಂ 3 ತಿ

ಸನ್ನಾಹಂಗಳನಿಂಬುಮಾಡು[1][ತ][1]ಮಾಳಂ ನೋಡುತ್ತಮಧಿನಾಸದವಂ ಬರಿಸುತ್ತಂ ನಯಂಗೆಯ್ದಿರಿಸುತ್ತಂ ದಾನಸನ್ಮಾನಾದಿಕ್ರಿಯೆ ಯೋಗಮೊಳಂ ಸಮರೋದ್ಯೋಗಮೊಳ ಮಿರ್ದರಿತ್ತ ನಾರಾಯಣನುಮವರ ಪೂಜಮಡುವುದಂ ಕಾಣದೆ ನಾಡೆ ಪೊತ್ತೊಡ್ಡಿ ನಿಂದಿರೆ ಪೋಪುದು ಪಾಱಿಯುತ್ತೆಂದು ಬೀಡಂ ಬಿಟ್ಟಿರ್ದನನ್ನೆಗಂ ಪೆಱಗಣ ಸಮಸ್ತಮುಳ್ಳ ಯಾದವರ ಸಾಧನಮೆಲ್ಲಂ ಬಂದು ಕೂಡೆ ಬಿಟ್ಟುಮಿರ್ದತ್ತಾಗಳ್

ಕಂ॥ ಕುಡುವನ ಕೊಳ್ವನ ಬಗೆಯಂ
ಪಡಲಿತ್ತು ಪೆಱಂಗೆ ಬಗೆದ ಬಿದಿಯಣಕ[2][ಕ್ಕಂ][2]
ಕಡುನಾಣ್ಚಿದಂತೆ ಭಾಸ್ಕರ
ನಡಂಗಿದಂ ಮೆಲ್ಲನಸ್ತಶೈಳದ ಮಱಿಯೊಳ್ ೫೮

ವ॥ ಅಂತಾದಿತ್ಯನಸ್ತಮಾನಮಾದಾಗಳುಂ ಎರಡುಂ ಪಡೆಯ ಸುಭಟರ್ ಸಮರೋದ್ಯೋಗ ನಿಯೋಗದಿಂದಿರೆ ಪಲವುಂ ಪ್ರಾಣಿಗಳ್ಗೆ ಮಿತ್ತು ಮೂಡುವಂತೆ ನೇಸಱ್ ಮೂಡಿದೊಡೆ ವಿಶ್ವಾವಸು ಮಹಾರಾಜನುಂ ರುಗ್ಮಿಣಕುಮಾರನುಮೊಂದು ಮೊನೆಯಾಗಿ ಬಂದೊಡ್ಡಿದರ್ ಯಮನುಂ ಶಿಶುಪಾಲನುಮೊಂದು ಮೊನೆಯಾಗಿ ಬಂದೊಡ್ಡಿದರಿತ್ತ ನಾರಾಯಣನುಂ ಬಲದೇವನುಮರ್ಜುನನುಂ ಸತ್ಯಕಿಯುಮೊಂದಾಗಿ ತಮ್ಮ ಬಲಮೆಲ್ಲಮ ನಿಂಬುಮಾಡಿ ಪಸರಿಸಿ ಬಂದೊಡ್ಡಿ ನಿಂದರಂತೆರಡುಂ ಬಲಮೊಡನೆ ಪಱಿಯಂ ಪೊಯ್ಸಿ ಕೈವೀಸಿದಾಗಳಿರ್ವಲದ ಧನುರ್ಬಲಂ ಮಸಗಿ ತಾಗಿ

ಕಂ॥ ತಿರುವಾಯೊಳಂಬನಿಟ್ಟೆ
ರ್ದಿರಮೊಡನೊಡನೆಚ್ಚೊಡೊಗೆದು ಪಾಱುವ ಸರಮುಂ
ಸರಲುಂ ರಣಭರಮುಂ ಭೀ
ಕರಮುಂ ನೋೞ್ಪವರ್ಗೆ ನಾಡೆ ಪಡೆದುದಗುರ್ವಂ ೫೯

ಬಿಲ್ವಡೆ ಚಲದಿಂದಂ ನೆ
ಗೊರ್ಳ್ವರೆ ಬೆಚ್ಚಗ್ಗಿತಗ್ಗಿ ಮರ್ಗಾಗಿ ಕರಂ
ಬಲ್ವಾತುಗಿಡದೆ ಸತ್ತು ಪ
ಡಲ್ಪಟ್ಟ[3][ರಿ][3]ರೌದ್ರಮಾದುದಾ ರಣರಂಗಂ ೬೦

ವ॥ ಅಲ್ಲಿಂ ಬೞಿಯಂ

1 ತಂ 2 ಕ್ಕಂ ತಾಂ 3 ತ್ತರಿ

ಕಂ|| ಕುಮರೆ ಪರಿತಪ್ಪುದಂ ಕಂ
ಡಿದಿರರಿಸಾದನಡಕುದುರೆಗಳ್ ಮುಸಗಿ ತಗು
ಳ್ದಿದಿರಾಂತು[ಂ] ಚಲದಿಂದೊ[1][ದ
ವಿದ][1] ಮುಳಿ[2][ಸಿಂದು][2]ಣ್ಮಿ ಪೊಣ್ಮಿ ತಟ್ಟುತ್ತಿಱಿದರ್ ೬೧

ವ|| ದಟಿಮಾಂತಿಱಿದು ಕೆಡೆದಾಗಳ್

ಕಂ|| ತೇರ್ತೇರೊಳ್ ಸರಭಸದಿಂ
ನೂರ್ತರ್ಗೆ ಭಟರ್ಕಳಾರ್ದ ನರಪತಿಗೆ ಕರಂ
ಕೂರ್ತುದುಮಂ ಸಾಯಲ್ ತಾ
ಮಾರ್ತುದುಮಂ ಕಾದಿ ನೆರಪಿ ಮುಮ್ಮ್ರಿಯಾದರ್ ೬೨

ವ|| ಮತ್ತಂ

ಕಂ|| [3][ಕಟ][3]ತಟ ಗಳಿತ ಮ[4][ದೋ][4]ತ್ಕಟ
ಘಟಿ ರೌದ್ರಪ್ರಕಟಕೋಪ ವಿ[5][ದ್ವಿ][5]ಟ್ಸೇನಾ
ಘಟೆಯೊಳತಿ ಚಟುಳ ರಣಲಂ
ಪಟ [6][ಭ][6]ಟರೊಳಿದಿರ್ಚಿ ನೂಂಕಿ ತಾಗಿದರಾಗಳ್ ೬೩

ವ|| ತಾಗಿ ಬಹುಪೇದ್ಯದಿನಿಱಿದು ಬೆಟ್ಟು ಕೆಡೆವಂತೆ ಕೆಡೆದಿಂಬೞಿಯಂ ಶಿಶು[7][ಪಾಲಂ ತ][7]ಮ್ಮ ಬಲಮುರ್ಕಾಡುವುದುಮಂ ಅಂಜಿಯೋಡುವುದುಮಂ ಕಂಡು ಮನಮೊಳಟಿಲುಣ್ಮೆ ಮುಳಿಸು ಕೆ[8][ಯ್ಗ][8]ಣ್ಮೆ ನಾರಾಯಣಂಗಿದಿರಂ ನೂಂಕಿ ಕಾದುತ್ತಿರ್ದಂ ವಿಶ್ವಾವಸುವರ್ಜುನನೊಳಿದಿರ್ಚಿದಂ ವೇಣುದಾರಿ ಬಲದೇವನನಾಂತಂ ಯಮಂ ವಸುದೇವನೊಳ್ ತಾಗಿದಂ ರುಗ್ಮಿಣಂ ಸತ್ಯಕನೊಳ್ ಪೊಣರ್ದು ಕಾದೆ ರುಗ್ಮಿಣಿ ಹರಿಯ ಲೀಯಪೆಂತಪ್ಪಡಮೆಮ್ಮಣ್ಣನಂ ಪಿಡಿಗೆಂದು ಸತ್ಯಕನಲ್ಲಿಗಟ್ಟಿವಳದಂತವರ್ ದ್ವಂದ್ವ ಯುದ್ಧದೊಳ್ ಮುಸಗಿ ಕಾದೆ ಶಿಶುಪಾಲಂ ತನ್ನ ಮುಂದಣ ಬಲಂ ಕಿಡೆ ಸತ್ತ್ರದಕ್ಕೆ ಕಡು ಮುಳಿದು ರಥಮನ್ನೈದೆನೂಂಕಿ ಹರಿಯನಿಂತೆಂದಂ

ಕಂ|| ತುಱುಪಟ್ಟಿ ನಿನ್ನ ಪೆಳದೇಂ
ತುಱುಕಾಱಂ ನಿನ್ನ ತಂದೆ ತುಱುವನೆ ಕಾವೈ
ತುಱುಕಾರ್ತಿಯರೊಳ್ ಮಱಸಿವಾ
[9][ಟ್ವಿ][9]ಱಿಕೆಯ ಗೋವುಳಿಗ ನಿನಗೆ ಶೌರ್ಯಮೆ ಪೊಲಸೇ ೬೪

1 ಡವಿಡ 2 ಸು 3 ಕರಟ 4 ದದು 5 ದ್ಯು 6 ಪಟುಭ 7 ಬಾಲಂತೆ 8 ಯ್ಯು 9 ಳ್ವರ

ಮ॥ ಉಡಿಪ್ಪೈ ಬಂಡಿಯನೇಸಗುರ್ವೊ ಮಗುಳ್ದಿಂ ವಿಕ್ರಾಂತದಿಂ ಕಾಗೆಯಂ
ಪಿಡಿಪ್ಪೈ ಸಂಕಿಸದೆರ್ದು ಕತ್ತೆ ಬಡಗೂಂಟೆಂದಿಂತಿವಂ ನೋವಿನಿಂ
ಬಡಿಪ್ಪೈ ನೀರೊಳಗೊಳ್ಳಿಯಂ ಮಡಿಪಿಪ್ಪೈ ನೀಂ ಜೋದ್ಯಮೋ ಮತ್ತೆ [1][ವಂ][1]
ಡಿಡುವಂ ಮಾಣ್ದಿರವೊತ್ತಿಪ್ಪೈ ಗಡವಿದೇನಾಶ್ಚರ್ಯಮೋ ಸಾಹಸಂ ೬೫

ಕಂ॥ ಒಲ್ಲದೆ ನಾಣಂ ಕೈದುಗ
ಳಿಲ್ಲದೆ ಕುಣಿದಳಿಪಿ ಕಡು [2][ಪೋರ್ವ ಮಲ್ಲರುಮಂ
ನಿಲ್ಲದೆಯಪೌಂ][2]ಕಿಯೆ ಗೆಲ್ದಾ
ಗೆಲ್ಲಂ ನಿನಗಾದೊಡಿಱಿವ ಗೆಲ್ಲದೊಳೇನೋ ೬೬

ಚಂ॥ ಬಟಲದೆ ಪೊತ್ತು ಕಲ್ಲಸುಲುವಂಗೆಣೆಯಾದ ಮಹಾಪ್ರತಾಪಿ ನೀಂ
ಪೆಬಿಕನಡುರ್ತು ಕೊಂದ ಕಡುವಲ್ಲಣಿ ಮಾಣ್ದಿರವಣ್ಣ ಬಂದು ನಾ
ಯ್ನೊಟಲೆಯ ನೇಲೆ ಪಟ್ಟಿ ಕಡುವೀರ ಕುಟುಂಬದಿನಗ್ಗಳಿಕ್ಕೆ ಕೈ
ಗಟಿದಿರೆ ಶಂಖವೋ [ಗಡ] ಮಹಾತ್ಮ್ಯರಣಾಗ್ರದೊಳೇಡಗುಳ್ಳಿಯೋ ೬೭

ಕಂ॥ ತಾಯೊಡವುಟ್ಟಿದನಂ ಕೊಂ
ದಾಯತಿಯೊಪ್ಪಿರ್ದುದಕ್ಕೆ ನೀಂ ಬಿಸುಟು ಕುಲಾ
ಮ್ನಾಯದ ಪೊಟಲಂ ಭಯದಿಂ
ತೋಯಧಿಯೊಳಗುಱಿದೆ ಗಂಡರಾರ್ ನಿನ್ನನ್ನರ್ ೬೮

ಉ॥ ಇನ್ನವು ಸಾಹಸಂಗಳೊಳವಾಗಿರೆ ಕೆಮ್ಮನೆ ಸಂ[3][ತಸಿ][3]ಕ್ಕೆಯಿಂ
ದನ್ನಯನಂತನಾಗಿರದಿದೇನೆನಗಲ್ಲದ ಮರ್ತ್ಯರಾರ್ಗಮಾ
ಸನ್ನುತೆಯಪ್ಪ ಕನ್ನೆ ವಿಷಕನ್ನೆ ಬರ್ಱಕುವ ಕೊಂಡು ಜೇಡ [4][ನೀ][4]
ನೆನ್ನೊಳಿದಿರ್ಚಿ ಸತ್ತು ಕಿಡದಿರ್ ಬಿಡು ಮೆಚ್ಚಿಡದಿರ್ ಲತಾಂಗಿಯೊಳ್ ೬೯

ಕಂ॥ ಬಡಕಳ್ಳಂ ಸಾಯದೆ ಪೋ
ಪಡೆ ಲೇಸೆಂಬಂತೆ ನಿನಗದುಂತಾಗಿಯುಮಿ
ನ್ನುಡುವಿನೊಳೇಂ ಕೈ ಪೋತಂ
ಗಡೆ ಸಾಲ್ಗುಂ ಸತಿಯೊಳೇನೊ ಪೋಪುದೆ ಗೆಲ್ಲಂ ೭೦

ವ॥ ಎಂಬಂತೆನಿತಾನುಂ ತೆಱದ ಭಾಷೆಯೊಳ್ ಬೈದುದಂ ಹರಿ ಕೇಳ್ದುಮವರಟ್ಟಿ ಮೂಱು ಪೊಳ್ತುಮಿಯನೀತಂಗೆ ಸೈರಿಸುವುದೆಂದೆನಗೆ ಕೈಯೊಡ್ಡಿ ಜೇಡಿದೊಡಾಂ ನೂಱುವರಂ ಸೈರಿಸುವೆನೆಂದೆನೆಂದು ತನ್ನೆಂದುದಂ ನೆನೆದು ನೂಱುವರಂ ಕೇಳುತ್ತಿರ್ದನತ್ತ ಬಲದೇವಂ

1 ರ 2 ಮಲ್ಲರನುಂ ಕಡು ದೇಸಿಗರನಾಂ 3 ತೊಷಿ 4 ಗಿಂ

ಹಳಾಯುಧದಿಂ ವಿಶ್ವಾವಸುವಿನ ತಲೆಯನೊಡೆವೊಯ್ದು ಕೊಂದಂ ಅರ್ಜುನನುಂ ತನಗಾಂತ ವೇಣುದಾರಿಯುಂ ಕೊಂದಂ ಸತ್ಯ[1][ಕನುಂ][1] ರುಗ್ಮಿಣನಂ ವಿರಥನಾಗೆಚ್ಚು ಪಿಡಿದು ತನ್ನ ರಥಮೊಳಗಿಟ್ಟುಕೊಂಡು ಬಂದನನ್ನೆಗಂ ನಾರಾಯಣಂ ಶಿಶುಪಾಲನ ಬಯ್ಗುಳ್ ನೂಱು ನೆಱೆದಾಗಳ್ ಅಮೋಘಾಸ್ತ್ರದಿನೆಚ್ಚು ಕೊಂದು ವಿಜಯಪಟಹಮಂ ಪೊಯ್ಸಿ ಕೊಳ್ಳೊ[2][ಡೆಯುಂ][2] ಜಿಳಸಿ ಬೀಡಂಬಿಟ್ಟಿರ್ದು ವಿಶ್ವಾವಸು ಮೊದಲಾಗೆ ಸತ್ತ ನಾಯಕರಂ [3][ದಾಹಿ][3]ಸವೇಱ್ದು ರುಗ್ಮಿಣಕುಮಾ[4][ರಸುಮಂ][4] ಕನ್ನೆಯುಮುನಾಱಿ ನುಡಿದು ರುಗ್ಮಿಣಂಗಾ ಪದವಿಯುಂ ಮಾಡಿ

ಚಂ॥ ನೆಱಪಿದನೇಕ ಜೀವನುರುಣೌಗ್ರರಣೌಹತಮಾದುದಾಗಿಯುಂ
ಹರಿಬಲ ಶೌರ್ಯಸಂಚರಣಮಿಂದುಕುಲೋದ್ಧರಣಾಸುಖಪ್ರಸಂ
ಸರಣ ಸಮುತ್ಕ್ರಿಯಾಪರಣಮಕ್ಕುಮನಿಂದಿತ ರೂಪ ರುಗ್ಮಿಣೀ
ಹರಣಮುಪೇಂದ್ರಚಿತ್ತಹರಣಂ ಜಯ ಸಿಂಹರಣಕ್ಕೆ ಕಾರಣಂ ೭೧

ವ॥ ಅದಱಿಂದುತ್ಸಾಹವಂತನಾಗಿ ಕನ್ನೆಯನೊಡಗೊಂಡು ಪಯಣಂ ಬಂದು ಕೆಲವು ದಿವಸದಿಂ ದ್ವಾರಾವತಿಯನೆಯ್ದಿ ದೇವತೋದ್ಯಾನವನದ ಕೆಲಮೊಳ್ ಬಿಟ್ಟಿರ್ದು ಬಂಧುಜನ ಪುರಜನ ಪರಿಜನಾದಿಗಳ್ಗೆ ಪೇೞ್ದಟ್ಟಿ ಬರಿಸಿ ಬೀಡಿನೊಳ್ ತನಗಂ ರುಗ್ಮಿಣಿಗಂ ವಿವಾಹಮುಂ ಮಾಡಿ ಕೂಡಿರ್ದನಂ ಸತ್ಯಭಾಮೆ ಕೇಳ್ದು ನೋೞ್ಪೆನೆಂದು ಬರುತ್ತಿರ್ದುದಂ ಹರಿ ಕೇಳ್ದು ಸತ್ಯಭಾಮೆ ಮೊದಲಾಗೆಲ್ಲರುಂ ನಿನಗೆಱಗುವಂತು ಮಾಡಿದಪ್ಪೆನೆಂದುರುಗ್ಮಿಣಿಯ ನೊಡಂಬಡಿಸಿ ದಿವ್ಯವಿದ್ಧಮಾಗೆ ಕಯ್ಗೆಯಿಸಿ ಬನದೊಳಗಣಶೋಕವೃಕ್ಷದ ಮೊದಲೊಳ್ ಸ್ಫಟಿಕದ ಜಗಲಿಯ ಮೇಲಿರಿಸಿ ನೀನುಸಿರದೆ ಕಿಱಿದುಪೊತ್ತನಿರೆಂದು ಕೆಲದೊಳೋಜೆ ಸೂಳೆಪೆಂಡಿರಂ ದೇವತೆಯನರ್ಚಿಸುತ್ತಂ ಪೊಡೆವಡುತ್ತವರಂ ಬೇಡುತ್ತಮಿರ್ಪಂತುಮಾಡಿ ಬೀಡಿಂಗೆವೋಗಿರ್ದನನ್ನೆಗಂ ಸತ್ಯಭಾಮೆ

ಕಂ॥ ಚಾಮೀಕರ ಕಳಶಧ್ವನಿ
ಚಾಮರ ಧವಳಾತಪತ್ರ ಪಡಡಕ್ಕಾದಿ
ಶ್ರೀಮದ್ವಿಭವಯುತಂ ಪೌ
ಲೋಮಿಯೆ ಬರ್ಪಂದದಂತೆ ಪೊೞಲಿಂ ಬಂದಳ್ ೭೨

ವ॥ ಬಂದಾಕೆಯಿರ್ದಲ್ಲಿಗೆ ಪೋಗೆನೆಂಬ ಗರ್ವದಿನೀ ಬನದೊಳಿರ್ದಪೆನೆನ್ನಲ್ಲಿಗೆ ತನ್ನ ತಂದ ಪೆಂಡತಿಯನಟ್ಟುಗೆ ನೋೞ್ಪೆನೆಂದು ಹರಿಯಲ್ಲಿಗಟ್ಟಿದೊಡೆ ಅಂತೆಗೆಯ್ವೆ ನೆಂದಟ್ಟಿ ಬೇಗಂ ಬನದೊಳಗಿರ್ದಿರ್ದಂ ಸತ್ಯಭಾಮೆಯುಂ ಬಂದು ಭವನಮಂ ಪೊಕ್ಕು ಸೊಗಯಿಸುವ ಬನಸನಿರ್ಥಿಯೊಳ್ ನೋಡುತ್ತಮಂತೆ ಪೋಪಳಿದಿರಂ ಬರ್ಪಾಕೆಗಳುಮಂ

1 ಕಿಯುಂ 2 ಳನ 3 ಜಾನಿ 4 ರಂ

[1][ಕಂಡಿರ್ದೇ][1]ಕಿತ್ತ್ರಬಂದಿರೆಂದೊಡೆ ಇಲ್ಲಿ ವಸವೇವತೆಯುಂಟು ಕರಂ ಸನ್ನಿಹಿತ [2][ಮಾಗವ][2]ನರ್ಚಿಸಿ ಪರಂಬಡೆದು ಪೋದಪೆಮೆನೆ ಮನಂಗೊಂಡು ಪೋಗಿ ದೇವತೆಯುಂ ಕಂಡು ಜೋದ್ಯಂಬಟ್ಟು ತಾನುಮರ್ಚನೆಯುಂ ತರಿಸಿ ವಿನಯದಿನರ್ಚಿಸಿ

ಮ|| ಹರಿ ಮಾಱಂತರನಿಕ್ಕೆ ವೀರಸಿರಿಯುಂ ತಪ್ಪಂತೆ ಬಿಂಬೋಪಮಾ
ಧರೆಯುಂ ರುಗ್ಮಿಣಿಯೆಂಬನಿಂದ್ಯವಧುವಂ ತಂದಾತನಿನ್ನಾ ತಳೋ
ದರಿಯುಂ ತಾನಣಮೊಲ್ಲದಿರ್ಪನಿತ ನೀಂ ಮಾಡಬ್ಬ ಮಾಡಿ[3][ತ್ರೊ][3]ಡಾ
ದರದಿಂ ಪಟ್ಟಮನೀವೆನೆಂದೆಱಗಿದಳ್ ಕಾಲ್ಗಾಗಳಷ್ಟಾಂಗದಿಂ ೭೩

ವ|| ಅಂತೆಱಗಿ ಪೊಡೆವಡುವುದಂ ಹರಿ ಕಂಡಿರ್ದೆಂ ರುಗ್ಮಿಣಿಯುಂ ನೋಡಲ್ ಬಂದುಮೆಯ್ದೆವಾರದೆ ಬರಿಸಿ ನೋೞ್ಪನೆಂಬ ಗರ್ವಮಾಗಳ್ ಕಯ್ಯಂ ಮುಗಿದಾಕೆಯಡಿಗೆಱಗಿ ಪರಂಬಡುವನಿತಾಯ್ತ್ತೆ ನಿನಗೆಂದು ನಗುವುದಂ ಕಂಡು ಸಿಗ್ಗಾಗಿ ಮುಳಿದೆದ್ದು

ಕಂ|| ಮೊದಲೊಳ್ ಗೋವನೆಯೆಂದೊಡೆ
ಪದವಿಯ ಪೆಂಪಿಂಗದೆಂತುಟಂತಾಗದಿದೆಂ
ಬುದನಣಮಱಿಯದಿದಂ ಮಾ
ಡಿದೊ[4][ಡಮದೇ][4]ನಾಕೆಗಪ್ಪ ಜಾಣಂ ಬಲ್ಲಂ ೭೪

ವ|| ಎಂದು ತಾನುಂ ತನ್ನೊಡನೆಯ ಪರಿಚಾರಕಿಯರುಮಾಕೆಯ ಮೇಲ್ವಾಯ್ದುಡೆಯುಮರ್ಚಿ ಮಾಲ್ಯಾಭರಣಂಗಳನೆೞೆದುಕೊಂಡೊಡೆ ಮತ್ತಂ ಪೞೆಯಂದ ದಿಂದಿಟ್ಟುಂ ತೊಟ್ಟುಂಪದಿನಿರಿ ಮತ್ತೆಯುಮೆೞೆದುಕೊಳೆ ಮುನ್ನಿನ ಪಸದನದಂದಮೊಳಿಕ್ಕಿ ಮದೆಂತೆನೆ

ಕಂ|| ಪ[5][ಱವಳೆಯುಂ][5] ಪ[6][ಱುಗೋಲಂ][6]
ಮ[7][ಱೆ][7]ಮಾಡಿ ಮುನೀಶ್ವರಂಗೆ ಮುನ್ನಿನ ಭವದೊಳ್
ಪಱಪಡೆ ಚಿಕ್ಕುಟುಮಂ ಗುಂ
ಗುಱುಮಂ ನೆಱೆ ಸೋರ್ಪುತಿರ್ದ ಭಕ್ತಿಯ ಭರದಿಂ ೭೫

ವ|| ಬನ್ನಂ ಬಂದಡೆಯುಮುಪ[8][ಪ್ರಥೆ][8]ಯುಮಿರೆ ನಿಶ್ಚಯಮೆ ದೇವತೆಗೆತ್ತ್ರಭಯಮುಂ ಸಿಗ್ಗುಮಾಗೆ ಮಗುೞ್ದುಪೋಗಿ ರತ್ನಮಾಡಮುಂ ಪೊಕ್ಕಳಿತ್ತ ರುಗ್ಮಿಣಿಯುಂ ತನ್ನನತಿಕ್ರಮಿಸಿದುದಕ್ಕೆ ಚಿಂತಿಸುತಿರ್ದುದಂ ಕೃಷ್ಣನಱಿದು ಸಾರೆನಂದು ಕಾಲಂಪಿಡಿದು ಸಂತಯ್ಸಿ ಬೀಡಿಂಗೆ ಕೊಂಡುಪೋಗಿ ಸಾಮಂತ ಮಹಾಸಾಮಂತ ಪ್ರಧಾನರುಂ ಬರಿಸಿ ರುಗ್ಮಿಣಿಯುಂ ತನ್ನೊಡನೆ ಸಿಂಹಾಸನಮೊಳಿರಿಸಿ ಮಹಾದೇವಿಪಟ್ಟಂಗಟ್ಟಿ

1 ...ಡೆ 2 ಮಗ 3 ತೊ 4 ಡೆ 5 ರಬ್ಬಳೆಯುಂ 6 ರುಗೊಲ್ಮಂ 7 ರಿ 8 ಪಡದೆ

ಪಿರಿದುಮೊಸಗೆಯುಂ ಮಾಡಿ ತಾನುಮಾಕೆಯುಂ ಪಟ್ಟವರ್ಧನಮನೇಱಿ ರಾಜ್ಯಚಿಹ್ನಂಗ ಳ್ವೆರಸು ಮಹಾವಿಭೂತಿಯಿಂ ಪೊೞಲಂ ಪೊಕ್ಕು ಕರುಮಾಡದೊಳ್ ಪಸೆಯುಮೇಗಿರ್ದು ಪರಕೆಯುಂ ಸೇಸೆಯುಮನಾಂತು ಸುಖದಿನಿರ್ದು ತಿಸ್ನೇಹಿತರಾಗಿ ನಿಜ್ಜಮಾಕೆಯೊಳತ್ಯಂತ ಕಾಮಭೋಗಾನುರಾಗದಿಂ

ಕಂ|| ಮನದೊಳೊಗೆದಱ್ಕಱುಂ ಸುಖ
ದನುಭವನೆಗೞ್ನಿತವನಿತುಮೊಡಗೂಡಿದೊಡಂ
ತನುಭವಿಸುತ್ತಿರ್ದನುದಿನ
ಮನುಪಮಿತ ಸುರೇಂದ್ರಸಂಪದದಿಂದಮುಪೇಂದ್ರಂ ೭೬

ವ|| ಆ ಮಾೞ್ಕೆಯೊಳಿರ್ದು ಕೆಲವು ದಿವಸದಿಂ ಮತ್ತಂ ನಾರದಂ ಬಂದೊಡತಿ ಪ್ರಿಯಂಗೆಯ್ದಿರಿಸಿ ನಿಮ್ಮಿಂದಂ ಸ್ತ್ರೀರತ್ನಮೆನಗೆ ದೊರೆಕೊಂಡುದಿನ್ನುಮೊಂದು ಕನ್ಯಾರತ್ನ ಮನಾರಯ್ದು ಪೇೞಮೆಂದೊಡೊಂದೆಡೆಯೊಳ್ ಕಂಡುಬಂದೆಂ ರಜತಗಿರಿಯ ದಕ್ಷಿಣಶ್ರೇಢಿಯ ಜಂಬೂಪುರಮನಾಳ್ವ ಜಂಭಾಂಬರ ಮಹಾರಾಜಂಗಂ ಜಂಬುಸೇನೆಗಂ ಪುಟ್ಟಿದ ಜಂಭಾ ವತಿಯೆಂಬ ಕನ್ನೆಯ ರೂಪಿನೊಳ್ಪುಮಂ ಗಾಡಿಯುಂದಮುಮಂ ಕೌಶಲಮುಮಂ ಬಣ್ಣಿಸ ಲಱಿಯೆನಾಕೆಗೆ ವರನಾಗಲ್ಕೆ ನೀನುಂ ಯೋಗ್ಯನಲ್ಲಿಯೆಂಬಂತಾಗಿರ್ಕುಮೆಂದೊಡನಿತು ಸಾಲ್ಗುಮಿನ್ನೇವೊಗ[1] [ಟಿಪ್ಪ ಬಿ][1] ಜಯಂಗೆಯ್ಯುಮೆಂದು ನಾರದನಂ ಕಳಿಪಿ ತಾನುಂ ಬಲ ದೇವನುಮೇಕಾಂತಮಿರ್ದೇಗೆಯ್ವಂ ನಾರದನ ಪೇೞ್ದ ಕನ್ನೆಯುನೆಂತು ತಪ್ಪಂ ಬಲಸಹಿತಂ ಭೂಮಿವಿಹಾರಂಗೆಯ್ವುತ್ತಂ ಪೋಪೆಡೆಯೊಳೊಪ್ಪಕ್ಕುಮಾಕಾಶಗಮನಂ ನಮಗೆ ಪೊಲವಲ್ತೇ ಕೆಂದೊಡೆ ನಿಮ್ಮಣ್ಣನಪ್ಪನಾವಿದ್ದ ಕುಮಾರನೆಂಬೊಂ ಶಾಲ್ಮಲಿಪತ್ತ್ರೆಯ ಮಗಂ

ಕಂ|| ಬಳೆದಂ ಖೇಚರಲೋಕದೊ
ಳಳುಂಬಮೆನಲಖಿಳ ಖೇಚ[2][ರರೊಳಂ][2] ವಿದ್ಯಾ
ಬಲಗರ್ವಮಧಿಕಮಾತನ
ತೊಳಪ ವಿಮಾನಂಗಳೊಳ್ ನರೇಶ್ವರ ಪೋಪಂ ೭೭

ವ|| ಎಂಬಾತನೊಡಂಬಡಿಸಿ ಬಲಸಹಿತಂ ವಿಮಾನಾರೂಢರಾಗಿ ಶಾಲ್ಮಲಿಪತ್ತ್ರೆಯ ಮಗಳಯ್ಯನ ಪೊೞಲೊಳ್ ಬಿಟ್ಟಿರ್ದು ಮುನ್ನಂ ಸಾಮಮುಂ ಪೊಣರ್ಚುವಮೆಂದು ಪೆರ್ಗಡೆಗಳನಟ್ಟಿದೊಡವರ್ ಪೋಗಿ ಜಂಭಾಂಬರ ಮಹಾರಾಜನ[ಂ] ಕಂಡಿಂತೆಂಬರ್

1 ಟ್ಟಿಬ್ಬ 2 ರ

ಕಂ|| ದ್ವಾರಾವತಿ ಪುರನಾಮಂ
ವಾರಿಜನಾಭಂ ಸುರೇಂದ್ರ ಸೌಂದರ್ಯ್ಯಾಭಂ
ವಾರಿಧಿ ಪರ್ಯ್ಯಂತ ಧರಾ
ಭಾರಮನಾನಲ್ಕೆ ನೆಱೆವ್ರೊಸಧಟನೆ ಮೆಱೆವ್ರೊಂ ೭೮

ವ|| ಅಂತಪ್ಪ ಪುರುಷೋತ್ತಮಂ ನಿಮಗಳಿಯನಾಗಲ್ ಬಗೆದು ಕೂಸಂ ಬೇಡಿ ಯಟ್ಟಿದಂ ಕೊಡದೊಡಮಂ ಬಗೆಯದಿರ್ಪುದೆನೆ ವಿದ್ಯಾಧರರಾಜನಿಂತೆಂದಂ

ಮ|| ಸುರರಾಜಂ ಪರನಪ್ಪಡಕ್ಕುಮಱಿಪಂದೀ ಲೋಕದೊಳ್ ಮತ್ಸುತಾ
ವರನಾಗಲ್ದೊರೆಯಲ್ಲ ನಿಟ್ಟಿಸಮರೇಂದ್ರಾಭ ಪ್ರಸಿದ್ಧೋದ್ಧ ಖೇ
ಚರರಾಜರ್ ನುಡಿವಟ್ಟಲಣ್ಣರಿದನೇಂ ಪೇೞರ್ ಕೇಳನೇ ಭೂಮಿಗೋ
ಚರನೆನ್ನಂಗದ ಕೂಸುವೇಡುವನಿದೇನೀ ಮೇಳವೇಕಾದುದೋ ೭೯

ವ|| ನೀಮೆನ್ನಳಿಯಮನೆನ್ನ ಮಗಳ ರೂಪಿ[ನ] ನಾಣ್ಣಾಣಿನ ಸೌಭಾಗ್ಯದ ಭಾಗ್ಯದತಿಶಯಮಂ ಕೇಳ್ದಱಿಯದಪ್ಪೊಡೆ ಜ್ಯೋತ್ಸ್ಯನಿಂದು ನೋಡಲ್ ಬಪ್ಪುದು ನಿಮಗೆ ವಿನಯಮುತ್ತಂಪೊಡವರ್ಕೇನಯ್ಯ ಪೆರ್ಗಡೆಗಳಿಂತೆಂಬರಾತಂ ಬೇಡಿ

ಕಂ|| ಅಟ್ಟಿದೊಡೀವುದು ಹರಿ ಬೆ
ನ್ನಟ್ಟಿ ತಗುಳ್ವಾಗಳೆಂದು[1][ನಿ][1]ತ್ತಸಿರಾತು
ಗೊಟ್ಟಕಿಲಂ ನುಡಿದೊನ ತಲೆ
ಯುಟ್ಟಿಯ ಮೇಗಿತು ನಿಲ್ವುದೆಂಬುದನಱಿಯಾ ೮೦

ವ|| ಮುನ್ನಱಿಯದೊಡಮಿನ್ನಱಿವಿರೆಂದು ಪೆರ್ಗಡೆಗಳ್ ಮಗುಳ್ದು ಬಂದು ನಾರಾಯಣಂಗಱಿಪಿದೊಡೆ ನೀರತ್ರೀಯೊದನಲ್ಲಿನೊರ್ಬಳೆ ಬಾರಳೆಂದು ಮಱುದಿವಸಮಾ ಪ್ರಾಬಿಲಂ ನಾಡೆ ಬೇಡಂಬಟ್ಟೊಡ್ಡಿ ಪಱೆಯಂ ಪೊಯ್ಸಿದಾಗಳ್ ಜಾಂಭವಂತ ಮಹಾ ರಾಜನಱಿದು ತನ್ನ ಸಮಸ್ತಸಾಧನಂಬೆರಸು ಪೊಱಮಟ್ಟೊಡ್ಡಿ ಕೆಯ್ಯಂ ಬೀಸಿದೊಡೆ ರಡುಂ ಬಲದ ಚಾತುರ್ದಂತಂ ಕ್ರಮಕ್ರಮದೊಳ್ ತಾಗಿ ಕಿಡಿಗುಟ್ಟಿದಂತೆ ಮುಮ್ಮಟಿ ದಾದಿಂಬಟಿಯಂ ಜಂಭಾಂಬರಮಹಾರಾಜಂ ವಿಷ್ಣುಗಂ ಬೆನ್ನಿಸಿದನಾಪ್ತೆಷ್ಟ ಕುಮಾರಂ ಪ್ರತಿವಿಷ್ಟಯುಂ ಘೇವಿಸಿ ಮಱೆಯದ್ದಿನಂದಾಂತ ಬಲಮಂ ತವೆಯಱಿದು ಖೇಚರಪತಿಯನಿಕ್ಕಿ ನಿಂದಾಗಳ್

---

1 ಖ

ಕಂ|| ವಿಜಯಪಟಹಸ್ವನಂಗಳ್
ನಿಜಬಲದೊಳ್ ನೆಗೞೆ ಪೊಗೞೆ ಪಲವುಂಗೆಯೆ ಜ[1][ಯ][1]
ಧ್ವಜಮನುರಾಗದೆ ಬೇಗಂ
ವಿಜಯಶ್ರೀ ಬಂದು ನೆರೆದಳಬ್ಜೋದರನೊಳ್ ೪೧

ವ|| ಅಂತು ನಾರಾಯಣ....ರಸ್ತ್ರೀಯಂ ಕೈಕೊಂಡು ಕೋಳ್ಗುಳಂಗೊಂಡು ಮಾವನೊಡಲಂ ಸಂಸ್ಕಾರಿಸಲ್ಪೇೞ್ದು ಪೊೞಲಂ ಪೊಕ್ಕು ಕನ್ನೆಯುಮನಱಿಸಿ ಕಾ[2][ಣ][2]ದನಾ ವೃಷ್ಣಿಕುಮಾರನ ಮೊಗಮಂ ನೋಡಿದೊಡಾ[3][ತಸಂತರ್ಧಾ][3]ನವಿದ್ಯೆಯಿಂ ಮಱಸಿರ್ದ ಳೆಂಬುದಾಕೆಯ ವಿದ್ಯೆಯುಮಂ ಭೇದಿಸಿ ಕನ್ನೆಯುಮಂ ಕಂಡು ಕೊಂಡುಬಂದು ಹರಿಗೆ ತೋಱಿ ದೊಡೆ ನಿಮ್ಮಮ್ಮನ ದರ್ಪದಿನಿಂತಾಯ್ತು ಬೆೞಗಂಬಡದಿರೆಂದಾಱತಿನುಡಿದುಮವರಣ್ಣಂಗಾ ಪದವಿಯುಮಂ ಮಾಡಿ ಸಾರವಸ್ತುಗಳಂ ಕೊಂಡು ಕನ್ನೆಯುಮನೊಡಗೊಂಡು ಮಗುೞ್ದು ಬಂದು ತನ್ನ ಪೊೞಲಂ ಪೊಕ್ಕು ಜಂಭಾವತಿಯೊಳ್ ಮದುವೆನಿಂದಲ್ಲಿಯ ಸಭಾಸದರ್

ಮ|| ಸಿರಿಯೊಳ್ ಪೆರ್ಚಿದ ಭೂಮಿಗೋಚರ ಮಹಾಭೂಪಾಲವರ್ಗಕ್ಕೆ ಗೋ
ಚರಮಾಗಿರ್ದೆಡೆಯೊಳ್ ವಿರಾಜಿಸಿ ಕರಂ ಸಂದಿರ್ದ ಜಂಭಾವತೀ
ಹರಣಂ ಖೇಚರವರ್ಗವಿಗ್ರಹ ಮಹಾತೋದ್ಯಜ್ಜಯಶ್ರೀಸತೀ
ಹರಣಂ ಮಾಡಿತು ಕೃಷ್ಣನಾಮ ತಪಮಂ ಮುಂಗೈದನೋ ವಿಸ್ಮಯಂ ೪೨

ವ|| ಎಂದು ಪೊಗೞುತ್ತಿರ್ದರಂತು ಹರಿ ಸುಖದಿನಿರೆ ಕೆಲವು ದಿವಸದಿಂ ಗಿರಿ ನಗರಾಧಿಪತಿಯಪ್ಪ ರಾಷ್ಟ್ರಸಿದ್ಧಿಯ ಮಗಂ ಮಹಾರಾಜಂಗಂ ಜ್ಯೇಷ್ಠಾದೇವಿಗಂ ಪುಟ್ಟಿದ ಸುಖಮೆಯೆಂಬ ಕನ್ನೆಯುಮಂ ನಾರದಂ ಪೇೞ್ದೊಡಱಿದು ಪೋಗಿ ಯುದ್ಧಜಯದೊಳ್ ಮದುವೆನಿಂದಂ ಮತ್ತಮೆಲ್ಲಿಯೆ[4][ಲ್ಲಿ][4]ಯೊಳ್ಪೆಂಡಿರೊಳರಲ್ಲಿಗಲ್ಲಿಗಮಟ್ಟಿತರಿಸಿ ಕೊಂಡಿಷ್ಟ ವಿಷಯಸುಖಮನನುಭವಿಸುತ್ತಂ

ಮ|| ಹರಿವಂಶಾಂಬರ ಪದ್ಮಷಂಡಹಿತಕೃದ್ವಿದ್ವಿಷ್ಟಸೇನೋದ್ಧತೋ
ತ್ಕ[5][ರ][5] ಭಗ್ನೀಕೃತ ಶಕ್ತಿಯುಕ್ತ[6][ಹತ ಭೋಗಾಂತೋ][6]ಪಭೋಗೋತ್ತರೋ
ತ್ತರ ಸೌಂದರ್ಯವಿಳಾಸಯುಕ್ತ ಬಳಭೃತ್ಸಂಕ್ರಾಂತವಿಕ್ರಾಂತಕೇ
ಸರಿ ಕೃಷ್ಣಂ ಸುಖದಿಂದಮಿರ್ದನಮಿತೋಪ್ಯೈಶ್ವರ್ಯದಿಂ ಶೌರ್ಯದಿಂ ೪೩

ಗದ್ಯ|| ಇದರ್ಹತ್ಸರ್ವಜ್ಞ ಪಾದಪದ್ಮವಿರಾಜಿತೋತ್ತಮಾಂಗ ಶ್ರೀ ಬಂಧುವರ್ಮ ನಿರ್ಮಿತಮಪ್ಪ ಹರಿವಂಶಾಭ್ಯುದಯದೊಳ್ ರುಗ್ಮಿಣೀ ವಿವಾಹವರ್ಣನಂ

**ಸಪ್ತಮಾಶ್ವಾಸಂ**

---

1 ಯು ಜಯ 2 ಸ 3 ತಾಸುತಧ್ವಾ 4 ಲ್ಲಿವ್ರೊಳರಲ್ಲಿ 5 ಟ 6 ಮತಭುಗ್ಭೋಪ

# ಅಷ್ಟಮಾಶ್ವಾಸಂ

ಕಂ|| ಶ್ರೀಧರನೆನೆ ವಿಶದಯಶ
ಶ್ರೀಧರನೆನೆ ಭೀಕರೋಗ್ರ ರಣಮುಖವಿಜಯ
ಶ್ರೀಧರನೆನೆ ಸಂಪೂರ್ಣ ಕ
ಳಾಧರನೆನೆ ಕೃಷ್ಣನಿಂತು ಸುಖದಿಂದಿರುತಂ ೧

ವ|| ಒಂದು ದಿವಸಂ ದೇವೇಂದ್ರವಿಳಾಸದಿಂದೋಲಗಂಗೊಟ್ಟಿರ್ದು ರುಗ್ಮಿಣಿಗಂ ಸತ್ಯಭಾಮೆಗಂ ಬಱಿಯನಟ್ಟಿದೊಡೆ ರುಗ್ಮಿಣಿ ಮುನ್ನಂ ಬಂದರಸನ ಬಲದ ದೆಸೆಯೊಳ್ ಕುಳ್ಳಿರ್ದುದಂ ಕಂಡು ಬಱಿಕೆ ಬಂದು ಸತ್ಯಭಾಮೆ ಕುಳ್ಳಿರಲೊಲ್ಲದುದಂ ಹರಿ ಕಂಡು ಕುಳ್ಳಿರುಯೆಂದೊಡೆಲ್ಲಿ ಕುಳ್ಳಿರ್ಪೆನೆಂದ ಮಚ್ಚರದ ದರ್ಪಮನಱಿದು ರುಗ್ಮಿಣಿ ಮಹಾದೇವಿ ಪೆಂಡತಿಗೆ ಪುರುಷನೆಡಗೆಲದೊಳಿರ್ಪುದು ಪಾಱಿಯಲ್ಲೆಂದಿರ್ದು ಬಂದು ಬಲದ ದೆಸೆಯೊಳ್ ಕುಳ್ಳಿರ್ದಾಗಳ್ ಸತ್ಯಭಾಮೆ ಬಂದಾಕೆಯ ಮುನ್ನಮಿರ್ದಲ್ಲಿ ಕುಳ್ಳಿರ್ದುದಂ ಹರಿ ಕಂಡು ನೀಮಿರ್ವರುಂ ಪ್ರಭುತ್ವಕ್ಕೆ ಮಚ್ಚರಿಸಲ್ವೇಡಾ

ಕಂ|| ಶ್ರೀವಧುನಾಥ ಸುಪುತ್ರನ
ನಾವಳ್ ಮುಂ ಪೆತ್ತಳಾಕೆ[1][ಯಾ][1]ಕೆಯ ಮಗನ
ಪ್ಪಾ ವಿಭುವೆ ಜೇಷ್ಠರೆಂದೊಡೆ
ದೇವಿಯರಿರ್ವರುಮದಕ್ಕೊಡಂಬಟ್ಟಿರ್ದರ್ ೨

ವ|| ಅದನೊಡಂಬಟ್ಟು ಕಣ್ಣಱಿದು ಮತ್ತಮಿಂತೆಂದಂ

ಕಂ|| ಆವಳ ಮಗಂಗೆ ಮುನ್ನಂ
ಭೂವಿಶ್ರುತಮಾಗೆ ಮದುವೆಯಾಯ್ತಾಕೆ ಬಱಿ
ಕ್ಕಾ ವಧುವಿನ ತಲೆಯಂ ಕೊ
ಯ್ದೀಗ[2][ದೆ][2] ತಂದಡಿಸಿ ಮೆಟ್ಟಿ ಮಿಾವಳ್ ಪೆಱದೇಂ ೩

1 ಮಿಗಿಲಾ 2 ಡೆ

ವ॥ ಆಗಳ್ ಪರಿಚಾರಿಕೆಯರುಂ ಕಾಪಿನವರುಂ ಸಂಕಟಂಬಟ್ಟಲ್ಲಿಯೊರ್ವಳಿಂತಿರಲಾಗದರಸಂಗಱಿಪುವೆನೆಂದು ಪೋಗಿ ಪೇೞ್ದೊಡವರಸನುಮಾಗಳೆ ಬಂದು ನಿಂದು ಕೂಸನದೃಶ್ಯರೂಪದಿನಾರಪ್ಪೊಡಮೊಯ್ದರೆಂಬುದನಱಿಯದಿಂತೆಂದಂ

ಕಂ॥ ಎನ್ನ ತನೂಜನನೊಯ್ದವ
ರೆನ್ನರೊ ಪೊಕ್ಕಾವ ನೆಲೆಯೊಳಿರ್ದರ್ ಪತ್ತಾ
ಪನ್ನತರಳವೆನಿತಾದುದ
ಡೆನ್ನೊಂದಳವಱಿಯದೊಯ್ದರಱಿವವರೊಯ್ಯರ್ ೬

ವ॥ ಎನೆ ರುಗ್ಮಿಣಿಯಿಂದಕಂತೆ ನಿನ್ನಳವನಱಿವೊನ[1][ಕ್ಕೆ][1]ಮಱಿಯದರಕ್ಕೆ

ಕಂ॥ ಕಿನ್ನರ ಖೇಚರ ದಾನವ
ಪನ್ನಗ ಗರುಡಾಮರರ್ಕಳೊಳಗಾರಾನುಂ
ಮುನ್ನಿ[2][ನ][2] ರೋಷ ಭವತ್ಸಂ
ಪನ್ನತೆಯಿಂದೊಯ್ದರಕ್ಕುಮಾತ್ಮಾರ್ಭಕನಂ ೭

ವ॥ ಎಂದು ಗದ್ಗದಕಂಠೆಯಾಗಿ ನುಡಿಯೆ ಮುಗುೞ್ದು ಕೃಷ್ಣನಿಂತೆಂದಂ

ಕಂ॥ ಎನ್ನಂ ಕಿಱಿಯಂ[3][ದ][3]ತಿ ಕೋ
ಪೋನ್ನತಿಯಿಂ ಕೊಲಲು ಬಂದು ಪತ್ತಿದ ದಿವ್ಯರ್
ಬನ್ನಂಬ[4][ಟ್ಟೋ][4]ಡಿದರಿ
ನ್ನೆನ್ನನತಿಕ್ರಮಿಪೆವೆಂಬ ದಿವ್ಯರುಮೊಳರೇ ೮

ವ॥ ಎಂದು ಗಜಱಿ ಗರ್ಜಿಸುತ್ತಿರ್ದ ನಾರಾಯಣನುಗ್ರಕೋಪಮನಱಿದು ಬಂದೊಂದು ದಿವ್ಯಮಾಕಾಶದೊಳಿರ್ದಿಂ ರುಗ್ಮಿಣಿಮಹಾದೇವಿ ನೀಮುಬ್ಬೆಗಂಬಡದಿರ್ ಕೃಷ್ಣರಾಜೇಂದ್ರ ನೀಂ ಮುಳಿಯದಿರ್ ನಿನ್ನ ಮಗಂ ವಿದ್ಯಾಧರಶ್ರೇಣಿಯೊಳ್ ಬಳೆದು ಪದಿನಾಱು ವರುಷವಂದಿಂಗೆ ಬರ್ಕುಂ ಚಿಂತಿಸದಿರಿಮೆಂದು ಪೋಯ್ತುದಂ ಕೇಳ್ದು ದಿವ್ಯವಚನಮಂ ತಪ್ಪದೆಂದರಸಂ ಸಂತೈಸಿ ಪೋದನಿತ್ತ ಧೂಮಕೇತು ಕೂಸನೊಯ್ದು ಬೆಸಗಾದಾಗಳ್ ಕೂಸಿನ ಮೊಗಂ ನೋಡಿ ಪೂರ್ವಭವಕ್ರೋಧೋದಯಮಾಗೆ ಬಾಳಂ ಕಿೞ್ತು ನಿಮಿರ್ದಿಂತೆಂದಂ

---

1 ಕ್ಕೈ 2 ನಭವ 3 ಡ 4 ದ್ದೊ

ಕಂ॥ ಎಲೆ ಮೊಲನೇ ನೀನೆನ್ನೀ
ಬಲಗರ್ವದಿನೆನ್ನ ಮೇಗೆ ಸುೞಿ ಸೋಕಿ ಕರಂ
ನಲಿನಲಿದು ಗೊಡ್ಡಮಾಡಿದ
ಪೊಲೆಯಾ ನೀಂ ಮುಱಿಮೊಡಾನದಂ ಮುಱಿದಪನೇ ೯

ಯದುರಾಜನ ಪ್ರಭವದೊಳ್
ವಿಧುಮುಖಿ ಚಂದ್ರಾಭೆಯೆಂಬೊಳೆನ್ನಂಗನೆಯುಂ
ವಧುವನೊಲಿದೆನ್ನ ಕೆಯ್ಯಿಂ
ವ[ಧ][1]ವಾ ನೀನೆಱಿದುಕೊಂಡ ಪಾತಕನಲ್ತೇ ೧೦

ಆನ[ಂ]ದು ಮರುಳ್ಗೊಂಡೆನೆ
ತಾನುಂ ಕಾಲಂ ಕನಲ್ದು ಪೞವಿಸಿ ಸತ್ತಿ
ತ್ತಾನುಂ ನಿನ್ನಂ ಕಂಡಿ
ನ್ನಾನೊರ್ವನೆ ಕೊಂದು ಬಿಸು[ಡದೇಂ][2] ತಱಿವನೇ ೧೧

ಮುಱಿವೆನೆ ಕೊರಳಂ ನೆರನಱಿ
ದಿಱಿದಿಱಿದಂದರಿದು ಸೋಬ್ದು ನೀಳ್ದಿ ಕೆಪ್ಪವೆನೋ
ಕಿಱಿಕಿಱಿಯವಾಗಿ ನಿನ್ನಂ
ತಱಿತಱಿದಡಗಿಂದೆಯುಂ ತಗುಳ್ದಾಡುವೆನೋ ೧೨

ಚಂ॥ ಪಿರಿದಲಿಗೆಯ್ವೆನೋ ಪಸಿದ ಭೂತಕಪಾಲದೊಳಿಕ್ಕಿಪ್ರೋಕ್ಷೆನೋ
ಪೊ[3][ಸೆ][3]ಪ್ರೊ ಪಲ್ಪ ಮಾರ್ಗವಿಸೆದಂಬಿಡಮೊತ್ತಿ ಕಿ[4][ಮುಚ್ಚಿ][4] ಕೊಲ್ವೆನೋ
ಬಿಸುಡುವೆನೋ ಸಮುದ್ರದೊಳಗಣ್ಗೆ ನಿಶಾತ[5][ಶಿಕಿಕ್ತಿ][5] ಪ್ರೊಯ್ವೆನೋ
ಮಸಗಿದ ಕೆಂಡದೊಳ್ ಮಿಡುಕುವಂತಿರೆ [6][ಪ್ರೊಂ][6]ಗಿ ಪೊರಳ್ಚ[7][ತಿ][7]ರ್ಪೆನೋ ೧೩

ವ॥ ಎನುತಮಂತಂತೆ ಧರಾತಳಮುಮಂ ನೋಡುತ್ತ ಬರ್ಪನ್ನೆಗಂ ಖದಿರವನಮೆಂಬ ಪೆರ್ವಟವಿಯಂ ಕಂಡದಱೊಳಿಯ ಮರಂಗಳೆಲ್ಲಂ ತಱಿಯ ಮರಂಗಳೆ ಕಲ್ಗಳೆಲ್ಲಂ ಮಸೆಕಲ್ಗಳೆ ಮೃಗಂಗಳೆಲ್ಲಂ ಪುಲಿ ಕರಡಿಗಳೆ ಪಕ್ಷಿಗಳೆಲ್ಲಂ ಪದ್ದು ಕಾಗೆಗಳೆ ಪುಲ್ಲೆಲ್ಲಮ ಸುಂಕುಬುಲ್ಲೆ ಗಾಳಿಯೆಲ್ಲಂ ಸುಟ್ಟುರಿಗಾಳಿಯೆ ಗಿಡುವೆಲ್ಲಂ ಮುಳ್ಳುಗಿಡುಗಳೆ ಚರಿಯಿಸುವರೆಲ್ಲಂ ಕಿರಾತ ಗಣಮು[ಂ] ರಾಕ್ಷಸಗಣಮೆ ತಪ್ಪದಿದಪ್ಪುದೀತನಂ ನಿಗ್ರಹಿಸಲಿದೆಯೆಂದಲ್ಲಿ ತಸ್ಕರಶೈಲ ಮೆಂಬುದೊಂದು ಶಿಲೆಯುಂ ಕಂಡು ಕೂಸಂಗೊಂಡು ವಿಮಾನದಿನಿೞಿತಪ್ಪವನಂ ಬೇಗಂ

---

1 ಪ 2 ದೊಡೆ 3 ಪೊ 4 ವಿಮುಚ್ಚಿ 5 ಖಾಸ್ರದೊಳು ಪತ್ತಿರೆ 6 ಪು
7 ತ್ತಿ

ಕೊಂಡೊಡೀತನ ಪುಣ್ಯಂ ತಪದೆ ಮತ್ತಂ ಸುಗತಿಯೊಳಿಕ್ಕುಗುಮಿದಾ ಕಾಯ್ದು ಕಲ್ಲ ಮೇಗಿಕ್ಕಿ ಪೋದೊಡೆ ಪಗಲೆಲ್ಲಂ ಬಿಸಿಲೊಳ್ ಬೆಂದಿರುಳ್ ಗಾಳಿಯೊಳಂ ಶೀತದೊಳಂ ಬೞಿದು ಪರ್ದುಂ ಕಾಗೆಯುಮಿಱುಂಪೆ [1][ಕೋೞ್ಮೃಗ][1]ಮುಮಗಿಂಪೆ ರೌದ್ರಪರಿಣಾಮದಿಂ ಸತ್ತು ದುರ್ಗತಿಯೊಳ್ ಬೀೞುಗುಮೆನಿತನೆ ಮಾಡುವೆನೆಂಬ ಬಗೆಯಿಂದಾ ಕಲ್ಲಮೇಗಿಕ್ಕಿ ಪೋದವನನ್ನೆಗಮಿತ್ತ ಮೇಘಕೂಟಮೆಂಬ ಪೊೞಲನಾಳ್ವಂ ಕಾಳಸಂಬರನೆಂಬ ವಿದ್ಯಾಧರಂ ಕಾಂಚನಮಾಲೆಯೆಂಬ ತನ್ನ ಮನೋನಯನವಲ್ಲಭೆಯನೊಡಗೊಂಡು ವಿಮಾನಾರೂಢನಾಗಿ ರಮ್ಯಾಶ್ರಯವಿಶ್ರಮಕಾರ್ಯದಿಂ ಬಪ್ಪನಾ ಖದಿರವನದ ಮೇಗನೆ ಪೋಪನಲ್ಲಿ

ಪೃಥ್ವಿ ||

ಮ[2][ನಂ ಪ][2]ವನವೇಗದಿಂ ಖಚರ[3][ಯಾ][3]ನಮಾಕಾಶದೊ[4][ಳ್
ಪಿ][4]ನದ್ಧಮಣಿರಶ್ಮಿಯಿಂದೆಸೆದು ಪೋಗುತಂ ತಾನೆ ತೊ
ಟ್ಟನಂತೆ ನಿಲೆ ಕಂಡು ತಲ್ಲಣಿಸಿ ಬೆಕ್ಕಸಂಬ[5][ಟ್ಟನೇಂ][5]
ಮುನಿಪ್ರವರರಿರ್ದರೋ ಪಗೆವರಿರ್ದರೋ ಧಾತ್ರಿಯೊಳ್ ೧೪

ವ|| ಆದಲ್ಲದೊಡೆ ವಿಮಾನಮಿಂತು ನಿಲ್ಲದೆಂದು ಬಾಳಂ ಕಿೞ್ತುಕೊಂಡುಮತ್ತ ಪರಮುಮುನುರಮೊಳಮರ್ಚಿ ಧರಾಭಾಗಕ್ಕಿೞಿದು ಪೞುವ[6][ದ][6] ನಡುವಣ ತಸ್ಕರ ಶಿಲೆಯ ಮೇಗಿರ್ದ ಕೂಸಂ ಕಂಡು

ಕಂ|| ಪುಟ್ಟಿಲೊಡಮಂತೆ ತಂದಿ
ೞ್ಕಿಟ್ಟಂ ತಾಯುಮದಗಲ್ಚಿ ಮುನ್ನಿನ ಭವದೊಳ್
ತೊಟ್ಟರಿನರನೋ ಸುರನೋ
ಕೆಟ್ಟುರ್ಬಿನ ದುರಿತ ದನುಜನೋ ಖೇಚರನೋ ೧೫

*ವನಲತಾ ||

ಆವೊನೆಂದುಮಱಿಯೆಂ ಕಡುಪಾಪಿಯ ಗೊಡ್ಡಂ
ದೇವಸನ್ನಿಭನಿವಂ ಶುಭಲಕ್ಷಣದಿಂದಂ
ತೀವಿದಂಗಮುದಱಿಂ ಧರಣೀಶಮಹಾವಂ
ಶಾವತಾರ ಶಿಶು ನಿಕ್ಕುವಮಾಗಲೆವೇೞ್ಕುಂ ೧೬

1 ಕೊಳುಮೃಗ 2 ನತ್ತೆ 3 ವಿಮಾ 4 ಳು 5 ಟ್ಟದೇನೆನೆ 6 ನದ

* ಹಸ್ತಪ್ರತಿಯಲ್ಲಿ "ತ್ರಿಪದಿ" ಎಂದಿದೆ. ಆದರೆ ಇದು 'ವನಲತಾ' ವೃತ್ತವಾಗಿದೆ. ನೋಡಿ: ಛಂದೋನುಶಾಸನ 2_232.

ವ॥ ಎಂದು ಬಗೆದು ಬಾಳಕನಿರ್ದ ಕಂಪ್ಳೊಳ್ ಪಿಡಿದು ಬಾಳಕನನೆತ್ತಿಕೊಂಡಾಗಳ್ ವಿಮಾನಮನೇಱಿ ಪಿಡಿ ನಿಮಗೆ ಪುತ್ರಲಾಭಮಾದುದೀತನನೊಂದು ಪಿರಿಯ ಶಿಲೆಯ ಮೇಲೆ ಕೆಡೆದಂ ಪೂರ್ವವೈರಿ ತಂದಿಕ್ಕಿ ಪೋದನಕ್ಕಂ ಮಹಾಪುಣ್ಯಭಾಗಿಯುಂ ಕೈಕೊಳ್ಳಿಂ ದಡೆ ಕನಕಮಾಲೆಯಿಂತೆಂದಳ್

ಪೃಥ್ವಿ ||
ಭವತ್ತನಯರಯ್ದುದಿಂಬರೊಳರಾ ಕುಮಾರರ್ಕಳಿ
ದಿ[1][ನಂ][1] ನಡಪಿಕೊಂಡನಂ ಬಗೆಪೊಡೇಪೊನೇತಕ್ಕೆ[2][ನೆಂ][2]
ವನರ್ ನುಡಿಯೆ ಮಾಱುವಾಕ್ಕೆ ನೆನಗೆಂತುಟಂ[ತಕ್ಕು]ಮಾ
ಟ್ಟಿವಕ್ರಿಯೆಯುನೊಲ್ಲೆನೊಯ್ದು ಪಸು ಮುನ್ನಿ[3][ನಂತ][3]ಲ್ಲೆ ನೀಂ ೧೭

ವ॥ ಎನೆ ಕಾಳಸಂಬರನಿಂತೆಂದಂ

ಕಂ॥ ಅಂತನಿತನಾಗಲೀಯೆಂ
ಭ್ರಾಂತಿಸದಿರ್ ಗೂಢಗರ್ಭದೊಳ್ ಪುಟ್ಟಿದನೆಂ
ದಂತಃಪುರ ಪುರವಿಷಯು
ಕ್ಕೆಂತುಂ ಸಂದೇಹವಿಲ್ಲದಂತಿರೆ ಮಾಟ್ಪೆಂ ೧೮

ಫಲವಿಲ್ಲದ ಮರನುಂ ಮ
ಕ್ಕಳಿಲ್ಲದೊಂದರಸುವೊಪ್ಪದದಱಿಂದೆನಗ
ಗ್ಗಳದ ಮಗನೆಂದೆ ನೀಂ ಕೈ
ಕೊಳಲಪ್ಪುದು ಶಂಕೆಗೇಡ ವನರುಹವದನೇ ೧೯

ವ॥ ಪಿಡಿಯೆಂದು ಕೂಸಂ ಕೈಯೊಳ್ ಕೊಟ್ಟು ತನ್ನ ಕೊರಲ ಕಂಠಿಕೆಯ ನಾತನ ಕೊರಲೊಳ್ ಕಟ್ಟಿದೊಡೆ ರಾಗದಿಂ ಕೂಸಂ ನೋಡುತ್ತ ಸಾರ್ಚಿನಾಗಳ್

ಕಂ॥ ಬಾಲಕನ ಪುಣ್ಯದಿಂದಾ
ಲೋಲಾಕ್ಷಿಯ ಬಗೆದು ನೆಗೆವ ನೊಲೆ ತೊರೆದೊಡೆ ಕಂ
ಡೀ ಲಲಿತಾಂಗಿಗೆ ಪೂರ್ವಭ
ವಾಲಗ್ನಸ್ನೇಹಮಕ್ಕುಮಾ ಬಾಲಕನೊಳ್ ೨೦

ವ॥ ಎಂದಂತೆ ಪೋಗಿ ತಮ್ಮ ಪುರದ ಬಹಿರೋದ್ಯಾನವನದೊಳಿರ್ದು ಗೂಢಗರ್ಭೆಯೊಳರಸಿ ಮಗನಂ ಪೆತ್ತಳೆಂದು ವನಪಾಲಕನನಟ್ಟಿದೊಡಾತಂ ಪೋಗಿ ಸಾರ್ಚುವಾಗಳಿಲ್ಲಂ

1 ನಂ 2 ವೊಂ 3 ನ

ತಮತಮಗೊಸಗೆಯಾದಂತೆ ಕೈಗೆಯ್ದು ಅತಿಶಯ ವಿಳಾಸದಿಂ ಬಂದಿದಿರ್ಗೊಳೆ ಕಾಳಸಂಬರಂ ಪಟ್ಟವರ್ಧನ ಗಜೇಂದ್ರಮನೇಱಿ ಕಾಂಚನಮಾಲೆ ಕೂಸಂ ಮುಂದುಗೊಂಡು ಸಿವಿಗೆಯ ನೇಱಿ ಬರೆ ದೇವೇಂದ್ರವಿಭವದಿಂ ಪೊೞಲಂ ಪೊಕ್ಕರಮನೆಯೊಳ್ ಪಱಿಯ ಪೇೞಿ ರ್ದಾಗಳ್

ಕಂ॥ ಮಗನಂ ತಾಯುಂ ತಂದೆಯು
ಮಗಲದೆ ಚಂದ್ರಾರ್ಕರುಳ್ಳಿನಂ ಸುಖದಿಂ[ದಂ]
ದಗಲದೆ ಬಾೞಿಂ ನೀವೆಂ
ದೊಗೆವರ್ಥಿಯೊಳಿಲ್ಲದೊಡನೆ ಪರಸಿದರಾಗಳ್ ೨೧

ವ॥ ಅಂತು ಪರಸಿ ಸೇಸೆಯನಿಕ್ಕಿ ಸಂತೋಷದಿನಿರ್ದೊಂದುದಿವಸಮಂತಃಪುರ ಪರಿವಾರಾದ್ಯನೇಕ ರಾಜಕುಮಾರ ಪರಿವೃತನಾಗಿರ್ದು ನಾಮಕರಣದೊಸಗೆಯಂ ಮಾಡಿ ಪ್ರದ್ಯುಮ್ನನೆಂದು ಪೆಸರನಿಟ್ಟು ಜ್ಯೇಷ್ಠಪದವಿಯಂ ಕೊಟ್ಟು ರಾಗದಿನಿರೆ ಬಾಲಕಂ ಬಾಲ ಚಂದ್ರನಂತಭಿವೃದ್ಧಿಗೆ ಗರ್ಭಾದ್ಯಷ್ಟಮದಿಂ ತಗುಳ್ದಕ್ಷರಾದಿ ಕಳೆಗಳೊಳತಿಪ್ರವೀಣನಾಗೆ

ಮ॥ ಸ್ರ॥ ಪ[ದವತ್ತಾದ][1]ಕ್ಷಗೀ ಭೂತಳದೊಳಗಿದು ಪರ್ವಿತ್ತು ಮೇಲ್ಪಿಂದೆ ತಾಂ ವೃ
ಕ್ಷದ ಕೊಂಬಂ ಪತ್ತಿ ಮತ್ತಾ ಮಧುಸಮಯದೊಳೆಂಬಾಗೆ ಪೂತತ್ತು ಪಣ್ತೊ
ಪ್ಪಿದುದುದ್ಯದ್ದಂಡ ನಿತ್ಯಗ್ರದೊಳನುಸಯಸಂಯೋಗದಿಂ ಸರ್ವಲೋಕಾ
ಸ್ಪದಮಾಯ್ತಾ ಭೂಚರಾಧೀಶ್ವರಸುತ ನೃಪವಿದ್ಯಾಲತಾಲೀಢಮೆತ್ತಂ ೨೨

ವ॥ ಅಂತು ನಾಲ್ಕುಂ ತೆಱದರಾಜವಿದ್ಯಾಪ್ರಜಿತನಾಗಿ ಯವ್ವನವಯಸ ದೊಳ್ ಮಹಾವಿದ್ಯಾಸಾಧನೋಪಕರಣಂಗಳಂ ಕೊಂಡು ಹಿಮವಂತ ಪರ್ವತದ ಸಿದ್ಧ ಕೂಟಕ್ಕೆ ಪೋಗಿ ಯಥೋಕ್ತವಿಧಾನದಿಂ ಯೋಗಸ್ಥನಾಗಿರ್ದಱುದಿಂಗಳ್ಗೆ ಗಗನಗಾಮಿನಿ ಮೊದಲಾಗಿ ಪಲವುಂ ವಿದ್ಯೆಗಳ್ ಸಾಧ್ಯಮಾದೊಡೆ ವಿದ್ಯಾಪೂಜೆಯಂ ಮಾಡಿ[2][ರ್ಪೊ][2]ಗೆ ಬಂದು ಪೊೞಲಂ ಪೊಕ್ಕಿರೆ ಕಾಳಸಂಬರನುಂ ಕನಕಮಾಲೆಯುಂ ಮಗನ ರೂಪಿನೊಳ್ಪುಮಂ ತೇಜದಗ್ಗಳಿಕೆಯುಮಂ ವಿದ್ಯಾಮಹಾತ್ಮೆಯುಮಂ ಮನದ ಪೆಂಪುಮುಮಂ ನೋಡಿ ನೋಡಿ ಮುಯ್ವಂ ನೋಡಿ

ಕಂ॥ ಅಂತವರಿರೆ ಸುಖದಿಂ ಪ್ರ
ತ್ಯಂತದ ನೃಪನಗ್ನಿರಾಜನೆಂಬೊಂ ಮಲೆದಿ
ರ್ದ್ದಂತಳ್ಕಿಪೊರೆಂತೆಱಗಿಪೊ
ರೆಂತರ್ಥಂಗೊಳ್ವರುೞಿಗೆ ಮುನ್ನಿನ ಪಗೆಯಂ ೨೩

1 ದದೆತ್ತಡ 2 ಗೊ

ವಿದ್ಯೆಗಳುಮಿಂದ್ರಜಾಲದ
ವಿದ್ಯೆಗಳುಂ ತನ್ನ ನೋಯಿಸಲುಮುಱಿಯಿಸಲುಂ
ದುದ್ಯೋಗಕ್ಕಣಮಲ್ಲವ
ಛೇದ್ಯದನಾನೆಂದೊಡಿಱಿಪನೆಂಬನುಮೊಳನೇ ೨೪

ಮುನ್ನಿನವರಿತ್ತ ಪೊಗ್ಗಿ
ನ್ನಿನ್ನೊಳ್ ಸಲಲಾಜದುಱುವುದಂ ತಪ್ಪುದನೇ
ಕಿನ್ನುಂ ನಾಂ ತಮ್ಮಂ ಬೇ
ಱಪ್ಪಿನ್ನತಿಕೆಯನುಱಿಪಿ ತಮಗದಗ್ಗಳಮಲ್ತೇ ೨೫

ವ॥ ಎಂದು ಬಂದ ಪೆರ್ಗಡೆಗಳನುರಪೊತ್ತಿ ನುಡಿದೊಡೆ ಮಗುೞ್ದು ಪೆರ್ಗಡೆಗಳ ಮಾತಂ ಕೇಳ್ದು ಕಾಳಸಂಬರಂ ಮುಳಿದು ಪೋಲೇಱಲೆಂದು ಮಿತ್ರಬಲಮುಂ ನಿಜಬಲಮುಮಂ ನೆರಪಿ ಕಯ್ದುಗಳಂ ಸ್ಯಂದನಂಗಳುಮನೋಸರಿಸುವುದಂ ಪ್ರದ್ಯುಮ್ನಂ ಕಂಡಿದೇನೆಂದೊಡಗ್ನಿರಾಜನುದ್ವೃತ್ತತೆಯಂ ಪೇೞ್ದಾಗಳೀ ಬೆಸನನೆನಗೆ ದಯೆಗೆಯ್ವುದೆನೆ ನೀಂ ಕುಮಾರಂ ಕಿಱಿಯನೆನೆ ಪ್ರದ್ಯುಮ್ನಂ ತಂದೆಗಿಂತೆಂದಂ

ಮ॥ ಕಿಱಿದೆಂಬಂತಿರೆ ಸಿಂಗದೊಂದು ಮಱಿಯುಂ ಕಿಚ್ಚುಂ ಕರಂ ಸಲ್ಪನೆಂ
ದುಱದಿರ್ಪಂತಿರೆ ಪುತ್ರನನ್ನ ತಗುಳ್ದಿಂತೀ ಪ್ರಾಯಮುಂ ಕಂಡು ನೀಂ
ಕಿಱಿಯಂ ಕೂಸಿವನೇವೊಸೆಂದಿಳಿಸದಿರ್ ಮಾಱಾಂತರಂ ತಾಗಿ ತ
ಳ್ತಿಱಿವಂ ಮರ್ದಿಸಲಾರುಮುಂ ನೆಱೆವೆನಾನೆಂಬೊಂದು ವಾತ್ರೋಕ್ತಿಯಂ ೨೬

ವ॥ ಕಾಳಸಂಬರಂ ಮಗನದೊಂದುತ್ಸಾಹಮುಂ ಕೇಳ್ದು ಮೆಚ್ಚಿ ನೀನಱಿವೆಯೆನೆ ಬೆಸನಂ ಪಡೆದುದಕ್ಕೆ ಸಂತೋಷಂಬಟ್ಟು ಪೊಡೆವಟ್ಟು ಪ್ರೀತಿಯಿಂ ಪೊಱಮಟ್ಟು ಬಿಟ್ಟಿರ್ದನಾಗಳರಸಂ ತನ್ನ ಚಾತುರ್ದಂತಬಲಮುಂ ಮಗನೊಡನೆ ಪೇೞ್ದಟ್ಟೊಡೆ ಮಱು ದಿವಸಂ ಪಯಣಂಬೋಗಿ ಕೆಲವು ದಿವಸದಿಂ ಶ್ರೀಪುರಮನೆಯ್ದೆ ಬಿಟ್ಟಿರ್ದುದನಗ್ನಿರಾಜಂ ಕೇಳ್ದು ತನ್ನ ಪೆಸರಂ ನಸ್ನಿಮಾಡಿ ಕೋಪಾಗ್ನಿ ಪೆರ್ಚಿ ತನ್ನ ಸಮಸ್ತಬಲಂಬೆರಸು ಪೊಱಮಟ್ಟೊಡ್ಡಿದನಂತೆರಡುಂ ಪಡೆಗಳೊಡ್ಡಿ ಕೆಯ್ಯಂ ಬೀಸಿದಾಗಳ್ ಬಿಲ್ ಬಿಲ್ಲೊಳ್ ದಱಿಂ ದಱಿದೊಳ್ ತೇರ್ ತೇರೊಳಾನೆಯಾನೆಯೊಳಣಿಯಣಿಯೊಳ್ ತಾಗಿ ಕಾದಿದಾಗ[ಳ್] ತನ್ನ ಪಡಲ್ಪಟ್ಟುದನಗ್ನಿರಾಜಂ ಕಂಡು ವಿದ್ಯಾಯುದ್ಧಮಂ ಪೊಣರ್ಚಿದಾಗಳ್ ಪ್ರದ್ಯುಮ್ನ ಪ್ರತಿವಿದ್ಯೆಗಳಿಂ ಛೇದಿಸಿ ಗೆಲ್ದೆಯ್ದೆ ನೂಂಕಿದೊಡವಂ ತಡೆದೋಡಿಸಿ ನಿಂದುದಂ ಕುಮಾರಂ ಕಂಡು

ಕಂ॥ ಕಡುಮುಳಿದು ವಿರಥನಾಗೆ
ಜ್ಜಿಡೆಮಡಗಪೆ ಪೊಯ್ದು ನೆಗಟ್ದಿ ರಿಪುಭೂಮಿಪನಂ
ಪಿಡಿದುಡಿಯೆ ಕಟ್ಟೆ ಚೋದ್ಯಂ
ಬಡೆ ಪಡೆ ನಿಜವಿಜಯಘೋಷಂಪೊಯ್ಸಿ ಕುಮಾರಂ ೨೭

ವ॥ ಅಂತಾತನಂ ಕಟ್ಟಿ ಭೀತರನೆರ್ಬಟ್ಟಿ ಪೊಱಲಂ ಪೊಕ್ಕು ಸಾರವಸ್ತುಗಳಂ ಕೊಂಡು ಮಗುಳ್ದು ಪಯಣಂ ಬಂದು ಮೇಘಕೂಟಪುರಮನೆಯ್ದೆ ಕೂರ್ತರ್ ಮನಂಗೊಳೆ ಬಿಗುರ್ತರಸುಂಗೊಳೆ ಪುರಜನಮಿದಿರ್ಗೊ[ಳೆ] ಪೊಱಲಂ ಪೊಕ್ಕು ಕಾಳಸಂಬರನುಂ ಕಾಂಚನಮಾಲೆಯುಂ ಕಂಡು ಪೊಡೆವಟ್ಟಗ್ನಿರಾಜನ ಸೆಱೆಯನೊಪ್ಪುಗೊಳ್ಳೆಪಿಂದ ಮಗನ ಪರಾಕ್ರಮಕ್ಕೆ ರಾಜ್ಯಕ್ರಮದ ಕಂಠಿಕೆಯಂ ಪುಟ್ಟಿದಂದೆ ಕಟ್ಟಿದೆನಾದೊಡಂ ನೀಮೆಲ್ಲಮಱಿಯೆ ಕೊಟ್ಟಪೆನೀತಂ

ಕಂ॥ ಕಿಱಿಯನೆನವೇಡ ರಾಜ್ಯದ
ಪೊಱೆಯ ಭರಕ್ಕಾವನಾರ್ಕುಮಾತನೆ ಸಿರಿಯಂ
[ಪೆ]ಱದೇಂ ಪ್ರದ್ಯುಮ್ನಂ ಗಳ
ವಱಿಪೊಂ ಯುವರಾಜಪದವಿಯಂ ಮಾಡಿದಪೆಂ ೨೮

ವ॥ ಎಂದೊಸಗೆವಱೆಯುಂ ಪೊಯ್ಸಿ ಕಂಠಿಕೆಯುಂ ಕಟ್ಟಿ ಕಟ್ಟಿತರೆ ಬಂದಗ್ನಿರಾಜನ ಸೆಱೆ ಮೊದಲಾಗೊಡೆಯ ಸೆಱೆಗಳಂ ಬಿಟ್ಟು ನಿಶ್ಚಿಂತಮಿರೆ ಕೆಲವು ದಿವಸದಿಂ ಕುಮಾರನ ಪೆರ್ಚಿಂಗಂ ಪ್ರಜೆಯ ಮೆಚ್ಚಿಂಗಂ ರೂಪಿನೊಳ್ಪಿಂಗಂ ಗುಣದ ತಣ್ಪಿಂಗಂ ಪ್ರತಾಪದುಗ್ರತೆಗಂ ಪುಣ್ಯದಗ್ರತೆಗಂ ಮನದ ಬಲ್ಪಿಂಗಂ ನುಡಿಯ ಮೆಲ್ಪಿಂಗಂ ತೇಜದಳುರ್ಕೆಗಂ ಸಿರಿಯ ನಿಮಿರ್ಕೆಗಂ ಪೈಭೋಗಕ್ಕಂ ಶೌಚನಿಯೋಗಕ್ಕಂ ನೆಗೞ್ದಾಯಕ್ಕಂ ತಕ್ಕ ಬೀಯಕ್ಕಂ ವಿದ್ಯಾವಿಭೂಷಣಕ್ಕಂ ಸಮರವಿಭೀಷಣಕ್ಕಂ ಕಾಳಸಂಬರನ ಪಿರಿಯಮಕ್ಕಳ್ ವಜ್ರದಾಡಾದಿಗಳಪ್ಪಯ್ವದಿಂಬರುಂ ಕಾಯ್ದು ಛಿದ್ರಿಸಿ ಕೊಲ್ವ ಬಗೆಯಂ ಬಗೆದು ಕುಮಾರನೊಳ್ ಮೇಳಂಗೊಂಡು ಬಾ ನಾಮಿಂತಿರಲ್ವೇಡಂ ಗೋಚರಸ್ಥಾನಂಗಳ್ ವಿದ್ಯಾಲಾಭಮೊಳವಂ ಕೊಳ್ವಮೆಂದೊಡಗೊಂಡು ಪೋಗಿ ಸಿದ್ಧಕೂಟಮೆಂಬ ಪುರಾಣಚೈತ್ಯಾಲಯಮುಮಂ ಬಲಗೊಂಡು ದೇವರಂ ಬಂದಿಸಿರ್ದದಱ ಮೇಗಣ ನೆಲೆಯೊಳ್ ದೃಷ್ಟಿವಿಷಮಹೋರಗರಕ್ಷಿತ ವಿದ್ಯೆಗಳೊಳವ[1][ವ][1]ಕ್ಕಳ್ಕದೆ ಪೊಕ್ಕಂಗೆ ಸಾಧ್ಯಮಕ್ಕುಮೆಲ್ಲಮಿಲ್ಲಿರಿಮಾಂ ಪುಗುವೆನೆಂದ ವಜ್ರದಾಡನ ಮಾತಂ ಕೇಳ್ದು ಕುಮಾರಂ ನಿಮ್ಮ ಬೆಸದೊಳಾಂ ಪೊಕ್ಕು ನೋೞ್ಪೆಂ[2][ದು][2]ರಿಬಾಗಿಲಂ ತೆಱೆದೊಡೆ

---

1 ಡ 2 ದ

ಕಂ|| ಪೆಡೆಗಳೆನಿತನಿತುಮಂ ಕೊ
ಳ್ವಿಡೆಗೆಯ್ದೊಡನೊಡನೆ ಜಿಡಪೆ ಕಿಡಿಗಳನುಗುಳ್ವು
ತ್ತ್ರಡಿಗಡಿಗೆ ನಿಮಿರ್ದು[ಂ] ಬರೆ
ತಡೆಯದೆ ಫಣಿಯಂತೆ ಪಾಱಿ ಬಿರ್ದತ್ತಾಗಳ್ ೨೯

ವ|| ಅಂತು ಬಿರ್ದ ನಾಗರಾಜನಾಗಿ ಬಂದು ನಿಂದು ನಿನಗೆ ಸಾಧ್ಯಮಾದುದೀ ವಿದ್ಯೆಗಳಂ ಕೈಕೊಳ್ಳೆಂದು ಸಮುವಿದ್ಯೆಯುಮನತಿವಿದ್ಯೆಯುಮಂ ಕಾಮಚಾಂಡಾಳಿಯುಮಂ ವಿಷ್ಟರಚಾಮರಂಗಳುಮಂ ಆತಪತ್ರಮುಂ ಪಾವುಗೆಗಳುಮಂ ತೋಱಿ ಮುನ್ನಿಂತೊರ್ಬ ವಿದ್ಯಾಧರನಿದಂ ಸಾಧಿಸಿ ತಪಕ್ಕೆ ಪೋಗುತಿಂತಪ್ಪೆಡೆಯೊಳಿವಂ ಕಾದಿರ್ದ ಮಿಂತಕ್ಕದೆ ಪಾಯ್ದೊಂಗೊಪ್ಪಿಸೆಂದಿರಿಸಿಪೋದಂ ಕೈಕೊಳ್ಳೆಂದೊಡಂತೆಗೆಯ್ವೆನೆನ್ನ ಬಗೆದಾಗಳ್ ಬಕ್ಕೆಂದಿರಿಸಿ ಪೂಜಿಮುಟ್ಟುಬಂದನದಂ ಕಂಡು ಅಚ್ಚರಿವಟ್ಟು ವಜ್ರದಾಡಾದಿಗಳೊಡಗೊಂಡು ಪೋಗಿ ನಂದಮುರಿಯುತ್ತಿರ್ದ ಪಿರಿದೊಂದು ಕೊಂಡಮಂ ತೋಱುವುದುಂ

ಕಂ|| ಧಗಧಗಿಸಿ ಮಸಗಿ ದಳ್ಳುರಿ
ನೆಗೆತರೆ ಪಾಯ್ದಂಗೆ ಮುಚ್ಚಿ ತಣ್ಣದನಾ[1][ಗಿ][1] ತೊ
ಳಗಿದಗ್ನಿದೇವ ನನ್ನಿಯೊ
ಳೊಗೆದವಿಮೆಂದಿತ್ತನುಚಿತ ಪೀತಾಂಬರಮಂ ೩೦

ವ|| ಅಂತು ಪಡೆದು ಪೂಜಿಸಡೆ ಮನದೊಳ್ ಕಟ್ಟುಕಡೆದಿರ್ದೊಡೆದು ಮತ್ತಮೊಡಗೊಂಡುಪೋಗಿ ತಗರರೂಪಿನ ಶಿಲೆಯಿಂದಮೊಂದೊಂದಂ ಪಾಯುತ್ತಿರ್ಪುವಿವರ ನಡುವ ಪೊಕ್ಕು ಸಾಧಿಸಿದೊಂಗೆ ಫಲಮಕ್ಕುಮೆಂದು ಮೇಷಯಂತ್ರಮಂ ತೋಱಿದಾಗಳ್

ಕಂ|| ಸಂಕಿಸದೆ ಪೊಕ್ಕು ಪೊಯ್ವೆರ
ಡುಂ ಕಲ್ಗಳನೆರಡುಂ ಕೆಯ್ಯೊಳ್ ಪೊಯ್ಯೆ ಸಿಡಿ
[2][ಲ್ದಂ][2]ಕದ ಮೇಷಪುರಂ ಪೋ
ಲ್ತಂಕದ ತೆಱನಾಗಿ ಕುಂಡಲಂಗಳನಿತ್ತಂ ೩೧

ವ|| ಅಂತಲ್ಲಿ ಪಡೆದ ಮಕರಕುಂಡಲಂಗಳಂ ಪೆತ್ತ ಸಾಹಸಮಂ ಕಂಡು ಮತ್ತಮೊಯ್ದು ಭಯಂಕರಮಾಗಿರ್ದ ಸೂಕರಶೈಲಮಂ ತೋಱಿದೊಡೆ ಕುಮಾರಂ

1 ಗು 2 ಲಂ

ಕಂ|| ಭೀಕರಮಂ ಶೈಲಮಹಾ
ಸೂಕರನುಂ ಕಂಡು ಪೊಕ್ಕು ಪೊಯ್ದುದೆ ಭಯದಿಂ
ದೇಕೆನಗೆ ಮುನಿದೆಯೆಂದೆ
ದಾಱಕುಳದಿಂ ವಿಜಯಘೋಷ ಶಂ[1][ಖ][1]ಮನಿತ್ತಂ ೩೨

ವ|| ಅದಂ ಕಂಡು ಜೋದ್ಯಂಬಟ್ಟು ನಿನಗಾವುದುಂ ಸಾಧ್ಯಮಲ್ಲದು ದಿಲ್ಲೆಂದು [2][ನಿಶ್ಚೈಸಿ][2] ದ್ವೀಪಾಂತರಕ್ಕೆ ಬಂದಾಯತಗುಹೆಯುಂ ತೋಱುವಾಗಳ್

ಕಂ|| ಪಿರಿದು ಕರಂ ಕತ್ತಲೆಯಿಂ
ಕರಿದು ಪುಗಲ್ಕರಿದು ಗುಹೆಯಿದೆನ್ನದೆ ಪೊಕ್ಕಂ
ಗೆರಡಿಲ್ಲದಂಜಿ ಗದೆಯುಂ
ಕರಯುಗಮಂ ಮುಗಿದು ಕಾಳರಾಕ್ಷಸನಿತ್ತಂ ೩೩

ವ|| ಅದಂ ಕಂಡು ಪೊಱಮಟ್ಟು ಬಂದುದಂ ಕಂಡು ನಮ್ಮ ಬಗೆದಪಾಯ ಮೀತಂಗೆ ಲಾಭೋಪಾಯಮಪ್ಪುದೆಂದು ಬಗೆದು ಕೃತಕೋಕ್ತಿಗಳಿಂ ನಂಬಿಸಿಕೊಂಡು ಪೋಗಿ ತನ್ನೊಳ್ ಪೂರ್ವ ಮಲ್ಲಗಿರಿಗಳಂ ತೋಱುವೊಡೆ

ಕಂ|| ಮಲ್ಲರ್ ಪೋರ್ವಂತಿರೆ ಪೋ
ರ್ವಲ್ಲಿಗೆ ಪಾಯ್ದೆಡೆಯೊಳಿರ್ದು ನೂಂಕಿದೊಡಿಱದುಂ
ತಲ್ಲಣಿಸಿ ಕೆಡೆಯೆ ಭಯದಿಂ
ಮಲ್ಲಾಸುರನುಪಮೆಗಱಿದ ಹಾರಮನಿತ್ತಂ ೩೪

ವ|| ಅಸುರನಂತು ಬೇಱುತ್ತಮಾ ವನವನುಜ್ವಲಮಪ್ಪ ಹಾರಮನಿತ್ತುದುಮಂ ಕಂಡು ಚಿಕ್ಕಸಂಬಟ್ಟಿನ್ನೇಕಿಪ್ಪಿನ್ನಿರ್ದ ವಸ್ತುಗಳುಂ ನಿನ[ಗ]ಸಾಧ್ಯಮಾಗದುವಿಲ್ಲ ಕೊಳ್ಳಂ ಬಾಯೆಂದೊಯ್ದು ಮರ್ಕಟಶಿಲೆಯೆಂಬುದಂ ತೋರ್ಪುದೆಂದದಂ ಕಂಡು ಪೋಗಿ

ಕಂ|| ಕೋಡಗರೂಪದ ದಾನವ
ನೋಡಿಸುವನಿತಲ್ಲದೇವನೆಂದನಿತಱಿಕೊಳ
ಲ್ಲಾಡಿಪೆ ಮನದಿಂ ಬೇಗಂ
ಕ್ರೀಡಾಸುರನುಪಮೆಗಱಿದ ಮಕುಟಮನಿತ್ತಂ ೩೫

1 ಕರ 2 ನಿರಿಸ್ಸಿ

ವ॥ ಅಲ್ಲಿಯುಮಪೂರ್ವಲಾಭಮಂ ಕಂಡಲ್ಲಿಯುಂ ನಿನಗೆ ಬಿರ್ದಮಿಲ್ಲ ಬಾಯೆಂ[1][ದೆಱೆ][1]ದೊಯ್ದು ಪೊಂಬಣ್ಣದ ಮತ್ತಿಯಮರದ ಮೇಗಿರ್ದುದು ವಿಷಧರ ಮದಂ ಸಾಧಿಸಿದೊಡೆ ಫಲಸಿದ್ಧಿಯೆನೆ ಕುಮಾರನಾ ಮರನನಡರ್ದೇಱಿದಾಗಳ್

ಕಂ॥ ಏಱಿದೊನೆ ಮರನನೆನ್ನಂ
ಮೀಱಿದನುಜವಡಸಿ ಪಿಡಿದು ಪೇೞದನಧಟಂ
ತೋಱಿದನೊಡೆವ[ಂ] ಮೂಗಿ
ಟ್ಟೀಱಿದನೆಂದಳ್ಕಿ ಬಾಳಸಹಿಪತಿಯಿತ್ತಂ ೩೬

ವ॥ ಅದಂ ಕೊಂಡು ಮರದಿಂದಮಿೞಿದುಬರೆ ಬೆಕ್ಕಸಂಬಟ್ಟು ಬಾಯಂಬಿಟ್ಟು ಮತ್ತೊಂದೆಡೆಗೊಯ್ದು ಪಿರಿದೊಂದು ನಾಗಭವನಮಂ ತೋಱಿದೊಡದಂ ನೋಡಿ

ಕಂ॥ ಆ ನಾಗಭವನಮಂ ಪೊ
ಕ್ಕೇನುಂ ಸಂಕಿಸದೆ ನಿಂದುದಕ್ಕಹಿರಾಜಂ
ಕಾಮವಿಮಾನಮುಮಂ ಕ
ಚ್ಛಮಹಾಖ್ಯಮಂ ಬೀಣೆಯುಮಂತದುಮಿತ್ತನತ್ಯುತ್ಸವದಿಂ (?) ೩೭

ವ॥ ಅಂತಿತ್ತೊಡವಂ ಕೊಂಡುಬಂದುದಕ್ಕೆ ಮೆಚ್ಚದೆಯುಂ ಮೆಚ್ಚಿ ಮತ್ತೊಂದೆಡೆಯೊಳತಿಶಯಲಾಭಮುಂಟೆಂದೊಯ್ದಶ್ವಶೈಳಮಂ ತೋರ್ಪುದುಂ

ಕಂ॥ ತುರಗಾಕಾರದ ಶೈಳಮ
ನಿರವಡರ್ದೇಱಿದೊಡೆ ಬೆಚ್ಚಿ ನಡುಕದಿನಾಗಳ್
ತುರಗಾಶ್ರಮನುಚ್ಚೈಶ್ರವ
ತುರಗೋಪಮನಿತ್ತುದೊಂದು ತುರಗಮನಿತ್ತಂ ೩೮

ವ॥ ಅಲ್ಲಿ ತುರಗಲಾಭಮುಮರ್ಗಾತುರ ಕಜ್ಜಮಂ ಬರಿಸೆ ಬೇಗವೊಯ್ದು ಕರೀಂದ್ರ ಶೈಳಮೆಂಬುದೊಂದು ಪರ್ವತಮೇಂದೊಡೆ ಕುಮಾರಂ

ಕಂ॥ ಕರಿಗಿರಿಶಿಖರಕ್ಕಾಗಳ್
ಹರಿ ಕುಂಭಸ್ಥಳಕೆ ಲಂಘಿಪ ತೆಱ[ನದಾ]ದಂ
ತಿರೆ ಲಂಘಿಸೆ ಭಯದಿಂ ದಿ
ಕ್ಕರಿಗಿಭಕರಿಯಂ ಕರೀಂದ್ರ ದಾನವನಿತ್ತಂ ೩೯

1 ದುಱಿ

ವ॥ ಆ ಕರೀಂದ್ರಲಾಭಕ್ಕೆ ವಿಸ್ಮಯಂಬಟ್ಟಂದವರೊಯ್ದೊಂದು ಕೊಳನಂ ಸುಟ್ಟಿ ತೋಱಿ ಬಂದು

ಕಂ॥ ತೊಟ್ಟನೆ ಕೊಳೆ ಪಾಯ್ದೊಡೆ ಬಾ
ಯ್ವಿಟ್ಟು ಜಲಾಸುರನಳುರ್ಕೆ ಕರಂ ಬಾ
ಯ್ವಿಟ್ಟು ನಿಲಲಣ್ಮದಾಗಳೆ
ಕೊಟ್ಟಂ ಜನವಿನುತ ಕಾಮುಚಕ್ರಮನೊಂದಂ ೪೦

ವ॥ ಆ ಪಡೆಪುಮಂ ಕಂಡು ಬಿಗುರ್ತುಂ ಕೂರ್ತಂತೊಂದೆಡೆಗೊಯ್ದು ಸ್ಫಟಿಕ ಶಿಲಾಗ್ರಮನೇಱಿಂದೊಡಪೂರ್ವಲಾಭಮೆನೆ

ಕಂ॥ ಸ್ಫಟಿಕಶಿಲಾಕೂಟಮನತಿ
ಚಟುಳತೆಯಿಂದಡರ್ದೊಡಾ ಗಜಾಸುರನಾಗಳ್
[1][ಫ][1]ಟಭೀಷಣೆ[2][ಯ ಬಿಸುಟು][2] ಸಂ
ಕಟದಿಂದಂ ಕಾಮಪಾಶಮಂ ತಂದಿತ್ತಂ ೪೧

ವ॥ ಅದಕ್ಕಮುಚ್ಚರಿವಟ್ಟೊಯ್ದೊಂದು ವಿಷಮಪ್ರದೇಶಸ್ಥಿತ ವೃಷಭಾಕಾರದ ದಾನವನಂ ತೋರ್ಪುದುಂ

ಕಂ॥ ಅಸದೃಶಮಾಗಿಯೆ ಕೆಂಗೋ
ಲ್ಮಸಗಿದ ವೃಷಭಂಗೆ ಪೊಕ್ಕಡರಿಭಯದಿಂದಂ
ಬಸದಾಗಿ ಕಾಮಧೇನುವ
[3][ನೊಸೆದಿತ್ತನಶಂಕಿತಂಗೆ][3] ವೃಷಭಾಸು[4][ರನಃಂ][4] ೪೨

ವ॥ ಅಂತಾ ದಾನವನಿತ್ತುದುಮನಾತನ ಪೆತ್ತುದುಮಂ ಕಂಡೊಡಗೊಂಡು ಪೋಗಿ ರಥಾವರ್ತಮೆಂಬುದೀ ಬೆಟ್ಟದ ಮೇಗೆ ಚೋದ್ಯಮುಂಟೆನೆ ಬೇಗಮುಮನಡರ್ದಾಗಳ್

ಕಂ॥ ಶಕಟಾಕಾರದಿ ಪರಿತರೆ
ಸಕಲುಷದೊಳೇ ಕಳಲ್ದು ಕೆಡೆದತಿಭಯದಿಂದಂ
ಶಕಟಾಸುರಪತಿ ಕೊಟ್ಟಂ
ಮಕರಧ್ವಜಸಹಿತಮಪ್ಪ ರಥಮಂ ನುತಮಂ ೪೩

---

1 ಷ 2 ಯಂ ಬಿಸುಡುತೆ 3 ಶಂಕಿತಂಗಾ 4 ರಂತಂ

ವ|| ಕಾಣುತ್ತೆ ಬನ್ನಿನಿಸ್ನಾಪ್ರದುಮಸಾಧ್ಯಮಲ್ತೆಂ[1][ದು][1] ಬಳಾಹಕಗಿರಿಗೊಂಡಲ್ಲಿಯೊಂದು ಪುಲಿಯ ಬಿಲಮುಂಟಲ್ಲಿ ಪೊಕ್ಕಡೆ ಫಲಪ್ರಾಪ್ತಿಯಕ್ಕುಮೆಂದು ಗೆಂಟಱೊಳಿರ್ದ ಕುಮಾರನಾ ಬಿಲಮನೆಯ್ದಿದಾಗಳ್

ಕಂ|| ಮಸಗಿ ಸರಭಸದಿ ಪುಲಿ ಗ
ರ್ಜಿಸುತಂ ತನ್ನಯ್ದ ಮಱುಗಳುಂ ಬೆರಸಿ ಕರಂ
ಪಸಿದ ಜವನಂತೆ ಮುಳಿಸಿಂ
ಪಸಮಳಮಪ್ಪಂತಗುರ್ವಿನೊಳ್ ಪಾಯ್ದಾಗಳ್ ೪೪

ಮ|| ಜಲದಿಂ ಪಾಂತೆಡಗಂಜ್ಯೊಱೊತ್ತಿ ಪಿಡಿದಂ ನುಗ್ಗಿಸಂ ವ್ಯಾಘ್ರನಂ
ಬಲಗೈಯೊಳ್ ಮಱುವಯ್ದುಮಂ ಪಿಡಿದುಕೊಂಡೊತ್ತಿರ್ದನಿರ್ದಾಗಳಾ
ಪುಲಿಯುಂ ಭೀಕರರೂಪದಾ ಮಱುಗಳುಂ ಪೋಪಿರ್ದ ಬೇಗಂ ಭಯಾ
ಕುಳದಿಂ ಕಬ್ಬಿನ ಬಿಲ್ಲುಮಯ್ದುಮಲರಂಬಾಗಿರ್ದುವೇಂ ಚೋದ್ಯಮೋ ೪೫

ವ|| ಅಂತು ಬಿಲದೊಳ್ ಪುಲಿಯ ರೂಪಾಗಿರ್ದ ವಿದ್ಯಾದೇವತೆ ಸಾಧ್ಯಮಾದೊಡೆ ಕಬ್ಬಿನ ಬಿಲ್ಲುಮಯ್ದುಮಲರಂಬುಮಂ ಪಿಡಿದುಬರ್ಪುದಂ ಕಂಡಣ್ಣಂಗಳ್ ವಿಸ್ಮಯಾಕುಳಿತರಾಗಿ ಬನ್ನಿನಿನ್ನೊಂದಗೋಚರಸ್ಥಾನಮುಂಟೆಂದೊಯ್ದು ಜಯಂತಪರ್ವತದೊಳಿರ್ದಗಾಧಮಪ್ಪುದಱ ನಡುವಣ ವೈಜಯಂತಮೆಂಬ ವನಮಂ ತೋಱಿದಾಗಳ್ ಇದು ಪಾದಗಮನಕ್ಕಗೋಚರಮೆಂದಲಂಘ್ಯಮಾನಮೆಂಬ ವಿದ್ಯೆಯಿಂ ಲಂಘಿಸಿ ಪೋಗಿ ವನಮಂ ಪೊಕ್ಕು ಮುನ್ನಸಾಧ್ಯಮಾದ ವಿಜಯಶಂಖಮಂ ನೆನೆದುದುಮಂ ಕೆಯ್ಗೆ ವಂದೊಡದನೊತ್ತಿದೊಡಾ ಧ್ವನಿಗೆ ಬೆರ್ಚಿ ಬೆರ್ಚಿದೊಂಗೆ ಮಾನಸವಾಳಂ ಬೆರ್ಚಿಸಿಮೆಂದಾಱುಂ ಭೂತಂಗಳುಂ ಮುಳಿದು

ಕಂ|| ಭೀಕರ ರಾಕ್ಷಸ ಭೇತಾ
ಳಾಕಾರದೊಳೆಸಗಿ ಮಸಗಿ ಗರ್ಜಿಸೆ ಕಂಡಿಂ
ತೇ[2][ಕ][2]ಲೆವಿರದೇಕೆ ಮಲೆವಿ
[3][ರೇ][3]ಕೆ ವಿಗುರ್ವಿಸುವಿರೇಕೆ ಗುರ್ವಿಸುತಿರ್ಪಿರ್ ೪೬

ಎಂದೊಡೆ ತೆಗಳೆಂದವುಮೆ
ಯ್ದಂದಮಡೆ ಕಂಡಾ ಕುಮಾರನೊಂದೊಂದಂ ಮುಳಿ
ದೊಂದೇ ಮೆಯ್ಯೊಳ್ ಕೆಡೆ[4][ದ
ತ್ತಿಂ][4]ದೊದಱುಯುಮೆಂ[5][ದಳಱುಯೆ][5] ಪೆಳಱುದವಾಗಳ್ ೪೭

1 ದಂ 2 ಕೆ 3 ರಿದೆ 4 ತಂ 5 ದೊಳಱು ಮಗುಳೆ

ವ॥ ಅಂತು ಪೆರ್ಚಿ ಬಂದು ಪೆರ್ಚಿ ಪೋದ ಭೂತಂಗಳಂ ಕಂಡಂಜದಿರಿಪೆಂಪವನ ನಾಯುಕಿಯುಪ್ಪ ಕಾಳರಾಕ್ಷಸಿಯು ಮೆಯ್ಯಂ ಪೆರ್ಚಿಸಿ ಕೋಪೋಪ್ಪ ತೆಯಾಗಿ ಮುಸಗಿ

ಮ॥ ನೆಲನಂ ಮುಟ್ಟಿದುದೊಂದು ಪಾಡೆ ಪೆಱತೊಂದಾಕಾಶಮಂ ಮುಟ್ಟುತಿ
ರ್ಕೆಲನಂ ಕೈನಿಮಿರುತ್ತೆ ರಬ್ಜಿಸೆಯುಮಂ ಮುಟ್ಟಿರ್ದುವುಗ್ರಾಕ್ಷ ನಂ
ಗಲು ಬಿಟ್ಟಿರ್ದುವು ಪೆರ್ಚಿ ನಾಲಗೆ ಕರಂ ನೀಳ್ದತ್ತು ರಂ ಪಾಸಿದಂ
ತೊಳಿಪೆಯ್ತಂ[1][ದ][1]ಪುದೇಂ ವಿಜೃಂಭಣದ ಪಾಂಗತ್ಯುಗ್ರಮಾ ದೃತೆಯಾ ೪೮

ವ॥ ಅಂತದ್ಭುತಮಾಗೆ ಬಂದೀಯೆಡೆಯುಂ ಪೊಕ್ಕೆನ್ನ ಕಾಪಿನ ಭೂತಂಗಳ್ ನೋಡಿಸಿ ನಿಶ್ಯಂಕಿತನಾಗಿರ್ದನಿವನಕ್ಕುಮಾವಡಮೇನೊಪ್ಪು ನುಡಿಯಿಸಿ ಮನದ ಪೆಂಪಂ ನೋಟಿಪ್ಪೆನೆಂದಿಂತೆಂದಳ್

ಕಂ॥ ಪಾಱುವಡಂ ಪಱಿವಡಮಣ
ವಾಱಿಂ ಪೋಗ[2][ಲ್ಕಮಾ][2]ವ ದೆಸೆ [3][ಯಿಲ್ಲ][3]ಳಿಸಿಂ
ತೋಱದಿರು ಜೋಪೆಱ
ದಿರಾಂ ಮುಳಿಎತೆಮಪೂಸಲ್ನೆಱಿಯೆ (?) ೪೯

ವ॥ ಎನೆ ಕುಮಾರನೀಕೆ ಮುನಿದೊಡೆ ಮುನಿಪೆಂ ನುಡಿವಡೆ ಮಱುಮಾತೀಪೆ ನೆಂದಿಂತೆಂದಂ

ಕಂ॥ ವಸುಧೆಯ ನಭದೆಡೆಯುಮನಿ
ರ್ದನೆಯುಮನೆಱಿಯಲ್ಕೆ ನಿಮಿರ್ದೆಯೆಂದಾಂ ಬಗೆಪೆಂ
ಮುಸಗಿ ನಿಮಿರ್ದೊಡಲಗುರ್ವಂ
ಜಿಸುಗುಂ ಬಂದಿವನನೆಂಬುದಂ ನೀಂ ಬಗೆದೋ ೫೦

ವ॥ ಎಂಬ ಭಾಷೆಯುಂ ತೆಗಟುಸುಂ ಮನದ ಪೆಂಪುಮನಱಿದು ಮತ್ತೆಯುಂ ಮುಳಿಪಾಲಿಯಂ ತಿರಿಪಿದಾಗಳ್ ಬಂಡಿಯು ಗಾಲಿಯು ತಿಱಿಯುದೊಡಂ ನಿನ್ನಾಲಿಯು ತಿಱಿಯುದೊಡಂ ನಿನ್ನ ನಚ್ಚುವ ಮರದ ಚಾಂಡಿಯಚ್ಚು ಮುಱಿಯದಿರದೆಂದೊಡನಕ್ಕಂ ಕಿಸಿಸಿ ಮತ್ತೆ ನೀಮಿರಲ್ ಬಗೆದಾಗಳಿನ್ನಿರಲಾಗೆಂದು ಕಬ್ಬಿನ ಬಿಲ್ಲೊಳ[ಲ]ರಂಬಂ ತೊಟ್ಟು ತೆಗೆದೆಱಿಪೆಚ್ಚೊಡಿಸಿಸು ನಡುಕಮನಱಿದಯ್ದಂಬಿನೊಳಮೆಚ್ಚೊಡೆ ಬಟಿಲ್ವ ಕೆಯ್ತು ಮನಱಿದು ಕಬ್ಬಿನ ಬಿಲ್ಲೊಳೆತ್ತಿ ಪೊಯ್ದಾಗಳ್ ಕಾಳರಾಕ್ಷಸಿ ತೊಟ್ಟನೆ

1 ದು 2 ಲ್ಕಕಾ 3 ಯುಮಿಲ್ಲೆನ್ನ

ಕಂ॥ ಸ್ಮರಹತ ಪರಿತೋಷದೆ[ಯತಿ]
ಭರದಿಂದ[1][ಮವಳ][1]ಬಲುಣ್ಮೆ ಪೊ[2][ಣ್ಮಿರೆ ಪೇಣಾ][2]
ವಿರಹಜ್ವರ[3][ಮುಂ ಪೆಚಿ್ಚರೆ][3]
ಮರಸಿಗೆ[ಯುಂ] ಪುಟ್ಟಿತೆಂಬುದಂ ಪ್ರಬಳಿಸಿದರ್ ೫೭

ವ॥ ಆರುಂ ದಾಹಜ್ವರಕ್ಕೆಂದು ಶೀತಳಕ್ರಿಯೆಯುಮಂ ಮಾಡಿಯುಂ ಸ್ವೈರಿಸದೆ ಸಂದಸ ಪನಮಂ ಪೊಕ್ಕೊಡಾತನಂ ಪಿತ್ತಸನದಂತೆ ಭಯಮುಮಂ ಮಾಡೆ ಜಿಕ್ಕಿ ಕೊಳಸಂ ಪೊಕ್ಕೊಡಾ ಕೊಳಂ ಕೊಳ್ಳುಳದಂತೆ ಸಾಪಂ ಮಾಡಿದೊಡಲ್ಲಿಂದು ಪೊಱಮಟ್ಟು ತಳಿರಂ ಪಾಸಿದೊಡಾ ತಱಗೆಲೆಯುಂ ಪಾಸಿದಂತಾದುವು ಬೀಸುವ ಜಳವೆ ಕಾಮುನಿ ಕೈವೀಸು ವಂತಾದುವು ಪೂಸುವ ಚಂದನಂ ಪುಣ್ಣೊಳ್ ಪೂಸುವ ಸಾಸುವೆಯಂತಾಗೆ ತಳಿವಾಲಿ ಸೀರ್ಗಳುಂ ಕಣ್ಣಾಲಿನೀರಂತೆ ಬಿಸುವೇಱಿ ಬೀಸಿದಾಗೆ ಪರಿಚಾರಗಣಂ ರಾಕ್ಷಸಗಣದಂತೆಡೆ ಮುಗುಟ್ದು ಬಂದು ತನ್ನ ಮಾಡದ ನೆಲೆಯೊಳ್ ಪೊರಳುತ್ತಿ[ರ್ದ]ದನೊಳಿಂತೆಂದು ಬಗೆಗುಂ

ಉ॥ ಆನೆರೆದಟ್ಟಿದಾಗಳಿದು ಪಿತ್ತವಿಕಾರದಿನಾದುದೆಂಗುಮೋ
ತಾನೆನಗಜ್ಜಿಯೆಂದು ಪುಸಿ ಶೌಚದೊಳಿನ್ನಣಮಾಗದೆಂಗುಮೋ
ಜೈನಮತಪ್ರತಂಗೆ ಪರನಾರಿಯೊಳಾಗದು ಕೂಟಮೆಂಗುಮೋ
ಮಾಸಿತಮಪ್ಪ ವಸ್ತ್ರಗಳಸಿತ್ತಡೆ ಮೋಹದಿನಕ್ಕುಮೆಂಗುಮೋ ೫೮

ವ॥ ಎಂದು ಬಗೆಬಗೆದು ಪಲುಂಬುತ್ತಿರ್ಪಿನಮಜ್ಜಿಗೆ ದಾಹಜ್ವರಮಾದು ದೆಂಬುದಂ ಕಾಮದೇವಂ ಕೇಳ್ದಾರಯ್ಯಲೆಂದು ಬಂದಾಗಳ್ ಮುನ್ನ ನಮಗಂ ಪೊಣ್ಮೆ ಬಿಮುರುಣ್ಮೆ ಕಿಱುದುಪೇಗದಿಂತಿಂತಾನುಂ ಬರೆಯುತ್ತಬಾಯೆಂದು ಸಾರೆ ಕುಳ್ಳಿರಿಸಿ ತೋಱು ಕೆಯ್ಯನೆಂದಾತನ ಕೆಯ್ಯಂ ತನ್ನಿರ್ದೆಯೊಳ್ ಸಾರ್ಚಿ ನಡುಕಮುಂ ತೋಱಿ ಬೆಂಕೆಯುಂ ನೋಡೆಂದು ಕೆಯ್ಯಂ ಪೊಲೆಯಮೇಗಿಟ್ಟು ಪಿಡಿದಿರ್ದು ಕೆಲದೊಳಿರ್ದವರಂ ಕೇಳಲಿಂತೆಂಗುಂ

ಕಂ॥ ಇಂತೆನಗೊದವಿದುದಸು ಪೋ
ಪಂತಪ್ಪನಿತೊಂದವಸ್ಥೆ ಪಱಿತೊಂದಿದು ತಾ
ನೆಂತುಂ ಕಿಡದಂಗಜನಿಂ
ಭ್ರಾಂತಿಸದೆನ್ನೊಡನೆ ಕೂಡಿ ಬಾೞಿಸು ಪೆಱದೇಂ ೫೯

ವ॥ ಎನೆ ತೊಟ್ಟನೆ ಬೇಳ್ವುತ್ತ ಬಿಟ್ಟನೆಪೋಗಿ ತನ್ನ ಕೆಯ್ಯಂ ಸೆಗಮುಡಿಗಿ ಕೊಂಡು ಇದು ನಿಮಗೆನಿತು ಪೈತ್ತಿಕಜ್ವರಮಾದೊಡಮಿಂತೆನಲಕ್ಕುಮೆ

1 ಳವ 2 ಣ್ಮೆ 3 ಮಂ

ಕಂ॥ ಎನೆ ಕನಕಮಾಲೆ ನುಡಿಗುಂ
ಮನಸಿಜ ಕೇಳ್ ಖದಿರವನದ ತಸ್ಕರಶಿಲೆ ತಾಯ್
ನಿನ1[ಗಾನಲ್ಲೆಂ]1 ನಿನ್ನಂ
ಜನಪತಿ ಕಂಡೆನಗೆ ತಂದು ನಡಪೆಂದಿತ್ತಂ ೬೦

ಉ॥ ಇತ್ತಡೆ ನಿನ್ನನಾಂ ನಡಪಿದೆಂ ಪೊಲಿಸಾಗದುದಿಲ್ಲಿನಂದಮದೋ
ಚಿತ್ರಜ ನಿನ್ನನೊಲ್ದು ಪೊಡೆಮಟ್ಟಪೆ ನೀನೆನಗಕ್ಕಟಿಂಬುದಾ
ಪತ್ರಿನೊಳಪ್ಪಡಂ ಫಲಮನುಣ್ಣದೆ ಸಾವರೆ ಪಂಚವಳ್ಳಿಯುಂ
ಪಿತ್ರಿಲೊಳಿಟ್ಟರುಂ ಮರನನಿಟ್ಟರುಮೇಂ ಫಲಮುಂಬರಲ್ಲರೋ ೬೧

ಅಂತೇಕೆಂಬಿರ್ ನವಮಾ
ಸಾಂತಂಬರ ಪೊ2[ತ್ತು]2 ಪೆತ್ತ ತಾಯ್ವಿರ್ಗಿನ್ನೆಂ
ದಿಂತಿನಿತು ಕಾಲಮೆಲ್ಲಂ
ಸಂತಸದಿಂ ನಡ3[ಪೆ]3 ನಿನ್ನೊಳ್ತುಂಬಿವ4[ರ್]4 ಸಮನೇ ೬೨

ಚಂ॥ ನಡಪಿದೆನರ್ತಿಯಿಂ ಫಲಮನುಂಬನಿತಾಗಲಿಕೇಟ್ಟುದೆಂಬರ
ಪ್ಪಡೆ ಬಿಸವೇಱಿಯಾಂತ ನಿಪುನಂ ಗಿಳಿ ಕಾ5[ದು]5ಪೆಸಂತುವಲ್ಲದೀ
ಮುಡಿಯೊಳನಾಲ್ಯನಸ್ತ್ರಪೊಳವಸ್ನಿರೆ ತಂದಮನೀವೆನಿಲ್ಲಿದಾ
ಪೊಡಮನೆ ಗರ್ವಮಾದವರ್ಗೆ ಲೋಕದೊಳೇನರಿದೇನೊ ಗೋಚರಂ ೬೩

ವ॥ ಎಂಬುದೆಲ್ಲಮಂ ಕೇಳ್ದು ಜಿಷ್ಣನೆ ಸುಯ್ದು ಮನದೊಳಿಂತೆಂಗುಮಿಮಂಗೆ ತಾಯೆಂಬತ್ತಂ ಪೋಗವೇಗೆಯ್ವಂ ನೋಡಿಮುಂ ತೋಱಿ ನಡೆಪೆಂದೆಂಗುಂ ನೀನೆನಗೆ ಬಿಸಕೆಯ್ದುದಂ ಕಂಡು ನಂಬುವುದಂತಪ್ಪಂದುಂ ಕೆಯ್ಕೊಳಿನ್ನನೊಳಕೊಂಡು ವಿದ್ಯಾಧರ ಶ್ರೀಮನಾವಗಂ ಕೆಯ್ಕೊಂಡು ಸುಖಿವಿಪ್ಪುದೆಂಬ ಗೆದುವದನಲ್ಲದೀಗಳಿನಳಿಪನೆ ಬಗೆದನಲ್ಲಿ ಕಾಮಂ ವಿದ್ಯಾಲಾಭಮುಮರ್ಥಲಾಭಮುಮಿನಿಸು ದೋಷಂಬಿಸಿಯಲ್ಲದಾಗದಿನ್ನ ಬಗೆಂಬಿ ಬಗೆಯಾಗಿ ವಿದ್ಯೆಯುಂ ಕೊಳ್ವೆನೆಂದಿಂತೆಂದು

ಕಂ॥ ಉ[ಂ]ತುಂ ಬೆಸಕೆಯ್ವಂ ನಿಮ
ಗೆಂತು ಭರಂಗೆಯ್ಯೆ ಕೂರ್ಮೆಯುಂ ಕಜ್ಜಮುಮಂ
ಭ್ರಾಂತಿಸವೇಡೆನಲೀವುದು
[ನಿಂ] ತೋಱುಮದೊ6[ದಿಂ]6ತು ದಾಂಟುವೆನೊ ಬಿಸನಿನುದಂ ೬೪

---

1 ಗಿಯಾನಲ್ಲೆ 2 ತ್ತಿ ದುರ್ 3 ಪಿದಿರಬ್ಬ 4 ವರ್ 5 ಡು 6 ದಾನಿಂ

ವ॥ ಎನ್ನ ಸ್ನೇಹಕ್ಕಡಂಬಂದು ತನ್ನ ಮೋಹಕ್ಕೆ ಮನಂದಂದಪೆನೆಂದು ನಂಬಿ ಪ್ರಜ್ಞಪ್ತಿವಿದ್ಯೆಯುಂ ತ್ರಿಶುದ್ಧಿಯಿಂನಿತ್ತೆಂ ಸಂಜಯಂತಭಟ್ಟಾರರ್ ಮೋಕ್ಷಪ್ರೋದಲ್ಲಿಯ ಸಿದ್ಧಕೂಟದ ಚೈತ್ಯಾಲಯದೊಳ್ ನೀಂ ಸಾಧಿಸಿಕೊಳ್ಳೆಂದು ಮಂತ್ರಪದಂಗಳಂ ಪೇಳಿಶ್ಚೂಪ್ಪಿಸಿದೊಡೆ ಕೈಯ್ಕೊಂಡು ಪೂಜಿಸುಟ್ಟು ಬಂದರ್ಚನಾಸಹಿತಂ ಪೋಗಿ ಸಿದ್ಧಕೂಟಮಂ ಬಲಗೊಂಡು ದೇವನಂ ಬಂದಿಸಿ ಮಂತ್ರವಿಧಿಯಿಂದಾರಾಧನೆಗೆಯ್ಯೆ ವಿದ್ಯೆ ಸಾಧ್ಯಮಾಗಿ ಬೆಸನೇನೆಂದೊಡಮ ಪೂಜಿಸಿರ್ಪಿನಮಲ್ಲಿಗೆ

ಕಂ॥ ಯಮ ನಿಯಮ ಸ್ವಾಧ್ಯಾಯ
ಕ್ರಮಯುತತಪಿತತ ವಿಸ್ರುತ ವಿಪುಳೋತ್ತಮರ್ ಗು (?)
ಣಮಣಿಗಳುಂ ಗುಣಭೂಷಣ
ವಿಮಳಮತಿಗಳೆಂಬ ಚಾರಣ[ರ್] ಋಷಿ[1][ಯುಗಳರ್][1] ೬೫

ವ॥ ಇರ್ವರ್ಮಂದೊಡವರಂ ಬಂದಿಸಿ ಮುಂದೆ ಕುಳ್ಳಿರ್ದು ಧರ್ಮಮಂ ಕೇಳ್ದಿಂ ಬಳಿಯಂ ವಿದ್ಯೆಯಂ ಕಾಳಸಂಬರಕುಲದ ಗಂಡರ್ಗೆ ಬೆಸಕೆಯ್ವುದ ಕಾರಣಮಂ ಬೆಸಗೊಂಡು ತಿಳಿದು ಭಟ್ಟಾರರಂ ಬಂದಿಸಿ ಮಗುಳ್ದು ಬಂದು ತನ್ನಿಂದಿನಿರ್ಪಂತೆ ಕಾಮದೇವನಿರೆ

*ಕಂ॥ ವಿದ್ಯೆ[2][ಯುಮಂ][2] ಸಾಧಿಸಿ ಬಂ
ದಿರ್ದ[3][ನದಂ][3] ಕೇಳ್ದು ಕನಕಮಾಲೆ[4][ಯುಮಂತಿ
ರ್ದುದ][4] ನಂಬಿ[ಯೆ] ವಿದ್ಯೆಯನೊಸೆ
[5][ದಿರ್ದಿ][5]ತ್ತೆಂ ಕೊಂಡುವಿಂತು ಪುಸಿವ್ರವನಜೀಯೆಂ ೬೬

ವ॥ ಎನೆ ಕಾಮದೇವನಿಂತೆಂದಂ

ಕಂ॥ ಪುಸಿಯಲಣಮಾಗ ರಣದೊಳ್
ಕುಸಿಯಲುಮಣಮಾಗದಬ್ಬ [ನೀಂ] ಮುನ್ನೆಂದೆಂ
ಬೆಸಕೆಯ್ದೆನೆಂದೆನಿನ್ನುಂ
ಬೆಸಸಿರೆ ತಕ್ಕೊಂದು ಬೆಸನಸರ್ಥಿಯೆ ಗೆಯ್ವೆಂ ೬೭

1 ಯರ್ 2 ಯಂ 3 ನೆಂಬುದನಾರಯ್ದು 4 ಯಾದದು 5 ದಿ

* ಹಸ್ತಪ್ರತಿಯಲ್ಲಿ ಇದು ಹಿಂದಣ ವಚನದಿಂದ ಮುಂದುವರಿದುದಾಗಿದ್ದು, ಮತ್ತೆ "ವ॥" ಎಂದು ವಚನವೆ ಪ್ರಾರಂಭವಾಗಿರುವುದರಿಂದಲೂ, ಈ ಭಾಗ ಪದ್ಯಕ್ಕೆ ಸರಿಹೊಂದುವುದರಿಂದಲೂ ಕಂದಪದ್ಯವನ್ನಾಗಿ ಮಾಡಲಾಗಿದೆ.

ವ॥ ಎಂಬುದಂ ಕೇಳ್ದು ಮದನಾಗ್ನಿಯುಮೊಂದಾಗೆ ತಳ್ತುದೊಡೆರ್ದು ಕುಳ್ಳಿರ್ದಿಂ ತೆಂದಳ್

ಕಂ॥ ತಕ್ಕನ ತೆಱದಿಂ ನೀನುಱಿ
ದುಕ್ಕಲಿಸಿದೆಯುಕ್ಕುಮಾಡೊಡಿ[ರದಿ]ನ್ನುಂ [ನೀಂ]
ಪೊಕ್ಕಿರ್ದಮರೇಂದ್ರನ ಮುಱಿ
ವೊಕ್ಕಡಮಾಂ ಕೊಲಿಪೆನೆನ್ನ ಮುಳಿಸನೆ ಸಲಿಸಂ ೬೮

ವ॥ ಎಂತು ಬರ್ದುಂಕುವೆಯೆನೆ ಮನಸಿಜನಿಂತೆಂದಂ

ಕಂ॥ ನಿಮ್ಮ ಮಗನೆಂದು ಬರ್ದುಕುವೆ
ನುಮ್ಮಡಿಸೆ[1][ನ][1]ದೆಂತುಮುಬ್ಬ ಕೊಂದಡೆ ಪಾಪಂ
ನಿಮ್ಮನೆ ಸಾರ್ಗುಂ ತಾಯ್ ಮುಳಿ
[2][ನಿಮ್ಮ][2]ಗನಂ ಕೊಂದಳೆಂಬುದೆಲ್ಲಿಯುಮುಂಟೇ ೬೯

ವ॥ ಆವುದುಮಂ ನೀಮಱಿವಿರೆಸಗೆ ಪಾಪಂ ಮೆಯ್ವೆತ್ತಡೊಳ್ಳಿತ್ತೆಂದೆರ್ದು ಪೋದಂ ಪೋದಾಗಳೆ ಕನಕಮಾಲೆ ತನ್ನ ಮೆಯ್ಯಂ ಕಿಡಿಸುವಂತೆ ಮೆಯ್ಯ[ಂ] ಕಿಡಿಸಿ ಕೃತಕಭಾವಮಂ ತನ್ನೊಳುಮೊಡಂಬಡಿಸಿ ಖಿನ್ನನಾಗಿರ್ದಳಿರ್ಸಿನಂ ಕಾಳಸಂಬರಂ ಬಂದಿಂ ತೇಕೆಯಿರ್ದೆಯೆನೆ ಶೋಕರಸಮಂ ಭಾವಿಸಿ ಮೆಯ್ಯನಿಕ್ಕಿ ಕಣ್ಣನೀರಂ ನೆಗಪಿ ನೊಂದ ಮೆಯ್ಯಂ ತೋಱಿ ಬಿಡದಿಂತುಮೊಳ[3][ಱು][3]ತ್ತಮಿಂತೆಂಗುಂ

ಕಂ॥ ಆರ ಮಗನೆಂದು[4][ಮ][4]ಱಿಯದೆ
ಧೀರಾ ನೀನೀಯೆ ಕೊಂಡು ನಡಪಿದೆನೆನ್ನಂ
ಕ್ರೂರಸುತವೇಷ ದುರ್ವಾ
ಚಾರಂ ಮೇಲ್ವಾಯ್ದನಿಂತಧೋಗತಿಗೊಯ್ದಂ ೭೦

ವ॥ ಎಂದು ಮತ್ತಮನಿತಾನುಮಿಟ್ಟಳಂಗಳುಮಂ ಪುಸಿಯ ಪೊಟ್ಟಣಂಗಳುಮಂ ನುಡಿಯೆ

ಕಂ॥ ಅಂಬರಚರಪತಿ ಬೇಗಂ
ನಂಬಿದನಂಗನೆಯ ನುಡಿಯನೆಂತಪ್ಪವರುಂ
ನಂಬುವರಿವರಿಂ ಮದವಂ
ತುಂಬುರ್ವಿಪ್ರ ಜೋಷ್ಯವಲ್ಲಮೆಂದಂ ಜಗದೊಳ್ ೭೧

1 ಣ 2 ಸಿಂದಂಮ 3 ಗು 4 ನ

ವ॥ ಪೆಂಡತಿಯ ಮಾತನಂತು ನಂಬಿ ಕಾಳಸಂಬರಂ ಮುಳಿದೀಗಳೆ ಕೊಲ್ವೆನೆಂದು ಪೊಱಮಟ್ಟಂತೆ ಬಂದು ಮುಸಗಿ ತನ್ನಯ್ದದಿಂಬರುಮಂ ಪೇೞ್ದೊಡಂತೆಯಾಡು ಪಂಗೆಱೆಯುಮನಾದಂತೆ ಸನ್ನದ್ಧರಾಗಿ ಕಾಮದೇವನಿರ್ದೆಡೆಗೆ ನಡುಗುತಂ ವಿದ್ಯಾದ್ವಾಡನಿಂತು ಕೊಲಬಾಗಮುಪಾಯದಿಂ ಕೊಲ್ವೆಮೆಂದು ಪೊಱಲ ಪೊಱಗೊಂದಡವಿಗೊಯ್ದು ವಿದ್ಯೆಯಿಂದೊಂದು ಅಗಾ[ಧ]ಮಪ್ಪ ಕೂಪಮಂ ಸಮೆದಲ್ಲಿ ಪೊಕ್ಕೊಡತಿಶಯ ಮಪ್ಪ ಸಮನಿಸುಗುಮೆನೆ ಕೃತಕಮೆಂದಱಿದು ಕಾಮದೇವಂ ತನ್ನಂದದೊಳೊಂದು ವಿದ್ಯೆಯನಲ್ಲಿ ಪುಗಿಸಿ ಪೇಗಮದೃಶ್ಯನಾಗಿ ನೋಡುತ್ತಿರ್ದನವರೆಲ್ಲಮವನನೀಗಳೆ ಪೂೞ್ದು ಕೊಲ್ವೆಮೆಂದು

ಮ॥ ಮರನಂ ಕಲ್ಲುಮನೊಟ್ಟಿದಂದು ಪಲವುಂ ಸೂೞ್ಕಲ್ಲಮಾ ಕುಯ್ಕಲಂ
ಭರದಿಂ ಪೂೞ್ವಮನೊಟ್ಟುತಿರ್ಪುದನನಂಗಂ ಕಂಡು ಪೋತಪ್ಪುದಾ
ದೊರೆಯಾಯ್ತುಕ್ಷಿಯ ಚಿತ್ತವೃತ್ತಿಯೊಳದಂ ವಿದ್ವೇಷಮಂ ನೆಟ್ಟು ನೀ
ದೊರೆಯಾಯ್ತೆನ್ನಯ ಸೋದರಂಗಳು ಕರಂ ಕೂರ್ತಂದವೋಲ್ ಜೋದ್ಯವೋ ೭೨

ವ॥ ಎನುತ್ತೆ ನಿಜರೂಪದೊಳ್ ಬಂದೊದಱು ಪೊಕ್ಕಿನರೆನ್ನನಿಂತು ಕೊಲ್ವಡ ಮಾಸಿನಂ ಕೊಲ್ವೆನೆಂದನಿಬರುಮಂ ನಾಗಪಾಶದಿಂ ಪಿಡಿದುಡಿಯೆ ಕಟ್ಟಿಕ್ಕಿ ಪೋ ನಿಮ್ಮರಸಂಗೆ ಪೇೞಿಂದೊವರ್ನನಟ್ಟಿದೊಡಮ್

ಕಂ॥ ಪೊಡವಿಪನನೆಯ್ದೆ ಬೇಗಂ
ನುಡಿಗಂ ನಿಶ್ಶ್ರೇಣದಿಂಬರಂ ಮತ್ತರನಮ
ತೊರ್ಡನಡಸಿ ಪಿಡಿದು ದರ್ಪಂ
ಗಿಡೆ ಕೋಡಗಗಟ್ಟುಗಟ್ಟಿದಂ ಕುಸುಮಶರಂ ೭೩

ವ॥ ಎ॰ ಪುತ್ರಂ ಮುಳಿದು ಸರ್ವಸನ್ನಾಹಂಗೆಯ್ದು ಚಾತುರ್ದಂತಬಲಂಬೆರಸು ಪಱಿಯಂ ಪೊಯಿಸಿ ಪೊಱಮಟ್ಟು ಬಂದಂದು ಕಾಮದೇವನಿರ್ದೆಡೆಯನೆಯ್ದೆ ದಾಗಳಾ ಪಡೆಗಿದ್ದಿರಿಯಾಗಿ ಮಾಯಾ ಚಾತುರಂಗಬಲಮಂ ಪಡೆದಿದಿರೊಳೊಡ್ಡಿರ್ದುದಂ ಕಂಡು ಕಾಳಸಂಬರಂ ಕೆಯ್ಸೋಸಿದೊಸಂಗಜನುಂ ಬೆಸನೆ ಮಾಯಾಪಡೆ ಪೀಡು ಪೊತ್ತು ಕಾದಿವಲ್ಲಿ ತನ್ನ ಪಡೆ ನೊಂದು ಕೆಟ್ಟಿಲ್ದು ಕೆಡೆವುದುಮನಿದಿರ ಮಾಯಾಪಡೆ ಗೆಲೆಯಿಱವುದುಮಂ ಖೇಚರಪತಿ ಕಂಡು ವಿದ್ಯೆಗಳಂ ಬೆಸಸಿದೊಡರ್ಕನಗಂ ಪ್ರತಿವಿದ್ಯೆಗಳಂ ಬೆಸಸಿ ಭೇದಿಸಿ ಗೆಲ್ದಾಗಳ್ ಕಾಳಸಂಬರಂಗಾಕಂಕಂಬರಮುಱಿಲೊಗೆಯೆ ಪೆಱಗಂ ನೋಡಿ ಕಾಯ್ಪಿನೊಳ್ ಸ್ವೈರಿಸದೆ ನೋಡಲ್ ಬಂದ ಕನಕಮಾಲೆಯುಂ ಕಂಡು ಸಾರೆ ಕರೆದು ನಿನ್ನ ಪ್ರಜ್ಞಪ್ತಿ ವಿದ್ಯೆಯಂ

ಕಂ॥ ಬೆಸಸೆನೆ ಮೂದಲೆಯಾದೊಡೆ
ಪಿಸುಣೀ ತಲೆವಾಗುವಂತೆ ತಲೆಯಂ ಬಾಗಿ
ರ್ದ ಸದಾಚರಿತೆಯನಾ ಕಾ
ಳಸಂಬರಂ ಕ[೦]ಡು ಮುಳಿಸನೊಳಕೊಂಡು ಕರಂ ೭೪

ವ॥ ಮಸಗಿ ಮುನ್ನನಿವನಂ ಕೊಂದಲ್ಲದೆ ನಿನಗೆ ತಕ್ಕುದಂ ಮಾಡೆನೆಂದು ರಥದಿಂ ನೆಲಕ್ಕೆವಾಯ್ದು ಬಾಳುಮತ್ತಪರಮುಮಂ ಕೊಂಡು ನಡವುದನಂಗಜಂ ಕಂಡು ಖಳ್ಗಹಸ್ತನಾಗಿ ನಡೆಯೆ ಗಗನದೊಳಿರ್ದ ನೋಟ್ಟ ನಾರದಂ ಕಂಡಿನ್ನಿರಲಾಗದೆಂದಿರ್ವರೆಡೆಗೆ ವಂದು ಕಾಳಸಂಬರನತ್ತ ನೋಡಿ ಮಾಣ್ ಮಾಣ್ ಎಂದಿಂತೆಂದಂ

ಕಂ॥ ಆಗದು ಮುಳಿಯಲ್ಕೆ ದಿಟಂ
ಬೇಗಂ ಸ್ತ್ರೀಜನದ ಮಾತಿನೊಳ್ ನಿನ್ನ ಮಗಂ
ಗಾಗದುದಂ ನೆಗಟ್ಟನಿತಱ
ಮಾಗಮ ನೀನಿಂತುಮೊಳ್ಳಿತಾರಯ್ ನೃಪತೀ ೭೫

ವ॥ ಎಂದಾತನನೊಳ್ಳಿತ್ತಾಱ ನುಡಿದು ತಱಿಸಿ ಕಾಮದೇವನತ್ತ ಬಂದು ನಿಮ್ಮಯ್ಯನ ನೋವನಾಱಿಸುವುದಿಂತು ತಂದೆಯಂ ಪಟ್ಟದಿಂ ಪಾಱಿಸುವುದಾವುದು ಧರ್ಮವೆಂದು ಕೆಯ್ಯಂ ಪಿಡಿದೊಡಗೊಂಡು ಬಂದಾಗಳಂಗಜನಿಂತೆಂದಂ

ಕಂ॥ ಪೆಱಱಾರ ಪೆಂಡಿರಾದೊಡ
ಮಱಿವುಳ್ಳಂಗೆಱಗಿ ನೋಡಲಾಗೆಂದೊಡೆ ತಾ
ಯ್ಗೆಱಗುವರೆಂಬುದುಮಂ ಕೇ
ಳ್ದಱಿದಿರೆ ಜೇಡರ್ಕಳ[ಱ]ಲಿಯುಂ ಪೊಲೆಯರೊಳಂ ೭೬

ವ॥ ಅದುಮಸೆನಲಾಗದೆನ್ನೊಡೆಯ ಮಾತನೆಮ್ಮಬ್ಬೆಯನೆ ಬೆಸಗೊಳ್ಳಿಮೆನೆ ಕಾಳಸಂಬರಂ ಮತ್ತೆ ಕನಕಮಾಲೆಯಂ ಕರೆದು ಪುಸಿಯದಿರಱಿದೊ[1][ಡು][1]ಕ್ಕೆಮನೋವುದೆನೆ

ಕಂ॥ ಏನಂ ಪೇೞ್ವೆನೊ ಪಾಪಮ
ನಾನೀತನನಿಂತೆ ಕೊಲಲು ಪಣ್ಣಿದೆನಱಿಲಿಂ
ದಾನೆ ಕೊಲೆಗೆಯ್ದಿದೆಂ ಪೆಱ
ದೇನೆನ್ನಂ ಕೊಲ್ಲದಂದು ತಪದೊಳ್ ನಿಲ್ವೆಂ ೭೭

1 ಡೊ

ವ॥ ಎನೆ ಕಾಳಸಂಬರನಿದಪ್ಪುದೆ ಪೆಂಡತಿಯನಿದೆ ಕೊಲ್ವುದಂ ತಪಕ್ಕೆ ಪೋಗೆಂದೊಡಾಕೆ ಪೋದಡೆ ಕಟ್ಟಿದಯ್ದುದಿಂಬರುಮಂ ಕಟ್ಟಂ ಬಿಡಿಸಿತಂದುಕೊಟ್ಟಂತು

ಉ॥ ತಾಯುಳಿಪಿಂದಮಪ್ಪ ಪೞಿಯುಂ ಕೃತಕೋಕ್ತಿಗೆ ನಂಬಿ ಕೊಲ್ವಭಿ
ಪ್ರಾಯದಳುರ್ಕೆಯಿಂದಿಜೀವ ತಂದೆಯನಿಕ್ಕುವ ಪಾಪಮುಂ ಪರೀ
[1][ಕ್ಷಾಯತ][1] ಶುದ್ಧಿಯಿಂ ತೊಲಗಿಪೋದೊಡೆ ರಾಗಿಸಿ ಮನ್ಮಥಂ ಸುಖೋ
ಪಾಯದಿನಿರ್ದನೇ ಗುಣದ ಪೆಂಪಿನೊಳಕ್ಕುಮೆ ಪಾಪಬಂಧನಂ ೭೮

ಗದ್ಯ॥ ಇದರ್ಹತ್ಸರ್ವಜ್ಞ ಪಾದಪದ್ಮವಿರಾಜಿತೋತ್ತಮಾಂಗ ಶ್ರೀ ಬಂಧುವರ್ಮ ನಿರ್ಮಿತಮಪ್ಪ ಹರಿವಂಶಾಭ್ಯುದಯದೊಳ್ ಕಾಮದೇವನುತ್ಸವಂ

**ಅಷ್ಟಮಾಶ್ವಾಸಂ**

---

1 ಕ್ಷಿತಪರಿ

# ನವಮಾಶ್ವಾಸಂ

ಕಂ|| ಅಂತಂಗಜನುಂ ಖಗಪತಿ
ಯುಂ ತನ್ನೊಳ್ ಕಲಹಮುಮನುಱೆದು ಕೂಡಿರ್ದು ಬಱಿ
ಕಿಂತೆಂದಂ ನಾರದನ
ತ್ಯಂತ ಗುಣೋಪೇ[1][ತನೀ][1]ತನಲ್ಲಿಗೆ ಸಂ[2][ದಂ][2] ೧

ವ|| ಈತಂ ತ್ರಿಖಂಡಮಂಡಳಾಧಿಪತಿಯಪ್ಪ ನಾರಾಯಣಂಗಂ ರುಗ್ಮಿಣಿಮಹಾದೇವಿಗಂ ಪುಟ್ಟಿದಾಗಳೀತನ ಪೂರ್ವ ವೈರಿಯಪ್ಪ ಅಸುರನೆತ್ತಿಕೊಂಡು ಪೋದೊಡೆ ಕೂಸಂ ಕಾಣದೆ ತಾಯುಂ ತಂದೆಯುಂ ಮಱುಗುತಿರ್ದು ನಿಮ್ಮ ಕೂಸು ಸಾವನಲ್ಲನೆಂಬ ದಿವ್ಯಧ್ವನಿಯಂ ಕೇಳ್ದು ಸಂತೈಸಿರ್ದುಮೆನ್ನನಱಸಲಟ್ಟಿದೊಡಂ ಪೋಗಿ ಪೂರ್ವವಿದೇಹದೊಳ್ ಸೀಮಂಧರ ತೀರ್ಥಕರಂ ಬೆಸಗೊಂಡೊಡೆ ಕೂಸಂ ಧೂಮಕೇತುವೆಂಬಸುರನೊಯ್ದು ಖದಿರವನದ ತಕ್ಷಕಶಿಲೆಯ ಮೇಲಿಕ್ಕಿ ಪೋದೊಡೆ ಮೇಗಕೂಟದ ಕಾಳಸಂಬರನೆಂಬ ವಿದ್ಯಾಧರರಾಜಂ ಕಂಡು ಕೊಂಡು ನಡಪಿದಪ್ಪನಲ್ಲಿ ಬಳೆದು ವಿದ್ಯಾಪರಿಪೂರ್ಣನಾಗಿರ್ದನೆನೆ ಕೇಳ್ದು ಬಂದೆನೀತನನವರೊಳ್ ಕೂಡುವೆನೊಯ್ದಪೆನೆನೆ ಕಾಳಸಂಬರನಿಂತೆಂದಂ

ಕಂ|| ಇಂತಪ್ಪ ಗುಣೋಪೇತನೊ
ಳಿಂತಾ ನೆಗಟ್ದಱ[3][ಯುವಿ][3]ಕ್ಕೆಗಂ ಪೆಱದಿ[4][ಲ್ಲಿಂ][4]
ತಾಂ ತೊತ್ತುವೆಸದೊಳಿಪ್ಪೆಂ
ಸಂತತಮಿನ್ನರಸುಗೆಯ್ಯುತಿರ್ಪುದು ಪೆಱದೇಂ ೨

ವ|| ಎಂದ ಕಾಳಸಂಬರನಂ ಪಶ್ಚಾತ್ತಾಪದಿನಾದನುಕಂಪೆಯುಮಂ ಮುನ್ನಂ ನಾರದನ ಪೇಟ್ದ ಜನ್ಮಸಂಬಂಧಮುಮಂ ಕೇಳ್ದು ಕಾಮದೇವಂ ತಂದೆಗಿಂತೆಂದಂ

ಕಂ|| ಅಡವಿಯೊಳಹಿತಂ ಬಿಸುಟೊಡೆ
ಮಡಿಮಡಿದತಿಶಯದೆ ನೀಮೆ ತಂದನುನಯದಿಂ
ನಡಪಿದೊಡೆ ಬರ್ದೆನಲ್ಲದೊ
ಡಡಂಗಿದೆಂ ಖಗದ ಮೃಗದ ಬಸಿಱಿಳಗಲ್ತೇ ೩

1 ತಂ ರಾಗಿಸುತಮಿಾ 2 ದೆಂ 3 ಯೆವಿ 4 ಲ್ಲೆನ್ನಿಂ

ವ॥ ಎನಗೀ ಭವಕ್ಕೆ ನೀಮೆ ತಾಯುಂ ತಂದೆಯುಮಲ್ಲದೆ ಪೆಱರಿಲ್ಲೀ ಕೃತಕ ಮನೆಂತು ನೀಗುವೆಂ ವಿಚಾರಿಸದೆ ನೀಮೆನಗೆ ಮುಳಿದು ಕೊಲ್ವುದಂ ಕಂಡು ಕಯ್ದುವಿಡಿ ದೆನವಕ್ಕಿಂತು ಮಿ[1][ಡುಕ][1]ದಿಪ್ಪುದು ನೀಮೆ ಸುಖದಿನರಸುಗೆಯ್ದುದೆನ್ನಂಬಿಡಿವಾಂ ಪೋದೊಡಲ್ಲವನರ ನೋವಾಱದಿನಂ ಬಂದಿರ್ಪರೆಂದೆನೆ ತಾನುಮೊಡಂಬಡಿಸಿ ಪೋಗ ಲೆಂದು ನಮಕಟ್ಟಿದಾಗಳ್ ತಾಯರ್ಥಿಯುಂ ನಾರದನಱಂದು ಗೋಶೀರ್ಷಚಂದನನುಂ ರತ್ನಮಯಮಪ್ಪ ಪಲವುಂ ಪ್ರತಿಮೆಗಳನಲ್ಲಿ ಜೇಡಿಕೊಂಡು ಕಾಮವಿಮಾನಮಂ ನೆನೆವುದು ಮಂತೆ ಬರಲದಱೊಳಗಿಟ್ಟು ತಾನುಂ ನಾರದನುಮೇಱ ತೆಂಕಮೊಗದೆ ಗಗನಮಾರ್ಗದಿಂ ಪಯಣಂ ಬರುತ್ತುಂ ತನ್ನ ತಾಯುಂ ತಂದೆಯ ವಂಶಾವಳಿಯುಂ ಬೆಸಗೊಂಡು ಕೇಳುತ್ತುಂ ಬರೆ ವಿಮಾನಂ ಮೇಗಿನಿಸು ನೆಗೆದು ಪಾಱುವಾಗಳಧೋಭಾಗದ

ಕಂ॥ ಗಿರಿ ನದಿ ವಿಷಯಾಬ್ಧಿಗಳಂ
ಧರಿತ್ರಿಯೊಳ್ ನೋಡಿ ನೋಡಿ ಬೆಸಗೊಂಡಿರದಂ
ಬರದತ್ತ ನೋಡಿ ಜೋತಿ
ಷ್ಕರ ತೇಜಮನಂತೆ ಬೆಸಗೊಳುತ್ತುಂ ಪೋದಂ ೪

ವ॥ ಪೋಗಿ ಖದಿರವನದಲ್ಲಿಯುಂ ಬಪ್ಪಾಗಳಿದು ನೋಡು ನಿನ್ನ ಪಟ್ಟ ತಸ್ತಾರತಿಬಿ ಯೆಂದೊಡೆ ವಿಮಾನಮನಿನಿಸು ಸಮಾಪವರ್ತಿಯಾಗಿ ಮಾಡಿ ತೋಱುತ್ತುಂ ಬಂದು ಹಸ್ತಿನಪುರದಲ್ಲಿ ಬಪ್ಪಾಗಳಿದಾವ ಪೊಬಲೆಸೆ ನಾರದನಿಂತೆಂದಂ

ಕಂ॥ [2][ಕುರುಪತಿ ದು][2]ರಿಯೋಧನನೆಂ
ಬರಸಂ ಕೇಳ್ ನಿನಗೆ ಮಾ[3][ವ][3]ನಪ್ಪೊಂ ನೆಗಳ್ದೀ
ಪುರದಧಿಪತಿಯಿದು ಹಸ್ತಿನ
ಪುರವೆಂಬುದು ಸಕಳ ಧಾರಿಣೀತಿಳಕನಿಭಂ ೫

ವ॥ ಎಂದೊಡೆ ವಿಮಾನಮನಿನಿಸು ಸಮಾಪವರ್ತಿಯಾಗಿ ಮಾಡಿ ತೋಱುತ್ತುಂ ಪೊಬಲವರ್ತಿಯೊಳ್ ನೋಡುತ್ತುಂ ಬರೆ ಪುರ ಬಹಿರ್ಗೆಯೊಳ್ ಬಿಟ್ಟಿರ್ದ ಸಿರಿಯ ಬೀಡಂ ಕಂಡಿದೇನಾರ ಬೀಡುಮಿಲ್ಲಿಯೇಕೆ ಬಿಟ್ಟಿರ್ದುದೆಂದೊಡೀ ಪೊಬಲನಾಳ್ವ ದುರ್ಯೋ ಧನಂಗಂ ಜಯಧಿಯೆಂಬರಸಿಗಮುದಧಿ ಎಂಬ ಕುಮಾರಿ ಪುಟ್ಟಿದಳಾಕೆಯುಂ ನಿನಗೆ ಬಸಿರ್ಪೂಸಿ ಪೆತ್ತು ನಿನ್ನಂ ಕಾಣದೀಗಳ್ ನಿಮ್ಮಮ್ಮನ ಪಿರಿಯರಸಿ ಸತ್ಯಭಾಮೆಯೆಂಬಳಾ ಕೆಯ ಮಗಂ ಭಾನುಕುಮಾರಂಗೆ ಕುಡಲೆಂದು ಮಹಾವಿಭೂತಿಯಿಂದೊಯ್ದಪ್ಪೊರಾ ತಂಗೆ ಮದುವೆಯಾದೊಡೆ ನಿಮ್ಮಬ್ಬೆಯ ತಲೆಯಂ ಕೊಯ್ದು ಕೊಂಡು ಪೋಗಿ ಸತ್ಯಭಾಮೆ ಮೆಟ್ಟಿ ಮಿಾವಳೆನೆ

1 ಡ 2 ......ದು 3 ವಮಾವ

ಕಂ|| ಅಂತಪ್ಪೊಡೆ ನೀನುನ್ನಿಗ
ಮಿಂತಿರಿಮಾಂ ಪೋಗಿ ನೋಡಿ ಬಂದಪೆನಾ ಕೂ
ಸೆಂತುಟು ಸಿರಿಯೆಂತುಟು ಶೀ
ಲೆಂತುಟು ಪೆಂಪೆಂತುಟೆಂಬುದಂ ಮುನಿನಾಥಾ ೬

ವ|| ಎಂದು ನಾರದನಂ ನೀರದಪಥದೊಳಿರಿಸಿ ವೃದ್ಧನಾವಿದನಾಗಿ ಕಳಾಚಾರಿಯುಪಾಯದಿಂ ತೀವಿದ ಚೀರಮುನಿಜಿಂಕಿ ಪೋಗಿ ದುರ್ಯೋಧ[1][ನನ][1] ಮನೆಯ ಬಾಗಿಲ್ಗೆ ವಂದು ನಾರಾಯಣನ ಮನೆಯ ಪಾಳೂವಳಿಯೊಳ್ ಬಂದ ನಾವಿದನೆನೀ ವಿವಾಹಕಾರ್ಯಕ್ಕೆ ನೀನೆಪುಪ್ಪುದು ಪೋಗೆಂದು ಎನ್ನನಟ್ಟಿದೊನಿದೆನ್ನ ಬಂದಂದವೆಂದು ನಿಮ್ಮರಸಂಗೆ ಪೇಳೆನೆಂದೊಡೆ ಪಡಿಯುಱಂ ಪೋಗಿ ಪೇಳಿ ಬರವೇಳೆನೆ ಬಂದು ಕಂಡಾಗಳಾಹಾ ಭಾವನಟ್ಟಿದ ನಾವಿದನ ಸದ್ಭಾವವೊಳ್ಳಿತ್ತಾಯ್ತೆಂದು ತೆಗಳಿಂತಾದೊಡವೋ ನೆಂದು ನಾವಿದನೊಡನೆ ಬೆಸಗೆಯ್ ಪೋಗೆಂದು ನಾಂದೀಮುಖದೊಸಗೆಗೆ ಕೆಯ್ಗೆಯ್ವು ದೆಂದು ಮದುವಳಿಗೆಯಲ್ಲಿಗಟ್ಟಿದೊಡೆ ಕೂಸಂ ನೋಡಿ

ಕಂ|| ಆವಳ್ ದೊರೆ ಭುವನದೊಳಿಂ
ತೀ ವಧುಗತಿವಿನುತಮಾಗುವೀ ರೂಪಿನೊಳೀ
ಹಾವದೊಳೀ ಭಾವದೊಳಿಂ
ತೀನಳಿ ವಿಳಾಸದೆಡೆಯೊ[2][ಳೆ][2] ವಿಭ್ರಮ[3][ದೆಡೆಯೊಳ್][3] ೭

ವ|| ಎಂದು ಮೆಚ್ಚುತ್ತಿರೆ ಬಂದನರ ನಾವಿದಂ ಕನ್ನೆಯ ಪುರ್ವುಂ ನೊಸಲುಮಂ ಸಮಜಿಸಾಗಳಾ ಪುರ್ವುಂ ಜೋಲ್ದುಪುರ್ವಾಗೆ ನೊಸಲುಂ ತರಟ್ಟೆನಂತಾಗೆ ವಿದ್ಯೆಯುಂ ಮಾಡಿಪೊಡೆ ಕಂಡರಿಂತಾರ್ ಮಾಡಿದರೆಂದು ತಂತಮಗೆ ನುಡಿಯುತ್ತಿರೆ ಅರಸನಱಿದು ತನ್ನ ನಾವಿದಂಗೆ ಮುಳಿದು ಭಾವನಟ್ಟಿದ ನಾವಿದನಂ ನೀಂ ಮಾಡಿಮೆನೆಯಾತಂ ಕಳಿದು ಕೊಂಡತಿಶಯಮಾಗೆ ಮಾಡಿ ಕೆಯ್ಗೆಯ್ದಾಗಳ್ ಮೆಚ್ಚಿ

ಕಂ|| ಬಿದಿ ವದನಮೆಂಬ ಕಮಳಮ
ನುದಧಿಯ ಮೆಯ್ಯೆಂಬ ಕೊಳದೊಳಿಂಬಾಗಿರೆ ಪ
ಣ್ಣಿದ ಸರಲಂ ಮಾಜಿಂಬೊ
ಡ್ಡಿದ ತೆಱದಂ[4][ತು][4]ರ್ಚಿಪೋಯ್ತು ನಾವಿದನೆರ್ದೆಯುಂ ೮

ವ|| ಕನ್ನೆಯ ರೂಪಿನೊಳ್ಪಂತು ನಾವಿದನೆರ್ದೆಯನುರ್ಚೆ ಸ್ವೀಕರಿಸದೆ ಮಂಗಳ ಕಾರ್ಯದೊಳ್ ಶಾಸನದೇವತೆಗಳೆಲ್ಲಂ ಪೂಜೆಗಣಲ್ಲಿ....ಯ್ದು ಪೊಡ....ಕನ್ನೆಯನೆತ್ತಿ

---

1 ನ 2 ಳ 3 ದೊಳ್ 4 ತಿರ್ದು

ಕೊಂಡು ಪೊಱಮಟ್ಟೆಲ್ಲರುಂ ನೋಡೆ ನೋಡೆ ಬೇಗಮಾಕಾಶಕ್ಕೊಗೆದುಯ್ದು ವಿಮಾನದೊಳಗಿಟ್ಟಾಗಳಲ್ಲಿರ್ದ ನಾರದನಂ ಕಂಡು ಪೊಡೆಮಟ್ಟೊಡೆ ಕಾಮದೇವನೊಳ್ ಕೂಡುವೆಯಾಗೆಂದು ಪರಸಿದೊಡೆ

ಕಂ॥ ಓವೋವೆನ್ನಂ ಕುರುನೃಪ
ದೇವಿ ಬಸಿಱೂಸಿ ಪೆತ್ತೊಡಾತಂಗೇನು
ದ್ಭಾವೋಗ್ರ ದುರಿತ ಫಲದಿಂ
ದಾ ವಿಭು ಗೆಂಟಾದೊನಾಗೆ ಮಱುಗುತ್ತಿರ್ದೆಂ ೯

ಅಂತು ಮಱುಗುತ್ತಮಿರ್ದಳ
ನಂತಿರಿಸದೆ ಮತ್ತೆ ಸತ್ಯಭಾಮೆಯ ತನಯಂ
ಗಂತು ಕುಡಲುಯ್ಯೆ ನಾವಿದ
ನಿಂತೀತಂ ತಂದೊನೇವೆನೀಗಳೆ ಸಾವೆಂ ೧೦

ವ॥ ಎನುತಂ ವಿಮಾನದಿಂ ತೊಟ್ಟನೆ ನೆಲಕ್ಕೆ ಮೆಯ್ಯನಿಕ್ಕಿದಾಗಳಂಗಜಂ ವಿದ್ಯಾಬಲದಿಂ ಪಿಡಿದುತಂದು ವಿಮಾನದೊಳಿರಿಸಿ ತನ್ನ ನಿಜಸ್ವರೂಪಮಂ ತೋಱಿದಾಗಳ್ ನಾರದನೆಂದನೀತಂ ನೋಡು ಕಾಮದೇವಂ ವಿದ್ಯಾಧರಶ್ರೇಣಿಯೊಳ್ ವಿದ್ಯಾಧರನಾಗಿರ್ದನನೊಡಗೊಂಡು ಬಂದೆನೆನೆ ಮೊಱಗಂ ಕೇಳ್ದು ನವಿಲಂತೆ ರಾಗಿಸಿ ಪಾಮಂ ದಾಂಟಿದನಂ ತುಮ್ಮನೆ ಬೆಮರ್ತು ಸೋಲದ ಭರದಿಂ ಬೆಱಗಿದನಂತೆ ತಲೆಯುಂ ಬಾಗಿರೆ ಕಾಮದೇವ ನಿಂತೆಂದಂ

ಕಂ॥ ಮನ್ನಿಸಿ ತಾಯುಂ ತಂದೆಯು
ಮೆನ್ನಂ ಬಗೆದೀಯೆ ಕೊಳ್ವೆನೆಱಕೋಳ್ಗೊಳ್ಳೆಂ
ಸನ್ನುತಮಯ್ಯುತ್ತಿರೆ ತಂ
ದೆನ್ನಯ ದಿಟದಿಂದ ಬೇಗಮೊಪ್ಪಿಸಿ ಬನ್ನಿಂ ೧೧

ವ॥ ನೀನುಂ ಮಗುೞ್ದು ಕಳಿಪಿದೆನ್ನೆಂದು ಬಗೆಯದಿರೆಂತುಂ ತಪ್ಪೆನೆಂದು ಸಂತಯ್ಸಿದಾಗಳ್ ನಾರದನುಮಧಿಯುಂ ಬೆಱಸು ನೆಲಕ್ಕಿೞಿತಪ್ಪೆಂ ಸ್ತ್ರೀಸಂಸರ್ಗದಿಂ ತಪಸ್ವಿಯಾದೊಡಮಧೋಗತಿಗಿೞಿಗುಮೆಂಬುದನಭಿನಯಿಸುವಂತೆ ದುರ್ಯೋಧನನ ಮನೆಯನೆಯ್ದೆವಪ್ಪಿನಂ ತಾಯುಂ ತಂದೆಯುಂ ಪುರಮುಮಂತಃಪುರಮುಮಂ ದೆಸೆಯುಮಾಕಾಶಮುಮಂ ನೋಡುತ್ತಂ

ಕಂ॥ ಹಾ ಸರ[1][ಸಿಜ][1]ದಳನೇತ್ರೇ
ಹಾ ಸಕಳ ಕಳಾಸಮೇತ ಹಿಮಕರವಕ್ತ್ರೇ
ಹಾ ಸಲ್ಲಕ್ಷಣಗಾತ್ರೇ
ಹಾ ಸೌಂದರ್ಯಾಭಿಯುಕ್ತ ಪುಣ್ಯಪವಿತ್ರೇ ೧೨

ಚಂ॥ ದೊರೆಗೆವರಲ್ ಜಗತ್ರಯದೊಳಿಲ್ಲೆನಿಸಲ್ ನೆಱೆವಂಬುಜಾನನೇ
ಸ್ಮರಶರ ಶಕ್ತಿಯುಕ್ತ ನಯನಾಮೃತರೂಪಸಮೇತೆ ನಿನ್ನನೀ
ಧರಣಿಯೊಳಾರ್ಗಮಾಕೆ ಕುಡಲೀಯೆಮೆ ವಸ್ತುವನೆಂದು ಮೋಹದಿಂ
ಸುರವರರೊಯ್ದರೋ ದನುಜರೊಯ್ದರೊ [2][ಖೇಚರ][2]ರಾಜರೊಯ್ದರೋ ೧೩

ವ॥ ಎಂದಿಂತೆನಿತಾನುಂ ತೆಱದಿಂ ಪ್ರಳಾಪಂಗೆಯ್ಯುತ್ತಿರೆ ರಾಗರಸಮಹೋದಧಿ[3][ಯುಂ][3] ತಂದು ಮುಂದಿರಿಸಿದಾಗಳ್ ಪೋದ ಪ್ರಾಣ ಮಗುಳ್ದು ಬಂದಂತೆ ರಾಗದಿಂ ಕನ್ನೆಯುಂ ತಂದ ನಾರದಂಗತಿಪ್ರಿಯಂಗೆಯ್ದು ಬೆಸಗೊಂಡೊಡಾನೊರ್ವಸುರಕುಮಾರನೊಯ್ಯೆ ಕಂಡು ನಯದಿನೊಡಂಬಡಿಸಿ ತಂದೆ ನೀವಿಂ ಸುಖದಿನಿರಿಮೆನಗೆ ಮನೆವಾರ್ತೆ [4][ಯುಂಟೆಂ][4]ದು ಮಗುಳ್ದು ಕಾಮದೇವನುಂ ತಾನುಂ ಬರುತ್ತಮಿರೆಯಿರೆ ದುರ್ಯೋಧನನ ಪಡೆಯುಂ ತಡೆಯಲೆಡೆಯಿಲ್ಲೆಂದಾಗಳ್ ದಾೞಾದಾೞಿಯಿಂ ಪಯಣಂಬೋಗೆ ವಿಮಾನದೊಳ್ ಪೋಪ ಮನ್ಮಥನಾ ಪಡೆಯುಂ ಕಂಡೀಯಡವಿಯೊಳ್ ನಡೆವ ಪಡೆ ಯಾರದೆಂದೊಡೆ ಕೂಸನೊಡಗೊಂಡೊಯ್ವ ಕೌರವ ಪಾಂಡವರ ಪೆರ್ವಡೆ ತನ್ನ ಬಲ್ಲಾಳ್ತನದೊಳಂ ಮಾಯಾವಿಗಳ ದೆಸೆಯ ಬೆರ್ಚಿನೊಳಂ ಬೇಗಂ ಪೋದಪ್ಪರೆಂದೊಡವರ ಬಲ್ಲಾಳ್ತನಮುಮನೆನ್ನ ಮನಸಿನಿಸು ನೋಡುತ್ತಿರೆಮೆಂದು ವಿಮಾನದಿಂ ಧರೆಗಿೞಿದು

ಕಂ॥ ಮುಱಿದ ಬಿಲು ಪಱಿದ ಕೈ[5][ಪೊ][5]ಡೆ
ತಱಿದ ಸರಲ್ ತಪ್ಪ ನಾರಿ ತೇದೊಱೆ ಮುಕ್ಕಿಂ
ನೆಱೆದಲ[6][ಗು][6] ನೇಲ್ವ ಬಣರುಡೆ
ಕಿಱುವೀಲಿಯ ದಂಡೆ ಪಣೆಯೊಳಮರ್ದಿರೆ ಶಬರಂ ೧೪

ವ॥ ಅಂತು ಶಬರವೇಷಮುಂ ಕೆಯ್ಕೊಂಡು ಮುಂದಣ್ಗೆ ಬಂದು ಬಟ್ಟೆಯೊಳಡ ವಿಮರ್ದ ಸುಂಕವಿಕ್ಕಿಮೀ ಪೞಿಯನ ಬಟ್ಟೆಯ ಸುಂಕಮನೆನಗೆ ನಾರಾಯಣನಿತ್ತ[ಂ] ಮೆಳ್ಪಡವೇಡಾ

---

1 ಸಿ 2 ಖಚರ 3 ಮಂ 4 ಯುಟ್ಟೆಂ 5 ಪ 6 ಗುಂ

ಕಂ॥ ಇಕ್ಕುವುದು ಸುಂಕಮಂ ನೀ
ಮಿಕ್ಕದೆ ನಡೆವಾಗಳುಗ್ರ ಕೋಪದಿನಿದಿರಾಂ
ತಿಕ್ಕುವೆನಾನೀಗಳೆ ನೆಲ
ಕಿಕ್ಕುವವೊಲ್ ಕೆಯ್ಯ ಕೂಸನವಯವದಿಂದಂ ೧೫

ವ॥ ಎನೆ ಮುಂಗೋಳ ನಾಯಕರ್ ಬೆಕ್ಕಸನಾಗಿ ತಲೆಯಂ ತೂಗಿ

ಕಂ॥ ಕುರುಪತಿ ತನ್ನಾತ್ಮಜೆಯಂ
ಸುರಪತಿನಿಭನಪ್ಪ ತನ್ನ ಪಿರಿಯ ಮಗಂಗಾ
ದರದಿಂ ಕುಡಲೆಂದೊಯ್ಯು
ತ್ತಿರೆ ಕಂಡೆಲೆ ಪುಳ್ಳಿವೇಡ ಸುಂಕಂ ಬೇಡಿಪ್ಪಾ ೧೬

ವ॥ ಎನೆ ಪುಳ್ಳಿವೇಡನೆಂಬುದೆನಗಪ್ಪುದು ನಾಯುಲಮ್ಮದನರಿನ್ನೆಗಂತು ನಾವರಮೆಱೆಂದನವರತಂ ಪುಳ್ಳಿವೇಟ್ಟಿ ಸೂಱೆ ನೀವೆಂದಂತೆ ವಲಮೆಂದಾತನಂ ಬಯ್ದು ಮಾತಂಗೆ ಬಯ್ಯುಳಪ್ಪಂತು ಮುಗುಳ್ಚಿದ ತರ್ಕವುಮಂ ಮನದ ದರ್ಪವುಮಂ ಸೆಱೆ ದೀತನಂ ಕಂಡಿಱಿಸಲಾಗದೇನಾನುಮೊಂದು ಕೌತುಕಮಾಗಲೆವೇಱ್ಪುದೆಂದಂತೆ ಗೋಱೆಂಡೆಗೊಂಡಿರ್ಪನಂ ಭೀಮಾರ್ಜುನ ನಕುಳ ಸಹದೇವರ್ಕಳಿಂದ್ದಿ ಸಂದುದೇನೆಂಬುದು ಸುಂಕಮೆಂದನೆನೆ ಕೆಲರ್ ನಕ್ಕರ್ ಕೆಲರ್ ಮುಳಿದಿಱಿಯಲ್ ಬಗೆದರ್ ಕೆಲರ್ ಮುರುಳಂ ನೂಂಕಿ ಕಳೆದು ನಡೆಯಿಮೆಂದರಂತವರೆಲ್ಲರುಂ ಬಾರಿಸೆ ನಾರೆಂದರ್ಜುನನೇನನೆನೀವುದು ಪೇೞೆನೆ ಕಿರಾತನಿಂತೆಂದಂ

ಕಂ॥ ಏನಂ ಪೇೞ್ವನು ಪಡೆಯೊಳ
ಗೇನೊಳ್ಳಿತ್ತದನೆನೆ ಬೆಱಗಾಗಿರ್ದನದ[1][ನಾ
ನೇನಱಿದಪೆ][1]ನೇ ವಿಷ್ಣುವ
ನೂನುಗೆ ಕುಡಲುಯ್ದ ಕೂಸನುವಧಿಯನೀಯಂ ೧೭

ವ॥ ಎಂದೊಡೆ ಬಾಯೊಳ್ ಕೈಯ್ವನಿಟ್ಟೆಂದೇಂ ಜೋದ್ಯಮಾ ಮೇಗಿಲ್ಲದ ನುಡಿಯೆಂದೆ ಬೆಱಗಾಗಿರ್ದರೆಲ್ಲರುಂ ಭೀಮನಾಥನ ರೂಪಂ ನೋಡಿ ನಕ್ಕಾವನನುಱುಳೆ ನೂಂಕೆ ನಡೆಪವೆಂದೊಡಾ ಮಾತು ಅವಾಗಳುಮುಂಟೆ ವಲಮೆಂದು ಮತ್ತಮರ್ಜುನನಿಂತೆಂದಂ

---

1 ನಱಿಪೆ

ಕಂ॥ ಮದನಂ[1][ಗೆ ಬ][1]ಸಿರ್ಪೂಸಿ
ದಾಮ ಕೂಡದೆ ಪುತ್ರಮನ್ನಸಪ್ಪಂಗೆ ಕೊಡಲ್
ಪಡೆದನುರಾಗದಿನಾಮು
ಯುದ್ಧದಜಂ ಜೋಡಂಗೆ ಕುಡುವುದಿದು ಲೇಸಲ್ತೇ ೧೮

ವ॥ ಎನೆ ನಿಮ್ಮಂ ತೆಗಟ್ಟುವದೆ ನನ್ನಿಯೆನ್ನುಮಂ ನಾರಾಯಣಂ ಮಗನೆಂದೆ ಕೆಯ್ಕೊಂಡಿರಿಸಿದನಾಂ ನಲ್ಗೆಯ ಮಗನೆನಗೆ ಜೋಡಿತಿಯರ್ ಪಲರುಂ ಪೆಂಡಿರೊಳರಾದೊಡ ಮರಸರ ಮಗಳಂ ಕೊಳ್ವನಿತರ್ಥಿಯಾದುದನೆ ಭೀಮಂ ಕಿನಿಸಿ ಪಿಶಾಚದ ಮಾತನೇ ಗೇಳ್ವುದು ಬಡಿದು ಪಿಡಿದೆಳೆತಂದಿಕ್ಕಿ ನಡೆಯೆಂದೆನೆ ಕಿರಾತಂ ಮಾಯಾಬಲಮಂ ವಿಗುರ್ವಿಸಿ

ಮಂದಾನಿಲ ರಗಳೆ॥

ಎಸೆದವು ಪಱೆಗಳು ಪಲವೊಡನೆ ಕರಂ
ಪಸತೊಡನೆ ಧನುರ್ಧರ [2][ನಿಕರ][2]ಕರಂ
ತೆರೆ ಕವಿವವೊಲಾದವು ತುರಗಬಲಂ
ತರತರದಿಂದೋಡಿತು ರಥದ ಬಲಂ
ಕವಿವದ್ರಿಯವೋಲಿಭಭಯ ಮಸಕಂ
ತಸರವ ತೋಱ ಪರಿವವೊಲಣಿಯೆಸಕಂ
ಇಂತಾ ಪಡೆಗಿಮ್ಮಡಿ ಪಡೆಯೆಂದಂ
ಕಂತುವಿನವೊಲಮರೇಂದ್ರಂ ಪಡೆಯಂ
ಪಡೆಯುಂತೆ ಕೈವಿಸೆ ಮಹಾರವದಿಂ
ಪಡೆ ತಾಗಿದವೊಡನೊಡನತಿಜವದಿಂ
ಕಿಡಿಗುಟ್ಟುವ ತೆಱದೊಳೆ ಚತುರಂಗಂ
ಕಡಿಕೆಯ್ದಿಱಿಯುತ್ತಿರೆ ರಣರಂಗಂ
ಪಡಲಿಟ್ಟಿಡೆಯುಂತಾದುದು ಪೆಣದಿಂ
ರೌದ್ರಮುಮಾದುದನತಿಭಯದಿಂದಂ
ತಣಿದವು ನಿಶಿಚರಗಣಮುಂ ಧುರದೊಳ್
ಕುಣಿದಂ ನಾರದನೊಸೆದಂಬರದೊಳ್ ೧೯

1 ಗೆ 2 ನಿ

ಕಂ॥ ಪಾಂಡವ ಕೌರವಸೇನೆಯ
ಕೊಂಡಾಟದ ಸುಭಟರಂತು ಕೆಡೆದಂತಾಗಳ್
ಕಂಡಲ್ಲಿಯೆ ನರಪತಿಗಳ
ತಂಡಂ ಕಡಿಕೆಯ್ದು ಕಯ್ದುಕೆಯ್ದಿಂತೆಂದರ್ ೨೦

ವ॥ ಅಂತೆಯ್ದೆವಪ್ಪ ನಾಯಕರ ಬಲಮಂ ಕಾಮದೇವಂ ಕಂಡು ಸ್ತಂಭಿನಿಯೆಂಬ ವಿದ್ಯೆಯಂ ಬೆಸಸಿದಾಗಳ್ ಭೀಮಸೇನನ ನಿಮಿರ್ದ ಗದೆ ಕಾಲ್ಗಿಟ್ಟರ ಪಜ್ಜೆಯಂತಳ್ಳಾಡದಿರೆ ಸಜ್ಜುಮರ್ಜುನನ ತೊಟ್ಟಂಬುಂಗುರದೊಡ್ಡಂ[ತೆ] ಬೆರಲಿಂ ಪೋಗದಿರೆ ನಕುಳಕೊಂತಂ ದಿಗ್ದಂತಿದಂತದಂತೆ ತಳರದಿರೆ ಸಹದೇವನ ಪಿಡಿದ ಬಾಳ್ ಮರದೊಳ್ ತೆತ್ತಿಸಿದ ಬಾಳಂತೆ ಮಸಗದಿರೆ ಕರ್ಣನಂಬಿಗೆ ನೀಡಿದ ಕೆಯ್ ಲೋಭಿಂಗೆ ನೀಡಿದ ಕೆಯ್ಯಂತೆ ತೆಗೆಯಲಾಱದಿರೆ ವಿಕರ್ಣನಾಕರ್ಣಂಬರಂ ತೆಗೆದ ಬಿಲ್ ಕನ್ನೆಯೊಳ್ ತೊಡರ್ದ ಪತ್ತಿರೆ ಶಲ್ಯನಖಿಲ್ಯನಂತೆ ತೊಡರದಿರೆ ಮುಳಿದು ರಥಮನೇಱಿದ ಶಕುನಿ ಕೆಂಮೇಱಿದ ಶಕುನಿಯಂತೆ ತೂಂಕಡಿಸುತ್ತಿರೆ ದುಶ್ಶಾಸನಂ ನಿಶ್ವಾಸನಮುಪ್ಪಗ್ರಶ್ರಮಂ ಭೂರಿಶ್ರ[ವ]ಮಾದಂತೆ ಮಿಡುಕದಿರೆ ದ್ರುಪದಂ ಕಾಲುಡಿದ ಚತುಷ್ಪಾದದಂತೆ ನಿಲಲಾಱದಿರೆ ಧೃಷ್ಟದ್ಯುಮ್ನಂ ವಿನಮ್ರನಾದಂತೆ ತಲೆಯೆಱಗದಿರೆ ಘಟೋತ್ಕಚನರ್ಜುನವೃಕ್ಷದಂತೆ ಮರನಾಗಿರೆ ಅಭಿಮನ್ಯು ಮಂಜುಪಾಯದ ತಾಮರೆಯಂತೆ ಸುಕ್ಕಿರೆ ಮತ್ತಂತೆ ಪಡೆಯೆಲ್ಲಮುಂ ಚಿತ್ರಸಭಾಸದ ಸಭೆಯಂತೆ ನಿಶ್ಚೇಷ್ಟಿತರಾಗೆ ಕಿಸಿಸಿದೊಡೆ ದುರ್ಯೋಧನನ ಸಾರಿರ್ದ ಭೀಷ್ಮರುಂ ದ್ರೋಣಾಚಾರ್ಯರುಂ ಕುರುಪತಿಗು ಧರ್ಮಜಂಗಮಿಂತೆಂದರ್

ಅಕ್ಕರ॥
ಮೂಱಪ್ಪಂತು ಕೀಲಿಸ ವಿದ್ಯೆಯುಂ ಬಲ್ಲನೊಳ್ ಕಡಿಕೆಯ್ದು ಮೆಲ್ಲಾಯ್ದುಯೆ
ಗ್ಗರಪ್ಪವೊಡೆಗುಲಂ ಬೇಮಾಗಳಿರ್ದ ಕಿಚ್ಚುಗಂಡು ಅಗ್ನಿದೇವನಂ ಮಾದೇವನು
ಮಱುಗುವಿಂದಲ್ಲಿಂ ಪೊಱಮಟ್ಟು ಧಮಿನಿಯಂತೆ ಸಿಗ್ಗಿದೇನಯ್ಯ ನಮಗಿಲ್ಲಿ
ಮಾಯಾವಿಯಪ್ಪನುಂ ಕೃಷ್ಣನುಂ ತಾಮಱಿವರೇ (?) ೨೧

ವ॥ ನಾಮಿೂ ಕಜ್ಜಮಂ ನಾರಾಯಣನ ಮೇಗಿಕ್ಕಿ ನೆಗೆಟ್ಟಿಪೆಂದು ದುರ್ಯೋಧನನನೊಡಂಬಂದಿರ್ದರುಂ ತಮ್ಮ ಪಡಲ್ವಟ್ಟ ಪಡೆಯುಮನಘಪಟ್ಟ ನಾಯಕರುಮಂ ನೋಡುತ್ತಂ ಪೋಗಿ ಕಿರಾತವೇಷದ ನಾಯಕನಲ್ಲಿಗೆ ವಂದಪೆವೆಂದಟ್ಟೆ ಮಾಯಾವಡೆಯೊಳಗನೆ ಪೋಗಿ ಕಂಡಿಂತೆಂಬರ್

ಕಂ॥ ಹರಿಯಾಳ್ಕೆ ನೀಮಾಮುಂ
ಹರಿಯಲ್ಲಿಯೆ ನಿನ್ನ ಕೊಳ್ವ ಸುಂಕಮನೀಯಲ್
ತ್ವರಿತದೆ ಬಂದಪೆವೆಂದಡೆ
ಕರಮೊಳ್ಳಿತ್ತದುವೆ ಸಾಲ್ಗುಮೆಂದ ಕಿರಾತಂ ೨೨

ವ॥ ಮಾಯಾವಡೆಯುಮನುಪಸಂಹರಿಸಿ ಬರ್ದುರನೆತ್ತಿ ನಾಯಕರ ಕೀಲಣೆಯುಂ ಕಳೆದು ಪೋಗಿಮಿಂದಾಕಾಶಕ್ಕೊಗೆದು ಪಱಿಡಿಯ ರೂಪಾಗಿ ಬಂದು ನಾರದನಂ ಕಂಡೆ ನ್ನಂಗೆ[1][ಯ್ದ ಯೋ][1]ಗನಂ ಕಂಡಿರಪ್ಪೊಡೇನೆಂದು ಪೇೞ್ವುನೆನೆ ಕಂಡೆ[ಂ][2] ಕಣ್ಣೆತ್ತ ಫಲಮನುಂಡೆಂ ತಣಿದೆಂ ರಾಗದಿಂ ಕುಣಿದೆನೆಂದಂತೆ ಪೋಗಿ

ಕಂ॥ ದ್ವಾರಾವತಿಯುಂ ಪರಿವೃತ
ವಾರಿಧಿಯುಂ ಸೌಖ್ಯಕಾರಿಯುಂ ನಯನಮನೋ
ಹಾರಿಯುನಿಂದ್ರಾಸ್ಪದದನು
ಸಾರಿಯುಮೆಯ್ತಂದನನುಪಮಾಂಗನನಂಗಂ ೨೩

ವ॥ ಆಗಳ್ ನಾರದನಿದು ನೋಡು ಸಮುದ್ರಪರಿವೃತಂ ನಿಮ್ಮಯ್ಯನ ಪೊೞಲಿಲ್ಲಿ ವಿಮಾನದೊಳಿನಿಸಾನುಂ ಬೇಗವಿರ್ಪುದಾಂ ಪೋಗಿ ನಿನ್ನ ಬರವನಱಿಪಿ ಪೊೞಲೊಳಪ್ಪ ಶೋಭೆಗೆಯ್ಸಿ ಪಲರುಮಿದಿರ್ಗೊಳ್ವಂತು ಮಾಡಿವಪ್ಪೆನೆಂದೊಡಂತಾಗದು ನೀವೆನ್ನಬರವ ನಾರ್ಗಮಱಿಪದಿಲ್ಲಿರಿಮಾಂ ಪೋಗಿ ಕೆಲವತಿಶಯಂ ಮಾಡುತ್ತಂ ಕಾಡುತ್ತಂ ಪೊಕ್ಕಪ್ಪೆ ನೆಂದು ನಾರದನನಿರಿಸಿ ಮದನಂ ಬಂದು

ಕಂ॥ ಗಜ ತುರಗ ರಥ ಪದಾತಿ
ಧ್ವಜಿನಿಯುನೊಪೋದಲೆ ಪಡೆದು ಕುರುಕುಳರಾಜಾ
ತ್ಮಜೆಯನೊಡಗೊಂಡು ಬಂದಂ
ತಜೇಯುಗತಮಾ ತ್ರಿರೂಪನಂ ಕೈಕೊಂಡಂ ೨೪

ವ॥ ಕೈಕೊಂಡು ದುರ್ಯೋಧನನ ಪೆರ್ಗಡೆಯಿಂ ಕೂಸನೊಡಗೊಂಡು ಬಂದೆ ನೆಂದು ಸತ್ಯಭಾಮೆಗೆ ಪೇೞ್ದಟ್ಟಿಯಾಕೆಯ ನಂದನವನದೊಳ್ ಬೀಡೆಲ್ಲಮುಂ ಬಿಡಿಸಿ ನಿರವಶೇಷಂ ಬನಮೆಲ್ಲಮಂ ಕಿಡಿಸಿ ಪಡೆಯುಮನುಪಸಂಹರಿಸಿ ವಿರೂಪನಪ್ಪ ತಪಸ್ವಿಯ ರೂಪಾಗಿ ಪೂಗೊಂಡು ಸತ್ಯಭಾಮೆಯ ಬಾವಿಯಂ ಕಂಡು ಪೊಕ್ಕು ಪಾದಪ್ರಕ್ಷಾಳ ನಂಗೆಯ್ದು ಬಾವಿಯ ನೀರನೆನಸುಮುೞಿಯಲೀಯದೆ ಗುಂಡಿಗೆಯೊಳ್ ತೀವಿಕೊಂಡು ಪೊಱಮಡೆ ನೀರ್ಗೆವಂದ ಪೆಂಡಿರಿಂತೆಂಬುದೊಳವೆ ಬಾವಿಯ ನೀರನೆಲ್ಲಮನೀ ಗೊರವಂ ಕೊಂಡುಪೋದಪ್ಪೊನೆಂದು ಬೞಿಯಂ ತಗುಳೆ ಪೊೞಲ ನಡುವಣಲ್ಲಿ ಕೊಳ್ಳಿಂ ನಿಮ್ಮ ಬಾವಿಯ ನೀರನೆಂದು ಗುಂಡಿಗೆಯಂ ಬಾಗಿ ಸುರಿದಾಗಳ್

1 ಯ್ದೊ 2 ನುಂ

ಕಂ॥ ಒಡೆದುದೊ ಪೆರ್ಗೆಱೆ ಬೆಳ್ಳಂ
ಗೆಡೆದುದೊ ತೊಱೆ ಜಲಧಿ[ಯುಣ್ಕ್ರಿ] ಪೊಣ್ಕ್ರಿದುದೋ [ನೀರ್]
ತಡೆಯದೆ ಮನುಷ್ಯಲೋಕಂ
ಗಿಡಿಸಲ್ ನೀರ್ ಪ್ರಳಯಮಾದ ತೆಱದಿಂತೆಱಿನೋ ೨೫

ವ॥ ಎಂದಾಯೆಡೆಯ ಜನಂಗಳ್ ಬೆರ್ಚಿ ಬೇಗಂ ಮದಿಲುಮಂ ಮನೆಗಳುಮಂ ನೆಱೆನೋಡುತ್ತಿರೆ ಗೊರವನ ರೂಪಮನಾ ನೀರುಮನುಪಸಂಹರಿಸಿ ಗುಜ್ಜನಂ ಪೊಱಿಂಡನು[ಂ] ಮುರುಡನುಮಾಗಿ ಬರೆ ಕಂಡ[1][ನರ್ ನಗೆ][1] ಪೆಂಡಿರೊಳ್ ಕೆಲರಾನೆಯ ಕೆಯ್ಯಂತೆ ಮೂಗಂ ಮಾಡುತ್ತುಂ ಕೆಲರ್ಗೆ ಕೋಡಗದ ಬಾಲದಂತಪ್ಪ ಬಾಲಮುಂ ಕೆಲರ್ಗೆ ಬೆಸ್ಕೋಳ್ವ ಮೊಲೆಗಳುಮಂ ಕೆಲರ್ಗೆ ಕುಱಿಯ ನಾಯ ಮೊಗಂಗಳಂತೆ ಮೊಗಂಗಳುಮಂ ಕೆಲರ್ ಪೆಂಡಿರ್ಗೆ ಗಡ್ಡಮೀಸೆಗಳುಮಂ ಮಾಡುತ್ತುಂ ಮತ್ತಂ ಪೊೞಲ ಮೂಕಾಂಧ ಬಧಿ[2][ರಾ][2]ದಿಗಳ್ಗೆ ಮೊಳೆತರ್ಕೆಂದಾಗಳ್

ಮ॥ ಕಿವುಡರ್ ಕೇಳ್ದರಪೂರ್ವಮಾಗೆ ನುಡಿದರ್ ಮೂಗರ್ ಪೊಱಿಂಡರ್ಕಳ
ಪ್ಪವಗಿಂಬಾದುವು ಮೆಯ್ಯ್ ಪಂಗೆ ನಿಮಿರ್ದರ್ ಗುಜ್ಜರ್ ಕರಂ ಕೂಂಟರ
ಪ್ಪವರ್ಗಂ ಕಟ್ಟುವು ಕೊಂಟು ಮತ್ತೆ ಕುರುಡರ್ ಕಂಡರ್ ಮಹಾವ್ಯಾಧಿ ಕೆ
ಟ್ಟ[3][ವಿ][3]ದೇಂ ಜೋದ್ಯಮೊ ಪುಣ್ಯವಂತರೊಸೆದಾರ್ ಪೇೞ್ಪಲ್ಲಿಗೆಟ್ಟಿಂದರೋ ೨೬

ವ॥ ಎಂದಿಂತೆಲ್ಲಿಯುಂ ನೆಗಟ್ಟಿತಿಶಯಂಗಳ್ಗೆ ಪೊೞಲುಪ್ಪಾಂತುಗೊಳ್ವಾಗಳಮವನುಪಸಂಹರಿಸಿ ಶ್ರೋತ್ರಿಯನಪ್ಪ ಬ್ರಾಹ್ಮಣನ ವೇಷಮುಂ ಕೈಕೊಂಡು ಪೋಗಿ ಸತ್ಯಭಾಮೆಯುಂ ಕಂಡು ರುಚಿಯಂ ಪೇ[4][ೞ್ದು][4] ಪರಸಿ ನೀನೆಯೆಂದು ದೂರ್ವಾಂಕು[5][ರ][5]ಮುಂ ಕೊಟ್ಟು ಚತುರ್ವೇದಪಾರಗನಿಂ ತೀರ್ಥಯಾತ್ರೆಗೆಯ್ಯುತ್ತುಂ ನಿಮ್ಮ ಮಹಾದಾನಮಂ ಕೇಳ್ದು ಬಂದೆನಗಾ[6][ಸನ][6]ದೊಳುಣಲೀವುದೆಂದೊಡಿತ್ತೆನೆಂದಾಗಳೀ ತಂಗೆ ತಣಿಯುಣಲಿಕ್ಕಿಮೆನೆ

ಕಂ॥ ಪನ್ನಿಚ್ಛಾಸಿರ ಪಾರ್ವ[7][ರು
ಮ][7]ನ್ನ ಗೃಹಾಂತರದೊಳಮೃತಸನ್ನಿಭಮುಂ ಮೃ
ಷ್ಟಾನ್ನಮನುಂಡಪುದೊ[8][ರ್ವ][8]ಯ
ನಿನ್ನಂ ತಣಿಯೂಡದಿರ್ಪೆನೇನುಂ ಮರುಳೇ ೨೭

ವ॥ ಎಂದ ಮಾತಿಂಗೆ ಪಾರ್ವನಿನಿತೆ ಸಾಲ್ಗುಂ ಸ್ವಸ್ತಿಯೆಂದಿರ್ಪನ್ನೆಗಂ ಪಾರ್ವನ ನೆವದ ಕಪಿತಂದಮಂ ಕಂಡೆನಗಾಸನಮನಿತ್ತರೆಂದು ಸತ್ಯಭಾಮೆಯ ಕೆಯ್ಯೊಳ್ ಕಾಲಂ

---

1 ವಣ್ಣಗೆ 2 ರು 3 ಠಿಂ 4 ಳ್ದ 5 ರು 6 ಸ 7 ಗರ್ 8 ರ್ವ

ಕರ್ಚಿಸಿಕೊಂಡು ಅಗ್ರಾಸನದೊಳ್ ಕುಳ್ಳಿರ್ದಾಗಳ್ ಪಂ[1][ತಿ][1]ಯೊಳಿರ್ದ ಪಾರ್ವರೆಲ್ಲ ಮೇಣುವಲ್ಲಿದೊಸನಗ್ರಾಸನದೊಳಿಸುವುದೆಂಬುದೇನೆಂದು ಮುಳಿದಿರ್ದು ಪೋಗಲ್ ಬಗೆದೊಡೆ ಪೋಗದಂತೆಲ್ಲರುಮಂ ಸ್ತಂಭಿಸಿದೊಡೆನಿತಾನುಂ ಭಕ್ಷ್ಯರೂಪಸಹಿತಂ ಬಡ್ಡಿಸಿದೊಡಾಪೋಶನಂಗೊಂಡುಣಲ್ ಬಗೆವಾಗಳ್ ಅನಿಬರ ಮುಂದಣ ಕೂೞೆಲ್ಲಮನಪಹಾರಂಗೆಯ್ದು ತನ್ನ ತಳಿಗೆಯ ಕೂೞುಮನುಂಡು ಬಡ್ಡಿಸಿಮೆಂದಿರ್ದನಂ ಕಂಡು ಮತ್ತಂ ಬಡ್ಡಿಸಿ

ಕಂ॥ ಎನಿತೆನಿತಂ ಬಡ್ಡಿಸಿದೊಡ
ಮನಿತುಮನಣಮುೞಿಯಲೀಯದಂತುಂಡಡೆ ಮಾ
ಜನಕೆಂದಟ್ಟುದು ತಪ್ಪಡೆ
ಮನೆಗೆಂದಟ್ಟುದುಮನಂತೆ ತಪೆ ಬಡ್ಡಿಸಿದರ್ ೨೮

ವ॥ ಅಂತು ಮನೆಗಟ್ಟ ಬಾಣಸಿನ ಕೂೞೆಲ್ಲಮನುಂಡುಮಾವ್ವ ಪಸಿವು ಪೋಗದೆಂದಡರಸಿ ಚೋದ್ಯಂಬಟ್ಟು ಪಾರ್ವನ ಬೇಡಿದಾಗಡಿನ ನುಡಿಯಂ ಬಗೆ[2][ದಿ][2]ರಲಕ್ಕುಮಾದೊಡೇನಿನ್ನುಂ ನೋೞ್ಪೆನೆಂದು

ಕಂ॥ ಪಾಂಡವ ಕೌರವ ನೃಪರೊಡ
ಗೊಂಡುದಧಿಯನಿಂದು ಬಪ್ಪರೆಂದಡಿಸಿದುದಂ
ಕೊಂಡಿಕ್ಕಿದೊಡಂತೆರಡುಂ
ತಂಡದ ಪಡೆಗಂದಿನಟ್ಟುದೆಲ್ಲಮನುಂಡಂ ೨೯

ವ॥ ಉಂಡುಮುಬ್ಬಾ ಸೀಮುಪ್ಪಡೆ ಚಕ್ರವರ್ತಿಯ ಪಿರಿಯ ಮಹಾದೇವಿಯಾದು ಪೆಸರಪ್ಪೊಡೆ ಸತ್ಯಭಾಮೆಯೆಂಬ ಪೆಂಪಿನ ಪೆಸರ ಮಹಾದೇವಿಯೊರ್ವಂಗೆ ತಣಿಯುಣಲಿಕ್ಕಿಮೆಂದು ನುಡಿದು ಮಾಣಲಕ್ಕುಮೇಂ ತನ್ನಿಂ ಬಡ್ಡಿಸಿಮೆಂದಾಗಳ್ ಸತ್ಯಭಾಮೆ ಮುಳಿದು ಪಾರ್ವನಲ್ಲಂ ಮಾಯಾವಿ ಬೇಗವಿದಾತನಂ ಪೊಱಮಡಿಸಿ ಕಳೆಯಿಮೆನೆ

ಮ॥ ಪುಸಿವಂತುಂ ಮುಳಿವಂತು ಮಾಡಿದುಣಿ[3][ಸೇವಿಂ][3]ತಬ್ಬ ನೋಡಲ್ಕೆ ಕೂೞ್
ಬಸವೇಂ ಕೊಳ್ಳಿರೆ ನಿಮ್ಮ ಕೂೞನೆನುತಂ ಕೆಯ್ಯಂ[4][ದಮೋರ್ದತ್ರ][4] ಭ
ರ್ದಿಸಿದಾಗಳ್ ಮನೆ ಪೊೞ್ತು ಕೂೞ್ ಕವಿವುದಂ ಕಂಡಳ್ಕಿ ಪೆಳ್ಕುತ್ತ ಬಾ
ಣಸಿಗಂ ಮಾಡಮನಾ ನರೇಂದ್ರಪಥಮಂ ತಕ್ಕಯ್ಸಿಕೊಂಡೇೞ್ವಿದಂ ೩೦

ವ॥ ಅನಿತಂ ಮಾಡಿ ಕಾಮದೇವನಲ್ಲಿಂದಂ ಬಂದಾ ರೂಪಂ ಪಲ್ಲಟಿಸಿ ಕರಕುಂತ್ರಜೂಟಮುಂ ಜೋಟಿವಲೆಯುಮಂ ಪಜೀವ ಕಪ್ಪಡಮುಮಂ ಬಡಮೆಯ್ಯುಂ ಕೋಲು ಕರಂಕೆಯುಂ

1 ದಿ 2 ದ 3 ಸೆಂನಿಂವಿಂ 4 ದೆರ್ದು

ಬೆರಸು ಗುಂಡವೇಷಂ ತನಗನುರೆ ಬಂದು ರುಗ್ಮಿಣಿಮಹಾದೇವಿಯ ಮಾಡಮಂ ಪೊಕ್ಕು ನಾಗಳರಸಿ ಮುನ್ನಮೆ ತನ್ನೊಳಿಂತೆನುತಿರ್ದಳ್

ಕಂ॥ ಮೂಕಾಂಧ ಬಧಿರ ಕುಬ್ಜಾ
ನೀಕಕ್ಕಿಂಬಾದುವಿಂದೆ ಕುಸುಮಫಳಂಗಳ್
ಪ್ರಾಕಟಮಾದವು ಮರಂಗ
[1][ಳೀಕೋಯಿಂ][1]ದೆನ್ನ ಪುತ್ರಕಂ ಬಂದಪನೋ ೩೧

ವ॥ ಎನುತಮಿರ್ದಿರೊಳಿರ್ದ ನೋಡುತ್ತಂ ಬರವುಗಾಣದಿಂತೆಂದಳ್

ಕಂ॥ ಈಗಳೆನಿತಾನುಮತಿಶಯ
ಮಾಗಿರ್ದುವು ಮೂಗುವಡುವ ದೆವಸಂಗಳೊಳಂ
ಕೋಗಿಲೆಗಳೆಲ್ಲ ದೆಸೆಯೊ[2][ಳ್
ಕೂ][2]ಗಿದವೋವೋ ಕುಮಾರನಿನ್ನುಂ ಬಾರಂ ೩೨

ವ॥ ಎಂಬನ್ನೆಗಂ ಬರ್ಪ [3][ಗುಂ][3]ಡನ ಬರವಂ ಕಂಡು ಧರ್ಮವಾತ್ಸಲ್ಯಕ್ಕೆ ದೇಶಪ್ರತಿಗವಿುದಿರೇಟಬಿಲ್ವೇಟಿಕ್ಕೆಮೆಂದು ರುಗ್ಮಿಣಿಮಹಾದೇವಿ ಬೇಗಮಿದಿರೆರ್ದಿಚ್ಚಾಕಾರ ನಿತ್ತಂ ಬನ್ನಿಮೆಂದೇಜಲಿಕ್ಕಿ ಕಾಲಂ ಕರ್ಚಿಸಿ ಕರಂಕೆಯುಮಂ ಕೋಲುಮಂ ಕೊಂಡು ಕೆಲದೊಳ್ ಸಾರ್ಚಿಟ್ಟು ಮೇಲೆ ಪಾಯ್ವ ನೊಣಮಂ ಬೀಸಿ ಕೆರಕಿನ ರಸಿಗೆಯಂ ತಾನೀಂ ಟುತ್ತಮಿರ್ದ ಬೋನಮಂ ತನ್ನಿಮೆಂದೊಡಂತು ತಂದುದನುಣ್ಣೆ ನಲ್ಲೆನಿಂದೆ ಬಿತ್ತಿದೊಡಿಂದೆ ಬೆಳೆದ ಕಟಿವೆಯಕ್ಕಿಯಂ ಸುರಭಿಯ ಪಾಲೊಳ್ ತುಯ್ಯಲನಾದಿತ್ಯನ ಕಿರಣದ ಬೆಂಕೆ ಯೊಳಟ್ಟುದನಲ್ಲದೆ ಉಣ್ಣೆ ನು[4][ಲ್ಲ][4]ಮಂತಿಕ್ಕಲ್ ತೀರ್ವೊಡಿಕ್ಕಿಮೆಂದೊಡದುಮಂ ನೋಟಿಪ್ಪೆನೆಂದು ಕಟಿವೆಯ ಬಿತ್ತಂ ತರಿಸಿ ಮನೆಯ ಮುಂದಣೆಡೆಯೊಳಗಟಿಸಿ ಪೊಕ್ಕು ಬಿತ್ತಂ ಪಿಡಿದು ನಿಂದು

ಪೃಥ್ವಿ॥
ಪತಿವ್ರತೆಯುಮಾನಪ್ಪೊಡಂ ಜಿನಮತೋಕ್ತ ಸ
ಮ್ಯಕ್ತ್ವಸಿದ್ಧಿಯೆನಗುಳ್ಳೊಡಂ ಪ್ರಕಟಶಾಸನದೇ (?)
ವತಾನಿಕರಮಾಗಳೆನ್ನ ಬಗೆ[5][ದಂ][5]ದನಂ ಮಾಡಿಮೆಂ
ದತರ್ಕ್ಯಗುಣಯುಕ್ತೆ ಶುದ್ಧತರಭಾವದಿಂ ಬಿ[6][ತ್ತಿ][6]ದಳ್ ೩೩

ವ॥ ಬಿತ್ತಿದಾಗಳಲ್ಲಿಗಪ್ಪನಿತೆ ಮುಟಿಕೊಂಡು ಕೆಸಱಾಗಿ ನಾಂಟಿ ಬೆಳೆದೆಱಗಿರ್ದ ಡಾಗಳ್ ಗುಂಡನೊಡೆಕೊಯ್ದು ಮೆಟ್ಟಿ ಪಲಂಬರಂ ಕರೆದು ಉಗುರೊಳ್ ಸುಲಿ

1 ಳಿಂ 2 ಳವೋ 3 ದುಂ 4 ಲ್ಲೆ 5 ಡಂ 6 ತ್ತ

ದಕ್ಕಿಯುಂ ತಂದು ಸುುಂದಿದ ಸುರಭಿಯುಂ ಕಱೆದಾ ಪಾಲುಮಕ್ಕಿಯುಂ ಪೊನ್ನ ಮಡಕೆಯೊಳ್ ಪೊಯ್ದಾದಿತ್ಯನ ಕಿರಣಂ ಕೊಳುಪಡೆಯೊಳಿಟ್ಟಡೆ ಕುದಿದು ಬೆಂದ ತುಯ್ಯಲಂ ತಂದಾಱಿಸಿ ಪೊನ್ನ ತಳಿಗೆಯೊಳ್ ಬಡಿಸಿದೊಡುಂಡು ಕಾಱವಾಗಳರಸಿ ಕೆಯ್ಯೊಳಾಂತು ಕೊಂಡು ಕಳೆದು ಕೆಯ್ಯೆಱೆಯಿಸಿ ತಾನೆ ಮೆಯ್ಯಂ ಕರ್ಚಿ ಕರಂ ಶ್ರಮಂಬಟ್ಟೆರೆಂದು ಬೀಸುತಿರ್ದುದಂ ನೋಡಿ

ಕಂ|| ಇಂತಪ್ಪ ಪತಿವ್ರತೆ ಮ
ತ್ತಿಂತ[1][ಪ್ಪ][1] ವಿಶುದ್ಧದರ್ಶನಾನ್ವಿತೆಯುಂ ಕಂ
ಡಿಂತೆನಿತಂ ಕಾಡುವೆನಾ
ನಿಂ ತೋಱುವೆನೆನ್ನನೆಂಬ ಬಗೆಯಂ ಬಗೆದಂ ೩೮

ವ|| ಬಗೆದಾಗಳೆ ವಿದ್ಯೆಯಂ ನೆನೆದಟ್ಟೆ ನಾರದನಂ ಬರಿಸಿ ಕಂಡೇಱಲಿಕ್ಕಿ ಕುಳ್ಳಿರ್ದೊನನೆನ್ನ ಮಗನಂ ತ[2][ಪ್ಪೆ][2]ನೆಂದು ಪೋ[3][ದಿ][3]ರೆಲ್ಲಿದನೆಂದು ಕಣ್ಣನೀರಂ ನೆಗಪಿದಾಗಳಾ ಕಣ್ಣನೀ[4][ರ್][4] ದುಃಖಸಮುದ್ರದ ನೀರೊಳಾಟಲೀಯದೆ ನೆಗಪುವೆನೆಂಬಂತೆ ವಿದ್ಯಾಧರಲೋಕದೊಳಿರ್ದಾತನಂ ತಂದೆನೀಯರ್ದನೆಯೆನೆ ತೋಱುವೆಂಬಲ್ಲಿಂ ಮುನ್ನಂ ದೇವಲೋಕದ ದೇವನಂತಾಗಿ ಕಾಮದೇವಂ ಕೆಯ್ಯ[ಂ] ಮುಗಿದು ಮೆಯ್ಯನಿಕ್ಕಿ ಪೊಡವಟ್ಟೊನನಿರ್ದಪ್ಪಿಕೊಂಡು ಮುತ್ತಂ ಮುತ್ತಮುಪ್ಪಿಕೊಂಡು ತೊಡೆಯಮೇಲಿರಿಸಿ ನೋಡಿ ನಿನ್ನ ಬಾಲಕ್ರೀಡೆಯಂ ಕಾಣಲ್ಪಡೆದೆನಿಲ್ಲೆಂದವಂ ನೆನೆದು ಮ[5][ನ್ನ][5]ವಿಂಕ್ಕೊಡದೇವಿದಬ್ಬ ತೋರ್ಪೆನೆಂದು

ಉ|| ಬಾಳಕನಾದೊಡೆತ್ತಿಕೊಳೆ ಪೆರ್ಲೊಲೆಯುಂ ತೆಗೆದುಂಡು ರಾಗದಿಂ
ದಾ ಲಲಿತಾಂಗಿ ತೊಟ್ಟಿಲೊಳಗಿಟ್ಟಡೆ ಪಾಡಿಸುತಿರ್ದ ಮತ್ತೆಯುಂ
ಲೀಲೆಯೊಳಂ ಬಱಿಕ್ಕೆ ನಲಿದಾಡಿ ತಳರ್ನಡೆಯಿಟ್ಟು ಮೆಚ್ಚಿ ತಾ
ಯಾಲಿಸೆ ಮುದ್ದಿನೊಳ್ ನುಡಿಯುತಂ ಪರಿದಾಡುತುಮಿರ್ದನಂಗಜಂ ೩೯

ವ|| ಅಂತು ಪಿರಿದು ಪೊತ್ತು ಬಾಳಕ್ರೀಡೆಯಂ ತೋಱ ತಾಯುಂ ಸಂತೋಷಂ ಬಡಿಸಿ ಮುನ್ನಿನಂತೆ ನವಯವ್ವನನಾಗಿ ಬಂದಬ್ಬೆಯ ಮುಂದೆ ಕುಳ್ಳಿರ್ದೊನನಟ್ಟಿಱತ್ತೊಳ್ ನೋಡಿ ಮಗಂ ಬಂದುದಕ್ಕಂ ಸಕಲವಿದ್ಯಾಧರನಾಗಿ ಸಂದುದಕ್ಕಂ ಗೋಶೀರ್ಷರತ್ನಮಯಂಗಳ್ ಸುಂದರಾಕಾರಂಗಳಪ್ಪ ಪಲವುಂ ಪ್ರತಿಮೆಗಳಂ ತಂದುಕೊಟ್ಟುದಕ್ಕಂ ತನ್ನರ್ಥಿ ಕೂ[6][ಡಿದು][6]ದಕ್ಕಂ ಮುಯ್ವಂ ನೋಡಿ ರಾಗಿಸಲ್ ಬಗೆದುದನಱದಬ್ಬ ನೀವೆನ್ನ ಬಂದುದನಾಗ ಮಱಸದಿರಿಮೆಮ್ಮಯ್ಯಂಗೆನ್ನ ಪ್ರತಾಪಮುಮನೊಡನೆ ತೋರ್ಪೆನೆಂದೋಜೆಗೊಳಿಸಿ ಮದನಂ

1 ಪ್ಪತಿಶಯ 2 ಪ್ಪ 3 ದ 4 ರೆ 5 ನ್ನ 6 ಡಿ

ಕಂ॥ ಪಿರಿಯರಸಿಯ ಪೆರ್ಗಡೆಗಳ
ಬರವಿನ ಕಾರಣಮನಱಿದು ವಿಭವದೊಳಾಗ[ಂ]
ಪಿರಿ¹[ಯನವಂ ದಾನವರಿಂ
ಗರಿಯಂ ನಿಗೆ]¹ ಕಿಱಿಯ ಹರಿಯ ರೂಪಮನಾದಂ ೩೬

ವ॥ ಆಗಳಿಸಿನಂ ಪೆರ್ಗಡೆಗಳ್ ಬಂದುದನಿದಿರೊಳಿರ್ದ ಕೃತಕಹರಿಯುಂ ಕಂಡ ಸದಿದಿಸ್ಮಿತನಿ ರುಗ್ಮಿಣಿಯ ಮುಂದಲೆಯ ಕುರುಳಂ ಬೇಡಿಯಟ್ಟಿದೊಡೆ ಬಂದೆಸೆಂದೊಡ ವರ ಮುಂದಲೆಗಳಂ ಕೊಯ್ದು ಮರ ಕೆಯ್ಯೊಳ್ ಕೊಟ್ಟಟ್ಟಿದೊಡವರ್ ಬಂದೆಂಬರುಸಂ ತಾನಿರ್ದಿಪ್ಪುಂ ಪರಿಭವಿಸಿ[ಯ]²ಟ್ಟಿದನೆನೆ ಸತ್ಯಭಾಮೆ ಮುಳಿದರಸನರಮನೆಯೊಳಿ ರ್ದುದನಱಿದು ಬಂದಿಂತೆಂಗುಮಂದು ನಿನ್ನ ಮಾಡಿದ ಸೋಲಮುಂ ಬೇಡಿಯಟ್ಟಿದೊಡೆ ನೀನಿರ್ದಿಂತು ನೆಗಟ್ಟ್ದೆಂಬುದನೆಂದೊಡಾನಲ್ಲೆನ್ನ ರೂಪುಗೊಂಡಿರ್ದ ಮಾಯಾವಿಯಕ್ಕು ಮಾದೊಡೆ ನಿನ್ನವನಟ್ಟಿ ಕಂಡಿಸುವೆನೆಂದು ತನ್ನ ಪೆರ್ಗಡೆಗಳನಟ್ಟಿದೊಡವರಂ ಪಿಡಿದು ಡಿಯೆ ಕಟ್ಟಿ

ಕಂ॥ ತಲೆಕೆಳಗಾಗಿರೆ ವಿದ್ಯಾ
ಬಲದಿಂದಂ ಬಾಗಿಲಲ್ಲಿ ತೋರಣದಂತಾ
ಗಲಘುಭುಜಂ ನೇಱಿಸಿದುದದಂ
ಬಲಿಪು ಕೇಳುತ್ತೆ ಕೇಶವರ್ ಮುಳಿದತಿ ರೌದ್ರಂ ೩೭

ವ॥ ಮಸಗಿ ಬಲದೇವಸ್ವಾಮಿಯುಮಂ ಬರಿಸಿ ನೀವ್[ಂ] ಪೋಗಿ ತಂದುಕೊಡಿ ಮೆಂದಟ್ಟಿದೊಡೆ ಬಲದೇವಂ ಬರುತ್ತಿರೆ ಕಂಡೀ ಬರ್ಪರಾರ್ಗೆನೆಯರಸಿಯೆಂದಳ್ ನಿಮ್ಮ ಪಿರಿಯಯ್ಯಂ ಮಹಾಬಳ ಪರಾಕ್ರಮನೊಂದೊಂದು ಸಂಧಿಯೊಳ್ ಸಾವಿರಸಿಂಹದ ಬಲ ಮುಳ್ಳುದೆಯದೆನೆ ನಿನ್ನೊಂದು ಸಿಂಹದ ಬಲಮುಂ ನೋಡೆಂದು ಮುನ್ನಮೆ ಸಿಂಹದ ರೂಪಾಗಿರ್ದ ಒಂದಾಗಳಾತನಂ ತೊಟ್ಟನೆ ಮೇಲ್ವಾಯ್ದು ನುಂಗಿ ಮಾಡದ ಮೇಗಣೆ ಲಂಘಿಸಿ ಕಳಶದ ಮೇಗಿರ್ದುದಂ ಪೊಱಲೆಲ್ಲಮುಜ್ಜರಿಸಿಟ್ಟು ನೋಡುವಿನಮಿರ್ದ

ಕಂ॥ ಹಳಧರನಂ ನುಂಗಿ ಮಹಾ
ಜಳಧರನಂ ನೋಡಿ ಲಂಘಿಸುತಿರ್ದ ಕರಂ
ಚಲದಿಂ ಚೌಪಟದೊಳ್ ಪಾ
ಯ್ದು ಲಂಘ್ಯಬಲನಲ್ಲಿಯುಗುಳ್ದ ಬ[ಂ]ನಂ ಮನಂ ೩೮

1 ಯಂ ನರರ್ಗರಿವಂ ದಾನವರ್ಗರಿಯಂ 2 ಹ

ವ|| ಆಗಳ್ ಬಲದೇವಸ್ವಾಮಿ ಲೋಳಿವೊರೆದ ಮೆಯ್ಯುಂ ದೂಳಿವೊರೆದ ಕಿಸುಗುಳನಾಗಿ ಪೋಗಿ ಹರಿಗೆ ತೋಱಿ ಪೇೞ್ದೊಡತಿಕುಪಿತನಾಗಿ ಬರಲ್ ಬಗೆದೊಡೆ ಪೆಱದಲ್ಲಸಂ ಸಾಮಾನ್ಯನಲ್ಲಂ ನೆಱಚು ಪೋಪುದೆನೆ ಸನ್ನಾಹಂಗೆಯ್ದು ಪೊಱಮಟ್ಟು ಪೊಱಪೊೞಲೊಳ್ ಮದುವೆಗೆಂದು ಬಂದಿರ್ದ ಪಾಂಡವ ಕೌರವಬಲಮೆಲ್ಲಮಂ ಕೂಡಿಕೊಂಡಿರ್ದ ರುಗ್ಮಿಣಿಯ ಮನೆಯೊಳಿರ್ದ ಮಾಯಾವಿ ಕಾದಲ್ ನೆಱೆದೊಡೆ ಬರ್ಕೆಂದಟ್ಟಿದೊಡೆ ಕೇಳ್ದಂಗಜನಬ್ಬ ನೀಮಿನಿ[1][ಸುಮಂ][1]ಜಡೆ ಮಾಡಮನೇಱಿ ನೋಡುತ್ತಿರಿಮಾನೆನ್ನ ವಿದ್ಯಾಸಾಮರ್ಥ್ಯಮಂ ತೋಱಿ ಬೞಿಯುಂ ಕಾಣ್ಕೆನೆಂದು ಪೊಱಮಟ್ಟು ಮಾಯಾಬಲಮುಮಂ ವಿಗುರ್ವಿಸಿ ಚತುರಂಗಸೇನೆಯನಿಂಬಾಗೊಡ್ಡಿ ಕೆಯ್ಪಂ ಬೀಸಿದಾಗಳ್

ಕಂ|| ಚತುರಂಗೋದ್ಧತ ಸೈನ್ಯಂ
ಚತುರಂಗಾತ್ಯುಗ್ರ ಸೈನ್ಯದೊಳ್ ತಾಗಿ ಮಹಾ
ದ್ಭುತಮಾಗೆ ಕಾದಿದಾಗಳ್
ಕೃತಕಬಲಂ ಸಾಯದೆನಿತು ಗೆಲೆ ಕಾದಿದೊಡಂ ೩೯

ಕಂ|| ಹರಿ ಕಂಡು ತನ್ನ ವಿದ್ಯಾ
ಧರರಂ ಬೆಸಸಿದೊಡೆ ಪೂಣ್ದು[2][ನರ್][2] ವಿದ್ಯೆಗಳಂ
ಸ್ಮರಿಯಿಸದನ್ನೆಗಮವರಂ
ಸುರಭಿಶರಂ ನಾಗಪಾಶದಿಂ ಕಟ್ಟಿಸಿದಂ ೪೦

ವ|| ಅದಂ ಹರಿ ಕಂಡು ಪಾಂಡವ ಕೌರವರತ್ತ ನೋಡೆ ನೋಡಿವಡವರ್ ನೊಂಕುವ ಸಮಸಕಮಂ ಕಂಡು

ಕಂ|| ಬಿಸಸನಮುಖದಲ್ಲಿಗೆ ಮಾ
ಮಸಕಂ ಮಸಗುತ್ತಿದಿರ್ಚಲೆಯ್ತರೆ ಕಂಡೀ
ಮಸಕಮೆನಗುಗ್ರಹಸ್ತಿಗೆ
ಮಸಗುವ ಮಸಕಮನೆ ಪೋಲ್ತು ತೋಱುದೆನಿತಂ ೪೧

ವ|| ನಕ್ಷನಿಬರುಮಂತೆ ಕೀಲಿಸಿದೊಡದುವನುಪೇಂದ್ರ[೦] ಕಂಡೆಯ್ದೆ ನೊಂಕುವಾಗಳಂಬರದೊಳಿರ್ದನಿಂತಿನ್ನ ಕಣ್ಣ ಪಸವೋಡುವಂತು ಮಾಡಿದೊರನಿಂ ತಮ್ಮೊಳ್ ಕೂಸುವಂತು ಮಾೞ್ಪೆನೆಂದು ಬೇಗಮಿೞಿತಂದು ಕಾಮದೇವನಂ ಮಾಣಿಸಿ ಬಂದು ನಾರಾಯಣನ ಮುಂದೆ ನಿಂದು ಮಾಣ್ ಮಾಣ್ ಎಂದಿಂತೆಂದಂ

1 ಸನಂ 2 ರ್

ಕಂ॥ ಹರಿ ಕೇಳು ನಿನ್ನ ಮಗನಂ
ತಿರೆಗಳಿಸುತಮಂತೆ ಪೋಗಿ ಪೂರ್ವವಿದೇಹಾಂ
ತರದೊಳ್ ಸೀಮಂದರ ಜಿನ
ವರರಂ ಕಂಡೆನ್ನ ಬಗೆದುಮಂ ಬೆಸಗೊಂಡೆಂ ೪೨

ವ॥ ಬೆಸಗೊಳ್ವುದುಂ ನಿನ್ನಳಿಸುಮ ಕೂಸನಿಂತೆಂಬಸುರನೊಯ್ದಿಂತೆಂದಲ್ಲಿ ಬಿಸುಟೊಡಿಂತೆಂಬ ವಿದ್ಯಾಧರಂ ಕಂಡು ಕೊಂಡುಪೋದನಿಂತೆಂಬ ಪೊಬಿಲೊಳಿಂತು ಸುಖದಿನಿರ್ದನೆಂದೊಡಂತೆ ಪೋಗಿ ಕಂಡೊಡಗೊಂಡು ಬಂದೆನೀತಂ ನಿಮ್ಮ ಮಗಂ ಕಾಮದೇವನೆಂಬೊನೆನ್ನ ವಿದ್ಯಾಗರ್ವಮನೆಮ್ಮಯ್ಯಂಗೆ ತೋಱಿ ಬಱಿಯಂ ಕಾಣ್ಬೆನನ್ನೆಗಂ ಪೇಱಿದಿರಿಪೆಂದೆನ್ನಂ ಮಾಣಿಸಿ ನೆಗಟ್ದಿನಿಂ ಕೆಯ್ಯುಱುಗುಮೆಂದು ಬಂದಱಿಪಿದೆನೆಂದೊಡೊಸೆದು ರಥದಿಂದಮಿೞಿಮುಬರೆ ಕಾಮದೇವನಿದಿರು ಬಂದೆಱಗಿ ಪೊಡೆವಟ್ಟನನಪ್ಪಿಕೊಂಡು ಪರಸಿ ಮಗನ ಮೊಗಮಂ ನೋಡಿ

ಕಂ॥ ಅಂತೊಯ್ದಂ[1][ತೀ][1]ಡಾಡಿದೊ
ಡಂತೊರ್ವಂ ಕಂಡು ನಡಪಿ ವಿದ್ಯೆಗಳಂ ಕ
ಲ್ತಂತಿರ್ದಂ ಬಂದನನೆ
ನ್ನಂತೊರ್ವಂ ಪುಣ್ಯವಂತನುನ್ನತಸೊಳನೇ ೪೩

ವ॥ ಎನೆ ಕಾಮದೇವಂ ತನ್ನ ಮಾಯಾಬಲಮನುಪಸಂಹರಿಸಿ ತಂದೆಯ ಪಡೆಯಲ್ಲಿರ್ದರ್ವರೆತ್ತಿನರ ಪೆಸರಂ ಬಿಡಿಸಿ ಕೀಲಣೆಯುಂ ಕಳೆದೊಡೆಲ್ಲರುಂ ಬೆಕ್ಕಸಂಬಟ್ಟು ನೋಡಲ್ ಬರೆ ನಾರದಂ ಮುಂದಿರ್ದವರ್ ನಮ್ಮಜ್ಜರಿವರ್ ಪಿರಿಯಯ್ಯಂಗಳಿವರ್ ಮಾಸಂಗಳೆಂದು ಅವರಿವರ ಪೆಸರಂ ಪೇೞ್ದು ಪೊಡವಡಿಸಿ ಪೊಡವಟ್ಟು ನಮ್ಮರಸಿ ಮಹೋತ್ಸಾಹವಂತರಾಗಿ ಪೊಬಿಲಸಂತಶೋಭೆಗೆಯ್ಯಲುವೇೞ್ದು ಮಗನಂ ಪಟ್ಟವರ್ಧನ ಮನೇಱಿಸಿ ಯಾದವರ ಪಾಂಡವ ಸಮಿತಿವೆರಸು ಮುಂದೆಗೊಂಡು ನಾರಾಯಣನಿಂದ್ರ ವಿಳಾಸದಿಂ ಪೊಬಿಲಂ ಪೊಕ್ಕು ಕರುಮಾಡದೊಳ್ ಸಿಂಹಾಸನದ ಮೇಲೆ ಕಾಮದೇವನ ನೊಡಗೊಂಡು ಕುಳ್ಳಿರ್ದು ತನ್ನರಸಿಯರ್ಗೆಲ್ಲಂ ಬಱಿಯನಟ್ಟಿದೊಡವರ್ಗೆ ಮದನಂ ಪೊಡೆವಟ್ಟಂಬಱಿಯುಮೊಸಗೆನಱಿಯುಂ ಪೊಯ್ಸಿ ಮಗಂಗೆ ರಾಜ್ಯಕಂಠಿಕೆಯುಂ ಕಟ್ಟಿ ತನ್ನಿ ಮಿದುವೆ ಲಗ್ನಮುದಧಿಯನೀತಂಗೆ ಬಸಿರ್ಪೂಸಿ ಪೆತ್ತಳ್ ಮದುವೆ ಮಾಡುವೆನೆಂದೊಡಂಗಜಂ ಕೆಯ್ಯಂ ಮುಗಿದಿರ್ದು ಬಿನ್ನಪಮೆಂದಿಂತೆಂದಂ

1 ದಂತಿ

ಕಂ|| ವಿದ್ಯಾಧರಲೋಕದೊಳಾ
ಸುದ್ಯದನೂನಾತಿಶಯಗುಣಂಗಳ ಪಲವುಂ
ವಿದ್ಯೆಗಳಂ ಸಾಧಿಸುತಿರೆ
ಜೋದ್ಯಂ ಸ್ತ್ರೀರತ್ನಮೆನಗೆ ಸಮನಿಸಿತದಱಿಂ ೪೪

ವ|| ಆನಾಕೆಯುಂ ಮುನ್ನಂ ಮದುವೆನಿಂದಲ್ಲದೆ ಪೆಱರೊಳ್ ಮದುವೆ ನಿಲ ಲಾಗದೆಂದಯ್ಯಂ[1][ಗೊ][1]ಯ್ಯಿಮೆಂದೊಡಂತೆಗೆಯ್ವೆಂ ಬೇಗಂ ಬರಿಸೆನೆ ವಿದ್ಯೆಯುಂ ನೆನೆ ದಾಗಳ್ ಬರಿಸಿ ವಿದ್ಯಾಧರಶ್ರೇಣಿಯೊಳ್ ಕಾಳಸಂಬರನುಮಂ ವಜ್ರದಾಡಾದಿಗಳಪ್ಪ ತಮ್ಮಣ್ಣಂಗ[2][ಳುಮಂ][2] ಸಮಸ್ತ ವಿದ್ಯಾದಿವಿದ್ಯೆಗಳುಮಂ ಕಬ್ಬಿನ ಬಿಲ್ಲುಮಲರಂಬುಗಳಂ ಕಾಪಿನ ವಸಂತಾದಿ ಋತುಗಳ್ವೆರಸು ರತಿಯನೊಡಗೊಂಡು ಬಾಯೆಂದೊಡಲ್ಲಿಂ ಮುನ್ನ ಮೆಯ್ದ್ದು ಕಾಳಸಂಬರಂ ಮೊದ[ಲಾ]ಗಿ ಪೇೞ್ದುದೆಲ್ಲಮಂ ತಂದು ಪೊಱವೊೞಲೊಳಿರಿಸಿ ಬಂದೆನೆಂದು ವಿದ್ಯೆ ಬಂದಱಿಪೆ ನಾರಾಯಣಂಗಿದಿರಂ ಪೋಗಿ ಕಾಳಸಂಬರನನುಚಿತ ಪ್ರತಿ ಪತ್ತಿಗಳಿಂ ಕಂಡೊಡಗೊಂಡೊಸಗೆನಱಿತಯುಂ ಬಾಜಿಸಲ್ವೇೞ್ದು ವಿವಾಹಕಾರ್ಯದಿನಳಂಕಾರ ದೊಳ್ ಕೂಡಿದ ಮಂಟಪದೊಳ್ ಪಸೆಯ ಮೇಗೆ ಕಾಮದೇವನುಂ ರತಿಯುಮನಿರಿಸಿ ಪಾಣಿಗ್ರಹಣಂಗೆಯ್ದು ಪರಸಿ ಸೇಸೆಯನಿಕ್ಕಿ ಬಂಧುಜನ ಪುರಜನ ಪರಿಜನಾದಿಗಳ್ಗ ಮೂಲ್ಯ ವಸ್ತ್ರಾಭರಣಂಗಳಂ ಬೀಯಂಗೆಯ್ದು ಮಾಡಿದೊಸಗೆಯುಂ ಪೊೞಲಱಿಯೆ

ಮ|| ಪ್ರತಿಮಲ್ಲಿಲ್ಲಿಯುಮೆಂಬಸಿತ್ತುವರೆಗಂ ಸಂದಿರ್ದ ಲೋಕತ್ರಯ
ಸ್ಥಿತಿ ನಾರಾಯಣನಾತ್ಮಸೂನುಗೆ ವಿವಾಹೋ[ತ್ಸಾ]ಹಮಂ ವೈಭವೋ
ನ್ನತಿಯಪ್ಪಂತಿರೆ ಮಾಡಿದ ತ್ರಿಭುವನಖ್ಯಾತೋರ್ಜಿತಂ ಕಾಮನುಂ
ರತಿಯುಂ ಕೂಡಿದೊರೆಂದೊಡಾ ವಿಭವಮಂ ವ್ಯಾವರ್ಣಿಸಲ್ ಬಲ್ಲರಾರ್ ೪೫

ವ|| ಆ ವಿವಾಹದಿಂ ಬೞಿಯಮುದಧಿಪೆರಸೈನೂರ್ವರ್ ಕನ್ನೆಯರನಂಗಜಂಗೆ ವಿವಾಹವಿಧಿಯಿಂ ಕೊಟ್ಟೊಡಂತು ಬಿ........ನೂಱಿತಣ್ಬರ್ ಪೆಂಡಿರಾದರಂದು ರುಗ್ಮಿಣಿ ಸತ್ಯಭಾಮೆಯಲ್ಲಿಗೆ ತನ್ನ ಸಾಲಮನೀವುದೆಂದಟ್ಟಿದಡೆ ತನಗೆಲ್ಲಿಯ ಮಗನೊರ್ವ ಖೇಚರ ಮಗನಂ ಮರುಳರಸಂ ನಂಬಿ ಮದುವೆಮಾಡಿದೊನೇಕೀವೆನೆಂದಟ್ಟಿದೊಡದನರಸಂಗೆ ಪೇೞಿಮ್ದುಡಿಂತೆಂಬುದನೆಂದು ನಾರದನಂ ಬರಿಸಿ ಕಾಮದೇವಂ ರುಗ್ಮಿಣಿಯ ಮಗನಲ್ಲ ನೆಂದು ಸತ್ಯಭಾಮೆ ನುಡಿದಳ್ಗಡ[3][ದುದಮಂ][3] ತಿಳಿಸಿಬನ್ನಿಮೆಂದಟ್ಟಿದೊಡೆ ಪೋಗಿ ನಾರದ ನಿಂತೆಂದಂ

1 ಗೆ 2 ಳಂ 3 ಮು

ಕಂ॥ ಸೀಮಂಧರತೀರ್ಥಕ[ರ]
ಸ್ವಾಮಿಗಳೊಳ್ ತಿಳಿದೆನಾಂ ಭವಾಂತರಸಹಿತಂ
ಕಾಮಾವತಾರವಿಧಿಯಿಂ
ನೀಮದನಿನಿಸಾನುಮೇಕಚಿತ್ತದೆ ಕೇಳಿಂ ೪೬

ವ॥ ಈ ಭರತಕ್ಷೇತ್ರದ ಮಗಧೆಯೆಂಬ ನಾಡ ಶಾಳಿಗ್ರಾಮದೊಳ್ ಸೋಮಶರ್ಮ ನೆಂಬ ಪಾರ್ವಂಗಮಗ್ನಿಲಿಯೆಂಬ ಪಾರ್ವಂತಿಗಮಗ್ನಿಭೂತಿ [ವಾಯುಭೂತಿ]ಯೆಂಬವಳ್ಗ ಳಾಗಿ ಪುಟ್ಟಿ ಬಳೆದು ಶಾಸ್ತ್ರವಿದ್ಯಾಪರಿಣತರಾದ ಗರ್ವದೊಳೊರ್ವ ದಿಗಂಬರಾಚಾರ್ಯ ರೊಳ್ ಸಂಬೋಧನಾಲಕ್ಷಣೋಧರ್ಮವೆಂಬ ತತ್ತ್ವದೆಡೆಯಂ ನುಡಿದು ಸೋಲ್ತವರಲ್ಲಿ ದೀಕ್ಷೆಯಂ ಕೈಕೊಂ[1][ಡು][1] ನೆಗಟ್ದು ಮುಡಿಪಿ ಸುರಲೋಕದೊಳ್ ದಿವ್ಯಸುಖಮನುಂಡಲ್ಲಿಂ ಬಂದು ಇವಾವಳಿಯೊಳರ್ಹದ್ದಾಸನೆಂಬ ಪರಮಂಗ[ಂ] ವಿಪ್ರಶ್ರೀಯೆಂಬ ಪರದಿಗಂ ಪೂರ್ಣ ಭದ್ರ [ಮಣಿಭದ್ರ]ರೆಂಬ ಪೆಸರಮಕ್ಕಳಾಗಿ ಬಳೆದು ಪರಮ ಶ್ರಾವಕರಾಗಿ ಸಮಾಧಿ ಕೂಡೆ ಮುಡಿಪಿ ಸ್ವರ್ಗದೊಳ್ ಪುಟ್ಟಿ ಸುಖದಿನಿರ್ದಲ್ಲಿಂಪಂ ಬಂದು

ಕಂ॥ ಹಸ್ತಿನಪುರದೊಳ್ ನಿಜಕುಲ
ವಿಸ್ತಾರಕ ವಿಶ್ವಮಂದ್ರವಿಭುವಿಂಗಂ ಲೋ
ಕಸ್ತುತೆ ಶುಭಲಕ್ಷಣಯುತೆ
ವಿಸ್ತೀರ್ಣ ವಿರಾಜಿತಾಂಗೆ ರೂಪಾವತಿಗಂ ೪೭

ವ॥ ಮಧುಕೈಟಭರೆಂಬಮಕ್ಕಳಾಗಿ ಪುಟ್ಟಿ ಬಳೆದನ್ಯೋನ್ಯಾಸಕ್ತರುಂ ರಾಜ್ಯ ನಿಯೋಗೋದ್ಯುಕ್ತರುಮಾಗಿ ಮಧುರಾಪತಿಯಪ್ಪ ವೀರಸೇನನ ಪೆಂಡತಿಯಂ ಚಂದ್ರಾಭೆಯೆಂಬೊಳ ರೂಪಿನೊಳ್ಪಿಂಗೆ ಸೋಲ್ತು ಮಧುವೆಳಿಜಮಕೊಂಡು ಬಾಟುತ್ತಿರೆ ಸಾಯಲಂಜಿ ವೀರಸೇನಂ

ಕಂ॥ ಪೆಂಡತಿಯನೆಟಿಜದು ಪಿಡಿಕೋ
ಳ್ಕೊಂಡಟಿಲುಂ ವಿಷಮಟಿಲುಮೊಡನೊಡನೆ ಮರು
ಳ್ಗೊಂಡು ಪೆಸರ್ಗೊಂಡು ಭೈಕ್ಷಂ
ಗೊಂಡು[ಮಲಸದೆ ಮಿಗೆ] ತಿರಿದನುರ್ವೀತಳಮಂ ೪೮

ವ॥ ತಿರಿತಂದಂತೆ ಮತ್ತಂ ಹಸ್ತಿನಪುರಕ್ಕೆ ವಂದು ಬೀಡುಗಳೊಳಮರಮನೆಯೊಳ ಮಿರ್ದು ಕಣ್ಣನೀರುಣ್ಮೆ ಶೋಕಂ ಪೊಣ್ಮೆ

1 ಡ

ಕಂ॥ ಎಲೆ ಚಂದ್ರಾಭೇ ಹಾಹಾ
ಜಲಜದಳಾಯತ ವಿಲೋಳಲೋಚನೆ ಹಾ[ಹಾ]
ಲಲಿತ ಲತಾಂಗೀ ಹಾಹಾ
ಪೊಲೆಗೆಟ್ಟೆಂ ನಿನ್ನನಜಿಸಿ ಕಾಣದೆ ಹಾಹಾ ೪೯

ವ॥ ಎಂದಿಂತು ವಿಪ್ರಳಾಪಂಗೆಯ್ಯೆ ಕಂಡವರ್ ಪಿತಂದು ಚಂದ್ರಾಭೆ ಮರು ಳೆಂಬುದೊಂದು ಮರುಳಿಂದಿರ್ದಪುದೆಂದು ಮಧುರಾಜಂಗೆ ಪೇಟಿ ಪಶ್ಚಾತ್ತಾಪದಿನಿರ್ವರುಂ ಸಂಸಾರವಿರಕ್ತರಾಗಿ ತಪಂಬಟ್ಟು ಸಮಾಧಿ ದೊರೆಕೊಳೆ ಮುಡಿಪಿ ದಿವಿಜೇಂದ್ರಲೋಕ ದೊಳ್ ಪುಟ್ಟಿ ಬಂದಾ ಮಧುರಾಜನಪ್ಪ ದೇವನಿಲ್ಲಿ ಹರಿಗಂ ರುಗ್ಮಿಣಿಗಂ ಮಗನಾಗಿ ಪುಟ್ಟಿದನಂತಾ ವೀರಸೇನಂ

ಕಂ॥ ಮಾನಿನಿಯಂ ಕೋಳ್ಪಟ್ಟೊಂ
ದೂನತೆಯಿಂ ತೊಟಲುತಿರ್ದನುವನ[ಲ್ಲಿಯುಂ]
ಜ್ಞಾನತೆ[ಯುಂ][1] ದೊರೆಕೊಳೆ ನೆಗ
ಟ್ದಾ ನೆವದಿಂದಾದ ಮುಳಿಸು ಪೋಗದೆ ಸತ್ತಂ ೫೦

ವ॥ ಸತ್ತು ಧೂಮಕೇತುವೆಂಬಸುರನಾಗಿ ಪುಟ್ಟಿ ತನ್ನ ಮುನ್ನಿನ ಪಗೆವಂ ಪುಟ್ಟಿ ದುದಂ ಬಗೆವಜುದು ಮುಳಿದುಬಂದು ರುಗ್ಮಿಣಿಯು ಮುಂದಿರ್ದ ಕೂಸನೊಯ್ದು ಬೇಗಂ ಕೊಲ್ವೆನೆಂದು ಕೊಲ್ಲದೆಯು[ಂ] ತಕ್ಷಕಶಿಲೆಯು ಮೇಲಿಕ್ಕಿಪೋದೆಡೆ ಕಾಳಸಂಬರಂ ಕಂಡು ಕೊಂಡುಪೋಗಿ ನಡಪುತ್ತಿರ್ದನಾ ಚಂದ್ರಾಭೆಯುಂ ತೊಜುದು ಸತ್ತನುಕ್ರಮದಿಂ ಕಾಂಚನಮಾಲೆಯಾದಳುಂ ಕೈಟಭದೇವನುಮಿಂತೆಂಬ ದಿವಸದೊಳ್ ಹರಿಗೆ ಪುಟ್ಟುವ ನೆಂದೆನಗಾ ಕೇವಳಿಗಳ್ ಪೇಟ್ವುದೆಯಾನಂತೆ ಪೋಗಿ ಕಂಡು ಕೊಂಡುಬಂದೆಂ ಕಾಮದೇವಂ ರುಗ್ಮಿಣಿಯು ಮಗಂ ತಪ್ಪಲ್ಲೆನೆ ಸತ್ಯಭಾಮೆ ನಂಬಿ ನಾರದನೊಡನೆ ಮುನ್ನಮೆ ಬಂದಿರ್ದ ಪರಿಚಾರಕಿಯರ ಕೆಯ್ಯೊಳ್ ತನ್ನ ಕುರುಳಂ ಕೊಯ್ದುಟ್ಟಿದಡವರ್ ಕೊಂಡುಪೋಗಿ ರುಗ್ಮಿಣಿಮಹಾದೇವಿಗೆ ಕೊಟ್ಟೊಡದಂ ಪೆಟ್ಟಿ ಮಿಂದಳನ್ನೆಗಮಿತ್ತ ಮಧುಕೈಟಭದೇವಂ ಪುಟ್ಟುವಂದಿನ ಸೂಟಂ ಸತ್ಯಭಾಮೆ ಬೇಡಿಕೊಂಡಡದಂ ಕೇಳ್ದು ಕಾಮದೇವಂ ಪೂರ್ವ ಭವಸ್ನೇಹದಿಂ ತವಿಚ್ಛೆಯು ಕೆಳದಿಯಪ್ಪ ಜಂಭಾವತಿಗೆ ಪುಟ್ಟುವಂತು ಮಾಟ್ಪೆನೆಂದು ತನ್ನ ಕೆಯ್ಯ ವಿದ್ಯಾಮುದ್ರಿಕೆಯುಂ........ಯುಂಗುರಮನಿಟ್ಟಾಗಳೆ ಸತ್ಯಭಾಮೆಯು ರೂಪಾಗಿರ್ದರಿರ್ದರಸನ ಸೂಟಿಗ್ಗೆ ಮುನ್ನಮೆ ಪೋಗೆಂದಟ್ಟಿದೊಡಂತೆ ಪೋಗಿ [2][ಕಂಡ][2] ಳದಂ ಸತ್ಯಭಾಮೆ ಕೇಳ್ದು

---

1 ಯಿಂ 2 ಕಂದ

ಕಂ॥ ................................
................................ಣದನಪ್ಪುದಂ
ತೋಱಿಂದೆಯಿಂ ನಿನ್ನಯ ಪೆಂಪೆನೆ (?)
ಮುರರಿಪು ಬೆಱಗಾಗಿ ನೀಡಱಿಂದಿಂತೆಂದಳ್ ೫೧

ವ॥ ಆನುಂ ನೀನೆಯೆಂದು ಬಗೆದಾಕೆಯ ಕೆ[1][ಯ್ಯುಂಗುರ][1]ದೊಳ್ಪಂ ಕಳೆದು ನೋೞ್ಪನನ್ನೆಗಂ ಜಂಭಾವತಿಯಾಗಿರ್ದಳಮುವಂ ನಿನ್ನ ಮಗನ ಗೊಡ್ಡಮನೆಯಾನುಂ ಬರುತಂ ಪೆಂಡಿರೊಳ್ ನೆರೆದಿರ್ದನೆಂಬುದಂ ಕೇಳ್ದು ಮುಳಿದು ಬಂದೆನಿಲ್ಲೆಂದೊಡೆನ್ನಿಂದ ಮಾಡೊಡೇಂ ನಿನ್ನಿಂದಮಾಡೊಡೇನೆಂದು ನಂಬೆ ನುಡಿದು ಕಳಿದೆನಂತು ಜಂಭಾವತಿಗೆ ಗರ್ಭಮಾಗಿ ನವಮಾಸಂ ನೆಱೆದು ಮಗನಂ ಪೆತ್ತೊಡಾತಂಗೆ ಶಂಭುಕುಮಾರನೆಂಬ ಪೆಸರಾಗಿ ಬಳೆದೊಡಾತನೊಳ್ ಭವಾಂತರ ಸ್ನೇಹದಿನಂಗಜ[ಂ] ಕೂರ್ತು ಪಲವುಂ ವಿದ್ಯೆಗಳಂ ಕೊಂಡಾಡಿ ನಡೆಯುತ್ತಿರ್ದೊನಿರೆ

ಕಂ॥ ಅಂತು ನೆಗೞ್ದಿರ್ದ ಪುರುಷನು
ಮಂತತಿಶಯ ಗುಣದಿನೆಸೆವ ಮಗನಂ ಪೆತ್ತಿ
ರ್ದಂತೊಪ್ಪಿರಲುಂ ತನಗ
ತ್ಯಂತಂ ಸಂತಸಮುನೀಯೆ ರುಗ್ಮಿಣಿ ತಣಿವಳ್ ೫೨

ವ॥ ತಣಿದವರ್ ತನರಂ ಮುಱಿದರೆಂಬುದು ಪಾೞಿಯಾದೊಡಂ ಪ್ರಭುವಿಂಗಪ್ಪ ಪಸುಗೆ ಮೆಯ್ಮಱೆಯುಲಾಗೆಂದು ತನರ್ನನೆಯಂ ನೆನೆದೆನ್ನ ನೆಪದೊಳಂತು ನೊಂದು ಗೆಂಟಾದ ನಣ್ಪಿನಣ್ಣನ ಕೂಸಂ ಬೇಡಿಯಟ್ಟಿ ಮಗಂಗೆ ತಂದು ಸಾರೆಮಾಡುವೆನೆಂದು ಕೂಸುವೇಡೆ ಪೆರ್ಗಡೆಗಳನಟ್ಟಿದೊಡವರ್ ಪೋಗಿ ತಮ್ಮ ತಂದನರ್ಘ್ಯ ವಸ್ತುಗಳಂ ಮುಂದಿಟ್ಟು ರುಗ್ಮಿಣನಂ ಕಂಡು ಕಾಮದೇವನ ಪುಟ್ಟಿ ಪೋದ ಬಂದ ವೃತ್ತಾಂತಮೆಲ್ಲಮಂ ಬಿನ್ನಪಂಗೆಯ್ದು ನಾರಾಯಣನುಂ ರುಗ್ಮಿಣಿಮಹಾದೇವಿಯುಂ ಕಾಮದೇವಂಗೆ ನಿಮ್ಮ ಮಗಳಂ ಬೇಡಿಯಟ್ಟಿದರೆಂದಡೆ ರುಗ್ಮಿಣನಿಂತೆಂದಂ

ಕಂ॥ ಅವರಿವರೆನ್ನದೆ ಮುಳಿದೆ
ಮ್ಮವರೆಲ್ಲ[ರು]ಮನೊಡನೆ ಮುಸಗಿ ಹರಿಮುಖದೊಳು[ಂ]
[ಜಿ]ವುಳಿದುೞಿದೆಡೆಯ ರುಧಿರ
ಪ್ರವಾಹಮೋ ಕುಡಿಯಡೆಂತು ಬಂದರೊ ಪೇೞ್ ನೀಂ ೫೩

ವ॥ ಎಂದ ಭಾಷೆಯ ನೋವನಱಿದು ಪೆರ್ಗಡೆಗಳಿಂತೆಂದರ್

1 ಯ್ಯಂಗುಂ

ಕಂ॥ ಆನಂ ಮನ್ನಿಸಿ ನಡೆ[1][ಯೆಂ
ದಾವಂ ತಿಂಬ ಜವನೆನ್ನದೆ ಜವನ][1] ಬೆಸದಿ
ಪಾರ್ವರೊಳರೆ ಮುನ್ನಿನ ಭವ
ಭವನಮುಂ ಮಱೆಸಂತು ಮಱೆವುದಾ ಪರಿಭವನಮುಂ ೫೪

ವ॥ ಎನೆ ರುಗ್ಮಿಣನೆಂಗುಮುಪ್ಪುದವನಂ ಜನನುಮಾ[ಮಾ]ತೊಪ್ಪಿದುದೆಂತೆನೆ

ಚಂ॥ ಕಲಹದೊಳೆನ್ನ ತಂದೆವೆರಸಿನ್ನವರೆಲ್ಲರುಮಂ ಮುರಾಂತಕಂ
ತಲೆಯಱಿದಲ್ಲಿ ನೆತ್ತರಣಮಾಱಿದು ಬರ್ದರ ಮೆಯ್ಯ ಪುಣ್ಣ ಕೆಂ
ಗಲೆ ಕಿಡಪಟ್ಟಿ ಪೆಂಡಿರುಲಿ ಮುಗ್ಗದು ಬೆಚ್ಚನೆ ಸುಯ್ದು ನೋವುಗಳ್
ತೊಲಗಿಮುದಿಲ್ಲ ಮತ್ತೆ ಪುಳಿನೆತ್ತರನೇಂ ಕಳೆಯಲ್ಕೆ ಬೇಟ್ಪನೇ ೫೫

ವ॥ ಎಂಬ ಮಾತಿನೊಳ್ ನೊಂದ ಬಗೆಯುಮಂ ಬೇಸಱುಮನಱಿದು ಮತ್ತಂ ಪೆರ್ಗಡೆಗಳಿಂತೆಂಬರ್

ಕಂ॥ ಓವದೆ ಹರಿ ಕೊಂದಂದಿನ
ನೋವಿನ್ನುಂ ಪೋಗದಪ್ಪೊಡಾತನ ಮಾತಿ
[ನ್ನೇವುದೊ ಬಱಿಯ]ಕ್ಕಾವುದೊ
ದೇವಿಗೆ ಮಱುಮಾತೊ ಪೇೞು ರುಗ್ಮಿಣರಾಜಾ ೫೬

ವ॥ ಎನೆ ರುಗ್ಮಿಣನೆಂಗುಂ

ಕಂ॥ ಒಡವುಟ್ಟಿ ತಂದೆಗೊಂದವ
ನೊಡನವರ್ದಂದದೊಳೆ ಪೋಯ್ತು ಮತ್ತಂ ಮಗುೞ್ದಿ
ನ್ನೊಡವುಟ್ಟಿದನೆಂದಟ್ಟುವ
ಪಡೆಮಾತಂ ಬಿಸುಡವೇೞಿನೋೞಿಂ ಬೇಗಂ ೫೭

ವ॥ ಎಂದೊಡಾಮಾಗಳುಂ ಪೋದಪೆವು ನೀನಿನ್ನುಮೊಂದು ಮಾತಂ ಕೇಳಿಂದಿಂತೆಂದಂ

ಕಂ॥ ತಂಗೆ ನಿನಗೆಂತುಮಾ ಕೂ
ಸಿಂಗೆಱೆಯಂ ಪೆಱರ್ಗೆ ಕುಡುವಡಂ ಕುಡಲೀಯಂ
ತಾಂಗುಗುಮೆನೆ ರುಗ್ಮಿಣನಾ
ತಂಗಳ ಮಾತಿಂಗೆ ಮುಳಿದು ತಲೆಯೊಲೆದೆಂಗುಂ ೫೮

---

1 ಉಮ ಪಿಶಾಚವಂಗಟ್ಟಿತಿಂಬ ಜವನೆನ್ನದೆ ಮತ್ತಾ ಜವನ ಕೊಲಿಗ

ಶಾ॥ ತಾಂಗಲ್ಕಪ್ಪುದು ಮುನ್ನಮೆನ್ನ ಪಿತೃಗಳ್ ತನ್ನಾಣ್ಮನುಂ ಸಾಯೆ ಸ
[1][ತ್ತಂ][1] ಗೆಂಟಾಯ್ತಪ್ಪುದು ಕೂಸನೆಂತುಮೆಟುಕದುಯ್ವಾಗಳ್ಕದಂ ಕೊಲ್ವೆನಾಂ
ಪಾಂಗಾಗೆಂದೊಡೆ ದೀಕ್ಷೆಗೆಯ್ಸುವೆನೆಪಕ್ಕಳ್ಕಿರ್ದಡಂ ತೊನ್ನ ಮಾ
ದೆಂಗಂಗಪ್ಪಡನಿಸಾವೆನೆನ್ನ ಮಗಳಂ ತನ್ನಾತ್ಮಜಂಗೀವೆನೇ ೫೯

ವ॥ ಮೆಚ್ಚಿಡವೇಡ ನಿಮ್ಮ ತಂದೀ ಪಾಗುಡಮನಿಂತೆ ಕೊಂಡುಪೋಗಿಮೆಂದೊಡವರ್ ಪಾಗುಡಮುಂ ಕೊಂಡು ಮಗುೞ್ದು ಬಂದು ರುಗ್ಮಿಣಿಮಹಾದೇವಿಗೆ ಬಿನ್ನಪಂಗೆಯ್ವಾಗಳ್ ತಮ್ಮನರಿಲ್ಲಮುಂದು ಸತ್ತಂತೆ ದುಃಖಗೆಯ್ದು ಬಿನ್ನನಾಗಿಪ್ಪಿನಂ ಕಾಮದೇವನುಂ ಶಂಭುಕುಮಾರನುಂ ಬಂದು ಕಂಡಿದೇನೆಬ್ಬ ಬಿನ್ನನಿರ್ದಿರಿ

ಕಂ॥ ಎಮ್ಮನ್ನರಪ್ಪ ಮಕ್ಕಳ್
ನಿಮ್ಮಡಿಗೊಳರಾಗೆ ಚಿಂತಿಸಿಪ್ಪಿರಿದೇಂ ಪೇ
ೞಿಮ್ಮೂಱುಂ ಲೋಕಂಗಳೊ
ೞೆಮ್ಮಿಂದಂ ಸಾಧ್ಯಮಾಗದನ್ನವುಮೊಳವೇ ೬೦

ವ॥ ಎಂದು ಕೇೞೆ ಬೆಸಗೊಂಡೊಡೆಂಗು ರುಗ್ಮಿಣಿಯೆಂಬೊಸೆಮ್ಮಣ್ಣಂ ತಮ್ಮವರೆಲ್ಲಮುಂ ನಿಮ್ಮಯ್ಯಂ ತಲೆವಂದಿಂ ಗೆಂಟಾಗಿರ್ದಿನಾ ಸಣ್ಬಂ ನಿನ್ನಿಂದಂ ಸಾರೆ ಮಾಡುವೆನೆಂದು ನಿನಗಾತನ ಕೂಸಂ ಬೇಡಿಯಟ್ಟಿಮೊಡೆ ತನ್ನ ಮಗಂಗೀವುದೞಿಂ ತೊನ್ನ ಮಾದೆಂಗ ಪ್ಪಡಮಾವೆನೆಂದಂತೆನ್ನ ತವರ್ಮನೆ ಗೆಂಟಾದುದಕ್ಕುಬ್ಬಿಗಂಬಟ್ಟಿರ್ದೆನೆಂದೊಡಂಗಜ ನಿಂತೆಂದನುಬ್ಬಿಗಂಬಡದಿರಿಮಾ ಕೂಸಂ

ಕಂ॥ ಮಾದೆಂಗರಾಗಿಯುಂ ತಂ
ದಾದರನುಂ ನಿಮಗೆ ಮಾಟ್ಪೆನುಲ್ಲದೊಡಾಮುಂ
ಮಾದೆಂಗಱಿಂದ ಕಷ್ಟರೆ
ಮಾದೆಮಿದಂ ನಂಬಿ ಚಿಂತಿಸಿರದಿರಿಮಬ್ಬಾ ೬೧

ವ॥ ಎಂದಾಗಳ್ ಪೊಱಮಟ್ಟು ಕಾಮವಿಮಾನಮನಿರ್ಬರುಮೇಱೆ ಮನೋವೇಗದಿಂ ಕೂಂಡಿನಪುರಮನೆಯ್ದಿ ನಭೋಭಾಗದೊಳ್ ವಿಮಾನಮನಿರಿಸಿ

ಕಂ॥ ಇಳೆಗಿೞಿತಂದಮರೇಂದ್ರನ
[2][ಕಳೆಯ][2]ನುಕರಿಸಿರ್ಪ ರೂಪುಮುಂ ತಿದಿಯುಂ ಸೆಂ
ಬಳಿಗೋಲು[ಂ] ಕೆಂಪುಂ ಪೊಸ
ನಿಱಿಯುಂ ಬೆರಸಂತೆ ಬಂದು ಪೊಱಲಂ ಪೊಕ್ಕರ್ ೬೨

1 ತ್ತಂದಿಂ 2 ನ

ವ॥ ಪೊಕ್ಕೊಡೀ ರೂಪುಮೀ ವೇಷಮುಮಘಮಾನಮೆಂದು ಕಂಡ ಗಂಡರ್ ಚಿಕ್ಕಸಮಾದರ್ ಪೆಂಡಿರ ವೇಷಮಂ ಬಗೆಯದೆ ರೂಪಿನೊಳ್ಪುಮನೆ ಬಗೆದು ದಿಟ್ಟಿ ಸಟ್ಟು ಬಾಯಂ ಬಿಟ್ಟು ಬಱಿಯುಂ ತಗುಳ್ದರ್ ಕೆಲರೀ ರೂಪನೆ ನೋಂತು ಪಡೆವರಾವ ತಪಂಗೆಯ್ದರಾವ ಲೋಕದಿಂ ಬಂದರೆನುತಂ ಕಂಪಿಂಗೆ ಸುಳಿವ ತುಂಬಿಯಂತೆ ಬಳಸಿಬರೆ ಪೊಱಲೆಲ್ಲಮುದ್ಭ್ರಾಂತಗೊಂಡು ನೋಡೆ ಬಂದರಮನೆಯಂ ಪುಗೆ ಕಾಪಿನವರ್ ನೀಮಾರ್ಗೆನಲುಂ ಕೋಲಿಸಲುಂ ಮಱೆದು ನಿಲೆ ಪೊಕ್ಕರಸನಂ ಕಂಡು ಪೊಡೆವಟ್ಟರಂ ನೀಮಾರ್ಗೆಲ್ಲಿಂ ಬಂದಿರೆನೆ ದೇವ ಬಿನ್ನಪವೆಂದಿಂತೆಂಬರ್

ಕಂ॥ ಯಾದವರಾಜನ ಪುರವಿನ
ಮಾದೆಂಗರೆ ತಾವಧೀಶ ನಿಮ್ಮಾತ್ಮಜೆಯುಂ
ಮಾದೆಂಗರಿಗಿತ್ತಪಿರೆಂ
ದಾದರದಿಂ ಕೇಳ್ದು ಬಂದೆವೀವುದು ಕೂಸಂ ೬೩

ಎಂದೊಡೆ ರುಗ್ಮಿಣವಿಭು ಬಗೆ
ದೆಂದಂ ಕೂರದರ್ಗೆ ಕುಡುವುದಂ ನಿಮಗೊಸೆದಿ
ತ್ತಂದೇಂ ದೋಷಮೆ ಪರಿಭವ
ದಿಂದಂ ಲೇಸಲ್ತೆ ಕುಲದ ಕೇಡುಂ ಸಾವುಂ ೬೪

ವ॥ ನಿಮ್ಮ ರೂಪಿನೊಳ್ಪಂ ತೇಜಮುಮಂ ಮಾದೆಂಗರೆಂಬುದಂ ಸಂದೇಹಂ ಮಾಡಿದಪ್ಪುದವಱಿನೀಯಲಱಿಯದಿರ್ದೆನೆಂದೊಡವರಿಂತೆಂಬರ್

ಕಂ॥ ಹರಿಯ ಪುರವರದ ಬಾಗಿಲ
ಭರದೆಡೆಯಂ ಕಾವೆವದಂ ನಿಮ್ಮಂ ದಯೆಯಿಂ
ಸಿರಿಯೊಡೆಯರ್ ಮಾಡಿದೊಡೆ
ವಿಸ್ಮರವಿಸ ತೇಜಕ್ಕೆ ಸಂಬಿರೇ ಕೀೞ್ಗುಲಮಂ ೬೫

ವ॥ ಎಂದ[ವ]ರ್ ತೊನ್ನಮಾದೆಂಗಂಗೀ[1][ಮಾ][1]ತಱಿವಿರೆಮ್ಮಂ ನಂಬ[2][ದಿಯಿರಲ][2]ಕ್ಕುಮೆಂದು ಪೊಱಮಟ್ಟು ಬಂದು ವಿದರ್ಭೆಯ ಕನ್ಯಾಮಾಡದ ಮುಂದನೆ ಬಪ್ಪಾಗಳಾಕೆಯ ದಿಟ್ಟಿ ಸಟ್ಟುದಂ ಕಂಡು ಕೆಲದೊಳಿ[3][ರ್ದ][3]ವರ್ ನೋಡು ನಮ್ಮ ಪೊಱಲಮುದ್ಭ್ರಾಂತುಗೊಳಿಸಿ ಪೊಕ್ಕವರೆಂದೊಡಿಂತಪ್ಪವರಾರಾದೊಡಮೇನೆಂದು ಬೆಚ್ಚನೆ ಸುಯ್ದುಮ್ಮನೆ ಬೆಮರ್ತು ನೋಡೆ ಕಾಮನುಮಂ ಮಗುಳ್ದು ನೋಡೆ ಸೋಲ್ತು ಬೇಗಂ ಪ್ರಜ್ಞಪ್ತಿವಿದ್ಯೆಯಂ ಬರಿಸಿ ನಿನ್ನೆರ್ದೆಯನೆಂದು ಮಾದಂಗಿತಿಯಾಗಿ ರತ್ನಂಗಳಂ ಕೊಂಡು

---

1 ಮ 2 ದಿಯಿರ 3 ದಿರ

ಪೋಗಿ ಬೇಡು ಮೋಹದೊಳಪ್ಪುದನೊಡಂಬಡಿಸಿ ನೋೞ್ಪೆನೆಂದಟ್ಟಿದೊಡೆ ವಿದ್ಯೆ ಜಾತಿ ಮಾಡೆಂಗಿತಿಯಾಗಿ ಪೊನ್ನ ತಳಿಗೆಯೊಳ್ ಮಾಣಿಕಂಗಳಂ ಪೊಯ್ದು ಪಿಡಿದು ಬಂದು ರುಗ್ಮಿಣಿಯಂ ಕಂಡು ಮುಂದಿಟ್ಟು ಪೊಡೆಮಟ್ಟು

ಕಂ॥ ಮುನ್ನಂ ಬಂದಿರ್ದವರಿನ
ರಿಸ್ನ [1][ಸು][1]ತರ್ ದೇವ ನೆಗೞ್ದ ಮಾಡಂಗಿತಿಯಿಂ
ಬಿನ್ನಪಮಿವನಾಂ ತಂದೊಡ
ಮೆನ್ನಂ ಬಗೆದೀವುದರಸ ನಿಮ್ಮಾತ್ಮಜೆಯಂ ೬೬

ವ॥ [2][ಎನೆ][2] ಚಿಕ್ಕಸಂಬಟ್ಟು ರುಗ್ಮಿ[3][ಣಿ][3]ಯಂಗಂ

ಕಂ॥ ಅವರಂದನುಮಿಾಕೆಯ ತಂ
ದೆಯಱಿಂದನುಮಿನ್ನವಪ್ಪ ಮಾತುಗಳುಂ ಕೇ
ಳ್ವವರ್ಗಘಟಮಾನಮಾಗಿ
ಪುದುವು [4][ಪ್ರೋ ಕೊಳ್ಳ್ವುದೆಗೆ ತಕ್ಕನೆಂದಾಂ][4] ಬಗೆದೆಂ ೬೭

ವ॥ [5][ಎನೆ][5] ಮತ್ತಮೆಂದಳ್ ನೀನಿಾಯದಿದ ಕೂಸಱಿಯುವಲ್ಲನೆಂದವಂ ಕೊಂಡು ಪೋಱಮಟ್ಟು ಬಂದು ಪೇೞ್ದೊಡಂ ಮಾಡಿಗಂ ನಕ್ಕಂತೆ ಕೋಱನಜ್ಜಿಯ ರೂಪುಗೊಂಡಿರ್ದರುಮಱಿತು ಬೆಟ್ಟಿನೆನುತಮಂತಂತೆ ವಿದರ್ಭೆಯಲ್ಲಿಗೆ ಪಂದು ಬಗೆದುದಂ ಪೇೞ್ವನೆಂದೊಡಾಕೆಯಾಕೆಗಳನೇಕಾಂತಕ್ಕೊಯ್ದು ಕುಳ್ಳಿರಿಸಿ ತಂಬುಲಮಂ ಕೊಡಿಸಿದಾಗಳ್ ಕೋಱನಜ್ಜಿಯುಂ ತಾನಾಕೆಯಂ ಪಾಣಿಗ್ರಹಣಕ್ಕೆ ಕೆಯ್ಯನೊಡ್ಡುವಂತೆ ಕೆಯ್ಯನೊಡ್ಡಿ ಬಗೆದುನೋಡ್ಯನೆ ಸೋಲ್ತು ಬಕ್ಕುಡಿನೆಯ್ದುವಂತೆ ಕೆಯ್ಯಂ ಪೊಯ್ದೊಡೆ ನಿನ್ನೆರ್ದೆಯೊಳಾನಿರ್ದೆನಿರೆನೆಂಬುದಂ ನೋಡಿ ಪೊಯ್ಯೆಂಬಂತಾ ಕೆಯ್ಯನಾಕೆಯುರದೊಳ್ ಸಾರ್ಚಿದರ್ ಗುಡರಂ ಬಿಗಿದ ಗುಡರೊಳಮಿಾ ಬಂದಲ್ಲಿಗೆ ಮಾಡಿಂಗರೆನೆಂದು ಬಂದಿರ್ದರೊಳಮೊರ್ವನನೆ ಬಗೆದಯೆನೆ ನಗುತಂ ಪುಸಿದಯೆನೆ

ಕಂ॥ ಆನೆತ್ತಱಿವೆನೊ ಪು[6][ಸಿ][6] ಬಲು
ಭಾನುವನೆಳೆಗಿಱಪಲಾರ್ಪನೆಳೆಯುವುದನೊಯ್ದಂ
ತಾನಾಗಸದೊಳ್ ಪೋಲ್ವೆಂ
ಮಾಸಿಸಿ ಕೇಳ್ ನೀರೊಳೊಪ್ಪಿ ರೂಪಂ ಬರೆದಂ ೬೮

ವ॥ ಲೋಕದೊಳಿನ್ನ ಸಲ್ಲದಡೆ ಇಲ್ಲಕಲ್ಲದ ವಿದ್ಯೆಯಲ್ಲೊಳ್ಳಿತನೆ ಬಗೆದ್ದೆ ಪುಸಿಯಲ್ಲಿಂದೊದಱಿವಿಂಬಱಿಕ್ಕೆನ್ನೆತಕ್ಕಮೊ ಅಗದೆಯೊಳಾದುದೊಡದೆ ನಲುಮೆ

1 ಸ 2 ಎಂದು 3 ಣಿಯ 4 ಪೋಗೆನೆ ಕೊಳ್ಳ್ವುದೆಗೆ ಕರು ತಕ್ಕನೆಂದು ಬಗೆದಾಂ
5 ಎಂದು 6 ಸಿದ

ಪುಟ್ಟಿದೆಡೆಯೊಳಪ್ಪುದಾ ನಲ್ಮೆ ತಾನೆ ನಾಡುಗುಮಂಜದಿರೆಂದೆದ್ದು ಪೋದೊಡೆ ಬೆಚ್ಚನೆ ಸುಯ್ದುೞ್ ಕೊೞಸಜ್ಜೆಯು ರೂಪುಗುಂತೆ ಪೋಗಿ ಮುನ್ನಿನ ಮಾಡಿಂಗರಾಗಿ ಬಂದೊರ್ವಳೆ ಚಿಂತಿಸುತಿರ್ದುದಂ ಕಂಡೆಂ ಬೀನಂ ಮಿಳಿಮುಸುಂ ಮಾಱಿಕೊಳಲಾರ್ಪಡೆ ಬಾಯೆಂದಡೆನ್ನ ನಗಲ್ಚದಿರ್ಪಂತೆ ಸಾಲ್ದುದೆಂತಪ್ಪೊಡಂ ನಡಸೆಂದೆರ್ದಾಗಳೆತ್ತಿಕೊಂಡಾಕಾಶಕ್ಕೊಗೆದಿರ್ದ ರುಮೊಯ್ದು ವಿಮಾನಮೊಳಗಿರಿಸಿಕೊಂಡು ಪೋಗುತ್ತಂ ವಿದ್ಯೆ[1][ಯುಂ][1] ದಿವ್ಯಾಭರಣ ವಸ್ತ್ರಮಾಲ್ಯಾದಿಗಳಂ ತರಿಸಿ ಕೆಯ್ಗೆಯ್ಸುತ್ತಂ ಪೋಗೀಗಮ್ಮ ಪೊೞಲನೆಯ್ದೆ ವಿಮಾನ ದಿಂದಿೞಿದು ಪೊಱಗಣ ಬನಮಂ ಪೊಗಿರ್ದಾಕೆಗಿಂತೆಂಬರ್

ಕಂ॥ ಸರಸೀರುಹಾಸ್ಯೆ ನೀನೀ
ಪುರದೊಳ್ ಮಾಱುವಿನ[ಮಿಂತು] ನಾಮೀ ಬನದೊಳ್
ಪರಿಪಾಲಿಸುತಮಿರ್ದಪೆವೆನೆ
ಕರಮೊಳ್ಪಿತ್ತಂತೆಗೆಯ್ವೆನೆಂದೊಸೆದಿರ್ದಳ್ ೭೯

ವ॥ ಆಗಳಾ ಮಾದೇವಂ ತನ್ನ ಕೊರಳ ರತ್ನಮಾಲೆಯುಂ ಕಳೆದದಂ ಬೀವಾಗೆ ವಿಗುವಿಸಿ ಪಿಡಿಯೆಂದು ಕೊಟ್ಟೊಡಮ ಕೊಂಡೀ ಬೀವನೇತಕ್ಕೆ ಮಾಱುವುದೆಂದೊಡೆ

ಕಂ॥ ಅ[2][ಲರಂ][2]ಬಯ್ದುವನಿತ್ತಡೆ
ಲಲಿತಾಂಗಿ[ಗೆ] ಕೊಟ್ಟು ಕೊಂಡು ಪೋಗೆನೆ [ತಾ] ಕೇ
ಳ್ದೊಲೆದಿರದೆ ಪೋಗಿ ಪೊೞಲಂ
ಜಲಜಾನನೆ ಬೀವುಗೊಳ್ಳಿರೆನುತಂ ಪೊಕ್ಕಳ್ ೮೦

ವ॥ ಅಂತು ಪೊೞಲಂ ಪುಗುವಾಗಳ್ ಕಾಮದೇವನಟ್ಟಿದ ವಿದ್ಯಾದೇವತೆಗಳ್ ಬಂದು [3][ಸೀಗುರಿ][3]ಗಳಂ ಪಿಡಿದು ನಡೆದರ್ ಕೆಲರ್ ಚಾಮರಮನಿಕ್ಕುತಂ ನಡೆದರ್ ಕೆಲರ್ ಪರಿಚಾರಕಿಯರಾಗಿ ಬಳಸಿಯುಂ ನಡೆದರ್ ಕೆಲರ್ ಪಾಠಕರಾಗಿ ಪಾಡುತಂ ನಡೆದರ್ ಕೆಲರ್ ಬಪ್ಪನರಾಗಿ ಮುಂದೆ ನಡೆದರಂತತಿಶಯ ವಿಳಾಸದಿಂದಮಂ ಪಿಡಿದು ಬೀವುಗೊಳ್ಳಿರೆನುತಂ ಪೋಗೆ ಪೊೞಲೆಲ್ಲಂ ಜೋದ್ಯಂಬಟ್ಟು ಬಾಯಂಬಿಟ್ಟು ನೋಡುತ್ತಮೆತ್ತೆತ್ತ ಪೋಕುಮಂತಂತೆಯೆ ಬರುತಂ ಕೆಲರಿಂತೆಂಬರ್

ಕಂ॥ ಏಂ ನೋಂಪಿ ನೋಂತಳೋ ಮು
ನ್ನೇನಂ ಸಲೆ [4][ದಾನ][4]ಮಿತ್ತಳೋ ಗೆಯ್ದ ತಪಂ
ತಾನೇನೋ ಜಿನಮುಹಿಮೆಯ
ನೇನಂದಮೊಳೀಕೆ ಭಕ್ತಿಯಂ ಮಾಡಿದಳೋ ೮೧

---

1 ಯುಂ 2 ರಲಂ 3 ಸಿಗಿಱಿ 4 ದನಾ

ವ|| ಮತ್ತಂ ಕೆಲರಿಂತೆಂಬರ್

ಕಂ|| ಅತಿಶಯಮಿಾ ಚೆಲ್ವೆಲ್ಲಿಯು
ಮತಿಶಯಮಿಾ ತೇಜಮಿಾ ವಿಳಾಸದ ಬರವಿಂ
ತತಿಶಯಮಾಗಿಯುಮೇಸಿ
ಸತಿ ಮಾವಂಗಿತಿಯುಮೆಂಬುದೇಂ ವಿಸ್ಮಯಮೋ ೭೨

ಇಂತಪ್ಪ ವಿಭವದಂದಮು
ಮಿಂತಪ್ಪ ಕನಿಷ್ಠಜಾತಿಯೆಂಬುದುಮಿದು ತಾ
ನೆಂತೊ ಪುರಾಕೃತವೋ ಜ
ನ್ಮಾಂತರದುಚ್ಛಿಷ್ಟ ದಾನಫಲ ಸೂಚನೆಯೋ ೭೩

ವ|| ಎಂದು ಬೀದಿವೀದಿಗಳೊಳೆಲ್ಲ[ಂ] ಚೋದ್ಯಮಾಗೆ ಬಂದು ವಿದ್ಯೆಗಳನು ಮತದಿಂ ಕಾಮದೇವನ ಮನೆಯತ್ತ ಬರೆ ಕಂಡಾ ಮನೆಯ ಸೂಳೆಯೊರ್ವಳ್ ಪರಿತಂದು ತನ್ಮರಸಿಯಪ್ಪ ರತಿಗಿಂತೆಂಗುಂ

ಕಂ|| ಮೆಯ್ಯದು ದಿವ್ಯವಿಳಾಸಂ
ಕೆಯ್ಯದು ಪೊಸ ಬೀವು ಮಾಱುಗೊಳ್ಳಿಮೆನುತ್ತಂ
ತೊಯ್ಯನೆ ಬರೆ ಪೊಟಿಲೆಲ್ಲಂ
ಮೆಯ್ಯಱಿಯದೆ ನಿಂದು ನೋಡಿ ಬಂದಪಳಿತ್ತಲ್ ೭೪

ವ|| ದೇವಿ ನೋಡಿರೆ ಚೋದ್ಯಮೇನೆಂದೊಡುವಧಿವೆರಸನಂಗನ ಪೆಂಡಿರೆಲ್ಲರು ಮನೊಡಗೊಂಡು ರತಿ ಬಂದು ಬಾಗಿಲಲ್ಲಿ ನಿಂದು ನೋಡೆ ಮಾವೆಂಗಿತಿ ಸಾರೆವಂದು

ಕಂ|| ಬೀವಂ ಮಾಱುವೆನೆಂದೊಡೆ
ಬೀವಿನ ಬೆಲೆವೇೞುಮೆಂದೊಡೆಂಗುಂ ಬೀವಿಂ
ಗೀವುದರಲಂಬನೆಂದ
ಳ್ಗಾ ವಧುವಿಂತೆಂದಳಿಂತು ಕೊಳಲಾಗದುಮಂ ೭೫

ಅ[1][ಲರಂ]ಬಿನಾತನೆನ್ನಿಂ
ದಲರ್ಗಣೆ ನಡೆನೋಡಿದಾಗಳು[ಂ ತಾಂ] ನೆಗೞ್ದ
ದಲರಂಬೆನ್ನೆರ್ದೆಯೊಳ್[ಮಿಗೆ]
ನೆಲಸುಗುಮೇಂ ಬೀವುಗೊಟ್ಟು ಕೊಳಲುಂ ಬಗೆದಾ ೭೬

1 ರಲಂ

ಎನೆ ಮಾದಂಗಿತಿಯೆಂಗುಂ
ವನಜಮುಖೀ ನಿಮಗವೆಂತು ಬಂದುವೊ ಬೆಸಸಿ
ನ್ನೆನಗೆನೆ ರತಿಯೆಂಗುಂ ಕೇಳ್
ಮನಮುಂ ಕಾಮಂಗೆ ಕೊಟ್ಟೊಡವನೆಮಗಿತ್ತಂ ೭೭

ವ॥ ಅಂತು ಕೊಂಡೆವೆನೆ ಮಾದಂಗಿತಿಯೆಂಗುಂ ನೀವಿಂತು ಕೊಂಡೊಡೆನ ಗೆಂತಾಗದು

ಉ॥ ಆಂ ಗಡವೊಪ್ಪಿ [1][ಫುಲ್ಲ][1]ಶರಸಂ ನಡೆನೋಡುವೆನಾಗಳೆನ್ನನಾ
ತಂ ಗಡಮೆಚ್ಚೊ[2][ಡಾನೆ][2]ಸುವ[3][ನ][3]ಯ್ದಲರಂಬುಗಳೋವೊ ಕರ್ಬುಮಾ
ಪಾಂಗಿನ ಕಾಮನಯ್ದುಮಲರಂಬು[4][ಮಸಾನದ][4]ನೊಲ್ಲೆನೆನ್ನ ಮಾ
ದೆಂಗನೆ ಕಾಮದೇವನೆನಿಸಾತನ ಕಣ್ಮಲರಂಜಿ ನಿಚ್ಚಯುಂ ೭೮

ವ॥ ಎಂದ ಮಾತಿನೋಜೆಯುಂ ಕೇಳ್ದುದಧಿಯಿಂತೆಂಗುಂ

ಕಂ॥ ಈ ತೇಜಮುಮಿಾ ರೂಪಮು
ಮಿಾ ತೆಜದ ವಿಳಾಸದೊಳ್ಪುಮಿಾ ವಿಷಯಮುಮೇ
ಮಾತೋ ಕೀಟ್ಜಾತಿಯನೆ
ಮ್ಮಾತನ ಗೊಡ್ಡಂಗಳೆಂದು ನುಡಿವನ್ನೆವರಂ ೭೯

ವ॥ ರುಗ್ಮಿಣಿಮಹಾದೇವಿಯು ಸೂಳೆಯೊರ್ವಳ್ ನೋಡಿ ಪೋಗಿ ತನ್ನರಸಿ ಗಿಂತೆಂದಳ್

ಕಂ॥ ಮಾದೆಂಗಿತಿಯೆಂ ಕೊಟ್ಟಪೆ
ನಾದರದಿಂ ಬೀವನೆಂದು ಬಂದಂ ಪೊಳವಳಿ
ನಾದೊರೆಯೊಳೆಂದೊಡಿಂದ್ರನ
ಮಾದೇವಿಗನುತ್ತಲಂತೆ ಲೇಸಾಗಿರ್ಕುಂ ೮೦

ವ॥ ಆಕೆಯುಂ ನಿಮ್ಮಡಿಗಳ ಸೊಸೆವಿರೆಲ್ಲಂ ಕರೆಯಲಟ್ಟಿ ಬೀಸನೇತಕ್ಕೆ ಮಾಜುವೆ ಯೆಂದೊಡದರಲಂಬಿಂಗೆ ಕೊಟ್ಟಪೆನೆಂದೊಡಂತೆ ಪಡೆಯಲಾಗೆಂದು ನುಡಿಯುತ್ತಿರ್ದಪಿರೆಸೆ ಬೀಗಸಾಕೆಯುಂ ಕರೆದು ಬಾಯೆಂದೊಡೆ ಪಜಿದೊಡಗೊಂಡು ಬರೆ ಬಂದು ನಿಂದವಳಂ ಕಂಡು ಮಗಂ ನುಡಿದು ಪೋದಂದದೊಳಮಾಕೆಯ ರೂಪಿನೊಳಂ ಸ್ನೇಹವಿನಿಸು ಸಂದೇಹ ಮಾಗೆ ನೀನಾರ್ಗೆಂದೊಡಾಕೆಯಿಂತೆಂದಳ್

1 ಪುವು 2 ಡನ 3 ನಗ 4 ಮ

ಕಂ॥ ಬೀಱಂ ಮಾಱಿಲ್ ಬಂದಳ
ನೇವೆಸಗೊಂಡಪ್ಪಿರಬ್ಬ ಮಾದೆಂಗಿತಿಯೆಂ
ದೇವೀ ಪೆಱತೇನೆನೆ ಸರ
ಭಾವದೊಳೆನಗೇಕೆ ಕರೆಯಲಾಗದೆ ಮಗಳೇ ೮೧

ವ॥ ಎಂದು ಮನ್ಯುಕೆತ್ತು ಭರಂಗೆಯ್ದು ಬೆಸಗೊಂಡೊಡೇಕೆ ಭರಂಗೆಯ್ದಪ್ಪಿರೆನಗೀ ಭವನಮನ್ನ ತಂದ ಮಾದಂಗನೊಳೆ ಪೋಂಪ್ಪಿಂದೊಡದುವೇ[1][ಡಮಂ][1]ಜದೆ ಪೇೞಿತಂದೊಡಿಂತೆಂದಳ್

ಕಂ॥ ಅತಿನುತ ಕೂಂಡಿನಪುರಕಧಿ
ಪತಿ ರುಗ್ಮಿಣನೆಂಬೊನಾ ನರೇಂದ್ರಂಗಂ ಶ್ರೀ
ಮತಿಗಂ ಪುಟ್ಟಿದೆನಾನ
ಪ್ರತಿಮಗುಣೇ ಪೆಸರೊಳಂ ವಿದರ್ಭೆಯೆನೆಂಬೆಂ ೮೨

ವ॥ ಎನ್ನನತಿಶಯರೂಪಂ ಯಪ್ಪನಾನ್ಪಿತೆಯನೊರ್ವಂ ಪತ್ರೊರ್ಬನನೊಡಗೊಂಡು ಬಂದೆಮ್ಮಯ್ಯನಲ್ಲಿಗೆ ವಂದು ಮಾದಂಗರೆನಗೆ ನಿಮ್ಮ ಕೂಸನೀಯಿಮೆಂದೊಡೆಮ್ಮಯ್ಯಂ ನಕ್ಕು ತೆಗಟ್ಟಿ ಕಳೆದೊಡೆನ್ನಲ್ಲಿಗಮಪರಯದೊಳ್ ಬಂದೆನ್ನನೆತ್ತಿಕೊಂಡಾಕಾಶಕ್ಕೊ[2][ಯ್ದು][2] ವಿಮಾನದೊಳಗಿಟ್ಟು ತಂದು ಬನಮಂ ಪೊಕ್ಕಿರ್ದು ನೀನೀ ಪೊೞಲೊಳ್ ಬೀಱಂ ಮಾಱಿತಂದೊಡಂತೆಗೆಯ್ವೆನೆಂದು ಬಂದೆನೆನೆ

ಕಂ॥ ತೊಟ್ಟನೆ ಕೊರಲ್ಗೆ ವಾಯ್ದೊಂ
ದಿಟ್ಟಳಮುಮರ್ದಪ್ಪಿಕೊಂಡು ಚಿಂತಿಸಿ ಬಾಯಂ
ಬಿಟ್ಟರ್ ತಮ್ಮನ[3][ನೆನಲಾಂ][3]
ಮುಟ್ಟಿಂದುಕ್ಕವಿಸಿ ತಂದೆನೇವೆನೊ ಮಗಳೇ ೮೩

ವ॥ ಮುನ್ನವಾನೆಮ್ಮಯ್ಯಂ ಮೊದಲಾಗುಳ್ಳವರೆಲ್ಲರುಮಂ ಸಾವಂತು ಮಾಡಿ ಬಂದೆಂ ನೀನೀಗಳೆಮ್ಮಣ್ಣನೊರ್ವನುಮಂ ನೋವಂತು ಮಾಡಿ ಬಂದೆಯಿರ್ವರುಂ ತವ ಮನನೆಯಂ ಸಂತೋಷಂಬಡಿಸಿ ಬಂದ ಪೋಹಿತಮನೆ ಗೆಯ್ಯಲಕ್ಕುಮೆಂದು ಸಂತೈಸಿದಾಗಳ್ ವಿಳಾಸಿನೀರೂಪದಿನೊಡವಂದ ವಿದ್ಯೆಗಳಗಲ್ದು ಪೋಗಿ ಕಾಮದೇವಂಗಱಿಪಿದೊಡಿರ್ವರುಂ ಬಂದಾಗಳಜ್ಜಿಯುಂ ಕಂಡಾಗಳೇಂ ತಂದುವೇನೆಮ್ಮಣ್ಣನುಮೆಮ್ಮ ತ್ತಿಗೆಯುಮ[ಂ] ಬೇಗಂ ಬರಿಸೆನೆ ಕಾಮಂ ನಾರದನಂ ಬರಿಸಿ ಕಾಮವಿಮಾನಮಂ ಕೊಟ್ಟೆಮ್ಮ ಮಾವನುಮತ್ತೆಯುಮನೊಡಗೊಂಡು ಬನ್ನಿಮೆನೆ ಮನೋವೇಗದಿಂ ಪೋಗಿ ಕೂಂಡಿನಿ

1 ಡಿದಂ 2 ದು 3 ನೆ

ಪುರಮಂ ಪೊಕ್ಕಾಗಳ್ ಪರಿವಾರ ಸಹಿತಂ ರುಗ್ಮಿಣನುಂ ಶ್ರೀಮತಿಯುಂ ಪೆಸೆಗಳಂ ನೋಡಿ ವಿಪ್ರಳಾಪದಿಂ

ಕಂ|| ಆರನಗಲ್ಚಿದೆನೋ ಮು
ನ್ನಾರಂ ಮಱುಗಿಸಿದೆನೋ ವಿಧಾತ್ರಾ ಪೇೞಿಂ
ದೋರಂತಿರ್ಪರುಮೊದವಿದ
ಕಾರುಣ್ಯಸ್ವರದೆ ಪುಯ್ಯಲಿಡುತಿರ್ಪಾಗಳ್ ೮೪

ವ|| ನಾರದನೆಯ್ದಿ ನೀವೇಕುಬ್ಬೆಗಂಬಡುವಿರ್ ನಾರಾಯಣಂಗಂ ರುಗ್ಮಿಣಿಗಂ ಪುಟ್ಟಿದ ಕಾಮದೇವಂ ಮುನ್ನಂ ಬೇಡಿಯಟ್ಟಿದೊಡೆ ತಪುಗೀವುದಂ ಮಾಡೆಗಂಗಪ್ಪಡಮಾವೆನೆಂದುದಕ್ಕಾತನಱಲ್ದು ಮಾದೆಂಗನೆಸೆಂದುಪಾಯದಿನೊಯ್ದನದಕ್ಕೆ ನಾರಾಯಣನುಂ ತನ್ನ ಕಾಲಂ ಪಿಡಿದೆಸೆಂದಟ್ಟಿದನೆಂದೆನಿತಾನುಮಂ ನುಡಿದಾಱಿಸಿ ಬನ್ನಿಮೆಂದೊಡಗೊಂಡು ಬಂದು ಪೊಱವೊೞಲುದ್ಯಾನವನದೊಳಿರಿಸಿ ನಾರದಂ ಪೋಗಿ ನಾರಾಯಣಗಂ ರುಗ್ಮಿಣಿಮಹಾದೇವಿಗಂ ರುಗ್ಮಿಣನ ಬರವನಱಿಪಿದೊಡವರ್ ಪೊೞಲ ನಪ್ಪಶೋಭೆಗೆಯ್ಸಿ ಮಹೋತ್ಸಾಹದಿಂ ವಿದರ್ಭೆಯನೊಡಗೊಂಡಿದಿರಂಪೋಗಿ ಕೂಸಂ ಮುಂದಿಟ್ಟುಕೊಂಡು ಸಂತೋಷಮಾಗೆ ನುಡಿದು ರುಗ್ಮಿಣನುಮಂ ಶ್ರೀಮತಿಯುಮಂ ವಿದರ್ಭೆಯುಮಂ ವಿದರ್ಭೆಯ ಮುಂದುಗೊಂಡು ನಾರಾಯಣನುಂ ರುಗ್ಮಿಣಿಮಹಾದೇವಿಯುಂ ಪೊೞಲಂ ಪೊಕ್ಕದುವೆ ಮುಹೂರ್ತಮೆಂದು ಕಾಮದೇವನುಮಂ ವಿದರ್ಭೆಯುಮಂ ಪಸೆಯೊಳಿರಿಸಿ ರುಗ್ಮಿಣಂ ಬಂದು ವಸ್ತ್ರವಾಹನಂಗಳಂ ಪೇೞ್ದು ಕೈನೀರೆಱೆದು ಕೊಟ್ಟನಂತು

ಮ|| ಪಿರಿದುಂ ನೋವಿನೊಳಾದ ವೈರಮೆರ್ದೆಯುಂ ಗೆಂಟಾಗೆ ಕಂಡುತ್ಸವಾ
[1][ಕ][1]ರಮಂ ಸೋದರನುಂ ನಿಜಾತ್ಮಜೆಯುಮಂ ಕಂಡರ್ಕಱಿಂ ಕೂರ್ಪಿಗಳ್
ದೊರೆಕೊಂಡಲ್ಲಿಯ ಕೂಟದೊಂದು ಸುಕೃತಾತ್ಯಂತೋದಯಂ ಶ್ರೀ ಪೊದ
ೞ್ದಿರೆ ಶೋಭಿಪ್ಪಭಿನೂತಶೋಭನಮನರ್ ವ್ಯಾವರ್ಣಿಸಲ್ ಬಲ್ಲರಾರ್ ೮೫

ಉ|| ಮುಂ ಪಿರಿದಪ್ಪ ನೋವಡಸಿದಣ್ಣನ ಕೂಸನುಪಾಯದಿಂದೆ ತಂ
ದಂ ಪೞಿಯಾಗದಣ್ಣನೊಸೆದಿತ್ತೊಡೆ ರುಗ್ಮಿಣಿದೇವಿ ಮೆಚ್ಚಿ ತಾ
ನುಂ ಪತಿಯುಂ ಮಹಾ[2][ವಿಭವ][2]ತೀಕರಮೊಪ್ಪಿರೆ ಮಾಡೆ ಕಾಮದೇ
ವಂ ಪಸೆಯೊಳ್ ಸುರೇಂದ್ರ ನವದಂಪತಿಯಿರ್ದವೊಲಿರ್ದನನ್ನೆಗಂ ೮೬

---

1 ಕಾ 2 ವಿಭೂ

ತ್ರಿಪದಿ॥

ಸಿರಿಯೊಡಗೂಡಿರ್ದ ಹರಿವಂಶದವರ್ಗೆಲ್ಲಂ
ಪಿರಿಯರ್ ಸಮುದ್ರವಿಜಯರ ಮಾದೇವಿ
ನಿರುಪಮರೂಪೆ ಶಿವದೇವಿ ೮೭

ಭೂಮಿಯೊಳ್ ಮಿ[1][ಕ್ಕ][1]ಳಾ ಭಾಮೆಯಾ ಗರ್ಭದೊಳ್
ನೇಮಿಯೆಂಬಮಳ ಜಿನನಾಥ ತ್ರಿಭುವನ
ಸ್ವಾಮಿ ನೆಲಸಲ್ಕೆ ಬರೆ ಮುನ್ನಂ ೮೮

ಭಾಸುರದೆ ದೇವೇಂದ್ರಗಾಸನಕಂಪಮಾ
ದಾ ಸಮಯದೊಳಗೆಮ್ಮವಧಿಯಿಂ
ದಾ ಸುರಾಧೀಶನಱಿಯುತ್ತಂ ೮೯

ಸನ್ನುತ ಗರ್ಭಮುಪ್ಪನ್ನಗಂ ಸಾಧಿಸಲ್
ತನ್ನ ದೇವಿಯರನೊಸೆದಟ್ಟಿ ಸಾಧಿಸಿ
........ಕೆಲವು ದಿವಸದಿಂ ೯೦

ಸುಂದರಿ ನಾಲ್ಕುನೀರ್ಮಿಂದು ಬೆಳ್ವಸದನ
ದಂದಮತ್ಯಂತ[ಂ] ಸೊಗಯಿಸೆ ತಾಂ ಸೂೞ್ತ
ವಂದೊಱಗಿ ಕನಸಿನೊಳ್ ೯೧

ಸ[2][ರಿ][2]ತಪ್ಪ ಮದವಿಂಗೆ ನೆರೆದು ಬಂದಳಿಗ[3][ಳು][3]
ನಿಱಿವಿಡಿದಂತೆ ಸೊಗಯಿಸೆ ನಿಂದಿಂದ್ರ
ಕ[4][ರಿ][4]ಯ ಭೂಪೇಂದ್ರಸತಿ ಕಂಡಳ್ ೯೨

ಕೆಲೆವುದಂ ದೆಸೆಗೆ ಮಾರ್ಮುಲೆವುದಂ ಪೆಱವ ಬಂ
ದಲೆವುದಂ ಧವಳ ವೃಷಭಮಂ ವಿಕಸಿತೋ
ತ್ಪಳದಳ ನಯನಯುಗೆ ಕಂಡಳ್ ೯೩

ಗಿರಿಯಿಂದ ಪೆಱಗೊಂದು ಗಿರಿಗೆ ಲಂಘಿಸಿ ನಿಂದು
ಕರಿಯ ಪೆರ್ಮುಗಿಲ ಕರಿಗೆತ್ತು ಮುಳಿವ ಕೇ
ಸರಿಯ....................ಗೆ ಕಂಡಳ್ ೯೪

---

1 ಕ್ಕ 2 ಱಿ 3 ಳೂಸಿ 4 ಱಿ

ಕರಿವಸಂ ನಿಸಿಸೆ ತಾವರೆಯವ್ರೊಲೊಸೆದಿರ್ದ
ಸಿರಿಯುಮಿಯುಂ ಕಂಡಳು ಗುಣರತ್ನಭರ ನಿ
ರ್ಭ[1][ರ ಸ್ಮರ][1]ಹರನ ಬರವಿನಲೆ ೯೫

ಆಮೋದ ಪರಿಮಳ ವ್ಯಾಮೋಹ ಭೃಂಗಾಭಿ
[2][ರಾಮಕಂ ಕರಿಯೆರಡುಮ][2]ನುತ್ಕಟ ಮದ
ಸಾಮಜಸದೃಶಗತಿ ಕಂಡಳ್ ೯೬

ತೊಳಪುದಂ ಲೋಕಕ್ಕೆ ಬೆಳಪುದಂ ತಂಪಿನ
ಗ್ಗಳಿಕೆಯುಂ ಮೆಱೆವುದು ಸೊಗಯಿಸೆ ನೆಱೆದ ತಿಂ
ಗಳನಂಬು[3][ಜ][3]ಮುಖಿ ಕಂಡಳ್ ೯೭

ಕರೆಯೆ ಪಕ್ಕಿಗಳೆಲ್ಲ ಮೊರೆಯೆ ತುಂಬಿಗಳೆಲ್ಲ
ಪರೆಯೆ ಮೆಯ್ಗರೆಯೆ ಖಳರೆಲ್ಲಮೊಗೆವ ಭಾ
ಸ್ಕರನ[4][ನಂಭೋಜ][4]ಮುಖಿ ಕಂಡಳ್ ೯೮

ಪೊಳೆಪೊಳೆದು[5][ರೋರೋ][5]ನಿರ್ದಳ[5][ರ್ದ][6] ಬಂದೊ[7][ಡನೊಡ][7]
ನೆಳಸಿ ಸೋಂಕಿರ್ದ ಪೊಳಾರ್ದನನುತ್ಪಳ
ದಳ ನಿಭನಯನಯುಗೆ ಕಂಡಳ್ ೯೯

ಅಂಭಃಪೂರಣಂಗಳಂ ಶುಂಭದುತ್ತಮ ಶಾತ
ಕುಂಭದ ಕುಂಭಯುಗಳಮನನುಪಮ
[8][ತಾಂಭೋಜ][8]ಸದೃಶಮುಖಿ ಕಂಡಳ್ ೧೦೦

ಸರಸಿಜಮೋಳಿಯುಂ ಮೊರೆವ ಭೃಂಗಾಳಿಯುಂ
ಕರಮೆ ಚೆಲ್ವಾಗೆ ಸೊಗಯಿಪ್ಪ ಕೊಳನಂ ತಾಂ
ಸರಸಿಜ ಸದೃಶಮುಖಿ ಕಂಡಳ್ ೧೦೧

ಮಕರಾದಿ ಜಲಪ್ರಕರದಿಂ ವಿಪುಳೋರ್ಮಿ
ನಿಕರ ಕ[9][ಲ್ಲೋರ][9] ರಮಣೀಯ ಜಳಧಿಯ
ನಕಳಂಕ ಚಂದ್ರಮುಖಿ ಕಂಡಳ್ ೧೦೨

---

1 ರ 2 ಧಾಮಕಮನೆರಡ 3 ಜಸದೃಶ 4 ನತ್ಯಂತ 5 ಬೊ 6 ರ್ದ 7 ಡ
8 ತಾಮೋದ 9 ಲ್ಲೋಳ

ಅವಿತತರತ್ನಂಗ[1][ಳಿಂ][1] ಸಮೆ[2][ದ][2] ಸಿಂಗಂಗಳಂ
ಕ್ರಮದೆ ಪೋಲ್ತಿರ್ದೊಡೆಸೆದಿರ್ದ ಸಿಂಹವಿಷ್ಟ
ರಮನಭಿನೂತಗಣ್ಣೆ ಕಂಡಳ್ ೧೦೩

ಹಾಟಕ ಮಣಿಮಯ ಕೂಟದೆ ಸೊಗಯಿಸು
ವಾಟದ ಸುರರ ಭವನಮಂ ವಿಕಸಿತ
ಪಾಟಳ ಗಂಧಯುತೆ ಕಂಡಳ್ ೧೦೪

ಮಣಿಗಳ ರಾಗದಿಂ ಫಣಿಗಳ ಭೋಗದಿಂ
ದೆಣೆಯಿಲ್ಲದುರಗಭವನಮಂ ನೆಗೞ್ದ ಧಾ
ರಿಣಿಗಧಿಪತಿಯ ಸತಿ ಕಂಡಳ್ ೧೦೫

ತೊಳ[3][ಪ][3] ರಶ್ಮಿಗಳ್ ಬಳೆದಿಂದ್ರವನಮನ
ಗ್ಗಳಿಕೆಯಿಂ ಮಿಗುತಲಿರೆ ರತ್ನರಾಶಿಯುಂ
ಜಳರುಹನೇತ್ರಮುಖಿ ಕಂಡಳ್ ೧೦೬

ಪೊಗೆಯಿಲ್ಲದುರಿದು ತಳ್ತೊಗೆದು ನೀಳ್ದೊಂದೊಂದ
ಮಿಗುವಂತೆ ತೋರ್ಪ ದಹನಮಂ ನೋಡಿದಳ್
ಮೃಗಶಿಶುನಯನೆ ನಯದಿಂದಂ ೧೦೭

ಪಂಚಮಾ ಶಬ್ದದಿಂದಂ ಬೇಗನೆಚ್ಚತ್ತು
ಮಂಚದಿನೆರ್ದು ಬೆಳಗಾಗಿ ಕೆಯ್ಗೆಯ್ದು
ಕಾಂಚನಕುಂಭಕುಚೆ ಕಂಡಳ್ ೧೦೮

ಜನಪತಿಯೊಡನಿರ್ದ ವನಜಾಸ್ಯೆ ಪದಿನಾಱು
ಕನಸುಮನಱಿಪೆ ನರನಾಥಂ ಕೇಳುತ್ತೆ
ಕನಸಿನ ಫಲಮಂ ಬೆಸಸುಗುಂ ೧೦೯

ಭುವನತ್ರಯೇಶನಾಗುವನೊರ್ವನಾತ್ಮಜಂ
ದಿವಿಜೇಂದ್ರಗತಿಯಿನಿೞಿತಂದು ನಿನಗೆ ಪು
ಟ್ಟುವನೆಂದೊಡೊಸೆದು ಸುಖಮಿರ್ದಳ್ ೧೧೦

1 ಳಂ 2 ದುದು 3 ಗು

ದೇವರ ದೇವಂಗೆ ದೇವಿಯಪ್ಪಾ ಶಿವ
ದೇವಿಯ ಬಸಿಱೊಳ್ ನೆಲಸಿದನೆಂಬುದಂ
ದೇವರ್ಕಳೆಲ್ಲಮಱಿಯುತ್ತೆ ೧೧೧

ನೆರೆದುಬಂದೆಲ್ಲಮಾದರದಿಂದಂ ಗರ್ಭಾವ
ತರಣದೊಳೊಪ್ಪುವೊಸಗೆಯಂ ಮಾಡೆ ತ
ತ್ಪುರಮಿಂದ್ರಪುರದ ತೆಱನಾಯ್ತು ೧೧೨

ವ|| ಅಂತು ಗರ್ಭಾವತರಣದೊಸಗೆಯನಿಂದ್ರಾದಿಗಳ್ ಮಾಡಿ ಪೋದಿಂಬೞಿಯಂ *ಶಿವದೇವಿಗೆ ಗರ್ಭಂ ಬಳೆದು ನವಮಾಸಂ ನೆಱೆದು ವೈಶಾಖ ಶುದ್ಧ ದ್ವಾದಶಿಯಂದರಿಷ್ಟನೇಮಿದಿವಾಕರನುದಯಂಗೆಯ್ದನಾಗಳ್ ದೆಸೆಗಳ್ ಪ್ರಸನ್ನಮಾದವು ತರುಗುಲ್ಮಲತಾದಿಗಳುಮಂಕುರಿತ ಪಲ್ಲವಿತ ಕುಸುಮಿತ ಫಲಿತ ಭರಿತಂಗಳಾದವು ಮೃದು ಸುಗಂಧಮಾರುತನೆಸಗಿತ್ತು ಸಕಳ ಜನಮನೋರಾಗ[1][ಮೊ][1]ರ್ಮೊದಲಾಯ್ತಾಗಳಿಂದ್ರಂಗಾಸನಕಂಪಮಾದೊಡವಧಿಜ್ಞಾನ ದಿನರಿಷ್ಟನೇಮಿಸರ್ವಜ್ಞನುದಯಮನಱಿದತ್ತಲೇೞಡಿಯಂ ನಡೆದು ಸಾಷ್ಟಾಂಗಪ್ರಣುತನಾಗಿ ಜನ್ಮಾಭಿಷೇ........ಮನಿಕಾಯಂ ತಮಗೆ ತಾಮೆ ಸನ್ನೆಗೆಯ್ವಂತೆ ಘಂಟಾರವದಿಂ ಕಲ್ಪವಾಗಿಹ ದೇವರೆಲ್ಲಮಱಿದು ಪರಿವಾರಸಹಿತಂ ಬಂದರ್ ಸಿಂಹನಾದಮಂ ಕೇಳ್ದು ಜ್ಯೋತಿರ್ಲೋಕದ ದೇವಸಮಿತಿ ಬಂದತ್ತು ಶಂಖ ಧ್ವನಿಯಿಂ ಭವನವಾಸಿಗ ದೇವಸಮೂಹಂ ಬಂದತ್ತು ಕಹಳಾರವದಿಂ ವ್ಯಾನವ್ಯಂತರ ದೇವರ್ವಂದರ್ ಚತುರ್ನಿಕಾಯಾಮರಸಮೂಹಮುಂ ಮೂವತ್ತಿರ್ವರುಮಿಂದ್ರರುಂ ಮಾನುಷೋತ್ತರ ಪರ್ವತದಲ್ಲಿ ನೆರೆದು ಯಾನ ವಿಮಾನ ಸಿಂಹ ವ್ಯಾಳ ವ್ಯಾಘ್ರ ಖರಕರ ಕರಿ ತುರಗ ಮಹಿಷ ವೃಷಭ ಕರಿಮಕರ ಮತ್ಸ್ಯ ನಕ್ರ ಶಿ[ಂ]ಶುಮಾರ ಕೂರ್ಮ ಶುಕ ಸಾರಸ ಕ್ರೌಂಚ ಗರುಡಾದ್ಯನೇಕವಿಧ ವಿಗುರ್ವಣ ವಾಹನಾರೂಢರಾಗಿ ಮೃದಂಗ ಮದ್ದಳೆ ಪಟುಪಟಹ ಪಟಹ [2][ಝುಲ್ಲರಿ][2] ತಾಳ ವೇಣು ವೀಣಾ ಶಂಖ ಕಾಹಳಾದಿ ಪಂಚವಿಧಾತೋದ್ಯ ವಾದ್ಯ ‚ನೃತ್ಯ ಗೇಯ ಸ್ತುತಿಶತಾನೇಕವಿಧ ವಿಳಾಸಸಮೇತ ಸುರ ಸಮಿತಿ ಗಗ[3][ನ][3]ಭಾಗಮೆಲ್ಲಮಂ ತೀವಿ ಚಿತ್ರಪ[4][ಟಂ][4]ಗೆದಱಿದಂತೆ ಬರ್ಪ ಪಡೆಯ ನಡುವೆ ಮಂದರಪರ್ವತನಿಭೋತ್ತುಂಗ ಐರಾವತಗಜಕ್ಕೆ ಮೂವತ್ತೆರಡು ಮೊಗಮೊಂದು ಮೊಗದೊಳೆಂಟು ಕೋಡು ಕೋಡಿನೊಳೊಂದೊಂದು ಕೊಳವೊಂದೊಂದು ಕೊಳದೊಳ್ ಮೂವತ್ತೆರಡು ತಾವರೆಯ ಪೂಗಳೊಂದೊಂದು ಪೂವಿನೊಳ್ ಮೂವತ್ತೆರಡೆಸೞ್ ಒಂದೆಸೞ ಮೇಲೆ ವಾದ್ಯಗೇಯ ಸಹಿತಮುಚ್ಚರಸಿಯರೊರ್ವರೊರ್ವರಾಡುವಂತಿರೆ

1 ವೆ 2 ಇಲ್ಲಱಿ 3 ನಾ 4 ಖಂ

*ಇಲ್ಲಿಂದ ೨೦೪ನೆಯ ಪುಟದ 'ಮಹಾದೇವಿ'ಯವರೆಗೂ ಓಲೆಪ್ರತಿಯಲ್ಲಿಲ್ಲ. ಆದರೆ ಇದೇ ಓಲೆಪ್ರತಿಯ ಮರುಪ್ರತಿಯಾದ ಕೆಎ ೪೬ನೆಯ ಕಾಗದದ ಪ್ರತಿಯಲ್ಲಿ ದೊರೆಯುತ್ತದೆ.

ವಿಗುರ್ವಿಸಿದ ಮಹಾಗಜೇಂದ್ರಮಂ ಸೌಧರ್ಮೇಂದ್ರನೇಱಿ ಶಚೀಮಹಾದೇವಿ*ಯಂ ಪೆಱಗನೇಱಿಸಿಕೊಂಡು ಬರೆ

ಕಂ|| ಎನಿತಗಲಿತು ಗಗನಸ್ಥಳ
ಮನಿತಱೊಳಂ ಸುರರ ನರರ ವನಿತೆಯರ ತಗು
ಳ್ದನುಪಮ ವಾದ್ಯದ ಗೇಯದ
ವಿನೂತ ನವರಸಸಮೇತ ನಾಟಕದ ಮಯಂ ೧೧೩

ಮದೆದ ಮೃಗಮದದ ಪಾ (?)
ಳದ ಸಾಂದಿನ ಕುಸುಮಚಯದ ನೆಗೞ್ದಗರುವ ಧೂ
ಪದ ಕಂಪುಗಳನೆ ತರ್ಕ
ಯ್ಸಿದ ಮಂದಾನಿಳನ ನೆರವಿಯೊಳಗಂ ಪೊಱಗಂ ೧೧೪

ಜಯ ಭುವನತ್ರಯನಾಥಾ
ಜಯ ಜಯ [1][ದು][1]ಷ್ಟಾಷ್ಟಕರ್ಮ ನಿರ್ಮೂಳಕರಾ
ಜಯಜಯ ನೇಮಿಸ್ವಾಮಿಾ
ಜಯಜಯ ಶುದ್ಧೀದ್ಧ ವಿಪುಳ ಗುಣಗ[2][ಣ][2]ನಿಳಯಾ ೧೧೫

ವ|| ಎಂದಿಂತನೇಕವಿಧದಿಂ ಸ್ತುತಿಯಿಸುವ ಸರಮಂ ನೊಸಲೊಳಿಟ್ಟ ಕರಮುಂ ಬೆರಸು ದೇವನಿಕಾಯಮಂತೆ ಬಂದು ದ್ವಾರಾವತಿಯನೆಯ್ದೆ ಪೊಱಲೊಳಗುಂ ಪೊಱಗುಂ ದಿವ್ಯಮಯಮಾಗೆ ದೇವೇಂದ್ರಗಜವಿಗುರ್ವಣ ಪವ[3][ಣ್ಗ][3] ಪಂದು ಧರೆಗಿೞಿತಂದು ಪೊೞಲಂ ಪೊಕ್ಕು ಸಮುದ್ರವಿಜಯ ಮಹಾರಾಜನ ರಾಜಾಂಗಣದೊಳಾನೆಯಂ ನಿಱಿಸಿ ಶಚಿಮಹಾದೇವಿವೆರಸೆೞ್ದರ್ ದೇವಿಯರೆಸ್ಮು ನೇಮಿಸ್ವಾಮಿಯಂ ತನ್ನಿಮೆಂದವಟ್ಟೆದೊಡೆ ದೇವಿಯರಷ್ಟವಿಧಾರ್ಚನಾಸಹಿತಂ ಬಂದುದಯಾದಿತ್ಯನಂ ಮುಂದಿಗೊಂಡಿರ್ದ ಪೂರ್ವ ದಿಶಾಂಗನೆಯಿರ್ಪಂತೆ ತೊಳಗಿ ಬೆಳಗುವ ಬಾಳಕನಂ ಮುಂದಿಟ್ಟಿರ್ದ ಶಿವದೇವಿಯಂ ಕಂಡು ಬಲಗೊಂಡು ಭದ್ರಾಸನದೊಳಿರಿಸಿ ಪಾ[ಲ್ಗ]ಡಲ ನೀರಿಂದಭಿಷೇಕಂಗೆಯ್ದು ದಿವ್ಯಾಭರಣ ವಸ್ತ್ರಮಾಲ್ಯಂಗಳಿಂ ಕಯ್ಗೆಯ್ಸಿ ಪೂಜಿಸಿ ಸಮುದ್ರವಿಜಯ[4][ನಂ][4] ಮನ್ನಿಸಿದಿಂತೆಂಬರ್

ಕಂ|| ಈ ನಿಮ್ಮ ಮಗಂ ಸಕಳ
ಜ್ಞಾನೋದಯನಾಗಿ ಮೂಱು ಲೋಕಂಗ[5][ಳೊಳಂ][5]
ತಾನಧಿಕನಪ್ಪುದಂ ವಿ
ಜ್ಞಾನದಿನಱಿದಮರಸಮಿತಿವೆರಸಮರೇಂದ್ರಂ ೧೧೬

---

1 ದಂ 2 ಳ 3 ಣೆ 4 ರಂ 5 ಳ್ಮಂ

ಬಂದೊಸೆದೀತನನೊಯ್ದತಿ
ಸುಂದರ ಮಂದರಗಿರೀಂದ್ರ ಶಿಖರದೊಳಿಟ್ಟಾ
ನಂದದೆ ದುಗ್ಧಾಬ್ಧಿಯ ಜಳ
ದಿಂದಂ ಜನ್ಮಾಭಿಷೇಕಮಂ ಮಾಡಿಸುವೊಂ ೧೧೭

ವ|| ಎಂದಱಿಯೆ ಪೇೞ್ದು ಶಿವದೇವಿಯ ಮುಂದಿರ್ದ ಕೂಸಿಂಗೆ ಪೊಡೆವಟ್ಟೆತ್ತಿಕೊಂಡಾಗಳ್ ತ್ರಿಭುವನಸ್ವಾಮಿಯಂ ತನ್ನಿಮೆಂದಾನಿಲ್ಲಿರ್ಪುದು ವಿನಯಮಲ್ಲೆಂದು ಐರಾವತದಿನಿೞಿದಿಂದ್ರಂ ಮುಗಿದ ಕೈವೆರಸು ಜಯಜಯಧ್ವನಿಯಿಂ ಜಗತ್ತ್ರಯಸ್ವಾಮಿ ಶರಣಾಗೆಂದೆಱಗಿ ಕೂಸನೆತ್ತಿಕೊಂಡೈರಾವಣ ಗಜೇಂದ್ರಮನಾತನ ಮುಂದಗೊಂಡೇಱಿ ಗಗನಮಾರ್ಗದಿಂದುತ್ತರಾಭಿಮುಖವಾಗಿ ಪೋಪಾಗಳ್ ದೇವದುಂದುಭಿರವಮೊಗೆಯೆ ಮಹಾಧ್ವಜಕೋಟಿಗಳ್ ನೆಗೆಯೆ ಚಾಮರಸಹಸ್ರಂಗಳ್ ಬೀಸೆ ಪುಷ್ಪಾಂಜಲಿ ಸೂಸೆ ಬರ್ಪ ದೇವರ್ಕಳೆಲ್ಲಾ ದೆಸೆಯೊಳಂ ಜಯಜಯ ಶಬ್ದಂ ನೆಗೞೆ ಮಂದಾನಿಳನೆಸಗೆ ದಿವ್ಯಗಂಧಂ ಪಸಗೆ ಅಚ್ಚರಸಿಯರ್ ಪಾಡೆ ಕಿನ್ನರರ್ ಪೊಗೞೆ ಮುಂದೆ ನಡೆವ ಕಳಶದರ್ಪಣಂಗಳ್ ತೊಳಗೆ ಮಕುಟಾಭರಣಂಗಳ್ ಬೆಳಗೆ [1][ೆ][1]ಲದಾಕಾಶಪೆಡೆಯೆಲ್ಲಂ ದಿವ್ಯಮಯಮಾಗೆ ಪೋಗಿ ಸುರಗಿರಿಶಿಖರದಲ್ಲಿ ಪಾಂಡುಕಶಿಲೆಯ ಮೇಲೆ ರತ್ನಮಯ ಸಿಂಹಾಸನದೊಳ್ ಶ್ರೀಪೀಠಪ್ರಕ್ಷಾಳನ [2][ಪುಷ್ಪೋಪ][2]ಹಾರ ವಿ[3][ಧಾನಾದಿ][3] ಸಾಷ್ಟಾಂಗ ಸಾಭ್ಯಂಗನಾ[ಕ್ರಿ]ಯೆಯಿಂ ಬೞಿಯಂ ಭಗವನಂ ಪೀಠದ ಮೇಗಿರಿಸಿ ಪತ್ತುಂ ದೆಸೆಯೊಳಂ ಪ[4][ದಿಂಬ][4]ರ್ ಲೋಕಪಾಳರ ಸಹಿತಮೋಲಗಿಸುತ್ತಲಿರೆ ಸೂಱಿಂಟು ಕನಕಕಳಶಂಗಳಿಂ ಕ್ಷೀರಸಮುದ್ರಜಲಮಂ ದೇವರ್ಕಳಿಂ ತರಿಸಿ ಮೂವತ್ತಿರ್ವರಿಂದ್ರರಿಂದಮಭಿಷೇಕಂಗೆಯ್ದರಿಷ್ಟನೇಮಿಭಟ್ಟಾರಕನೆಂದು ಪೆಸರಿಟ್ಟುಮರ್ಚಿಸಿ ನಾಲ್ಕು[ಂ] ತೆಱದ ಸ್ತುತಿಗಳಿಂ ಸ್ತುತಿಯಿಸಿ ಸುರರಾಜನೆರಡು[ಂ] ಕಣ್ಣೊಳ್ ನೋಡಿ ತಣಿಯದೆನಗೆ ಸಾಸಿರಕಣ್ಣಾಗೆ ಮಾಡಿ ನೋಡಿ ರಾಗದೊಳ್ ಸೈರಿಸದೆರ್ದು ಸಾಸಿರ ತೋಳಂ ತನಗೆ ವಿಗುರ್ವಿಸಿ ಬಾಲನ ಮುಂದೆ

ಕಂ|| ಸುರಪತಿ ಪೆರ್ಚಿದ ರಾಗದೆ
ಭರದಿಂದಾನಂದನೃತ್ಯ ಮಾಡಿದೊಡೆ ಬೃಹ
ದ್ಗಿರಿಗಗನದೊಳವನಿಯೊಳಾ
ಕರಗಳೊಳಂಬರದೊಳಗಮತಿಶಯಮಾಗಳ್ ೧೧೮

ವ|| ಅಂತು ಭುವನತ್ರಯಕ್ಕಾಶ್ಚರ್ಯ[4][ಮ][4]ಪ್ಪಿನಮಾಡಿದ ನಾಟಕ [6][ಪ][6]ಮಾಪ್ತಿಯೊಳ್ ಗರ್ಭಾವತರಣ ಕಲ್ಯಾಣಭಾಗಿ ಭವತು ಜನ್ಮಾಭಿಷೇಕ ಕಲ್ಯಾಣಭಾಗಿ ಭವತು ಭಗವದಾರ್ಹಂತ್ಯ ಕಲ್ಯಾಣಭಾಗಿ ಭವತು ನಿರ್ವಾಣಕಲ್ಯಾಣಭಾಗಿ

1 ಗೆ 2 ಪು...ಪಾಪ 3 ದಾನಾವ 4 ದಿಣ್ಣ 5 ದಿಮ 6 ದ

ಭವತೆಂದಭಿಮಂತ್ರಿಸಿ ಭಗವನನೆತ್ತಿಕೊಂಡೈರಾವಣಗಜೇಂದ್ರಮನೇಱಿ ದೇವನಿಕಾಯ ಸಹಿತಂ ಮಗುೞ್ದು ಬಂದು ದ್ವಾರಾವತಿಯಂ ಪುಗುವಾಗಳ್

ಕಂ॥ ಚಾಮರವುಯಂ ವಿಳಾಸಯು
ತಾಮರಮಯಮಾತಪತ್ರಮಯಮಮಿತ ಗುಣೋ
ದ್ದಾಮದ್ಯುತಿಮಯಮೆ[1][ನಲಾ
ಭೂಮಿ][1]ತಳಾಂಬರತಳಂಗಳೆಡೆಯೆನಿತನಿತಂ ೧೧೯

ದೇವನಿಕಾಯ ಸಮೇತಂ
ದೇವೇಂದ್ರಂ ತ್ರಿಭುವನೇಶ ಜನ್ಮೋತ್ಸವಮಂ
ಭಾವಿಸಿ ಶಕ್ರನೆ ಮಾಡಿದೊ
ಡಾ ವಿ[2][ಸ್ಮ][2]ತ ವಿಳಾಸದಳವನೇನಂ ಪೇೞ್ವೆಂ ೧೨೦

ವ॥ ಅಂತಾಶ್ಚರ್ಯಮಾಗೆ ಪೊೞಲಂ ಪೊಕ್ಕು ಸಮುದ್ರವಿಜಯ[3][ನ][3] ಮಾಡದೊಳ್ ಕೂಸಿನೆ ತಾಯುಮಂ ತಂದೆಯುಮಂ ಭದ್ರಾಸನದೊಳಿರಿಸಿ ಮತ್ತಂ ಕ್ಷೀರಸಮುದ್ರ ಜಲದೊಳಭಿಷೇಕಂಗೆಯ್ದು ದಿವ್ಯವಸ್ತುಗಳಿಂ ಕಯ್ಗೆಯ್ಸಿ ಮನ್ನಿಸಿದಿರ್ವರ ಮುಂದೆ ಸಿಂಹಾಸನದೊಳ್ ಕೂಸನಿರಿಸಿ ಪೂಜಿಸಿ ನಾಲ್ವರ್ ಲೋಕಪಾಳರುಂ ನೀವೆ ಕಾಪಾಗಿ ನೇಮಿನಾಥನನೋಲಗಿಸಿವೆಂದಿರಿಸಿ ದೇವೇಂದ್ರಾದಿಗಳ್ ತಂತಮ್ಮ ಲೋಕಂಗಳಿಗೆ ಪೋದಿಂ ಬೞಿಯಂ

ಚಂ॥ ಮೃದುಕರ ಯುಕ್ತಿಯಿಂದತಿಮನೋಹರಶಕ್ತಿಯಿನುತ್ತರೋತ್ತರಾ
ಭ್ಯುದಯ ವಿಕಾಸದಿಂದತಿಶಯಾಂಗವಿಳಾಸದಿನಾಗರ್ವದೊಪ್ಪಿತೋ
ರ್ವುದಜನಸೂನಮಪ್ಪ ನಯದಿಂ ನಯನಪ್ರಿಯದಿಂ ಪೊದಟ್ದು ಜೊ
ನ್ನದ ಶಶಿಯಂತೆ ನೇಮಿ ಬಳೆಯುತ್ತಮನಿಂದಿತನಿರ್ದನಚ್ಯುತಂ ೧೨೧

ಗದ್ಯ॥ ಇದರ್ಹತ್ಸವಜ್ಞ ಪಾದಪದ್ಮವಿರಾಜಿತೋತ್ತಮಾಂಗ ಶ್ರೀ ಬಂಧುವರ್ಮ ನಿರ್ಮಿತಮಪ್ಪ ಹರಿವಂಶಾಭ್ಯುದಯದೊಳ್ ನೇಮಿಭಟ್ಟಾರಕಾಭ್ಯುದಯ ವರ್ಣನಂ

**ನವಮಾಶ್ವಾಸಂ**

1 ನೆ ಭೂಯಮನೆ ಭೂರಿ 2 ಮ 3 ರ

# ದಶಮಾಶ್ವಾಸಂ

ಕಂ॥ ಶ್ರೀಮದನಾಮಲ ತಾಡಿತ
ಭೂಮೀಶ ಜಗತ್ಸ್ವಾಮಿಯೆನಿಪ ದ್ವಾರಾವತಿ
ನಾಮಾ ಪುರವರದೊಳ್ ನಮಿ
ತಾಮರ ವಿರಚಿತದೊಳಿಂತು ಬಳೆಸನ್ನಿಪರಂ ೧

ವ॥ ಕಥಾಂತರಮಾವುದೆಂದೊಡಾದಿ ಬ್ರಹ್ಮಯುಗ ಕರ್ತಾರಂ ವೃಷಭಜಿನೇಂದ್ರಂ
ಮೊದಲೊಳ್ ಕ್ಷತ್ರಿಯ ವಂಶಂಗಳಂ ಮಾಡ್ವಂದು ಸೋಮಪ್ರಭನೆಂಬೊಂಗೆ ಕುರುವಂಶಮಂ
ಮಾಡಿದೊಡೆ ಆತಂ ಪಲಕಾಲಮರಸುಗೆಯ್ದು ಪೋದಿಂ ಬೞಿಯುಮಾ ವಂಶದೊಳ್
ಹಸ್ತಿಯೆಂಬೊನರಸನಾದೊನಾಗಿ ಹಸ್ತಿನಪುರಮೆಂಬ ಪೊೞಲಂ ಮಾಡಿ ರಾಜ್ಯಂಗೆಯ್ದನಂತೆ
ವಂಶಮಾ ಸಂತತಿಯೊಳ್ ಪಲರುಮರಸುಗಳ್ ಸಂದೊಡಾ ಕ್ರಮದೊಳ್ ಶಾಂತನು
ವೆಂಬೊಂ ಪುಟ್ಟಿದನಾತಂಗಂ ಗಂಗೆಯೆಂಬರಸಿಗಂ ಗಾಂಗೇಯನೆಂಬ ಮಗಂ ಪುಟ್ಟಿ ವಿದ್ಯಾ
ವಿದನುಂ ಪ್ರತಾಪಿಯುಮಾಗಿ ನೆಗೞೆ ಶಾಂತನುವೊರ್ಮೆ ವನಕ್ರೀಡಾನಿಮಿತ್ತಂ ತೊೞಲು
ತ್ತುಂ ಬಂದು ತಾಪಸಾಶ್ರಮದೊಳ್ ವಿಶ್ರಮಿಸಿರ್ದಲ್ಲಿ ವಸುಧೆಯೆಂಬ ರಾಜಋಷಿಯುರ
ಮಗಳ್ ಸತ್ಯವತಿಯೆಂಬಳಂ ಕಂಡು ಕಣ್ಣೇೞಂಗೊಂಡವರಯ್ಯನಪ್ಪ ತಾಪಸನಂ ಕೂಸು
ವೇಡಿದೊಡೆ ಕೊಳ್ಳ ಗೊರವಂಗಲ್ಲದೆ ಕುಡೆನೆಂದೊಡೆ ಬೆಚ್ಚನೆ ಸುಯ್ದು ತನ್ನ ಪೊೞಲ್ಗೆ
ವಂದು ವಿರಹಾವಸ್ಥೆಯೊಳಿರ್ದುದಂ ಕೇಳ್ದಿಮ್ಮಯ್ಯನ ವಿರಹಪರಿಶ್ರಮಮಂ ಕಳೆವೆನೆಂದಾ
ತಾಪಸನಲ್ಲಿಗೆ ವಂದು ನಿಮ್ಮ ಕೂಸನೆಮ್ಮಯ್ಯಂಗೀಯಿಮೆಂದೊಡಾ ತಾಪಸಾಧಿಪ
ನಿಂತೆಂದಂ

ಕಂ॥ ಶಾಂತಂಗೆ ನಿನ್ನ ದೊರೆಯುಂ
ಸಂತಾನಕ್ಕರ್ಹನಪ್ಪ ಮಗನೊಳಗಾಗಿ
ರ್ದಂತೆನ್ನ ಮಗಳನಾತಂ
ಗೆಂತೀವೆನೊ ಸಕಳ ಭೂತಳಭ್ರಾಜಿತೆಯಂ ೨

ವ॥ ಕನ್ನೆಯೊಳ್ ಕೊಟ್ಟೊಡಾಕೆಯ ಗರ್ಭದಿಂ ಬಂದ ಮಕ್ಕಳ್ ಕಡೆಯಾಳ್ಗ
ಳಾಗೆ ಬಾೞ್ವಂತಕ್ಕುಮದಱಿಂದೀಯೆನೆಂದೊಡಂತಪ್ಪೊಡಾನಿಂತೀ ಬ್ರಹ್ಮಚರ್ಯವ್ರತಮಂ

ಕ್ಕೆಕೊಂಡೆಂ ನಿಮ್ಮ ಮಗಳ್ಗೆ ಪುಟ್ಟಿದಾತಂ ರಾಜ್ಯಕ್ಕರ್ಹನೆನೆ ನೀನಿದನೇಕೆ ಪೂಣ್ದು ನುಡಿವೆ ಬೇಡೆನೆ ಗಾಂಗೇಯನಿಂತೆಂದಂ

ಕಂ॥ ನುಡಿದಾತನೆ ನಾನೆನ್ನೀ
ನುಡಿಯಂ ನೀವಿರ್ದು ಕೇಳ್ದಿರದಱಿಂದಿನ್ನೀ
ಪಡೆಮಾತೊ ಕೂಸನೊಸೆದಿ
ತ್ತೊಡ[ವಿಯುದಿರ್ದೊ][1]ಡಮೆನ್ನ ನುಡಿ ತಪ್ಪುಗುಮೇ ೩

ವ॥ ಎಂಬುದಂ ತಾಪಸಂ ಕೇಳ್ದಂಜಿವಲ್ಲಿಯೆ ಬೆಳಗಾದಂತೆ ಶಂಕೆವೋಗೆ ನೀನೀತ ನೆಂದ್ಕೆ ಕೂಸನಿತ್ತೆನೆಂದೊಡೆ ರಾಗದಿಂ ಶಾಂತಂಗೆ ಬಱಿಯಟ್ಟಿ ಬರಿಸಿ ಸತ್ಯವತಿಗಮಾತಂಗಂ ಮದುವೆಯಂ ಮಾಡಿ ಪೊಱಲ್ಗೊಡಗೊಂಡುಪೋದನಂತಾ ಸತ್ಯವತಿಗಂ ಶಾಂತನುಗಂ ಚಿತ್ರನು [ವಿಚಿತ್ರನು]ಮೆಂಬರಿರ್ವರ್ ಮಕ್ಕಳಾದರಲ್ಲಿ ಚಿತ್ರನೊಂದನುವರದೊಳ್ ಸತ್ತಂ ವಿಚಿತ್ರನುಂ ಗಾಂಗೇಯನುಂ ತಮ್ಮೊಳ್ ಕೂರ್ತು ನಡೆಯುತ್ತಿರ್ದು ಗಾಂಗೇಯ[ಂ] ತಮ್ಮಂಗೆ ಕಾಶೀದೇಶಾಧೀಶ್ವರನ ಮಗಳ್ದಿರನಂಬೆಯಂಬಿಕೆಯಂಬಾಲೆಯೆಂಬ ಮೂವರುಮಂ ಬೇಡಿಯಟ್ಟಿ ಪಡೆಯದೆ ಮೇಲೆರ್ದು ಕಾದಿ ಗೆಲ್ದು ಮೂವರುಮಂ ವಿಚಿತ್ರಂಗೆ ಮದುವೆಯಂ ಮಾಡಿಕೊಟ್ಟು ಬಂದಿರ್ದನಂತಾ ಭೀಷಣಾಜಿಯಂ ಗೆಲ್ದುದಱಿಂ ಭೀಷ್ಮರೆಂಬ ಪೆಸರೆಸೆಯೆ ತಮ್ಮಂಗೆ ರಾಜ್ಯಭರಮನೊಪ್ಪಿಸಿರ್ದನಿರೆ

ಕಂ॥ ನೇತ್ರಮನಃಪ್ರಿಯೆಯು ಮಹಾ
ರಾತ್ರಮತಿಶ್ರೀಯುಮಾಗೆ ಸಲೆ ದಿವಸಂಗಳ್
ರಾತ್ರಿಯೊಳೊಸೆದೊಪ್ಪಿರ್ದ ವಿ
ಚಿತ್ರಂಗೆ ವಿಚಿತ್ರಮಾಯ್ತು ರಾಜ್ಯವಿಳಾಸಂ ೪

ವ॥ ಆ ವಿಚಿತ್ರಂಗಮಂಬೆಯೆಂಬರಸಿಗಂ ಪುಟ್ಟುಂಗುರುಡನಾಗಿ ಧೃತರಾಷ್ಟ್ರನೆಂಬ ಮಗಂ ಪುಟ್ಟಿದನಂಬಿಕೆಗೆ ಪಾಂಡುವೆಂಬ ಮಗನಾದನಂಬಾಲೆಗೆ ವಿದುರನೆಂಬೊಂ ಪುಟ್ಟಿದ ನಿಂತು ಮೂವರ್ ಮಕ್ಕಳುಮತ್ಯಂತ ಸುಖೋದಯದಿಂ ಬಳೆದು ಯವ್ವನಪ್ರಾಪ್ತರಾಗಿರೆ ಧೃತರಾಷ್ಟ್ರಂಗೆ ತನ್ನ ಮಗಳಂ ಗಾಂಧಾರಿಯೆಂಬೊಳಂ ಕುರುಡನಾದೊಡಂ ಕ್ರಮದಾತಂಗೆ ಕೊಟ್ಟು ಬಱಿಯಮಂಧಕವೃಷ್ಣಿಯ ಮಗಳ್ದಿರಪ್ಪ ಕೊಂತಿ ಮಾದ್ರಿಗಳಂ ಪಾಂಡುಗೆ ಬೇಡಿ ಯಟ್ಟಿದೊಡಮುಪರಯ್ಯನೆನ್ನ ಮಕ್ಕಳಂ ಪಾಂಡುರೋಗನುಳ್ಳಾತಂಗೆ ಕುಡೆನೆಂದಟ್ಟಿದೊಡೆ ಪಾಂಡುಕುಮಾರಂ

1 ವಿಯದೊ

ಕಂ|| ಕೊಂತಿಯ ಚೆಲ್ವಂ ಕೇಳ್ದು
ದ್ಭ್ರಾಂತಿಸಿ ಕಿವಿವೇಟದಬಲೆಯೊಳಿರುಳುಂ ಪಗಲುಂ
ಚಿಂತಿಸಿ ಸೈರಿಸದಾಕೆಯೊ
ಳೆಂತುಂ ಕೂಡಮೊಡೆ ಬಾೞೆನೆಂಬುದ ಬಗೆಯಿಂ ೫

ವ|| ಸಹಾಯರನೊಡಗೊಂಡು ಪೆಱರಾರುಮಱಿಯದಂತು ಪೋಗಿ ಸೂರ್ಯಪುರಮನೆಯ್ದಿ ನಂದನವನದೊಳ್ ವಿಶ್ರಮಿಸಿರ್ಪಿನಮಾ ಬನಕ್ಕೆ ಕೊಂತಿ ವನಕ್ರೀಡೆಗೆ ಸಖಿಯರೊಡನೆ ಬಂದಿರ್ದು ಪುಳಿನಸ್ಥಳದೊಳಿಯ್ದೆವಂದು ಕುಮಾರನಂ ಕಂಡು ಮನಂಗೊಂಡು ನೋಡುತ್ತಿರೆ ಕನ್ನೆಯಂ ತೊಟ್ಟನೆ ಕಂಡು ನಡೆನೋಡಿ

ಚಂ|| ತೊಡರ್ದಿರೆ ದಿಟ್ಟಿ ಚೆಲ್ವಿನೆಡೆಯೊಳ್ ಕಡುಚೆಲ್ವಿನೊಳಾದ ಮೆಚ್ಚು ಮೆ
ಚ್ಚೊಡರಿಸಿ ನೋವನಾದ ಕಡುನೋವಿನೊಳಾದುದು ನಾಣಕೇಡು ನಾ
ಣ್ಗೆಡೆ ಮದಪೆತ್ತನೆಂದಳಿಸಿ ಬಂದುದು ಬಂದಳಿಪಿಂದಮರ್ಕರೋ
ಗಡಿಸದೆ ಕೂಡಿರಲ್ ಪಡೆವುದಾಯ್ತುವರಿರ್ವರ ಚಿತ್ತವೃತ್ತಿಯೊಳ್ ೬

ವ|| ವನದೊಳಗೆ ಪೂವಿನ ಪಸೆಯಂ ಪಾಸಿ ಕುಳ್ಳಿರಿಸಿ ಗಾಂಧರ್ವವಿವಾಹಮಂ ಮಾಡಿವಪ್ಪೆನೆಂದುಮೊಡಂಬಡಿಸಿ ಕೈನೀರೆಱೆದು ಕೂಡಿ ಗೆಂಟಾಗಿರ್ದಾಗಳ್ ನೆರೆವನ್ಯೋನ್ಯಾಸಕ್ತರಾಗಿ ನಾಡೆಯುಂ ಪೊತ್ತಿರೆ ಸಖಿಯರ್ ಸಾರೆವಂದು ನೀವೆಂತುಂ ಕೂಡಿವರಿರಿನ್ನೆಂತುಂ ಕೂಡದಿ[ರ][1]ದು ತಲ್ಲಳಿಸದೆ ಬನ್ನಿಮೆಂದುಮವರನಗಲ್ಚಿ ಪಾಂಡುಕುಮಾರನನೊಡಗೊಂಡು ಸಖಿಯರ್ ಹಸ್ತಿನಪುರಕ್ಕೆ ಪೋದರಿತ್ತ ಕೊಂತಿಯುಮಂತೆ ಬನದಿಂ ಪೊಱಮಟ್ಟು ಬಂದೆಂದಿನಂತೆ ತನ್ನ ಕನ್ಯಾಮಾಡದೊಳಿರ್ದು ಕೆಲವು ದಿವಸದಿಂ ಗರ್ಭಚಿಹ್ನಂಗಳಾಗೆ ಸಖಿಯರ್ಕಳಱಿದು ಪೆಱರಾರುಮಱಿಯದಂತುಂ ಗುಪ್ತದೊಳಿರಿಸಿ ನವಮಾಸಂ ನೆಱೆದು ಗಂಡುಗೂಸಂ ಪೆತ್ತಾಗಳೆ ಮುನ್ನಮಱಿದು ಸಮೆದಿರ್ದ ಮಂದಸಿನೊಳ್ ಕೂಸನಿಟ್ಟು ರತ್ನಂಗಳಂ ಪೊಯ್ದುಮಂ ಕೊಂಡೀ ಕೂಸಂ ನಡಪುಗೆಂದಕ್ಕರಂಗಳಂ ಬರೆದು ನಿಚ್ಛಿದ್ರಮಾಗೆ ಮುಚ್ಚಿ ಜಗುನೆಯೆಂಬ ತೊಱೆಯೊಳ್ ಬಿಟ್ಟು ಬಂದೊಡಾ ತೊಱೆಯೊಳ್ ಮಂದಸು ಪೋಗಿ ಚಂಪೆಯೆಂಬ ಪೊೞಲ ಸಾರೆಯಾದಾಗಳಂಬಿಗನದಂ ಕಂಡು ಕೊಂಡು ಪೋಗಿ ತೆಱೆದು ನೋೞ್ಪಾಗಳ್

ಕಂ|| ಕಿವಿ ಶಬ್ದಂಗಿಡುವಿನಮಿ
ಭುವನಂ ಪೊಗೞ್ವಂತು ನೆಗೞ್ವನೆಂಬುದಱಿಂದಂ
ದ[2][ವನಂದ][2]ನುಕರಿಪಂತಿರೆ
ಕಿವಿಯಿರಡುಮನೆರಡು ಕೆಯ್ಯೊಳಂ ಪಿಡಿದಿರ್ದಂ ೭

1 ರ 2 ಮನ

ವ|| ಅಂತಿರ್ದ ಬಾಳಕನಂ ಕಂಡು ಕರ್ಣಧಾರನಾಗಿರ್ದನದಱಿಂ ಕರ್ಣನೆಂಬ ಪೆಸರಕ್ಕೆಂದು ಪೆಸರಿಟ್ಟೆತ್ತಿಕೊಂಡು ಪೋಗಿ ನಡಪುತ್ತಿರ್ದಾ ಪೊೞಲನಾಳ್ವ ಸೂರ್ಯನೆಂಬರಸನಾ ಕೂಸಿನ ಬಂದಂದಮಂ ಕೇಳ್ದು ತನಿಸಿನೋಡಿ ಕುಲಜನೆಂದಱಿದು ಮಕ್ಕಳಿಲ್ಲದಿರ್ದ ತನ್ನ ರಾಧೆಯೆಂಬರಸಿಗೆ ಕೈಕೊಟ್ಟು ನಡಪಿ ಸೂರ್ಯಪುತ್ರನಾದೊನಾಗೆ ರಾಧೆಯೆಂಬರಸಿಗಂ ಸೂರ್ಯಂಗಂ ಬೞಿಯಂ ಕರ್ಣನೆಂಬೊಂ ಮಗನಾದನಂತು ಕರ್ಣನಲ್ಲಿ ಬಳೆಯುತ್ತಿರ್ದನತ್ತ ಕೊಂತಿಯ ಗಾಂಧರ್ವವಿವಾಹಮನುನರಸ್ಯಂ ಕೇಳ್ದಿಂ ಪೆಱದಂ ಬಗೆಯಲಾಗೆಂದು ಪಾಂಡುಕುಮಾರಂ[1][ಗಮೋಲೆ][1]ಮನಟ್ಟಿದೊಡಾತನಱಿದುಮನಾಕೆಯ ತಂಗೆಯುಮನ ನೀವುದೆಂದೊಡಂತೆಗೆಯ್ವೆನೆಂದಟ್ಟಿ ಬರಿಸಿ ಕೊಂತಿಯುಮಂ ಮದ್ರಿಯುಮಂ ವಿವಾಹ ವಿಭೂತಿಯಿಂ ಕೊಟ್ಟೊಡೆ ಕೊಂಡು ಕೆಲವು ದಿವಸದಿಂ ಮಗುೞ್ದು ಬಂದು ಪೊೞಲೊಳ್ ಸುಖಮಿರೆ ಶಾಂತನು ತಾಂ ಕಾರಣಮಾಗಿ ಬ್ರಹ್ಮಚರ್ಯವ್ರತಮಂ ಕೊಂಡು ಸಲಿಸುತ್ತಿರ್ದ ಮಹಾಧೈರ್ಯಮಂ ಕಂಡು ಬಗೆದು ಮಗನ ಧೈರ್ಯಮಿಂತೆನ್ನಱಿಸಿಂಗೆಂದುಂ ಸಂಸಾರ ವಿರಕ್ತನಾಗಿ ತಪಸ್ಥನಾದಿಂ ಬೞಿಯಂ ವಿಚಿತ್ರನುಂ ಗಾಂಗೇಯಂ ಜ್ಯೇಷ್ಠನುಂ ಸಮರ್ಥನುಮಾಗಿಯುನ್ನತನಾಗೆ ರಾಜ್ಯಮನೊಪ್ಪಿಸಿದುಪಕಾರಕ್ಕಂ ಸನತಿಯ ಮಗನಾಗಿಯುಂ ಸ್ತ್ರೀ ಸಂಪರ್ಕವಿದೂರನಾಗಿ ಧನಮಂ ಕಳೆವುದಕ್ಕಂ ಕೊಕ್ಕರಿಸಿ ನಿರ್ವೇಗದಿನಣ್ಣನಲ್ಲಿಗೆ ಮಂಪಾಂ ಸಂಸಾರವಿರಕ್ತನಾದಂ ಧೃತರಾಷ್ಟ್ರಂ ಪಿರಿಯ ಮಗನಾಗಿಯುಮಂಧಕಂ ರಾಜ್ಯಯೋಗ್ಯನಲ್ಲಂ ಪಾಂಡು ಕಿಱಿಯ ಮಗನಾಗಿಯುಂ ತೇಜಸ್ವಿಯುಂ ಸಮರ್ಥನಾಗಿರ್ಪಂ ಕ್ರಮಮನಾತಂಗೆ ಮಾಡುವನೆನೆ ನೀನಱಿವೆಯೆಂದ ಮಾತಿನೋಜೆಯೊಳಿರ್ವರುಂ ಪಟ್ಟಾಳಿಂದು ಮಾಡಿ ತಪಂಬಟ್ಟು ಪೋದನಂತು ಪಾಂಡು ತನ್ನ ಭಾಗಕ್ಕರಸನಾಗಿ ಪರಿವಾರಮುಮಂ ಪ್ರಜೆಯುಮಂ ತನ್ನೊಳ್ ಪತ್ತಿಸಿ ಪೆರ್ಚೆ ನೆಗೞುತ್ತಿರ್ದನಿರೆ ಕೊಂತಿಗೆ ಗರ್ಭಮಾಯ್ತು ಪಾಂಡುರಾಜಂ ಮದ್ರಿಗತ್ಯಂತ ಸ್ನೇಹಿತನಾಗಿರ್ದೊಂದು ದಿವಸಂ ಮದ್ರಿಯನೊಡಗೊಂಡು ವನಕ್ರೀಡೆಗೆ ಪೋದಲ್ಲಿ ರಾಗೋದ್ರೇಕದಿನಿರ್ದಂತೆ ನಡಪಾಡುತ್ತಮಾ ಬನದ ಪೊಱಗಂ ಪಾಂಡುರಾಜಂ ದಿಶಾವಳೋಕನಂಗೆಯ್ಯೆ ಹರಿಣಮಿಥುನಂಗಳ ಸಂಪರ್ಕಮಂ ಕಂಡು ಬಿಲ್ಲಂ ಕೊಂಡು ರಾಗದಿನವರ ಸಮೀಪಕ್ಕೆ ನಡೆದೊಂದಮುಗೆಯೊಳೆಸೆದುಮಂ ಸಾಯೆಚ್ಚೊಡೆ ಮದ್ರಿ ಪರಿತಂದು ಕಂಡು

ಕಂ|| ಪುಲ್ಲಂ ಕಚ್ಚಿದ ನರನಂ
ಕೊಲ್ಲಂ ಭಟನಿವರ ಬಾಯೊಳಂ ಬಸಿಱೊಳಗಂ
ಪುಲ್ಲೆ ಗಡ ಬಗೆವಡದಱಿಂ
ಪುಲ್ಲೆಗಳೆನಿಸಿರ್ದುವಕ್ಕಟವನೇಕೆಚ್ಚೈ ೮

1 ಗ...

ಉ|| ಕಾನನರಾಜಮಿಲ್ಲ ಧನಮೆಂಬುದು ಸೀರನಿತಿಲ್ಲ ದೋಷಮೆಂ
ಜಾಡ್ಯಮುಮಿಲ್ಲ ಬೆಚ್ಚುಪುದು ಮೆಯಱ್ ಮುಳಿಸಿಲ್ಲದ ಮೂಗುಜಾತಿಗಳ್
ಮೇಪ್ಪುದು ಪುಲ್ ಜಲಂ ಕುಡಿಪ್ಪುದಿರ್ಪೆಡೆಯುಂ ಪೞುಸಂತುಮಿಷ್ಟಸಂ
ಸೇವನೆಯಲ್ಲಿ ಮೆಯ್ಕೆಱಯದಿರ್ಪವನೇಂ ಗಳ ಕೊಲ್ವುದೊಳ್ಳಿತೇ ೯

ವ|| ಎಂಬುದಂ ಕೇಳುತ್ತೆ ಪಾಪಚಿತ್ತಂ ಪೋಗೆ ವೈರಾಗ್ಯಭಾವನಾಗಿ ಬಿಲ್ಲು ಮಂಬುಮನೀಡಾಡಿ ಪೊಲ್ಲದಾಯ್ತೆಂದು ಚಿಂತಿಸಿ ಮಾಬನಮಂ ಪೊಕ್ಕಲ್ಲಿ ಸುವ್ರತಸ್ವಾಮಿ ಗಳೆಂಬಾಚಾರ್ಯರ್ ಸಮುದಾಯಂಬೆರಸು ಬಂದಿರ್ದರೆಂದು ವನಪಾಲಕಂ ಬಿನ್ನಪಂಗೆಯ್ಯೆ ರಾಗದಿನಲ್ಲಿ ನಡೆದು ಋಷಿಸಮೂಹಮಂ ಬಲಗೊಂಡು ಬಂದು ಗುರುಪರಿವಿಡಿಯಿಂ ಬಂದಿಸಿ ಭಟಾರಾ ಪಾಪಮೆಂಬುದೆಂತುಟದಱ ಫಲಮೆಂತುಮೆನೆ ಧರ್ಮಮೆಂಬುದೇನದಱ ಫಲಮೆಂತುಮೆನೆ ಭಟಾರರೆಂದರ್ ಕೊಲೆ ಪುಸಿ ಕಳವು ಪರದಾರಂ ಪರಿಗ್ರಹಮೆಂಬಯ್ದಱೊ ಳಮರ್ಥಿವಟ್ಟು ಮೆಯ್ವಟ್ಟು ನೆಗಟ್ದರನೆಂತುಂ ಆನೆ ತನ್ನ ಮೆಯ್ಯೊಳ್ ದೂಳಿಯನೊಟ್ಟಿ ಕೊಂಡಾಡೆ ಮಲಂ ಪತ್ತುಗುಂ ಮಿಳಿಸಂ ತಾನೆ ಕೊಟ್ಟು ಕಟ್ಟುವಡುಗುಮಂತೆ ಪಾಪ ಮಳಂ ಪತ್ತಿ ಬಂಧಸ್ಥನಕ್ಕುಮಂತೆ ಪಾಪಬಂಧದಿಂ ಚತುರ್ಗತಿಗಳೊಳಲ್ಲಿ ಪುಟ್ಟಿದೊಡಲ್ಲಿ ಯಲ್ಲಿಯೆ ದುಃಖಮನುಣ್ಬರದೆಂತೆನೆ

ಮಂದಾನಿಲ ರಗಳೆ ||

ಪಿರಿದಾದಘವಶದೊಳ್
ನರಕಕ್ಕಿಳಿವರ್ ದುಸ್ಥಿತಿಯೊಳ್ (?)
ಇದುವಿದಱ ಫಲಂ ನಿಮಗೆಂದಾಗಳ್
ಪಡೆದೊರ್ಬರನೊರ್ಬರ್ ವಂದಾಗಳ್
ಕೊಱಕೊಱವೊಡನೊಡನೊಟ್ಟುತ್ತಿರೆಯುಂ
ಕಿಱುಕಿಱುವರಿದೀಡಾಡುತ್ತಿರೆಯುಂ
ಅರಿದೆಡೆಯೊಳ್ ಮೊಣಸಂ ತಂದಿಡೆಯುಂ
ನೆರಗಿಲ್ಲದೆ ಮುಮ್ಮುರಿಯೊಳು[1] [ಮಿ][1]ಡೆಯುಂ
ಕರಗಸದೊಳ್ ಬಿಡದರಿಯುತ್ತಿರೆಯುಂ
ಪಿರಿಯಸುವೆಯೊಳಿರದರೆಯುತ್ತಿರೆಯುಂ
ಪಿಡಿಪಿಡಿದಡ್ಡಂಗಾಸುತ್ತಿರೆಯುಂ
ಕಡಿಕಡಿದೆತ್ತಂ ಸೂಸುತ್ತಿರೆಯುಂ

1 ನೆರೆದಿ

ಅಡಿಯಿಂದಂ ತಿದಿಯುಗಿಯುತ್ತಿರೆಯುಂ
ನಡೆಯಿಱಿದೆರ್ದೆಯಂ ಬಗಿಯುತ್ತಿರೆಯುಂ

ಕಡುಗಾಸಿದ ರೂಪಂ ಪತ್ತಿಸೆಯುಂ
ಕಡುಪಿಂ ಗುಗ್ಗುಳನಂ ಪೊತ್ತಿಸೆಯುಂ

ಶ್ರಮಮಾಗಿರೆ ಗಿರಿಗಳನಡರಿಸೆಯುಂ
ಹಿಮದೆಡೆಯೊಳ್ ಬಿಬ್ಬರ ಬಿರಿಯಿಸೆಯುಂ

ಅಸಿಪತ್ರದ ಮರಗಳನೇಱಿಸಿಯುಂ
ದಸಿಯೊಳ್ ನೆಱೆದೆಡೆಗಳನೂಱಿಸೆಯುಂ

ನಮೆದೀ ತೆಱದಿಂದಾ ದುರ್ಗತಿಯೊಳ್
ಕ್ರಮದಿಂ ಪುಗುತಿರೆ ತಿರ್ಯಗ್ಗತಿಯೊಳ್

ಇಱಿಮುಱಿದಿಕ್ಕೆತ್ತೇ ಕಟ್ಟಿಸೆಯುಂ
ಬರೆಯಿ[1][ದ್ದಿ][1]ಸೆಯುಮುಳಿಯೊಳ್ ಜಿಟ್ಟಿಸೆಯುಂ

ಎಡೆವುಡುಗದೆ ಸಲೆ ಪೇಱುತ್ತಿರೆಯುಂ
ನಿಡುವಯಣದೊಳಿರದೇಱುತ್ತಿರೆಯುಂ

ಒಡಗೂಡಲು ಸಾರ್ತರೆ ಮುಳಿದೆಸೆಯುಂ
ನಡೆನೋಡುತಮಿರ್ಪವನುೞಿದೆಸೆಯುಂ

ಅಱುನೀರ್ಗಱುತೆಯ್ತರೆ ಪಾಯ್ದಿಸೆಯುಂ
ಮಱಿಗಳ್ ಬಸಿಱಿಂದುಗೆ ಸಾರ್ದೆಸೆಯುಂ

ಚಲದಟ್ಟುತ ಕರ್ಕಡೆಯಿಂದಿಡೆಯುಂ
ಬಲೆ ಪಿಡಿದೆಂದುಂ ಸೆಱೆಯೊಳೆಯಿಡೆಯುಂ

ಅನಿ[2][ಲಾ][2]ಗ್ನಿ ಜಲಂಗಳ ಪುಟ್ಟಿಸೆಯುಂ
ತಿನಲೊಂದೊಂದಂ ಪಱಿ[3][ಪಱಿದಿ][3]ಡೆಯುಂ

ತಿರಿಕಾನ್ವಯದೊಳ್ ನಮೆದಿಂ ಬೞಿಯುಂ
ನರರಾದೊಡಮಘತತಿ ಬರೆ ಬಳೆಯುಂ

ಎಳೆಯೆಳೆಕೊಳೆ ನಾರ್ಪವನಿವನೆನೆಯುಂ
ಅಳೆ ಅ[4][ಳೆ][4] ನಾಣ್ಗೆಟ್ಟವನಿವನೆನೆಯುಂ

ಕಡು ಕಿಸುಗುಳನಂ ಕಳೆಕಳೆ[5][ಯೆ][5]ನೆಯುಂ
ಬಿಡದೆಂಜ[6][ಲ ಪಾ][6]ಯ್ದವನಿವನೆನೆಯುಂ

---

1 ದೆ 2 ಶಾ 3 ಪಿ 4 ಳೆಬಡಿ 5 ಯಿಮದೆ 6 ಲ...

ಪೞಿ ಪೊರ್ದಿರೆ ಬಾೞ್ವವನಿವನೆನೆಯುಂ
ಮೂಗಿಲ್ಲದೆ ಬಾೞ್ವನಿವನೆನೆಯುಂ

ಅಱಿದಿರ್ದೞಿವೆಯ್ದುವನಾಗಿರೆಯುಂ
ಪೆಱವುಂ ಜಾತ್ಯಂಧನುಮಾಗಿರೆಯುಂ

ಪಲವುಂ ಕಾಲಂ ಸೆಱೆವಿಡಿದಿರೆಯುಂ
ಕುಲಮುಂ ನಾಣುಂ ತನುಗೞಿದಿರೆಯುಂ

ಪರಿಭವದೊಳುಮೆರ್ದೆಗೊಳೆಯುತ್ತಿರೆ[ಯುಂ]
ಕರಮೊ[1][ತ್ರಿ][1] ಕುತ್ತಮುದರ್ವಿಸುತಿರೆಯುಂ

ಅಳಿವೆಯ್ತ್ತರೆ ಕೋಳ್ಗುದಿಗೊಳುತಿರೆಯುಂ
ಸುಳಿಸುಳಿದಳಿಪಿಂ ಕಡುಗೊಳುತಿರೆಯುಂ

ನರಲೋಕಮುಮಾಯು ಫಲಂ (?)
ಸುರಲೋಕದೊಳಂ ಬರೆ ಪಾಪಫಲಂ
ಸುರರೊಳ್ ಮಿಗಿಲಪ್ಪವರ್ಗೆಱಗಿರೆಯುಂ

ಬಸಮಲ್ಲದ ಕಿಲ್ಬಿಷರಾಗಿರೆಯುಂ
ಬೆಸಕೆಯ್ಯಲೆ ಕಿಂಕರಮಾಗಿರೆಯುಂ

ಸಾವೆಯ್ತ್ತರೆವರಲಿರ್ದಾಯೆಡೆಯೊಳ್
ಓವೋವಿಂ ಪುಟ್ಟುವೆನಾವೆಡೆಯೊಳ್
ಕೊಳೆವಸಿಱೆಯೊಳಗಿರ್ಪಂತಾದಪುದೋ

ಅಸುಖಂ ಮಿಗೆ ಪುಟ್ಟುವುದಾದಪುದೋ
ಒಸೆದೊರ್ವೊಲೆಯುಂಬಂತಾದಪುದೋ

ಉರುಗುರದೊಳ್ ಪೊಱೆದಿರವಾದಪುದೋ
ಪರವಸದೊಳ್ ಬಾೞ್ವುದುಮಾದಪುದೋ

ಎನುತಂ ನವಚ್ಚಿತ್ತ ಕ್ಷಿತಿಯೊಳ್ (?)
ಘನ ದುರಿತದಿನಿಂತೀ ಚತುರ್ಗತಿಯೊಳ್

ಪಲವುಂ ಭವದೊಳ್ ದುಃಖಜ್ವಳನೆಯ
ಸುಡೆಬೆಂದುಂ ನೊಂದುಂ ತಿರಿತಂದುಂ

ಪಲವುಂ ಭವಮಂ ಪಾಪದ ಫಲದಿಂ
ನವೆಯುತಮಿರ್ಪೀ ಸಂಶ್ರುತಿಯೊಳ್ ೧೦

1 ತ್ರಿದ

ಬಿಸುಟುಬಂದೊಡೆ ಕೂಸಂ ಸುಟ್ಟುರಿಗಾಳಿ ಬಳಸಿಯುಂ ಸುತ್ತಿಕೊಂಡು ನೇಸಱ್ ಮೂಡುವಿನಂ ಭೂತ ಪಿಶಾಚಂಗಳಂ ಸಾರಲೀಯದೆ ಕಾದೊಡೆ ಬಯ್ಗಿರುಳ್ ಪೋಗಿ ನೋಡಿ ಕೂಸಿನಿರವಂ ಕಂಡು ಕೊಂಡುಬಂದು ವಾಯುರಕ್ಷಿತನೀತಂ ನಮ್ಮ ಮಗನಲ್ಲಂ ವಾಯುಪುತ್ರನೆಂದು ಕೈಕೊಂಡು ಭೀಮನೆಂದು ಪೆಸರನಿಟ್ಟು ನಡಪುತ್ತಿರ್ದು ಬೞಿಯಂ ಮತ್ತಂ ಗರ್ಭಮಾಗಿ ,ಪೊತ್ತು ನೆಱೆದಿಂದ್ರೋತ್ಸವದ ದಿವಸದಂದು ಪುಟ್ಟಿದ ಮಗನೀತ ನಿಂದ್ರನ ಮಗನೆಂದು ಮಾಡಿಯರ್ಜುನನೆಂದು ಪೆಸರನಿಟ್ಟು ಕೊಂಡಾಡೆ ಬಳೆವಂದು ಧರ್ಮಪುತ್ರ ಭೀಮಾರ್ಜುನರೆಂಬ ಮೂವರ್ ಮಕ್ಕಳಾದಿಂಬೞಿಯಂ ಮದ್ರಿಗೆ ನಕುಳ ಸಹದೇವರೆಂಬ ಮಕ್ಕಳ್ ಪುಟ್ಟಿದರಂತು

ಕಂ॥ ಪರಮೇಷ್ಠಿಗಳೈವರಿನಂ
ತರುಹನ್ಮತಮೆಸಗುಮಂತೆ ಗುಣಯುತರಪ್ಪೈ
ವರುಮಾತ್ಮಜರಿಂ[ದಂ] ಪಾಂ
ಡುರಾಜಸಾಮ್ರಾಜ್ಯಮೆಸೆದುದವನೀತಳದೊಳ್ ೧೫

ವ॥ ಅಂತು ಪಾಂಡುರಾಜನಿಂ ಪಿರಿಯ ಧೃತರಾಷ್ಟ್ರನೆಂಬ ಕುರುಡರಸಂಗೆ ದುರ್ಯೋಧನನುಂ ದುಶ್ಶಾಸನನುಮಾದಿಯಾಗಿ ನೂರ್ವರ್ ಮಗಂದಿರುಂ ದುಶ್ಶಲೆಯೆಂಬ ಮಗ[1][ಳುಮಾ][1]ಗಿ ಬಳೆಯುತ್ತಿರ್ದರಂತು ತಮ್ಮತಿರ್ವರ ಮಕ್ಕಳೆಲ್ಲಮುಪಾಧ್ಯಾಯಾಂತ್ಯದೊಳಕ್ಷರಾದ್ಯನೇಕ ಕಳಾಪರಿಣತರಾಗಿ ನವಯೌವನ ವಯಸ್ಸರಾಗಿರ್ಪನ್ನೆಗ[ಂ] ಮುಂ ಪೊ[2][ೞಲ್ಗೆ][2] ಮುನ್ನಿನ ಸುವ್ರತಸ್ವಾಮಿಗಳೆಂಬಾಚಾರ್ಯರ್ ಬಂದೊಡವರಂ ಬಂದಿಸಲ್ ಪಾಂಡುರಾಜಂ ಪೋಗಿ ದೇವರಂ ಸ್ತುತಿಸಹಿತಂ ಕಂಡು ಗುರುಪರಿವಿಡಿಯಿಂ ಬಂದಿಸಿ ಭಟ್ಟಾರರ ಮುಂದೆ ಕುಳ್ಳಿರ್ದು ಧರ್ಮಶ್ರವಣಮುಂ ಕೇಳ್ದು ನಿರ್ವೇಗಮಾಗಿ ದೀಕ್ಷೆಯುಂ ದಯೆಗೆಯ್ಯಿಮೆನೆ ಭಟ್ಟಾರರ್ ಬಗೆದು ನೋಡಿ ನಿನಗಿಂ ಪದಿಮೂಱು ದಿವಸಮಾಯುಷ್ಯಮೊಳ್ಳಿತ್ತಂ ಬಗೆಪೆಯೆನೆಯದಕ್ಕೆ ತಕ್ಕುದಂ ಬಲ್ಲೆನೆಂದು ಭಟ್ಟಾರರಂ ಬಂದಿಸಿ ಮನೆಗೆವಂದು ಗಾಂಗೇಯಾದಿ ಬಂಧುಗಳುಮಂ ತಮ್ಮಣ್ಣನ ಮಕ್ಕಳಂ ಮಿತ್ರಾಮಾತ್ಯಭೃತ್ಯರ್ಕಳುಮಂ ಪರಿವಾರಜನಂಗಳುಮಂ ಕೇಳಿಮೆಂದಿಂತೆಂದಂ

ಮ॥ ಅಱಿವುಂಟಾಗಿಯುಮಲ್ಪಮಪ್ಪ ಸುಖವಿಂಗಾಸಕ್ತನಾಗಿರ್ದು ಮೆ
ಯ್ಮಱೆದಿರ್ದೆಂ ಮಱೆದಿರ್ದೊಡಕ್ಕಟವನಿನ್ನೆಂತಿರ್ದೊಡೇನೆಂದು ತಾಂ
ಮಱೆದುಗ್ರಾಂತಕನಿಪ್ಪ ನಲ್ಲನವಱಿಂ ಸಂನ್ಯಾಸಂಗೆಯ್ಯಲಾಂ
ತಱಿಸಂದೆಂ ಪೆಱದೇನುಮೆನ್ನದಿರಿಮಿನ್ನಾಂ ಮಾಣೆನೆಂದಂ ನೃಪಂ ೧೬

1 ಳಾ 2 ೞಲೆ

ವ॥ ಎನೆ ಸಮಸಮಿರ್ದ ನೆರವಿ ಬಾಯುಂಬಿಟ್ಟು ಸಂಕಟಂಬಟ್ಟು ನಿಲೆ ಮಂತ್ರಿ ಮುಖ್ಯನೊರ್ವನಿಂತೆಂದಂ

ಕಂ॥ ಎಮ್ಮನಿಬರುಮಂ ರಕ್ಷಿಸು
ತಮ್ಮನುಜಾಧಿಪತಿಯಾಗಿ ರಾಜ್ಯೋದಯದಿಂ
ನಿಮ್ಮಯೆ ಸುಖದಿಂದಪ್ಪುದು
ಕೆಮ್ಮನಿದಂ ನುಡಿವುದಾವ ಜೇಸಱಿಕೆ ನೃಪತೀ ೧೭

ವ॥ ಎನೆ ಪಾಂಡುರಾಜಂ ಮತ್ತಮಿಂತೆಂದಂ

ಕಂ॥ ಎಂತುಂ ಮುಳಿದೆಯ್ತಂದು ಕೃ
ತಾಂತಂ ಕೊಲಲಿರ್ಪನದಱಿನಿಂತಿದಱಿಂ ಪೊ
ಕ್ಕಾಂತು ಶುಭಧ್ಯಾನದೆ ಮು
ನ್ನಂ ತಱಿಸಂದೆನಗೆ ಗೆಲ್ಲಮಂ ಮಾಡಿದಪೆಂ ೧೮

ವ॥ ಪುತ್ರಪೊಂದಂ ಕೇಳಿಂ ನೀವೆನ್ನಗಲ್ಕೆಗೆಂತುಮಾಱಿಪಪ್ಪೊಡಿಂತಿರ್ದ ನೆರವಿ ಯೆಲ್ಲಮತಿರಥರುಂ ಮಹಾರಥರುಮಪ್ಪಿರ್ ಮಹಾಸಾಮಂತರುಂ ವಿದ್ಯಾ[1][ವಂ][1]ತರು ಮಪ್ಪಿರ್ ಕಲಿದಿರಿಂ ನೀವಿಮಕ್ಕೆ ಬೆಕ್ಕಸಂಬಡಲುಂ ಸಂಕಟಂಬಡಲುಂ ಬೇಡೊಡಂಬಡುವು ದೆನ್ನ ಗೆಲ್ಲಕ್ಕೆ ಸಂತಸಂಬಡುವುದಾನಱಿಯದೆ ನೆಗಟ್ತ್ವನಲ್ಲೆಂ ಕೆಮ್ಮಗಿರಿಂ ಧರ್ಮಪುತ್ರ ನೀಂ ಕೇಳೆಂದಿಂತೆಂದಂ

ಚಂ॥ ಬಸನಮನುಂಟುಮಾಡದಿರು ಮಾನ್ಯರೊಳೊಪ್ಪೆ ವಿನೀತನಾಗು ಬೆ
ರ್ಚಿಸದಿರು ಬಂಧುವರ್ಗಮನಡಂಗಿಸು ಬೆರ್ಚಿದೊರಂ ಸುದಾನದಿಂ
ಪೆ[2][ಸರಿ][2]ಸು ಭೃತ್ಯರಂ ನಯದಿನಾ[3][ಳ್][3] ಪ್ರಜೆಯಂ ಬಱಯಿಂದ ಬಪ್ಪುದಂ
ಬಿಸುಡು ನಿರಂತರಂ ಸಲಿಸು ತಕ್ಕರ ಮಿಕ್ಕರ ಸಂವಿವಾದಮಂ ೧೯

ಕಂ॥ ನಿರ್ಮೂಳಂ ಮಾಡರಿಯಂ
ಝುಂಕಿಸದಿರು ತಕ್ಕರಾರುಮಂ ಕೇಳ್ ಹಿತಮಂ (?)
ಧರ್ಮಾರ್ಥಭೋಗಮೆಂಬಿವ
ಱೊರ್ಮೆಯು[4][ಮೇಂ][4] ಗೆಂಟುಮಾಡಿ ನೆಗಱಿಲ್ ಮಗನೇ ೨೦

ವ॥ ನಿಮ್ಮ ಸಿರಿಯುಮ್ಯ್ಯನ ಮನೆಯೆಂಬುದು ನಿಮಗರಮನೆಯಾಗಿರ್ದುವಾ ಕೂಸುಗಳ್ ನಿಮಗಗ್ಗಳದ ಸೋದರರೆಂದು ಬುದ್ಧಿಯಂ ಪೇೞ್ದು ರಾಜ್ಯಮನೊಪ್ಪಿಸಿ

1 ಮಂ 2 ಚಿ 3 ಗಳು 4 ವಿಾ

ಮಹಾದಾನಂಗೆಯ್ದು ಕೊಂತಿಮಹಾದೇವಿಯಲ್ಲಿಗೆ ಕೆಯ್ಗೆಯ್ದು ಬಂದು ನಿಮ್ಮೆನ್ನ ಸಣ್ಣನಿತೆ ಸಂನ್ಯಸನಂಗೆಯ್ದಪೆನೆಂಬೊಡಾನುಂ ನಿನ್ನಾದುದನಪ್ಪೆನೆಂಬೊಡಾಗದು ದಾಯಿಗರ್ ಪಲರೊಳರ್ ನಿನ್ನ ಮಕ್ಕಳನೊಳ್ಕಿತ್ತು ನಡಪಿ ರಾಜ್ಯಭರಮಂ ನಿತ್ತರಿಪುದು ಎನ್ನ ಪೇೞ್ದುದು ಗೆಯ್ಯೆಂಬೊಡಂಬಡಿಸಿ ಮದ್ರಿಯು ಮಾಡಕ್ಕೆ ವಂದು ನೋೞ್ಪನನ್ನೆಗಂ ಮದ್ರಿಯಾ ಪಡೆಮಾತಂ ಕೇಳುತ್ತೆ ಪಲ್ಲಂ ಸುಲಿದು ಬಂದು ಪಸದನಂಗೊಂಡು ತನ್ನ ಪರಿಜನಕ್ಕೆನ್ನ ಪರಮಸ್ವಾಮಿಯೊಡವೋದಪ್ಪೆನೆಂದು ಪರಿಚ್ಛೇದಮಂ ನುಡಿದು ದಾನಂಗೆಯ್ದು ಸಿವಿಗೆಯುಂ ತರಪೇೞ್ದಿರಮನರಸಂ ಕಂಡಿದೇನೆಂದೊಡೆ ನಿಮ್ಮೊಡವಂದಪ್ಪೆನೆಂಬೊಡಾಗದೆಂದಿಂತೆಂದಂ

ಕಂ॥ ಸತಿ ತಾಂ ಪುತ್ರಂ ಪಡೆದೊಡೆ
ಪತಿಯಿಂ ಬೞಿ ಪುತ್ರರ ಕೈಯಿಂದಂ ಶೀಲಾ
ನ್ವಿತೆಯುಂ ಗುಣಸಂಯುತೆಯುಂ
ನ್ನತಿಯುಂ ತಾನಾಗಿ ಬಾೞಲಪ್ಪುದು ಕಾಣಾ ೨೧

ವ॥ ಸಾವುದೊಳ್ಳಿತ್ತೆ ಮಕ್ಕಳಂ ಮನೆಯುಮಂ ಕಾವುದೊಳ್ಳಿತ್ತು ತನ್ನಲ್ಲಿ ಪೇೞಿಯುದೆಂತು ಬರ್ದೊಡೊಳ್ಳಿತಲ್ಲದೆ ಪೊಲ್ಲದಾಗದೆನೆ ಮದ್ರಿಯೆಂಗುಂ ತಪಸ್ವಿಯ ಗುಣಕ್ಕೆ ಗುರುವಿನ ಕಾಪಿಲ್ಲದಂ ಪೆಂಡತಿಯ ಗುಣಕ್ಕಂ ಭರ್ತಾರನ ಕಾಪಿಲ್ಲದಾಗಳ್ ನಿಲ್ಲದದಱಿಂ ತೊಱೆವುದೆ ಲೇಸಂತಪ್ಪುದನಾಗಲೀಯೆನೆನೆ ಪಾಂಡುರಾಜನೆಂಗುಂ

ಕಂ॥ ಪಶು ಮೃಗ ಪಕ್ಷಿಗಳೆಲ್ಲಿಯು
ಮಸದಕನೆನೆ ಪುತ್ರಮೋಹಮಪ್ಪುದು ನೀನುಂ
[1][ಪುಸಿಯದೆ][1] ಸುತರಂ ನಡಪದೆ
ಬಿಸುಡುವುದೇಂ ಪಾೞಿಯೊಳಗೆ ಪೇೞ್ ಮೃಗನಯನೇ ೨೨

ವ॥ ಎಂದ ಮಾತಿಂಗೆ ಮತ್ತಂ ಮದ್ರಿಯಿಂತೆಂಗುಂ

ಕಂ॥ ಬಸಿಱೊಳಗಿರ್ದಂದವ್ವೆಯ
ಪೊಸ ಜವ್ವನಮೊಳ್ಪನೞಿದು ಪುಟ್ಟಿದೊಡಿಂಬಂ
ಬಿಸುಡಿಸಿ ಬಳೆದೊಡೆ ಕೊಳ್ವರ್
ಕಸವರಮಂ ಮಕ್ಕಳಂತು ಪಗೆವರುಮೊಳರೇ ೨೩

---

1 ಮಾಸೆಯ

ಎಲ್ಲಿಂಬುಗಳಿಂ ಗಂಡರಿ
ನಲ್ಲದೆ ಬಟ್ಟಿಕಾಱನಂತೆಱಂ ಶುಭಕಾರ್ಯ
ಕ್ಕಲ್ಲದೆ ನುಡಿ ಸಲ್ಲದೆ ಸುಖ
ವಿಲ್ಲದೆ ನವೆದಳಿಸಿ ಬಾೞ್ಕೆನಿನ್ನೆ[ಂ] ನುಡಿನ್ನೈ ೨೪

ವ|| ಎಂದಿಂತಪಸನ ಮಾತಿಂಗೊಂದಂ [1][ಪ][1]ಡಿನುಡಿವುದಂ ಕೊಂತಿಮಹಾದೇವಿ ಕೇಳ್ದು ಪರಿತಂದು ತಂಗೆಗಿಂತೆಂದಳ್

ಕಂ|| ಆನುಮಿಂದಂ ಬಗೆದಿರ್ದೊಡೆ
ಭೂನಾಥಂ ಕೇಳ್ದು ಬಂದು ಬಾರಿಸೆ ಮಾಣ್ದಂ
ಮಾನಿನಿಗೆ ಪತಿಯ ಪೇೞ್ದುದೆ
ತಾನೊಳ್ಳಿತ್ತೆಂಬ ಪಾೞಿಯುಂ ಕೇಳ್ದಱಿಯಾ ೨೫

ವ|| ಎಂದೊಡಕ್ಕಂಗಿಂತೆಂಗುಂ

ಕಂ|| ಗತಿಯಿಲ್ಲದಲ್ಲಿಗಂ ನಿಜ
ಪತಿಯೊಡವೋಪುದೆ ಪತಿವ್ರತಾಗುಣಮದಱಿಂ
ಪತಿಯೊಡವೋಪುದುಮೊಪ್ಪುವ
ಗತಿನಡೆವುದುಮಿಲ್ಲಮಿಂತಿದಂ ಕಡೆಗಣಿಸೆಂ ೨೬

ಪಿರಿಯರಸಿಯರಸಿಯಾಗಿ
ರ್ದಿರಿಯರ್ ನಿನ್ನಾತ್ಮಜರ್ಕಳದಱಿಂದೆಂತುಂ
ಪರರಾಜ್ಯಕ್ರಮಮುಂ ನಿ
ತ್ತರಿಸದೆ ನಿನಗಾಗದಕ್ಕ ಪೆಱತಂ ಬಗೆಯಲ್ ೨೭

ವ|| ಎನೆ ಕೊಂತಿಮಹಾದೇವಿ ಮತ್ತಮಿಂತೆಂಗುಂ

ಕಂ|| ಪತಿ ಕಾಗುಮೆ ಪೆಂಡತಿಯಂ
ಸತಿ ತನ್ನಂ ತಾನೆ ಕಾಗುಮುತ್ತಮ ಜಾತಿ
ಸ್ಥಿತಿಯಿಂ ಗುಣಸಂತತಿಯಿಂ
ಗತಿಯುಂ ತಾಂ ಬಗೆದು ನೆಗೞ್ಕೆ ಪೞಿ ಪೊರ್ದಗುಮೇ ೨೮

ವ|| ಎಂದೊಡಂತೇಕೆಂಬುದು ತನ್ನ ಮನಂಗಾಪು ಲೋಕಂ ಮೆಯ್ಗಾಪು ಬೆಚ್ಚಿಸುವುದದಱಿಂ

1 ಬ

ಕಂ|| ಪತಿಯುಳ್ಳಿಸಮುದ್ಭುತ ದೇ
ಪತೆಯಂ ಸತಿ ಪೋಲ್ತು ಕರಮಗುವಾರ್ಗಿರ್ಕುಂ
ಪತಿಯ ಪರೋಕ್ಷದೊಳೊಪ್ಪುವ
ಸತಿ ತಾಂ ಚೌಪಟದ ಪಣ್ತು ಮರದಂತಿರ್ಕುಂ ೨೯

ವ|| ಇನ್ನು ಪಲವು ಮಾತಿನೊಳೇಂ ನಿನಗೆಂದುದುಮಿಂತೆಮ್ಮರಸಂಗೆಂದುದುಮಿಂತುಂ

ಕಂ|| ಮೆಯ್ಯೊಡೆಯಂ ಪೋದಿಂ ಬೞಿ
ಮೆಯ್ಯಿಂಬಂ ಪಡೆಯಲಾಗ ಕೆಮ್ಮನೆ ಬರ್ದಿ[ಂ]
ಮೆಯ್ಯುಮನೞಿವೆನೆ ತೊಱೆವೆಂ
ಕೆಯ್ಯೆಡೆ ನಿನಗೆನ್ನ ಮಕ್ಕಳಿರ್ವರುಮಕ್ಕಾ ೩೦

ವ|| ಎಂದ ಮಾತಂ ಕೇಳುತ್ತೆ ತಾನೞ್ಗುಂ ಬಾಯೆಂದರಸಂ ಮಗುೞ್ದು ಪೋಗಿ ಜಿನಮಹಾಮಹಿಮೆಯಂ ಪೊಱಮಡಿಸಿ ತಾನುಂ ಮದ್ರಿಯುಂ ಸಿವಿಗೆಯನೇಱಿ ತಳ್ತು ಪಿಡಿವ ಸೀಗುರಿಗಳುಂ ಬೀಸುವ ಚಾಮರಂಗಳುಂ ಪೊಗೞ್ದು ಬಪ್ಪವರುಂ ಜಿರಸತಿಶಯ ವಿಳಾಸದಿಂ ಜಿನಾಲಯಮುಮಂ ತ್ರಿಪ್ರದಕ್ಷಿಣಂಗೆಯ್ದೊಳಗಂ ಪೊಕ್ಕು ಸರ್ವಜ್ಞನಂ ಸ್ತುತಿ ಸಹಿತಂ ಪೂಜಿಸಿ ಗುರುಪರಿವಿಡಿಯಿಂ ಋಷಿಸಮುದಾಯಮುಮಂ ಬಂದಿಸಿ ಸುವ್ರತ ಭಟ್ಟಾರರ ಮುಂದೆ ಕುಳ್ಳಿರ್ದು ಕೆಯ್ಯಂ ಮುಗಿದು ಸಂನ್ಯಸನ ಪ್ರತ್ಯಾಖ್ಯಾನಮಂ ದಯೆಗೆಯ್ಯಿಮೆನೆ ಮುನ್ನಮೊಡಂಬಟ್ಟ ಮನೆವಾರ್ತೆಯಪ್ಪುದಱಿಂ ಲೋಚುಗೆಯ್ದಂಕಕಾಱಿಂಗೆ ಪಂಚ [1]ರಾಯಿತ[1]ದ ತೊಗಲನೇಱಿಸುವಂತೆ ಪಂಚಮಹಾವ್ರತಂಗಳನೇಱಿಸಿ ಬೞಿಯ ಮಾವಜ್ಜೀವಮಾಹಾರ ಶರೀರ ನಿವೃತ್ತಿಪೂರ್ವಕಂ ಸಂನ್ಯಸನ ಪ್ರತ್ಯಾಖ್ಯಾನಮಂ ಕೊಟ್ಟು ಸುವ್ರತಭಟ್ಟಾರರ್ ತಮ್ಮ ಋಷಿಸಮುದಾಯದೊಳಗಮಾಚಾರಾರಾಧನಾ ವ್ಯವಹಾರ ಪ್ರಕೃತಿ[2][ಧರ್ಮ][2] ಕಾಯೋತ್ಸರ್ಗ ಕಾಯೋಪಾಯ[ಮಂ] ವಿ[3][ಧಿಸಿ][3] ಬೞಿಕ ಪರಿಶ್ರಮಾಷ್ಟವಿಧ ನಿರ್ಯಾಪಕ ಗುಣದೊಳಂ ದಶವಿಧಸ್ಥಿತಿಕಲ್ಪದೊಳಂ ಷಡಾವಶ್ಯಕ ಕ್ರಿಯೆಯೊಳಂ ಕೂಡಿ ನಾಲ್ವತೆಣ್ಬರಾಚಾರ್ಯರನಾಯ್ದುಕೊಂಡು ಮುನ್ನಮೆ ಪಾಂಡು ರಾಜನ ಸಲ್ಲೇಖನಕಾಲದೊಳುಮಾಹಾರಮಂ ಪ್ರಯೋಗಿಸಿವೆಂದು ನಾಲ್ವರಂ ಸಮರ್ಪಿಸಿದರ್ ನಾಲ್ವರಂ ಪಾನಮಂ ನಿಯೋಗಿಸುವಂತು ನಿಯಮಮಂ ಮಾಡಿದರ್ ಮತ್ತೆ ನಾಲ್ವರಂ ಪ್ರಯೋಗಿಸುವನ್ನಪಾನಂಗಳಂ ರಕ್ಷಿಸುವಂತು ನಿಯೋಗಮಂ ಮಾಡಿದರ್ ಬೞಿಯಂ ಕ್ಷಪಕಂಗೆ ವೀರಸಂತಾರಮನೇಱಿದಿಂ ಬೞಿಯಂ ಜನಪದ ಗ್ರಾಮೋಪದಂಗಳ ನಾರಯ್ವುದಂ ನಾಲ್ವರ್ಗೆ ನಿಯೋಜಿಸಿದರ್ ಪೊಱಗಣ ಬನಕ್ಕೆ ನಾಲ್ಕುಂ ಕಡೆಗಳಂ ಪೇೞುತಿರ್ಪಂತು ನಾಲ್ವರಂ ಪೇೞ್ದಿರಂತು ಕಥೆವೇೞ್ವ ನಾಲ್ವರಾಚಾರಮಂ ಪರಸಮಯಿಗಳ್

1 [ಕಾಯಿಕ?] 2 ವರ್ 3 ವಸ್ತು

ಪೊಕ್ಕು ನುಡಿದು ಕಾಡುವರೆಂದು ನಾಲ್ವರ್ ವಾದಸ್ಥಾನಂಗಳಂ ಬಲ್ಲರಂ ಕಾಪು ವೇಳ್ದರ್ ನಾಲ್ವರಂ ಪೊಱಗಣ ಸಭೆಯ ಮಂಟಪದೊಳಿರ್ಪಂತು ಮಾಡಿದರ್ ಮತ್ತಂ ನಾಲ್ವರಂ ಕ್ಷಪಕಾವಾಸ ದ್ವಾರಪಾಳಕ[1][ರಂ ಮಾ][1]ಡಿದರ್ ನಾಲ್ವರಂ ಜಾವವಿರ್ಪಂತು ಮಾಡಿದರ್ ನಾಲ್ವರಂ ಕಾಯಮಲಶೋಧಕರಂ ಮಾಡಿದರ್ ನಾಲ್ವರಂ ಕ್ಷಪಕ ಶಲಿಕಾ ಕುಂಚಪ್ರಾವರಣೋಪ ಕ್ರಿಯಾನಿಯೋಗ[1][ರಂ ಮಾ][1]ಡಿದರ್ ಮತ್ತೆ ನಾಲ್ವರಂ ಕ್ಷಪಕ ನಾಲಿ ಶುಭಧ್ಯಾನದೊಳ್ ತೀವ್ರನಪ್ಪಂತು ಚಿತ್ರಕಥೆಗಳಂ ಪೇೞುತಿರ್ಪಂತು ಮಾಡಿದರಿಂತು ನಾಲ್ವತ್ತೆಣ್ಬರಾಚಾರ್ಯರುಮಂ ನಿಯೋಗದೊಳಿರಿಸಿ ಬೞಿಯಂ ಮದ್ರಿಯುಂ ಕೆಯ್ಯಂ ಮುಗಿದೆನಗಮಿಾಯಂದದ ಪ್ರತ್ಯಾಖ್ಯಾನಮಂ ದಯೆಗೆಯ್ವುದೆಂದೊಡಾಕೆಯ ಪರಿಚ್ಛೇದಿಸಿದ ಬಗೆಯ ಸಮುಕಟ್ಟಂ ಬಗೆದಱಿದು ದೀಕ್ಷಾಗ್ರಹಣಪೂರ್ವಕಂ ಸಂನ್ಯಸನ ಪ್ರತ್ಯಾಖ್ಯಾನಮಂ ಕೊಟ್ಟಾರ್ಯಿಕಾ ಪ್ರಧಾನೆಯುಮಂ ಕರೆದು ನೀವಿೞಸಂ ನೋನಿಸಿಮೆಂದೊಡವರ್ ನಾಲ್ವತ್ತೆಣ್ಬರ್ ಕಂತಿಯರ್ವೆರಸು ಮದ್ರಾರ್ಯಿಕೆಯುಮಂ ಪಟ್ಟಶಾಲೆಗೊಯ್ದರಾಗಳ್ ಗುರುಮತದಿಂ ಪಾಂಡುರಾಜಋಷಿ ಪೋಗಿ

ಶಾ|| ಜ್ಞಾನೋದ್ಯದ್ಬಲ ಗರ್ವದಿಂ ಪೊಣರ್ದ ದುಃಕರ್ಮಾರಿಯೊಳ್ ಸತ್ವಮಾ
ದಾನೋಗ್ರಾಯುಧಹಸ್ತನಾಗಿ ತಱಿಸಂದತ್ಯಂತ ಸದ್ಭಾವದಿಂ
ತಾನಾಗಳ್ ಬಿರುದಂಕವೆಂತು ಕಳನಂ ಬಂದೇಱುವಂತೇಱಿದಂ
ಸ್ಥಾನಾತ್ಯುತ್ತಮಸಾರವೆಂಬುದ ನುತಶ್ರೀ ವೀರಸಂತಾ[2][ರ][2]ಮಂ ೩೧

ವ|| ಅಂತು ವೀರಸಂತಾ[2][ರ][2]ಮೆಂಬ ಕಳನನೇಱಿ ಚಾಗಂಗೆಯ್ವಂಕದಂತೆ ಸರ್ವತ್ಯಾಗಂಗೆಯ್ದು ಅಂಕದಾತನಾಳ್ದನಂ ಪರಸಿ ಸುರಿಗೆಗೊಳ್ವಂತೆ ಸರ್ವಜ್ಞಂಗೆ ಸ್ತುತಿಗೆಯ್ದು ಧರ್ಮಧ್ಯಾನಮಂ ಕೈಕೊಂಡು ತನ್ನಂ ಪರಿಭವಿಸಿ ನಿಶ್ಶಂಕಿತನಾದಂಕದಂತೆ ಮಾನಸ ವಾಳೆಂಬಧ್ರುವಮನೊಳ್ಳಿತ್ತು ಚಿಂತಿಸಿ ದಂಡೆ ಪಣಿಕಟ್ಟಿನ ಕಾಪೀವುದೆಂದು ಕಳೆವ ತುೞಿಲ ಸಂದಂ ಕರೆದಂತೆ ಸಂಸಾರದೊಳಾರುಂ ಶರಣಿಲ್ಲೆಂಬಶರಣಮುಂ ನೆನೆದೆಕ್ಕತುಳಕ್ಕೆ ನೀವೆಲ್ಲರು ಮೋವಲೆಂದವನಿವರೆಲ್ಲರುಮಂ ಕಳೆದೊರ್ವನೆ ನಿಲ್ವಂತೆ ತತ್ತ್ವಮಂ ಭಾವಿಸಿ ನೀನಾರ್ಗೇ ಕಿರ್ದೆಯೆಂದು ಕರಭದಾತನಂ ಗೆಂಟುಮಾಡುವಂತೆ ಮೆಯ್ಯಂಬೇೞು ಮಾಡಿ ನೆಗಟ್ದಿ ಸ್ಯತ್ವಮಂ ಬಗೆದು ಮುನ್ನಮಾದನುವರದ ತೊಡಂಕಿ....ನೆನವಮಂ ಬಗೆದು ನಿಚ್ಚಟನುಪ್ಪಂ ಕದಂತೆ ಸಂಸಾರದೊಳ್ ತೊಡರ್ವ ನಮೆವುದನಪರಾಧಿಸೀಗಳೇಯುರ್ಚಿದಾಗಳ್ ಪೊಕ್ಕು ಕಾದುವ ಲೌಕಿಕದ ಪಸುಗೆಯಂನಱಿವಂತೆ ಲೋಕವಿಭಾಗಂಗಳನಱಿದು ಸಿದ್ಧ ಲೋಕಕ್ಕಾಸೆವಟ್ಟಂತುಮಲ್ಲದೀ ಮೆಯ್ಯೊಳ್ ನ್ಯಾಯಮನೆ ಬಗೆವೆನೆಂದು ಪುಗುವಂಕದಂತೆ ಮೆಯ್ಯಶುಚಿತ್ವಮಂ ನೆನೆಯುತ್ತಿದಿರಾಂತನನಿಱಿದು ಗೆಲ್ವ ಸಮುಕಟ್ಟುಗಳನಱಿವಂತೈದುಂ ಕರ್ಮಾಶ್ರವದ್ವಾರಂಗಳನಱಿದಿದಿರಾಗಿ ತನ್ನೇಱಿಂಗಾಂತನೆಂದು ಕಾಪಿಟ್ಟು ನಿಲ್ಕುಮಂತೆ

1 ರ್ಮಾ 2 ನ

ಸಮ್ಯಕ್ಚಾರಿತ್ರಭಾವನೆಯೆಂಬ ಸಂಪರೆಯಂ ತಿಣ್ಣಂ ಮಾಡಿ ತನಗಿದಿರ್ಚಿದವನ ಕೆಯ್ಯುಱದಿಱ ಪೊಡವನ ನೆತ್ತರುಗುವಂತೆ ಶುಭಧ್ಯಾನದ ಕೂರ್ಪಿನೊಳಶುಭಕರ್ಮಂಗಳ್ ಸೋರೆ ಪೊಕ್ಕುಗಿಪುಲುಮುಗಿಪುಲುಮಪಾಗದೆಂಬ ತುಱುಲಾಳ ಧರ್ಮದಂತೆರಡುಂ ತೆಱದ ಧರ್ಮಮುಂ ಮನದೊಳ್ ತಾಳ್ದಿ ಪಾಯ್ದು ಪತ್ತಿದಂಕಮನೊತ್ತಿ ಪಿಡಿದು ಗೆಲ್ವ ಗಾಯ ಮಱಿವಂಕದಂತೆ ಬೋಧೆಯುಂ ನಿಟ್ಟೆವಡಿಸಿ ಪದಿಮೂಱು ದಿನಸಮಿಂತು ಕ್ಷಪಕಂಗೆ ಧರ್ಮಧ್ಯಾನಂ ನಿಲೆ ಪೊಱಗೆ ಜಿನಮಹಿಮೆ ಸಲೆ ನೋಂತರ್ಧರಾತ್ರದೊಳ್

ಚಂ|| ತನುವಚಳಸ್ವರೂಪದಿರೆ ಪಂಕರುಹಾಸನದೋಜೆಯೊಳ್ ನಿಜಾ
ನನಮಿರೆ ಹಸ್ತಪದ್ಮಮುಕುಳಂ ನೊಸಲಲ್ಲಿರೆ ದಿಟ್ಟಿ ತನ್ನ ಮೂ
ಗಿನ ಕೊನೆಯೊಳ್ ತಗುಳ್ದಿರೆ ಜಿನೇಂದ್ರನೊಳಂಬುಜಸೂತ್ರದಂದದಿಂ
ಮನಮಿರೆ ತತ್ಸಮಾಧಿ ನಿಲೆ ಸಾಧಿಸಿದಂ ದಿವಿಜೇಂದ್ರಲೋಕಮಂ ೩೨

ವ|| ಪಾಂಡುರಾಜನಂತು ನೋಂತು ದೇವಲೋಕಮಂ ಸಾಧಿಸಿದಂ ಮದ್ರಿಯುಮಂದಿನ ಬೆಳಗಪ್ಪ ಜಾವದೊಳ್ ಮುಡಿಪಿ ಸ್ವರ್ಗಪ್ರಾಪ್ತಿಯಾದಳ್ ನೇಸಱ್ ಮೂಡಿದಿಂಬಳಿಯಂ ಚಾತುರ್ವರ್ಣಮೆಲ್ಲಂ ನೆರೆದು ಋಷ್ಯಾಂಗಮಂ ಸಂಸ್ಕಾರಿಸಿ ಬಂದಾಗಳ್ ಗಾಂಗೇಯ ಧೃತರಾಷ್ಟ್ರ ವಿದುರಾದಿಗಳ್ ಮನೆಗೆ ಮಂದಷ್ಟಾಹ್ನಿಕ ಮಹಾಮಹಿಮೆಯಂ ಮಾಡಿಸುತಿರ್ದರಿಂತು ಧೃತರಾಷ್ಟ್ರಂ ಕುರುವಂಶಕ್ಕೆ ಜ್ಯೇಷ್ಠನಪ್ಪುದಱಿನಾತನ ಮಕ್ಕಳಪ್ಪ ದುರ್ಯೋಧನಾದಿಗಳ್ ಕೌರವರಾದರ್ ಪಾಂಡುರಾಜನ ಮಕ್ಕಳಪ್ಪ ಧರ್ಮಪುತ್ರಾದಿಗಳ್ ಪಾಂಡವರಾದರಂತಾ ಕೌರವ ಪಾಂಡವ ಕುಮಾರರ್ ಕೂಸಾಟ ಮಾಡುವಡಮೆರಟಱ್ ತಂಡಮುಮೊಂದೊರ್ವರೊಳಪ್ರತಿಮಾಗಿ ಮಚ್ಚರಿಸುತ್ತಮೋದಿ ಬಳೆದಕ್ಷರಾದಿ ಕಳೆಗಳುಮನೆಕ್ಕೆಕ್ಕೆಯೊಳ್ ಕಲ್ತರಲ್ಲಿ ಧರ್ಮಜಂ ಚತುಷ್ಷಷ್ಟಿಕಳಾವಿದನಾಗಿಯುಂ ಧರ್ಮಪ್ರಿಯಂ ಶಾಸ್ತ್ರಪ್ರಿಯನಾದೊಂ ಭೀಮಂ ವ್ಯಾಕರಣ ವಿದಗ್ಧನಾಗಿಯುಂ ಗದಾಯುದ್ಧಪ್ರಿಯನಾದೊಂ ಅರ್ಜುನಂ ಬಿಲುಗ'[ಲ್ಪಿಯೊ][1]ಳರ್ಥಿಗನಾದೊಂ ನಕುಳಂ ಕೊಂತದೊಳ್ ಬಹುಳನಾದೊಂ ಸಹದೇವಂ ಬಾಳೊಳ್ ಪ್ರವೀಣನಾದೊಂ ದುರ್ಯೋಧನನುಮೆಲ್ಲೋದುಗಳಂ ಬಲ್ಲನಾಗಿಯುಂ ಗದಾಯುದ್ಧಪ್ರಿಯನಾದೊಂ ದುಶ್ಶಾಸನಾದಿಗಳುಂ ಸಕಳಕಳಾಪರಿಣತರಾದರಂತವರ್ಗೆ ಕುಮಾರವಯಸಂ ಸುಖದಿಂ ಸಲುತ್ತುಮಿರ್ದಂದಾ ಪೊೞಲ್ಗೆ

ಕಂ|| ಭಾರದ್ವಾಜತನೂಜಂ
ಚಾರುಗುಣಂ ದ್ರೋಣನೆಂಬನತಿಶುದ್ಧಕಳಾ
ಭಾರನುದಾರಂ ರಣಮುಖ
ಧೀರಂ ಜನವಿನುತ ಚಾಪವಿದ್ಯಾಧಾರಂ ೩೩

1 ಲ್ಪದೊ

ವ॥ ಬಂದಾಗಳ ಕೌಂಪಾವ್ನಾಯುದ ಪಾರಾವಳಿಯೊಳ್ ಕೊಂಡಾಡಿ ನೆಗಟ್ದ ವಿಪ್ರೋತ್ತಮಂ ಗೌತಮನೆಂಬನಾತನ ಮಗಂ ಕೃಪಂ ಕಂಡು ಮನೆಗೊಯ್ದು ಅಭ್ಯಾಗತ ಪ್ರತಿಪತ್ತಿಗೆಯ್ದಿರ್ದ ಧನುರ್ವಿದ್ಯಾಚಾರ್ಯರಪ್ಪುದನಱಿದು ನೀವೆಮ್ಮರಸರ ಮಕ್ಕಳಂ ಧನುರ್ವಿದ್ಯಾಪ್ರವೀಣರ್ ಮಾಡವೇಟ್ಕುಮೆಂದೊಡಂಬಡಿಸಿ ಶುಭದಿನದೊಳೆಂಟ್ತುಂಡದ ರಾಜಕುಮಾರರೆಲ್ಲರುಮಂ ಚಾಪವಿದ್ಯಾಭ್ಯಾಸದೊಳಗುಬ್ಬಿದೊಡಂತು ಕುಮಾರರ್ ಬಿಲ್ಲಂ ಗುಣಿಯಿಸುತ್ತಿರೆ ದ್ರೋಣಾಚಾರ್ಯರ ಚಾಪವಿದ್ಯೆಯಂ ಮೆಚ್ಚಿ ಕೃಪಂ ತನ್ನ ಮಗಳಂ ಕೊಟ್ಟನಾಕೆಗಂ ದ್ರೋಣಂಗಮಶ್ವತ್ಥಾಮನೆಂಬ ಮಗಂ ಪುಟ್ಟಿ ಬಳೆಯುತ್ತಿರ್ದನೊಂದು ದಿವಸಂ ದ್ರೋಣಾಚಾರ್ಯರ್ ತಮ್ಮ ಭಟ್ಟರೆಲ್ಲರುಮಂ ಗರುಡಿಗೆ ಕರೆಯಲಟ್ಟಿ ನೀನಱಿ ಯದೆ ಜಿಬ್ಬಳಿಸಿ ತೆಱಿಂದಿಱಮಂ ಪೇೞವಾಯ್ದೊಡದರ್ಕಂ ಮುಳಿವರೆನೆ ನಿನ್ನಂ ಬಱಿಕೆಯುಂ ಮುಳಿಯಿಸಿದೊಡೆ ಕೂಸುಗಳ್ಗೆ ಮುಳಿವರೆ ಪಿರಿಯರುಮೆನೆ ಭೀಮ ನಿಂತೆಂದಂ

ಕಂ॥ ಕಿಱುಯನಿನಂ ಪ್ರಾಯದೊಳೆಂ
ದುಱಿದೆನ್ನಂ ನುಡಿವುದಳವೆ ಬಲ್ಪಿನೊಳೆನ್ನೀ
[1]ಕುಱುಕುಣಿಕೆ[1]ಗೆ ನೆಱೆಯೆಯ್ದೆ ಪೊ
ಚ್ಚಱಿಸೊಳಿದೇಂ ಪೊಣರ್ದು ನೋಡಲಾಗದೆ ಕೆನ್ನಂ ೩೪

ವ॥ ಎಂದ ಮಾತಿಂಗೆ ಕರ್ಣಂ ಮಗುೞ್ದಿಂತೆಂದಂ

ಕಂ॥ ದೊರೆಯಲ್ಲದಱತೊಳ್ ಪೊಣರ್ವುದೆ
ದೊರೆಯಕ್ಕುಮೆ ದೊರೆಗೆ ನೆಟ್ಟನಾದೊಡಮೆಂತುಂ
ದೊರೆಗೆಡಿಸಲೆ ನೀಂ ಬಗೆವೈ
ದೊರೆಯಲ್ಲದೆ ಪೊಣರ್ದು ಗೆಲ್ವ ಗೆಲ್ಲಂ ಗೆಲವೇ ೩೫

ವ॥ ಎನೆ ಭೀಮಕುಮಾರನಿಂತೆಂಗುಂ

ಕಂ॥ ಮುಂ ಪುಟ್ಟಿದೊಡೇಂ ಶೌರ್ಯದ
ಸಂಪತ್ತುಮೆ ಕಿಱಿಯನಾದೊಡಂ [ವಿ]ಕ್ರಮದಿಂ
ದಂ ಪಿರಿಯನಾ[2][ಗನೆಂ][2]ತೆನೆ
ಮುಂ ಪುಟ್ಟಿದ ಕಿವಿಗೆ ಕೋಡು ಕೂರಿದಪಲ್ತೇ ೩೬

ವ॥ ಎಂದು ಭೀಮಂ ಕರ್ಣನನೊತ್ತಿ ನುಡಿದು ಪಾಱಿಯ ಸೆಂಪನೀಡಾಡುವು ದುಮಂ ಕರ್ಣಂ ಕೂಸೆಂದು ತನ್ನ ಸೈರಣೆಯನುಂಟುಮಾಡಿದುದುಮಂ ಕಂಡು

1 ಕಿಱುಕುಣಿಕೆ (ಪಂಪಭಾರತ ೩-೭೫ವ) 2 ಗನಮದೆಂ

ದುರಿಯೋಧನಂ ಭೀಮಂಗೆ ಮುನಿದು ಕಿಸುಗಣ್ಣಿ ನೋಡವುದನೊರ್ಬಂ ಕಂಡು ಪರಿತಂದು ಗರುಣಿಯ ಕೆಲದೊಳಿರ್ದ ನೋೞ್ಪ ಗಾಂಗೇಯಾದಿಗಳ್ಗೆ ಪೇೞ್ದೊಡವರ್ ಪಱಿತಂದು ನೀವಿಂತು ನಿಮ್ಮೊಳ್ ಮಚ್ಚರಿಸಲಾಗದೆಂದು ಜಡಿದು ಭೀಮನ ಕೆಯ್ಯಂ ಪಿಡಿದೊಡ ಗೊಂಡು ಸಾಲ್ಗುಮೆಂದವರ ಮನೆಗೆ ಪೋಗಲ್ವೇೞ್ದಾಗಳ್ ದುರಿಯೋಧನಂ ಕರ್ಣನ ನೊಡಗೊಂಡು ಪೋಗಿ ಮಜ್ಜನಂಬುಗಿಸಿ ತಾನುಮಾತನುಮೊಂದೆ ಪಸೆಯೊಳ್ ಕುಳ್ಳಿ ರ್ದೊಡನುಂಡು ಆತನ ಬಂದ ನಾಡಸಂಗವಿಷಯಮೆಂಬುದನಱಿದಾ ನಾಡುಮಂ ತನಗೆ ವಪ್ಪ ದ್ರವ್ಯದೊಳೆಲ್ಲಂ ದಶವಂದಮುಮಂ ಕೊಟ್ಟಾಳ್ದಾತನಂ ತಾಳ್ದಿರ್ದ ಪಾಂಡವರ ವಿದ್ಯಾಬಲಕ್ಕಂ ಜನಾನುರಾಗಕ್ಕಂ ಪೆರ್ಚಿನುದ್ಯೋಗಕ್ಕಂ ಕಾಯ್ದು ಕನಲ್ದು ಸೈರಿಸದೆ ತಮ್ಮಯ್ಯನಲ್ಲಿಗೆ ವಂದು ಬಿನ್ನಪಂ ಪಾಂಡವರಿಂತುಮುದ್ಧತರಾಗಿಯಲ್ಲದೆ ನೆಗೞ್ದಿರಲ್ಲಿ ರಾನುಮದಕ್ಕೆ ಸೈರಿಸುವನಲ್ಲೆಂ ಅಂಜಿ ಮಾಣ್ದಿರ್ಪೆನೆಂದೊಡಕ್ಕುಂ ನೀನೆ ಸೈರಿಸಲ್ವೇ ೞ್ಪುದಾಮೊಡಮಾನವರನೊಂದುಪಾಯದಿಂ ಕಳಿದು ಪೆಱತೊಂದೆಡೆಯೊಳಿರಿಸಿದಪ್ಪೆನೆಂದು ಮಗನಂ ಸಂತಯ್ಸಿ ಕಳಿದು ಧೃತರಾಷ್ಟ್ರಂ ಪಾಂಡವರ ಮನೆಗೆವಂದವರೆಲ್ಲರುಮಂ ಬಱಿಸಿ ತಾನುಮವರುಮೇಕಾಂತಮಿರ್ದಿಂತೆಂದಂ

ಕಂ॥ ಆನೇಂ ನಿಮ್ಮಯ್ಯಂ ತಾ
ನೇನೆಂಬಂ ತಾಗಿ ನೆಗೞ್ದ ಸೌಧರ್ಮಿಕೆಗಿ
ನ್ನೂನಂ ಮಾಡಲಿಮದಱಿಂ
ದಾನೊಂದಂ ಬೇಡಿದಪ್ಪೆನೆನಗದನೀಯಿಂ ೩೭

ವ॥ ಎಂದು ಕೆಯ್ಯನೊಡ್ಡಿದಾಗಳ್ ನಿಮ್ಮಡಿಯೆಮ್ಮನಿಂತುಪರೋಧಿಸಲ್ವೇೞ್ಪುದೆ ನೀಮೆಮ್ಮಯ್ಯನುಮನೆಮ್ಮುಮಂ ಕೊಂಡಾಡಿ ಪಿಱಿಯೆವಲ್ಲದೊಡಾಮೇವಿಱಿಯೆಮದಾ ವುದು ಬೆಸಸಿಮೆಂದಡೆ ನೀಮುಂ ವಾರಣಪುರದೊಳಿರ್ದ ನಮ್ಮ ಬಾೞಿನಾಳ್ದು ಸುಖಮಿರಿ ಮೆಂದೊಡಂತೆಗೆಯ್ವೆಮಗೆ ನಿಮ್ಮಡಿಯ ಬೆಸನ[1][ಮನು][1]ಲ್ಲಂಘಿಸುವುದು ವಿನಯಮುಂ ನಯಮುಮಲ್ಲೆಂದೊಡೊಳ್ಳಿತಾಯ್ತೆಂದು ಧೃತರಾಷ್ಟ್ರಂ ತನ್ನ ಮನೆಗೆ ಪೋದಂ ಪಾಂಡವರ್ ಪಯಣಸಾಮಗ್ರಿಗೆಯ್ದು ತಮ್ಮ ಸಕಳತಂತ್ರಮನೊಡಗೊಂಡು ಧೃತರಾಷ್ಟ್ರ ವಿದುರರ್ಕಳಂ ಬೀೞ್ಕೊಂಡು ಹಸ್ತಿನಪುರದಿಂ ಪೊಱಮಟ್ಟು ಪೋದರದಂ ದುರ್ಯೋಧನನಱಿದು ಗೂಢ ಪುರುಷರಿಂ ವಾರಣಪುರದೊಳ್ ಬೇಗಮರಗಿನ ಮಾಡಮಂ ಸಮಯಮೇೞ್ದಿಟ್ಟ ಸಮೆ ದಾಗಳಿದಿರ್ವಂದೊಡೊಳ್ಳಿತಾಯ್ತೆಂದಿದಿರ್ಗೊಂಡು ಮನೆಯಂ ಪುಗಿಸುವುಪಾಯಮುಮಂ ತನಗೆ ಬಂದಪಾಯಮುಮಂ ಸಮಕಟ್ಟಿ ನಿಯೋಜಿಸಿ ತಾನುಮಱಿಯದಂತಿರ್ದಂ

1 ಮೆ

ಉ॥ ಪಾಂಡವರಿಲ್ಲಿ ಮುಂತು ಪಯಣಂಬರುತಂ ಕರಮಿಂಬಿನೊಳ್ [1][ನ][1]ನಂ
ಗೊಂಡೆಡೆಯಲ್ಲಿ ವಿಶ್ರಮಿಸಿ ಸಂತಸದಿಂ ವಿಳಾಸದೊಳ್ಪುಮಂ
ಚಂಡಪರಾಕ್ರಮೋದಯಮುಮಂ ಮೆಱಜಃಪತ್ರಮನೊಪ್ಪೆ ಭಗಾ
ಖಂಡಳಸನ್ನಿಭಪ್ರಕಟ ವಾರಣಾವತಪುರಪ್ರದೇಶಮಂ ೨೮

ವ॥ ಎಯ್ದೆ ವಂದಾಗಳಾ ಪೊೞಲೊಳ್ ಮುನ್ನಮೆ ಕೌರವಾನುಮತದೊಳಿರ್ದರ್ ಪೊೞಲ ಸಪ್ತಶೋಭೆಗೆಯ್ದಿ ಪುರಪ್ರಧಾನರ್ ಕೂಡಿಗೊಂಡು ಸೇನಾವಿವಿಧದಿಗೊಂಡು ಕೃತಕ ರಾಜಮಂದಿರಕ್ಕೊಯ್ದು ಪಳಿಯ ಮೇಲಿರಿಸಿ ಸೇಸೆಯನಿಕ್ಕಿ ಬೞಿಯಮೊಡನಂದವರ್ಗೆಲ್ಲಂ ಪೊೞಲೊಳಗೆ ಬೀಡುಗಳಂ ಕೊಟ್ಟಿರಿಸಿ ಸರ್ವಭಾವೆಯಂ ಪ್ರಿಯಂಗೆಯ್ದು ಸ್ನಾನಾನ್ನ ಪಾನಾದಿಗಳಿಂ ತಣಿಪಿ ಪೋದಿಂಬೞಿಯಂ ಮಱುದೆವಸಂ ಧರ್ಮಪುತ್ರಂ ಭೀಮಂಗಿಂತೆಂ ದನೀ ಮಾಡಪ್ರವೇಶಮೂನಾತಿರಿಕ್ತಂಗಳಿಂದೇನಯ್ಯ ನುಡಿಯುತ್ತಿರೆ ವಿದುರನಟ್ಟಿದೋಲೆ ಯಾತಂ ಬಂದೇಕಾಂತದೋಲೆಯನಿಕ್ಕಿದೊಡೆ ಮುಖವಾರ್ತೆಯೇನೆಂದೊಡೆ ಆರುಮಂ ನಂಬದಿಕ್ಕೆಂದಟ್ಟಿದೋಲೆಯಂ ನೋಡಿಮೆನೆ ನೋಡಿ ದುರ್ಯೋಧನಂ ತನ್ನನುಪಾಯದಿಂ ಕೊಲಲೆಂದರಗಿನ ಮಾಡಮಂ ಸಮೆಯಿಸಿದನಲ್ಲಿರದಿರೆಂದೋಲೆಯುಂ ಮಾತುಂ ಮುಖ ವಾರ್ತೆಯುಂ ತನ್ನ ಮನದೇನದುಮೊಂದಾದೊಡೆ ನಂಬಿ ತನ್ನ ಪ್ರಸಾದದಿಂ ಬರ್ದ ಮಿನ್ನಱಿದು ನೆಗೞ್ವೆಮೆಂದೋಲೆಯಾತನಂ ಕಳಿಪಿ ತಮ್ಮೇಕಾಂತದೊಳಾಳೋಚಿಸು ವಲ್ಲಿ

ಕಂ॥ ಏನಯ್ಯ ತೊಲಗಿ ನಿಂದಡೆ
ತಾಮಸದಿಂ ಮತ್ತಮೊಂದುಪಾಯಂ ನೆಗೞ್ಗುಂ
ನಾಮಿಲ್ಲಿ ಸತ್ತರೆಂಬುದ
ನಾ ಮಹಿಪತಿ ನಂಬುವಂತುಪಾಯದೆ ಪೋಪಂ ೨೯

ವ॥ ಎಂದು ಸಮಕಟ್ಟಿದರ್ ದೀವಳಿಗೆಯ ಪರ್ಬದಂದು ಕೊಡಮುತ್ತಿಸುವ ನೆವ ದೊಳ್ ನಮಗುಪಾಯಮಂ ಬಗೆವಕ್ಕುಮೆಂದಱಿದಾ ಮಾಡದೊಳಗಣಿಂ ಪೊಱಗಣ್ಗೆ ಕನ್ನಮಂ ಸಮೆಯಿಸೆಂದು ಸಮೆಯುತ್ತಿರ್ದರನ್ನೆಗಂ ದೀವಳಿಗೆಯುಂ ಬಂದತ್ತು ಕನ್ನಮುಂ ಸಮೆದತ್ತು ಆ ಪರ್ವದೊಳ್ ಮುನ್ನಿನ ಸಂಕೇತಪುರುಷರಯ್ವರ್ಗಮುಡಲ್ ತಂದು ಸೇಸೆಗಳನಿಕ್ಕಿ ಕೊಡರಂ ಪೊತ್ತಿಸಲೊಡರ್ಚುವುದಂ ಭೀಮನಱಿದಾ ಕೊಡರ್ದಂದ ಪೆಂಡತಿ ವೆರಸು ಮತ್ತಮಯ್ವರನಿರಿಸಿ ಮತ್ತಿನವರಂ ಪೋಗಲ್ವೇೞ್ದುವರ್ಗೆ ಪ್ರಿಯಂಗೆಯ್ವಂತೆಗೆಯ್ದು ಪೆಱರಱಿಯದಂತೊಳಗಣ್ಗೆಯ್ದು ಕಟ್ಟಿಕ್ಕಿ ಕೌರವಮಂತ್ರಿಯ ಪೇೞ್ದಂದದೊಳುಜ್ವಳ ಮಾಗೆ ಮಾಡದೆಲ್ಲಾ ದೆಸೆಯೊಳಂ ಕೊಡರಂ ಪೊತ್ತಿಸವೇೞ್ದು ಕೊಂತಿವೆರಸುಮಱು

1 ಕ

ಪರುಷಮುಂ ಸಾರವಸ್ತುಗಳುಮಂ ತಂತಮ್ಮಾಯುಧಂಗಳಂ ಕೊಂಡಾ ಸುರಂಗದಿಂ ಪೊಱಮಟ್ಟುಪೋದಾಗಳ್ ಮಾಡಮುಂ

ಕಂ|| ಕಿಱುವೊಗೆಗಳೊಗೆಯೆ ದಳ್ಳುರಿ
ತುಱುಗೆ ನಭಂಬರೆಗಮುಳುರ್ವ ನಿಜಶಿಖಿಯಿಂದಂ
ಬಿಱುವರಿಯ ಶಿಖಿಗೆ ತಾರಗೆ
ತಱತಱಿಸುತಮಿರ್ದುವೊಡನೆ ಮುಗಿಲುಗಿವಿನೆಗಂ ೪೦

ವ|| ಆಗ[1][ಳಱಲುತ್ತಿಂತೆಂ][1]ಬರ್

ಕಂ|| ಪ್ರಳಯಾಗ್ನಿಯಾದುದೋ ನಿಜ
ಬಳದಳವಂ ತೋಱಲಗ್ನಿ ಬಳೆದೊದವಿದುದೋ
ಜಳಜ[ಜ] ಜಳಜೋದರದೊಂ
ದಳವಿಯೆಯುಱಿಲಿಂಗಮಾದ ಕಥೆಯುದುವಿದುವೋ ೪೧

ಇಂತೆಂಬುವೊಳವೆ ನೋಡಿರೆ
ಸಂತಂ ಬಂದಿರ್ದ ಪಾಂಡವರ್ಕಳುವೆರಸೋ
ರಂತಿರೆ ಮಾಡಂ ಬೆಂದಪು
[ದಿಂತಿದು] ದೈವಿಕಮೊ ಮಾನುಷಕ್ರಿಯೆಯೊಳಗೋ ೪೨

ವ|| ಎಂದೆಲ್ಲಾ ದೆಸೆಯೊಳಂ ಪೊಱಲುದ್ಭ್ರಾಂತುಗೊಂಡು ಬಂದು ಬಳಸಿಯುಂ ನಿಂದು ನೋಡುತ್ತಿರ್ದರಂತರಗಿನ ಮಾಡದೊಳ್ ಬೆಂದು ಪಾಂಡವರ್ ನಿಃಕ್ಷೇತ್ರಮಾದರೆಂದು ಲೋಕದವರುಂಗೊಳೆ ನಿಜವರ್ಗದವರ್ ಭಯಂಗೊಳೆ ಮಾತು ಪರೆದತ್ತುಮನ್ನೆಗಮಾ ಸುರಂಗದಿಂ ಪಾಂಡವರ್ ಪೊಱಮಟ್ಟುಪೋಗಿ ಕತ್ತಲೆಯಾದಾಗಳೊಂದೆಡೆಯೊಳಿರ್ದ ಪುಗುಟ್ಟಿದ್ದು ಪೊಱಲತ್ತ ನೋಟ್ಟಾಗಳ್ ಮಾಡಮುಱಿವುದಂ ಕಂಡು ಬೆಕ್ಕಸಂಬಟ್ಟು ಸುಳಿದಿರಲಾಗೆಂದು ತಾರಾಗಣಂಗಳಂ ನೋಡಿ ದೆಸೆಯಱಿದು ಪಯಣಂಬೋದರಿತ್ತ ಬೆಳಗಾದಾಗಳರಗಿನಮಾಡಮುಱಿದು ಕರಗಿದುದುಮನಲ್ಲಿ ಬೆಂದಾಱುಂ ಪೆಣದೆಲುವುಗಳಂ ಕಂಡು ಪಾಂಡವರ ತಂತ್ರದವರ್ ಮಹಾದುಃಖಂಗೆಯ್ದು ಪರೆದುಪೋದರಂತವರ್ ಸತ್ತ ಮಾತಂತೆ ಪರೆಯೆ ಹಸ್ತಿನಪುರದೊಳ್ ಧೃತರಾಷ್ಟ್ರ ವಿದುರ ಗಾಂಗೇಯಾದಿಗಳ್ ಕೇಳ್ದು ನೀರಿಟ್ಟರ್ ದುರಿಯೋಧನಂ ಮನದೊಳೊಸೆದು ಲೋಕೋಪಚಾರದೊಳ್ ನೆಗಟ್ಟಿಂ ಮತ್ತಮಾ ಮಾತು ಕೆಲವು ದಿವಸದಿಂ ದೇಶಾಂತರಂಗಳ್ಗೆ ಪರೆಯೆ ನಾರಾಯಣಂ ಕೇಳ್ದು ಮಸಗಲ್ ಬಗೆದೊಡೆ ಬಲದೇವನೆಂದಂ ಪಾಂಡವರಳಿವಂ ನಾವು ಮಱೆದಸೆಮೊ

1 ಳೆಳಲಿತ್ತೆಂ

ಕಂಸವಧೆಯುಂ ಜರಾಸಂಧಂ ಮಱೆಇದಪನೊ ನಮಗಮವರ್ಗಮೆಂತುಮನುಮಪರಮುಂಟ
ನ್ನೆಗಂ ಮಾಣೆಂಪಾತನಂ ಮಾಣಿಸಿದನಿತ್ತ ಪಾಂಡವರ ನಿಚ್ಚಪಯಣದಿಂ ಗಿರಿನದಿಗಿರಿಗಹ್ವರ
ವಿಷಮಾದಿಗಳಂ ಕಳಿಯೆ ಪೋಗಿ ಕೌಶಳವೆಂಬ ಪೊಲಲನೆಯ್ದಿ ವಿಶ್ರಮಿಸಿ ಕೆಲವು
ದಿವಸಮಿರ್ಪಿನಮಾ ಪೊಲಲನಾಳ್ವ ಧಾನ್ಯಸೆಂಬರಸನ ಮಗಳ್ ಕುಸುಮಮಾಳಿಕೆಯೆಂಬ
................ಬರುತಿರ್ದೊಡವರಯ್ವರುಮಱೆವರ ಬೀಡಿಂಗೆವಂದುಮಾ ಪುರದೊಳಾರಯ್ದು
ಕುಲನಾಮಂಗಳನಱೆದುಪರೋಧಿಸಿ ವಿವಾಹಕಾರ್ಯ................ದುವೆ ನಿಂದು

ಚಂ|| ಭರತಕಳಾವಿದಗ್ಧೆ ನಿಜಮುಗ್ಧೆ ಮನೋಹರರೂಪ ಕಾಂತಿ ಮ
ತ್ಸರುಚಿರಗಾತ್ರೆ ಪದ್ಮದಳನೇತ್ರೆ ವಿನೂತ ವಿಳಾ................
..........................................ಕರಂ ಮನಕ್ಕೆ ವಂ
ದಿರೆ ನೆರೆದಿರ್ದನಾಕೆಯೊಡನಲ್ಲಿ ಮನೋಮುದದಿಂ ಯುಧಿಷ್ಠಿರಂ ೪೩

ಗದ್ಯ|| ಇದರ್ಹತ್ಸರ್ವಜ್ಞ ಪಾದಪದ್ಮವಿರಾಜಿತೋತ್ತಮಾಂಗ ಶ್ರೀ ಬಂಧುವರ್ಮ ನಿರ್ಮಿತಮಪ್ಪ ಹರಿವಂಶಾಭ್ಯುದಯದೊಳ್ ಪಾಂಡವ ಕುಮಾರಾಭ್ಯುದಯ ದೇಶತ್ಯಾಗ ವರ್ಣನಂ

**ದಶಮಾಶ್ವಾಸಂ**

# ಏಕಾದಶಾಶ್ವಾಸಂ

ಕಂ|| ಆ ಕುಸುಮಮಾಳಿಕಾ ಸತಿ
ಗಾಕಾಂಕ್ಷಿತನಾಗಿ ಧರ್ಮಪುತ್ರಂ ರಾಗೋ
[1][ತ್ಸೇಕ][1] ದಿ ನಿರ್ದನುಜರ............
...............................ದಿಂದಂ ೧

ವ|| ನಾನಿಂತಿಲ್ಲಿ ಪಲವು ದಿವಸನಿರ್ದೊಡೆ ನಮ್ಮ ನೆಗಟ್ದ ಕಜ್ಜಮುಂ ಪ್ರಕಾಶಮಕ್ಕುಮಿನ್ನಿರಲಾಗೆಂಬುದ...........ಳಿಯ್ಯಂಗೇಕಾಂತದೊಳ್ ತನ್ನ ಪೋಪ ಕಜ್ಜಮನಱಿಯಿಸೇೞ್ದು ಡಂಬಡಿಸಿ ನಲ್ಲಳನಿರಿಸಿ ತನ್ನ ಮಂದಿರಮನ[ನ]ಳ್ಳಿಯುಮನೊಡ[2][ಗೊಂಡು ಪೋಗಿ][2] ಮಹಾಗಹನದೊಳಗಣದೊಂದು ಋಷ್ಯಾಶ್ರಮದೊಳ್ ವಿಶ್ರಮಿಸಿರ್ಪನಮಲ್ಲಿಯೊರ್ವಳತಿಶಯರೂಪೆಯಾಗಿಯುಂ...........ಜೆಡೆಗೊಳೆ ತಪೋಧನರುಮಂಗೊಳೆ ಬೆಳರ್ವಾದಪ ಕೆಂದೆ ಮೊಗಂ ಕುಂದ ಪೊಳೆವಲರ್ಗಣ್ ಕುಱುಯ ನೆಲೆಸೊಲೆಯು ಬಿಂಕಂ ಮ...........ತು ನೀರೊಕ್ಕೆ ಮಯ್ಯನಾಂತು ಪಿಡಿದ ರುದ್ರಾಕ್ಷಮಾಲೆಯುಮಿಟ್ಟ ಭಸ್ಮ ತ್ರಿಪುಂಡ್ರ ಲೀಲೆಯುಂ ಸೊಗಯಿಪ ಪರಿವ್ರಾಜಕ ತಪೋಸಿಯೊ........ಪಮಂ ಪತ್ತಿಸಲಕ್ಕುಮೊ ನೆಯ್ದಿಲ ಕಾವಿನೊಳ್ ಕೊಂತದಲಗಂ ತೆತ್ತಿಸಲಕ್ಕುಮೊ ಪೇೞಿಮಾ ತಪದೊಂದಂದಮನೆಂದು ಕೀಱು ಬೆಸ[3][ಗೊಂಡ][3]ಳ್.......

ಕಂ|| ದೊರೆಯೆನ್ನಾತ್ಮಜೆಗೆ ಯುಧಿ
ಷ್ಠಿರನೆಂದೆಮ್ಮಯ್ಯನೆನ್ನನಾತಂಗೆ ಕುಡ
ಲ್ಕಿರೆ ಪಾಂಡವರ್ಕಳಯ್ವರು
ಮರಗಿನಮನೆಯೊಳಗೆ ಸತ್ತರೆಂದಿಂಬೞಿಯುಂ ೨

ವ|| ಎಮ್ಮಯ್ಯನುಜ್ಜಿಗಂಬಟ್ಟು ತನ್ನ ಬ....ಯ ಸಮಕಟ್ಟುಗೆಟ್ಟು ಪೂಣ್ದಿರ್ದರ್ ಕೆಲವು ದಿವಸದಿಂ ಪೆಱರ್ಗೆ ಕುಡುವರೆಂಬ ಮಾತನಾಂ ಕೇಳ್ದು ನಿರ್ವೇಗದಿಂದೊರ್ವಳೆ ಪೊಱಮಟ್ಟು ಬಂದು ತಾಪಸಪಳ್ಳಿಯೊಳ್ ಪರಿವ್ರಾಜಕ ದೀಕ್ಷೆಯುಮಂ ಕೊಂಡು ಮಱ....ದದೊಳಪ್ಪಡಮಾತಂ ದೊರೆಕೊಳ್ಗೆಂದು ತಪಂಗೆಯ್ವೆನೆ ಬೋಧ್ಯಂಬಟ್ಟುಮಿಮಾ ತಪಮೆಂತುಂ

1 ತ್ಸಾಹ 2 ...ಗಿ 3 ...ದ

ಫಲಸಾಗದಿರನೆಂದು ನುಡಿಪ್ರೋಜೆಯೊಳಮಾಕಾರದೊಳಮಿನಿಸು ಶಂಕೆ ಪುಟ್ಟಿದಭ್ಯಾಗತ ಪ್ರತಿಪತ್ತಿಗೆಯ್ಯಲ್ವೇೞ್ಕುಮೆಂದು ಗುರುಗಳನೊಡಂಬಡಿಸಿ ಜೇಗಮುಸ್ನಪಾನಾದಿಗಳಿಂ ಸಂತೋಷಂಬಡಿಸಿದೊಡೆ ಧರ್ಮಪುತ್ರನಿಂತು ನೆಗೞ್ದಕೆಗೆಂತು ಬಂಚಿಸುವೆನೆಂದು ತನ್ನ ಬಂದಂದಮು....ತಾನಾಕೆಯ ತಪ್ಪಮೆಂದೊಂದಂದಮನುಮಂ ತಿಳಿಯೆ ಪೇೞ್ದು ಸಂತಯ್ಸಿರ್ದರ್ ನಡುವಿರುಳೆಗಂ ದಿವ್ಯಖುಷ್ಪಾಸ್ತ್ರನುದಿಂ ಪೊಱಮಟ್ಟು ವಿಷಮಾರಣ್ಯಮಂ ಕಳಿದುಪೋಗಿ ತ್ರಿಸಿಂಗಮೆಂಬ ಪೊ[ೞಲ]ನೆಯ್ದಿ ಪೊಱವೊೞಲ ಜಿನಾಲಯಮುಮಂ ಕಂಡು ತ್ರಿಪ್ರದಕ್ಷಿಣಂಗೆಯ್ದಾರ್ಯಪಥೆಯುಂ ಬಿಡಿಸಿ ಕಾಲಂಕರ್ಚಿಕೊಂಡೊಳಗಂ ಪೊಕ್ಕು ದೇವರ ದೇವಂಗಭಿಮುಖದೊಳ್ ನಿಂದು.......

ಮಂದಾನಿಲ ರಗಳೆ॥

ಪರಮಾತ್ಮ ಬಿನ್ನಪಮಾನಿನ್ನಂ
ಶರಣೆಂದೊಸೆದಡಿಗೆಱಗದ ಮುನ್ನಂ
ಪೆಱವಂ ಶರಣೆಂದಱಿಯದ ಮುನ್ನಂ
ಎಱಗಿಯೆ ಕೆಟ್ಟೆಂ [1][ಕಾಣದೆ ನಿನ್ನಂ][1]
ದುಃಖದೊಳದಾರ್ಗಂ ಬರ್ದಿರ್ದೆನ್ನಂ
ಕಿಡಲೀಯದೆ ನಿನ್ನಂ ಪೊರ್ದಿದೊನಂ (?)
ಎನಗೀಗಳ್ ಮಳಕುಳದುಪಶಮದೊಳ್
ವಿನತಕ್ರಿಯೆಯಾಪುಸ್ತ್ರಮಸಾರಹಿತತ್ವದಿನುನ್ನತನೈ (?)
ಪಮಣಿಲ್ಲದ ಕಾಣ್ಕೆಯಿನಕ್ಷಯನೈ
ತವಿಲಿ[ಲ್ಲ]ದ ಬಲದಿಂದಚ್ಯುತನೈ
ಅಕಳಂಕತೆಯಿಂ ಪರಮೇಶ್ವರನೈ
ಸಕಳಜ್ಞತೆಯಿಂ ಪ್ರವಿಭಾಸುರನೈ
ನಿರವದ್ಯತೆಯಿಂ ಮುನಿವಂದಿತನೈ
ಸುರಪೂಜ್ಯತೆಯಿಂದಭಿನಂದಿತನೈ
ದುರಿತಕ್ರಿಯೆಯಿಂ ವಿ....ಯಂದರನೈ
ನಿರುಜಾಂಗ[2][ಸ][2]ನಿಂದಿತ ಸುಂದರನೈ
ಉ[3][ದ][3]ಯೋದಯದಿಂದಜರಾಮರನೈ
ಸಮುಪಾಸನದಿಂ ಕರುಣಾಪರನೈ

---

1 ನಿನ್ನಂ ಕಾಣದೆ 2 ದಿನ 3 ಭ

ಜಗದೀಶತೆಯಿಂ ಮಹಿಮಾಶಯನೈ
ವಿಗತಾಯುಧಕರದಿಂ ನಿರ್ಭಯನೈ
ಪ್ರವರಾಮಳ ಗುಣಗಣದಿಂ ವಿಭುವೈ
ಭುವನೇಶ್ವರನಪ್ಪುದಱಿಂ ಪ್ರಭುವೈ
ನಿನಗಿಂತೊಸೆದೀ ಪರಮಾತ್ಮತೆಯಿಂ
ವಿನುತೋತ್ತಮ ಧರ್ಮ ಮಹಾತ್ಮತೆಯಿಂ
ಅಱಿದುಂ ಭವದಮಳಗುಣಾಢ್ಯತೆಯುಂ
ತೊಱೆದಂ ಪೆಱರ್ಗೆಱಗುವ ಜಾಡ್ಯತೆಯುಂ
ಅಮರೇಂದ್ರ ಮುನೀಂದ್ರಜನಪ್ರಣುತಾ
ಕಮನೀಯ ವಿನೇಯ ಜನಾಶ್ರಯಿತಾ
ಖಚರೇಂದ್ರ ನರೇಂದ್ರ ನತಾಂಘ್ರಿಯುತಾ
ಸಚರಾಚರ ಜೀವನಿಕಾಯ ಹಿತಾ
ಕ್ಷಯಮಿಲ್ಲದೆ ಸುಖಮಿಪ್ಪೊಳ್ಗತಿಯುಂ
ದಯೆಗೆಯ್ಯೆನಗಿಂ ಜಿನಸಿದ್ಧ(?)ತಿಯುಂ ೩

ಕಂ॥ ಎಂದೀ ಸ್ತುತಿಯಂ ಸ್ತುತಿಯಿಸಿ
ಬಂದು ಮುನಿವ್ರಜಮನೋ....ಕ್ರಮದಿಂ
ಬಂದಿಸಿ ಧರ್ಮಾಮೃತಮನ
ನಿಂದಿತಮಂ ಕೇಳುತಿರ್ದರಿಪ್ಪನ್ನೆವರಂ ೪

ವ॥ ಆ ಪ್ರೋಟಿಲನಾಖ್ಯರಸಂ ಚಂಡವಾಹನನೆಂಬೊಂ ತನ್ನ ಪದಿಂಬರ್ ಕನ್ನೆಯರ [ನೊಡ]ಗೊಂಡು ಬಂದು ದೇವರಂ ಗುರುಗಳಂ ಬಂದಿಸಿ ದಿವ್ಯಜ್ಞಾನಿಗಳಪ್ಪಾಚಾರ್ಯರ ಮುಂದೆ ಕುಳ್ಳಿರ್ದು ಕೈಗಳಂ ಮುಗಿದು ಬಿನ್ನಪಮೆಂದು

ಕಂ॥ ಎನಗೆ ಪದಿಂಬರ್ ಸುತೆಯರ್
ಮನಸಿಜಶರಸದೃಶಮಪ್ಪ ಕನ್ನೆಯ[1][ರ][1]ವರಂ
ಮನುಚರಿತ ಧರ್ಮಜಂಗಾ
ನನುನಯದಿಂ ಕುಡುವೆನೆಂದು ಬಗೆದಿರ್ಪೆನೆಗಂ ೫

1 ಸಿ

ವ|| ಆತಂ ಬೆಸಸೆಯ್ವರುಂ ತಾಯುಮಱಗಿನಮನೆಯೊಳ್ ಸತ್ತರೆಂದು ಕೇಳ್ದಿನದೆಂತೆಯೊ ಸಂದೇಹಮೊ ಬೆಸಸಿಮುವರುಮಾತಂಗೆ ಕುಡುವುದಿಲ್ಲಮೆಂದು ತಪಂಬಡುವೆನಲ್ಲದೆ ಪೆಱತಿಲ್ಲೆಂದು ಪರಿಚ್ಛೇದಿಸಿ ಬಂದರೆನೆ ದಿವ್ಯಜ್ಞಾನಿಗಳಪ್ಪುದಱಿಂ ಬಗೆದಱಿದು ಪಾಂಡವರ್ ಚರಮದೇಹಧಾರಿಗಳ್ ಪರೋಪಹತದಿಂ ಸಾವರಲ್ಲರಂಜದಿರಿಮೆನೆ ಸಂತೋಷಂಬಟ್ಟು ಕೂಸುಗಳನೊಡಗೊಂಡು ಪೋದರತ್ತಲಂತಾ ಮಾತೆಲ್ಲಮನವರ್ ಕೇಳುತ್ತಿರ್ದು ನಾಮಿಲ್ಲಿರ್ದಮಪ್ಪಡೆ ನಮ್ಮನಱಿವರಱಿದೊಡೆ ತಳ್ವಕ್ಕುಮಾದೊಡೆ ನಮ್ಮ ಬಗೆದ ಕಜ್ಜಂ ಪ್ರಕಾಶ್ಯಮಕ್ಕುಮೆಂಬುದಂ ತಮ್ಮೊಳಾಳೋಚಿಸಿ ಕಿಱಿದುಬೇಗಮಿರ್ದಂತೆಗೆಯ್ದು ಅಲ್ಲಿಂದಂ ಮಸಣಂಬೋಗಿ ಪಿರಿದೊಂದು ಪೞುವಮೊಳಗಂ ಬರುತಮೊಂದಾಲದ ಮರನಂಕಂಡರದೆಂತೆನೆ

ಕಂ|| ಆಲದ ಮರನದು ಪೇಳ್ವಡೆ
ಪೋಲದ ಮಾತೆಂದು ಬಗೆಯಲಿನ್ನೆಗೆದ ಮಹಾ
ಜ್ವಾಳೆಯ ಪೆರ್ಚಿದ ಬೆಂಕೆಯು
ಮಾಲಿಯು ತಣ್ಪನಪ್ಪೊಲಿಕ್ಕುಮಾ ಮರದಡಿಯೊಳ್ ೬

ವ|| ಎಂಬನಿತು ಪೊಗೞುತ್ತಿನಡೆದುಮಾಲದ ಮರದಡಿಯೊಳ್ ಕುಳ್ಳಿರ್ದು ಪಥಪರಿಶ್ರಮಮುಮನಾಱಿಸಿರ್ದಿನಂ ನೇಸರ್ಪಟ್ಟೊಡೆಲ್ಲಂ ನಿದ್ರಾವಶಗತರಾದರ್ ಭೀಮನೆ ಮಹಾಸತ್ವನಪ್ಪುದಱಿಂದಕ್ಕದೆ ಜಾವಮಿರ್ದೆನೆಂದೊಂದೆಡೆಯೊಳ್ ಕುಳ್ಳಿರ್ದನನ್ನೆಗಮೊಗೆದ ಕಡುಗತ್ತಲೆಯೊಳೊರ್ವಳ್ ತನ್ನ ತೊಟ್ಟ ಮಾಣಿಕ್ಯಂಗಳ ಬೆಳಗಿನೊಳ್ ಬಂದು ಕೆಲದೊಳಿರ್ದೊಡಾಕೆಯುಂ ಕಂಡು ಭೀಮಂ ನೀನಾರ್ಗಮಿತ್ತೊರ್ವಳೆ ಈ ಪೞುವಿನೊಳ್ ಬಪ್ಪುದೇನೆಂದು ನಿಶ್ಶಂಕಿತನಾಗಿ ನಯದಿಂ ಬೆಸಗೊಳೆ ಪೇಳ್ದನಾಗಿ ಸಾಗರಾಂತಸ್ಥಿತ ಸಂಧ್ಯಾನಗರ ಪುರಾಧಿಪತಿ ಸಿಂಹೋದರನೆಂಬೊನಾತನ ಮಗಳ್ ಹಿಡಿಂಬೆಯೆಂಬೆನಾಂ ಪುರುಷದ್ವೇಷಿಣಿಯೆನಾಗಿ ಬೆಸವುದುಮಂ ಸೌಭಾಗ್ಯದೊಳ್ ಬಿಸುಟುದುಮನೆಮ್ಮಯ್ಯನಱಿದು

ಕಂ|| ಅನುಪಮಮಪ್ಪ ಬೆಡಂಗಿನೊ
ಳನುನಯ ರಸಭಾವದೊಳ್ಪ ವನಿತಾ ವಿದ್ಯಾ
[ಬಿನ]ದನ ಜಾನದೊಳೆ ತ್ರಿಭು
ವನದೊಳೆ ಸಮನೆನ್ನ ಸತಿಗೆ ವನಿತೆಯರೊಳರೇ ೭

ವ|| ಎಂದು ಪೊಗೞಿಸುತ್ತಿಪ್ಪೊನಿರ್ದಂತಪ್ಪಾಕೆಗಿನ್ನೆಂತಪ್ಪ ಪುರುಷನಪ್ಪನೊ ಪೃಥ್ವೀದಳಪನೇನೆಂದುಮಱಿಯಲಾಗೆಂದು ಬಗೆಯುತ್ತಿಪ್ಪೊನೊಂದು ದಿವಸನೊರ್ವ ದಿವ್ಯಜ್ಞಾನಿಗಳಂ ವಿನಯದಿಂ ಕಂಡು ಬೆಸಗೊಂಡೊಡವರೆಂದರೀ ಪೇರಡವಿಯ ನಟ್ಟನಡುವಣ

ನೊಂದಾಲದ ಮರದಡಿಯೊಳ್ ನಿನ್ನ ಮಗಳನಿರುಳಪ್ಪಾಗಳಿರಿಸುವುದಲ್ಲಿಯೊರ್ವಂ ಬಂದಿರ್ದಾಕೆಯುಂ ಕಂಡು ನುಡಿಯುತ್ತಿರ್ಕುಮಾಕೆಗಾತನಾಣ್ಮನಕ್ಕುಮೆಂದೊಡಂದಿಂದಿತ್ತಲ್ಲಿಗೆ ವಪ್ಪೆನೀಯಡವಿಯುಂ ಹಿಡಿಂಬಾಟವಿಯೆಂಬುದಾದುದಿಲ್ಲಿಯೊರ್ವಂ ರಾಕ್ಷಸವಂಶಗದೆಯುಂ ಸಾಧಿಸಲ್ ಬಂದಿರ್ದಿನ್ನುಮನೆನ್ನಲಪ್ಪ ಕಾರಣಮುಮನಱಿದು ಗದೆಯುಂ ಸಾಧಿಸಿದಿಂ ಬಱಿಯುಮೆಮ್ಮವರೊಳಿನ್ನಂ ಬೇಡಿಪಡೆಯುದಲ್ಲಿಂಗಲ್ಲಿಗೆವರ್ಪಾಗಳೆಲ್ಲಂ ಬಱಿಯನೆ ಬಂದು ಗಿಂಟಱಿಸೂಳ[1][ಕ್ಕುಂ ಕಣ್ಣೊಳ್ ಕಾ][1]ದಿರ್ಪಂ ನೀನುಮೆನಗಾದೇಶಪುರುಷನಾದೆಯಾ ತನುಮಿನಿತು ಪೊತ್ತಿಲ್ಲಿ ಪೆಱರೊಳ್ ನುಡಿಯೆ ಸೈರಿಸದಿರ್ಪುಕ್ಕುಮೆಂದು ಕೆಲನಂ ನೋೞ್ಪಿನನ್ನೆಗಂ

ಕಂ॥ ಪಸಿದ ಪುಲಿ ಗರ್ಜಿಪಂತಿರೆ
ಮುಸಗಿ ಕಱುತ್ತೊದಱಿ ಬಗ್ಗಿಸುತ್ತಂ ಕೆಂಗೋಲ್
ಮುಸಗಿದ ಜವನಂತಿರೆ ರಾ
ಕ್ಷಸರೂಪೆಸೆದಿರೆ ಹಿಡಿಂಬನೆಯ್ತರೆ ವಂದಂ ೮

ವ॥ ಎಂದು ನಿಲೆ ಮರುಳ್ಪೆಂಡತಿ ಕೇಳಾ

ಕಂ॥ ದೀನರನತಿಬಲ ಗರ್ವದೊ
ಳೂನರಸತ್ವಂತ ಶೌರ್ಯಹೀನರನಿರುಳೊಳ್
ನೀನಣಮಱಿಯದೆ ಕೆಮ್ಮನೆ
ಮಾನಸರೆಂಬಿನಿತಱಿಂದ ನುಡಿವುದು ಜಮರೇ ೯

ವ॥ ಎನೆ ಹಿಡಿಂಬೆ ಬೆರ್ಚಿ ತಲೆಯುಂ ಬಾಗಿರ್ಪಾಗಳ್ ಭೀಮನಿಂತೆಂದಂ

ಕಂ॥ ನುಡಿದೊಡೆ ಕನ್ನೆಗೆ ದೋಷಮೆ
ನುಡಿಪನ ದೊರೆಯಱಿಯದೊತ್ತಿ ನುಡಿದೊಡಮೇಂ [2][ನೀಂ][2]
ಪೊಡರದಿರಣ್ಮಲೆ ಪೊಡರ್ದೊಡೆ
ಮಡಿವಾಪೊಡೆ ಪೊಲ್ಲದೆಂಬುದಂ ಬಗೆದಿಲ್ಲಾ ೧೦

ವ॥ ಎನೆ ಖೇಚರನಿಂತೆಂದಂ

1 ಕ್ಕಂಣ್ಣೊಕ್ಕಾ 2 ಪಿಂ

ಕಂ॥ ಎನ್ನ ಪೊಡರ್ಪಂ ಕಿಡಿಪ ಮ
ಹೋನ್ನತ ಬಲನೊಳನೆ ಜಗದೊಳಱಿಪೇಸಿಗನು
ತ್ಪನ್ನತಿಕೆಯನುಳಿದಿಪ್ಪುದು
ಕನ್ನೆಯನಾನೆೞೆದುಕೊಂಡು ಪೋಪೆನೀಗಳ್ ೧೧

ವ॥ ಎಂದೊಂದು ಕೆಯ್ಯೊಳ್ ಗದೆಯಂ ಪಿಡಿದು ನಿಮಿರ್ದೊಂದು ಕೆಯ್ಯೊಳ್ ಕನ್ನೆಯಂ ಪಿಡಿಯಲ್ಕೆಂದು ನೀಡಿದಾಗಳ್ ಭೀಮಂ ತನ್ನ ಗದೆಯಂ ಕೊಂಡು

ಕಂ॥ ಪಿಡಿದೆಱೆದೊಯ್ವಂ ಗಡಮಿಾ
[1][ಗದೆಯಿಾ][1]ಯಣ್ಣಲಿಗನೆಂದುಮೊನ್ಮ್ರಗನೆಂದೆ
ದೋರ್ಡಮೊಯ್ದ ಡಮನನವನ ಗದೆ
ಸಿಡಿಲ್ದಗುಣಿ ಪಾಱುವಂತೆ ಪಾಱುತ್ತಾಗಳ್ ೧೨

ವ॥ ಆ ಖೇಚರನಂತು ನಿರಾಯುಧನಾಗಿ ನಿಲ್ತಾಸಂ ಕಂಡು ನಿರಾಯುಧನ ನಾಯುಧದಿಂ ಕೊಲಲಾಗದೆಂದು ಪೇಲ್ದಾಯ್ದನನ ತೋಳ ಮೊದಲಂ ಪಿಡಿದೆತ್ತಿ ಪೊಯ್ದು ಕೊಂದು ನೋಡು ನಿನ್ನನೆೞೆದೊಯ್ವಣ್ಣನ ಪಟ್ಟಂದಮನೆಂದೊಡಾಂ ನಿನ್ನನಲ್ಲ ದಾರುಮನೀ ಭವಕ್ಕೆ ನೋಡಲುಂ ಕೂಡಲುಮಾಗದೆಂಬುದಂ ಮುನ್ನಮೆಂದೆನೆಂದೊಡಿಂ ತಪ್ಪಡಿಂ ಪೆಱದೇನೆಂಬುದೆಂದು ನುಡಿಯುತ್ತಿರ್ದನಂ ಧರ್ಮಜಾದಿಗಳೆಚ್ಚ[2][ತ್ತಿ][2]ರ್ದ ಕನ್ನೆಯಾದೊಳಾ ದೆಸೆಯೊಳಿಱಿಮುಱಿಯಾಗಿ ಕಡೆದುಪಟ್ಟ ರೂಪಾವುದೆನ[3][ಲಿ][3]ನ್ನೆಗಂ ನೆಗೞ್ದೆಯೆನೆ ತತ್ಸಂಬಂಧಮನಱಿಯೆ ಪೇೞೆ ಜೋದ್ಯಂಬಟ್ಟಿರ್ದನಂ ಬೆಳಗಾದೊಡೆತ್ತ [4][ಮೋಪುದು][4] ನಡೆವಮೆಂದೊಡೆ ಹಿಡಿಂಬಿಯೆಂಗುಮಿಲ್ಲಿಗೆ ಕಿಱಿದಾನುಮಂತರದೊಳೇಕಚಕ್ರಪುರಮುಂಟದನೀ ಸತ್ತ ಹಿಡಿಂಬ ಖೇಚರಂ ಪೊಟಿಲ್ ಮಾಡಿದೊಡಲ್ಲಿ ಮಾನಸರಿಲ್ಲ ಧನ ಧಾನ್ಯ ಸಂಪತ್ತಿಯೆಲ್ಲಮುಂಟಲ್ಲಿ ಕೆಲವು ದಿವಸಮಿರ್ಪ್ಪುಡಮೊಳ್ಳಿತೆಂದೊಡಮಂತೆಗೆಯ್ವೆಮೆಂದಾಕೆಯನೊಡಗೊಂಡು ನಡೆದಾ ಪೊೞಲನೆಯ್ದೆ ಪುರವಂದಮೆಲ್ಲಂ ಪದೊಳಮೊಳ್ಳಿತ್ತೆಂದು ಎಲ್ಲೆಡೆಯೊಳಂ ನೋಡುತ್ತಮಂತೆ ಬಂದರಮನೆಯಂ ಪೊಕ್ಕಲ್ಲಿ ಭೀಮಂಗಂ ಹಿಡಿಂಬೆಗಂ ಮದುವೆಯಂ ಮಾಡಿ ಸುಖದಿನಿರ್ದು ಕೆಲವು ದಿವಸದಿಂ ಹಿಡಿಂಬೆಗೆ ಗರ್ಭಮಾಗಿ ನವಮಾಸದಿಂ ಪುಟ್ಟಿದ ಗಂ[5][ಡು][5]ಗೂಸಿಂಗೆ ಘಟೋತ್ಕಚನೆಂದು ಪೆಸರನಿಟ್ಟು ಕೂಸುಮನವರಕ್ಷೆಯುಮನವರಮ್ಮನ ಪೊೞಲ್ಗೆ ಕಳಿಪಿ ತಾವಲ್ಲಿಂದಂ ತೆಂಕಮೊಗದೆ ಮದಱಿಂ ಬಂದು ಕರ್ಣನೊಳಂಗವಿಷಯದೊಳಾತನ ಚಾಗದ ಪೆಂಪುಮಂ ಪರಾಕ್ರಮದಳುರ್ಕೆಯುಮಂ ಕೇಳುತ್ತುಂ ಬಂದಾ ನಾಡಂ ಕಱಿದು ಪೋಪಾಗಳಿದಿರಂ ಬರ್ಪನೊರ್ವ ಪಥಿಕನನೆಲ್ಲಿಂದಂ ಬಂದೆಯಾ ನಾಡ ಪಡೆಮಾತೇನೆಂದೊಡಾತನಿಂತೆಂದಂ

1 ಕೆಯನೀ 2 ತ್ತಿಯಿ 3 ದು 4 ಮೊಘು 5 ಡ

ಕಂ॥ ಈ ದೆಸೆಯೊಳೊಪ್ಪಿನಾಗರ
ಮಾದುದು ಹೇಮಾದ್ರಿಯೆಂಬ ಪೊೞಲುಂಟದನ
ತ್ಯಾದರದಿಂದಾಳ್ವಂ ನಯ
ವೇ[1][ದಿ][1]ನೃಪಂ ದ್ರುಪದನೆಂಬೊನತಿಸುತ ವಿಭವಂ ೧೩

ವ॥ ಆತನ ಮಗಳ್ ದ್ರೌಪದಿಯೆಂಬೊಳಾಕೆಯ ರೂಪು ವಿಳಾಸ ವಿಭ್ರಮಂ ಗಳತ್ಯಂತಮೊಪ್ಪಿತ್ತಾದೊಡವರಯ್ವರುಂ ನಿಂತಪ್ಪೊನ ಮಗಳಂ ಪಾಂಡವರರ್ಜುನಂಗಲ್ಲದೆ ಕುಡೆನೆಂದಿರ್ದು ಪಾಂಡವರಯ್ವರುಮರಗಿನ ಮನೆಯೊಳ್ ಸತ್ತರೆಂಬುದಂ ಕೇಳ್ದು ಮನಕ್ಷತ ಮಾಗಿರ್ದೊರ್ದ ದಿವ್ಯಜ್ಞಾನಿಗಳಂ ಪಾಂಡವರಿಂತಾದೊರೆಂದಪ್ಪರಿದೆಂತೆಂದೊಡವರಂ ತಾಗರೆಂದೊಡೊಸೆದಂತೆಯಲ್ತೆ ಮುನ್ನೊರ್ಮೆ ಸಮರದೊಳೆನ್ನಂ ಗೆಲ್ದೆನ್ನರ್ಧರಾಜ್ಯಮಂ ದ್ರೋಣಂಗುಪಾಧ್ಯಾಯ ಪ್ರತಿಪತ್ತಿಯೆಂದು ಕೊಡಿಸಿದ ಸಾಹಸಪುರುಷಂಗಂತೆ ತಕ್ಕು ವೆಂದು ನಿಶ್ಚಯಿಸಿ ಮತ್ತಾತನನಿಂತಲ್ಲದಾರಯ್ಯಲಾಗೆಂದು ತನ್ನ ಪೊಱವೊೞಲಲ್ಲಿ ಮಹಾ ಸ್ವಯಂಬರಶಾಲೆಯಂ ಮಾಡಿಸಿ ಜಂತ್ರದ ಮೀನನಂಬರದೊಳ್ ನೋಡಿ ದಿವ್ಯಚಾಪ ಮನರ್ಚಿಸಿಟ್ಟೀ ಬಿಲ್ಲನಾವೊನಪ್ಪೊಡಮೇಱಿಸಿ ಗಗನಮತ್ಸ್ಯಮನೆಚ್ಚೊಂಗೆನ್ನ ಮಗಳಂ ಕುಡುವೆನೆಂದು ಗೋಸನೆ ಪರೆಯೆ ಮಾಡಿದೊಡಾ ಸ್ವಯಂಬರಕೆಲ್ಲಂ ನೆರೆವಪ್ಪೊರೆಂದು ಪೇೞಿಬ್ದುಡಂತೆಯೆಂದು ಕೇಳ್ದಾತನನಂತೆ ಪೋಗಲಿತ್ತು ನಮ್ಮನಿಲ್ಲಿಂದಿತ್ತ ಪೀನಮುಱಿ ಪೊರಿಲ್ಲಿನ್ನಂ ರೂಪುಗರೆದು ಪೋಗಿ ಸ್ವಯಂಬರಮಂ ನೋೞ್ಪಂದಾ ಪೊೞಲ್ಗೆ ಪೋಗಿ ಬ್ರಾಹ್ಮಣ ವೇಷಮಂ ಕೈಕೊಂಡು ಪೊಕ್ಕಲ್ಲಿಯೊಂದು ಪಾರ್ವರ ಮನೆಯೊಳ್ ವಿಶ್ರಮಿ ಸಿರ್ದರಿರೆ ಮಱುದಿವಸಂ ದ್ರೌಪದಿಯುಂ ಸ್ವಯಂಬರಕ್ಕಮಿವರೆಲ್ಲಂ ನೆರೆದು ಬನ್ನಿಮೆಂದು ಸಾಱಿಪ್ಪೇೞ್ದು ಕನ್ನೆಯುಂ ಪರ್ವಿಂದಿರ್ ಬಂದು ನೆಯ್ಯೇಱಿಸಿ ಸೇಸೆಯಿಟ್ಟು ಮಾಸಿಸಿ ದುಕೂಲಮನುಡಿಸಿ ಕಯ್ಗೆಯ್ಸಿದಾಗಳ್ ಕೆಲರಿಂತೆಂಬರ್

ಕಂ॥ ಈಕೆಗೆ ಪಸದನಮೆಂಬುದ
ದೇಕೆಗೆ ಪಸದನಕೆ ತಾನೆ ಪಸದನಮಾಗಿ
ರ್ದಾಕೆಯ ಬೆಡಂಗು ಮೂಱುಂ
ಲೋಕಮನೆಱಗಿಸುಗುಮಚ್ಚಿಗಂಗೊಳ್ಪದಿಂ ೧೪

ವ॥ ಎಂದೊಡಾಕೆಗಳೇಂ ಬಣ್ಣಿ[ಪ]ಮೆಂಬುದಪ್ಪುದಾದೊಡಂ ಶೋಭನ ಕಾರ್ಯಕ್ಕೆ ಬೇೞ್ಪುದೆಂದು ಪಸದನಂಗೊಳಿಸಿ ರಥಮನೇಱಿಸಿ ಬೀಸುವ ಚಾಮರಂಗಳುಂ ಪಿಡಿವ ಸೀಗುರಿಗಳುಂ ಪೊಗೞ್ವವರುಂ ಬೆರಸು ದ್ರೌಪದಿಯು ರಥಂ ಮುಂದೆ ನಡೆಯೆ ದ್ರುಪದಂ ಮಹಾವಿಭೂತಿಯಿಂ ಸ್ವಯಂಬರಶಾಲೆಗೆ ವಂದನಾಗಳ್ ನೆರೆದರಸುಮಕ್ಕಳೆಲ್ಲಂ

1 ದ್ರಿ

ಬಂದು ತಂತಮ್ಮ ಚೌಪಳಿಗೆಗಳೊಳ್ ಬಂದಿರ್ದರುಂ ಬ್ರಾಹ್ಮಣವೇಷಂಗೊಂಡು
ಪಾಂಡವರುಂ ಬಂದು ಪಾರ್ವರ ನೆರವಿಯೊಳೊಡಗಳೊಡಿರ್ದರಾಗಳಱಿಸಿರ್ದ ಬಿಲ್ಲನೇಱಿಸಿ
ವಿಳಾಸನೆಸೆಯೆಂದು ಸಾಱುವೊಡವೇಸಱಿಂದು ಮುನ್ನಂ ಬಂದು ದುರಿಯೋಧನನೇಱಿಸ
ಲಾಱದೆ ಪೋದಬೞಿಯಂ ಕರ್ಣನುಮಾರ್ತನಿಲ್ಲ ದುಶ್ಶಾಸನ ಕೃಪಾದಿಗಳ್ ಸಿಗ್ಗಾಗ
ಲಾಱೆಮೆಂದಿರ್ದರಾಗಳರಸುಗಳೊಳಾರುಮಾರ್ತರಿಲ್ಲೆನ್ನೆಬೞಿದ ಮಱುಂ ಜಾತಿಯೊಳಾರ
ಪ್ರೌಢಮಾರ್ಪರ್ವರ್ಕ್ಕೆಂಬುದಂ ಕೇಳುತ್ತಿ ಕಾಸೆಯನುಟ್ಟು ಯಜ್ಞೋಪವೀತಮನೇಱಿಸಿ
ದರ್ಜುನಂ ಧರ್ಮಜಂಗೆ ಪೊಡೆಮಟ್ಟು ಬಂದು ದ್ರೋಣನಂ ಸ್ಮರಿಸಿ ಬಿಲ್ಲನೇಱಿಸಿ ನೀವಿ
ಜೇವೊಡೆದಂಬಂ ತಿರುವಾಯೊಳಿಟ್ಟು ತೆಗೆದೆಱಗಿ ಪೊಕ್ಕು ಗಗನದೊಳೊಡ್ಡಿದ ಜಂತ್ರ
ಮತ್ಸ್ಯಮನೆಚ್ಚಾಗಳ್

ಕಂ॥ ಅಂಕದ ನರೇಂದ್ರತನಯರು
ಪೊಂಕಂಗಿಡೆ ಜನದ ನೆರವಿ ಬಾಯಂಬಿಡೆ ಮಿಾ
ನಂ ಕೊಳದೊಳ್ ಬೀಸಿದ ಗಾ
ಳಂ ಕೊಂಡಂತಾಗೆ ಕೊಂಡುದರ್ಜುನನ ಶರಂ ೧೪

ವ॥ ಅಂತುಮಲ್ಲದೆ

ಕಂ॥ ಒಸೆದಾಗಳ್ ದ್ರುಪದಾತ್ಮಜೆ
ಕುಸುಮಶರಪ್ರಹತೆ ಜೇಗಮಾತನ ಕೊರಲೊಳ್
ಕುಸುಮದ ಮಾಲೆಯನಿಕ್ಕಿದೊ
ಡೆಸೆದವು ದೆಸೆದೆಸೆಯೊಳೊಸಗೆವಱೆ ಬಹುವಿಧದಿಂ ೧೫

ವ॥ ಆಗಳ್ ದ್ರುಪದನೀ ಸಾಹಸಮರ್ಜುನಂಗಲ್ಲದಾಗದೆಂದೆಯ್ದೆ ವಂದು ನೋಡಿ
ಮುಂಕೆಂಡಱಿವನಪ್ಪುದಱಿಂ ತನ್ನ ಬಗೆದಾತನಾದುದಂ ಸ್ವಯಂಬರಧರ್ಮದೊಳೊಂದಾ
ದೊಡೊಸೆದು ಕನ್ನೆಯುಂ ರಥದೊಳಿಟ್ಟೆರ್ವರುಮನೇಱಿಸಿ ಧರ್ಮಜಾದಿಗಳನೊಡಗೊಂಡು
ಮಹಾವಿಭೂತಿಯಿಂ ಪೊೞಲಂ ಪುಗೆ ಕಂಡು ದುರ್ಯೋಧನಂ ಸಿಗ್ಗಾಗಿ ಎನ್ನುಮನೆನ್ನ
ದೊರೆಯರುಮಂ ಬಗೆಯದೊರ್ವ ಬಡ ಪಾರ್ವಂಗೆ ಕೂಡಲೊಡಗೊಂಡು ಪೋದಪ್ಪೊಂ
ಗಡ ಕೊಟ್ಟನುಂ ಕೊಂಡನುಮೆನ್ನ ಕೈಯೊಳೆಂತು ಬಾೞ್ವರೆಂದು ತನ್ನ ಸಮಸ್ತಬಲಂಬೆರಸು
ಮುಂಕಲ್ ಬಗೆದಾಗಳ್ ದ್ರುಪದನಱಿದು ಧೃಷ್ಟದ್ಯುಮ್ನಂ ಮೊದಲಾಗೆ ತನ್ನ ಬಲಮು
ಮೊಂದುಮಾಡಿ ಪಾಂಡವರುಂ ಪೆಱಗಿಕ್ಕಿ ನಿಲೆ ಪಾಂಡವರ ಬೇೞ್ಪ ಕಾಡೊಳ್ ಮಱೆ
ಕೊಂಡಂತಾದುದ್ದಂತು ರೂಪುಗರೆಯಲೇಕೆಂದು ತಂತಮ್ಮಾಯುಧಂಗಳಂ ಕೊಂಡು ಸನ್ನದ್ಧ
ರಾಗಿ ತಾಗಲಿರ್ದಾಗಳಱಿಸಂ ಗಾಂಗೇಯ ಧೃತರಾಷ್ಟ್ರ ವಿದುರ ದ್ರೋಣಾದಿಗಳ್
ಕಂಡು ಪಾಂಡವರಂದಮಪ್ಪುದಲ್ಲದಂದಾ ಬಿಲ್ಲನೇಱಿಸುವುದುಂ ಗಗನಮತ್ಸ್ಯಮುಂ

ಜಾಱೆದ್ದು ಪಾಱುವುದುಮರ್ಜುನಂಗಲ್ಲದೆ ಕೂಡದೆಂದು ಸಂದೇಹಂಗಿಡೆ ನೋಡಲಟ್ಟೆ ಸಂಬಿ ನಾಲ್ವರುಮಾಳೆಲ್ಲಮನಿರಿಸಿ ತಾಮೆ ಪೆತ್ತಪ್ಪುದಂ ಕಂಡು ಪಾಂಡವರಱಿದು

ಕಂ|| ಅಂತುಂ ಛಿದ್ರಿಸಿ ಕೊಲಲೋ
ರಂತೆ ತಗುಳ್ದಿರ್ದ ಪಾಪಿ ತಾಂ ಮಸಗಿದನೋ
ರಂತಮೆ ನಾಮೆನುತಿರೆ ಮ
ತ್ತಂ ತೀರ[1][ದು][1] ಕಜ್ಜಮಾರುಮನ್ನೇಗೆಯ್ವಂ ೧೭

ವ|| ಎಂದು ನುಡಿಯುತ್ತಿರಲೆಯ್ದೆವಂದೊಡಯ್ವರುಮಾ ನಾಲ್ವರ್ಗೆ ಪೊಡೆವಟ್ಟೊಡವರುಮಪ್ಪಿಕೊಂಡು ಪರಸಿ ಮನ್ಯಕೆತ್ತಿಂತು ನೆಗೞ್ದ ಪಾಪಕರ್ಮನ ನೆಗೞ್ತೆಯಿನೆಂತು ಬರ್ದುಂಕಿದಿರೆಂದೆಲ್ಲಮಂ ಬೆಸಗೊಂಡೊಡರಗಿನ ಮಾಡದಿಂದಿತ್ತಣವಸ್ಥಾಂತರಮಂ ಪೇೞೆ ಕೇಳ್ದು ಬೆಗಂಬಟ್ಟಂತಾಗಲಾಗೆಂದವರನಲ್ಲಿರಿಸಿ ಮಗುೞ್ದು ದುರ್ಯೋಧನನಲ್ಲಿಗೆ ಪೋಗಿ ತದವಸ್ಥಾಂತರಮೆಲ್ಲಮನಱಿಯೆ ಪೇೞ್ದಂ ಪೆಱದೇನುಮೆನ್ನದಿರೆಂದು ಕೆಯ್ಯಂ ಪಿಡಿದೊಡಗೊಂಡು ಬಂದುಮುಚಿತಪ್ರತಿಪತ್ತಿಗಳಿಂ ಕಾಣಿಸಿದಾಗಳ್ ದ್ರುಪದಂ ಬಂದೆಲ್ಲರುಮನೆನ್ನ ಮನೆಗೆೞ್ತನ್ನಿಮೆಂದೊಡಗೊಂಡು ಪೋಗಿ ಪೊೞಲಂ ಪೊಕ್ಕದುವೆ ಮುಹೂರ್ತಮಾಗರ್ಜುನಂಗಂ ದ್ರೌಪದಿಗಂ ಮಹಾವಿಭವದಿಂ ಮದುವೆಯಂ ಮಾಡೆ

ಮ|| ನಯಸದ್ಭಾವದ ನೋಟಮುಟ್ಕಿಱಿತೂಳ್ಕೊಡಂಬಟ್ಟೊಂದು ಬೇಟಂ ಕರಂ
ಪ್ರಿಯಮೊಳ್ ಕೂಡಿದ ಜಾಣ್ ಮನಂಗೊಳಿಪ ನಾಣ್ ಸೌಭಾಗ್ಯ ಭಾಗ್ಯಂಗಳಾ
ಶ್ರಯಮಾಗಿರ್ದ ಮಹಾತ್ಮೆಯೊಪ್ಪೆ ವಿಳಸತ್ ಶ್ರೀಸನ್ನಿಭಂ ದ್ರೌಪದಿ
ಪ್ರಿಯೆಯೊಳ್ ಫಲ್ಗುಣನಂತು ಕೂಡಿ ಸುಖದಿಂದಿರ್ದಂ ಮಹೋತ್ಸಾಹದಿಂ ೧೮

ವ|| ಅಂತಿರ್ಪಲ್ಲಿಯೊಂದು ದಿವಸಂ ಗಾಂಗೇಯ ಧೃತರಾಷ್ಟ್ರಾದಿಗಳಪ್ಪ ಮುದುಗಣ್ಗಳ್ ದುರ್ಯೋಧನ ದುಶ್ಶಾಸನಾದಿ ಪ್ರಧಾನ ಪುರುಷರನೇಕಾಂತಕೊಯ್ದಿನ್ನಪ್ಪೊಡಂ ಪಾಂಡವರೊಳ್ ಸೌಧರ್ಮಿಕೆಗಿಡದೆನ್ನ ಪಾಂಡುರಾಜನಂತೆ ನೆಲನಂ ಪಚ್ಚಾಳ್ವುದೆಂದೊಡೆ ವಿದುರನಣ್ಣನೆಂದುದೊಳ್ಕಿತ್ತದುವೆ ಪಾೞಿಯುಂ ಬಗೆಯದೆ ಬಿಗುರ್ತು ನೆಗೞ್ವೊಡಿಳಿಯರುಮಲ್ಲರೆಂತೆನೆ

ಕಂ|| ಮಸಗರ್ ಪಾಂಡವರಂತುಂ
ಮಸಗಿ ತಗುಳ್ದುಗ್ರ ಕೋಪದಿಂದೆಯ್ತಪ್ಪೊಂ
ದೆಸಕದಗುರ್ಬಿಂಗೆಂಟು[ಂ]
ದೆಸೆಗಳುಮದ್ರಿಗಳುಮಿರ್ಪುವೇ ಮುಳಿದಡವರ್ ೧೯

---

1 ಮ ವರ

ವ|| ಅವಱಿಂ ದಿವ್ಯಮಾನಸರವರ್ಗೆ ಕೂರ್ತು ನೆಗೞಲಲ್ಲದೆ ಬಿಗುರ್ತು ನೆಗೞಲಾಗದೆಂದುದಂ ಕೇಳ್ದತ್ತಲ್ ನಿಮ್ಮ ತಮ್ಮ ತಾಯ್ ಮಕ್ಕಳ್ತನಕಂ ಸೌಧರ್ಮಿಕೆಗಂ ಕೂರ್ತು ಬಾೞೆನೆಂಬುದಂ ತಕ್ಕದವರಳವಿಂತೆಂದೆನ್ನ ಪಕ್ಕದರ್ಗುವು ಮಾಡಿ ನುಡಿವುದು ಪೊಲ್ಲದು ಕೇಳಿಮೆಂದಿಂತೆಂದಂ

ಕಂ|| ಎನ್ನಂ ತಾಂ ಪೊಗೞುತ್ತಿರ
ಲ್ಕೆನ್ನಂಗಂ ಬಾರದೆಂದೊಡೆನಗಕ್ಕುಮೆಚ್ಚಿ
ಪನ್ನತಿಕೆಯೊಳಂತಯ್ವರು
ಮೆನ್ನೊಂದಂಬಿಗೆ ತೊಡರ್ದೊಡವರ್ಗಳೆ ಗಂಡರ್ ೨೦

ವ|| ಅಂತು ಪೊಱಗಣಿಂ ಬಂದ ದೇಸಿಗನೆನ್ನನೊಮ್ಮೆ ಪೊಣರ್ಚೆ ನೋಡಿ ಬೞಿಯಂ ನಿಮ್ಮ ಸೌಧರ್ಮಿಕೆಗಿಡ[ದ]ದೊಂದಾಗಿ ಬಾೞಲಪ್ಪುದೆನೆ ದುಶ್ಶಾಸನನೆಂದನಂತೆ ನೀನಲ್ಲದೆಯುಂ ಕುರುಬಲದೊಳಾರಾರುಂ ದೊರೆಯರ್

ಕಂ|| ತೊಡರಲ್ಕಣ್ಮದೆ ಕೆಮ್ಮನೆ
ಬುಡುಕೆಯ ಮೊದಲಂತೆ ಕುಂಬುತಿರ್ಪನೇಕುಂ
ಟೊಡೆತಾಗಿ ಮಾಣ್ಬಿರಯ್ವರು
ಪೊಡವೆನ್ನಯ್ದುಂ ಬೆರಲ್ಗೆ ನೆಱೆದೊಡೆ ಸಾಲ್ಗುಂ ೨೧

ವ|| ಎನೆ ಗಾಂಗೇಯನೆಂದನಂತೆ ಕಲಿತನದ ಬಲ್ಲಾಳ್ತನದಗ್ಗಳಿಕೆ ನಿಮಗುಂಟಾಗಿಯುಂ ದೈವಬಲದಂದಮಂ ಬಗೆಯಿರೆ

ಚಂ|| ಅರಗಿನ ಮಾಡದೊಳ್ ಪುಗಿಸಿ ಸುಟ್ಟಡೆ ಪಾಂಡವರೇನೊ ಸತ್ತರೇ
ಗಿರಿಗಹನಂಗಳೊಳ್ ಖಚರ ರಾಕ್ಷಸರೊಳ್ ತೊಡರ್ದಲ್ಲಿ ಸೋಲ್ತರೇ
ನೆರೆದ ನರಾಧಿಪರ್ ಧನುವನೇಱಿಸಲಾಱದೊಡೇಱಿಸುತ್ತೆ ಮಾ
ಣ್ದಿರದೆ ನರಂ ಮಹಾಂಬರದ ಮತ್ಸ್ಯಮನೆಚ್ಚಳಪೆಂತು ಪೇೞಿರೇ ೨೨

ವ|| ಅಂತವರ್ಗೆ ಸಾವಂತಪ್ಪಪಾಯಂಗಳೆಲ್ಲಂ ಬಾೞ್ವುಪಾಯಂಗಳನೆ ಮಾಡಿದಪ್ಪುವದಱಿಂದೆಂತುಮವರೊಳ್ ನಣ್ಪೆ ಕಜ್ಜಮೆನೆ ಧೃತರಾಷ್ಟ್ರನೆಂದನೆನ್ನ ಮಗನ ಪೆರ್ಚೆಗಮುಮೆ ಕಜ್ಜಮೆಂದು ಮಕ್ಕಳನೊಡಂಬಡಿಸಿ ಧರ್ಮಜಂಗೆ ಬೞಿಯಮಟ್ಟಿ ಬರಿಸಿ ಪೞಿಯ ನಿಮ್ಮ ಬಾೞಿಕೆಯೊಳ್ ನಿಲ್ಲಿಮೆಂದು ಪೊಡೆಮಡಿಸಿ ವಿಕಲ್ಪಮಿಲ್ಲದೊಂದಿ ನೆಗೞಿಮೆಂದು ಸಮರ್ಪಿಸಿ ಪಾಂಡವರನಿಂದ್ರಪ್ರಸ್ಥಕ್ಕೆ ಕಳಿಪಿ ಕೌರವರೆಲ್ಲಂ ಹಸ್ತಿನಪುರಕ್ಕೆ ಪೋದಿಂ ಬೞಿಯಂ ದ್ರುಪದಂ ಮಹಾವಿಳಾಸದಿಂ ದ್ರೌಪದಿಯುಂ ಕಳಿಪೆ ಪಾಂಡವರ್ವಂದಿಂದ್ರಪ್ರಸ್ಥಪುರಮುಂ ಪೊಕ್ಕಿರ್ದಲ್ಲಿ ಧರ್ಮಪುತ್ರಂ ಮುನ್ನೆ ತನ್ನ ಮದುವೆ ನಿಂದ ಪೊಡಿಮಂ ಬರಿಸಿ

ತನಗಾಗಿರ್ದ ಕನ್ನೆಯರಂ ಸಿವಿಗೆಯನಟ್ಟಿ ಬರಿಸಿ ಮದುವೆನಿಂದು ಸುಖದಿನಿರ್ದ ತಮ್ಮಂದಿರ್ಗೆಲ್ಲಂ ಬೇಱೆವೇಱೆ ಪೊೞಲ್ಗಳಂ ಕೊಟ್ಟಿರಿಸಿ ಮುನ್ನಮರಗಿನ ಮಾಡದೊಳ್ ತಾವು ಸತ್ತರೆಂಬ ಮಾತಿಂಗುಜ್ಜಿಗುಬಟ್ಟಿರ್ದ ಯಾದವರ್ಗೆಲ್ಲಂ ಬರ್ದುಂಕಿದ ಅಂತರಮನಟ್ಟಿದೊಡವರ್ ಕೇಳ್ದೊಸೆದು ಬಱಿಯಟ್ಟಿ ಮಹಾವಿಭೂತಿಯುಮಂ ಖ್ಯಾತಿಯುಮಂ ಮೆಱೆದು ಪಾಂಡವರ್ ಪೋಗಿ ದ್ವಾರಾವತಿಯೊಳ್ ನಾರಾಯಣಂ ಮೊದಲಾಗೆ ಯಾದವರೆಲ್ಲರುಮನುಚಿತ ಪ್ರತಿಪತ್ತಿಗಳಿಂ ಕಂಡಿರ್ದು ಕೆಲವು ದಿವಸದಿಂ ಬಲದೇವರಿಂ ಕಿಱಿಯಳ್ ಸುಭದ್ರೆಯುಮಂ ಕುವಳಾವತಿಯುಮನರ್ಜುನಂಗೆ ಕುಡೆ ಮದುವೆನಿಂದು ಮಹೋತ್ಸವದಿಂ ಕಳಿಸಿ ಮಗುೞ್ದು ಬಂದು ತಮ್ಮ ಪೊೞಲೊಳಿರೆ ದ್ರೌಪದಿಗೆಮಕ್ಕಳಾದಿಂ ಬೞಿಯಂ ಸುಭದ್ರೆಗಂ ಗರ್ಭಮಾಗಿ ನವಮಾಸಂ ನೆಱೆದು ಪುಟ್ಟಿದೊಡಭಿಮನ್ಯುವೆಂದು ಪೆಸರಾಗಿ ಬಳೆವನೇಕ ಶಾಸ್ತ್ರಪ್ರವೀಣನಾಗಿರ್ದಾತನ ವಿವಾಹಕಲ್ಯಾಣದ ಮಹಾವಿಭೂತಿಗಮವರ ಬಲದ ಪೆರ್ಚಿಂಗಂ ವನಿತಾಸಂಕುಳದ ಪೆರ್ಚಿಂಗಂ ಶೌರ್ಯದಳುರ್ಕೆಗಂ ಕಾರ್ಯದ ನಿವಿರ್ಕೆಗಂ ದುರ್ಯೋಧನಂ ಮತ್ಸ್ರಿ ಕಸಲ್ದು ತನ್ನೊಳೊಡಂಬಟ್ಟ ನಂಟ[1][ರಂ][1] ಮಂತ್ರಿಗಳಂ ಬರಿಸಿ ಮಂತಣವಿದ್ದೇಗೆಯ್ವಂ ಪಾಂಡವರಪ್ಪೊಡೆ ತಮಗೆ ಪೆರ್ಚಮಾಗೆ ನಮ್ಮನಡಂಗೊತ್ತಿ ನೆಗೞ್ವನ್ನರಾದೊಡೆಲ್ಲಂ ತಂತಮ್ಮ ಬಲ್ಲ ಕಜ್ಜಂಗಳಂ ಪೇೞ್ದಂಬೞಿಯಂ [2][ಶಕುನಿಯಿಂ][2] ತೆಂದಂ

ಉ॥ ಮಾಡಿಸಿ ನಾಟವಾಸಗೆಯನೊಯ್ಯನೆ ಪೇಳಿಸಿ ನಿಮ್ಮೊಳೊಮ್ಮೆ ಜೂ
ದಾಡಿಸಿ ಧರ್ಮನಂದನನನೊಪ್ಪಿರೆ ಗೆಲ್ದಡೆ ಸೋಲ್ತು ಸಿಗ್ಗಿನೊಳ್
ನಾಡುಮನೊಡ್ಡಿಯಾಡಿದೊಡೆ ಗೆಲ್ವುದು ಗೆಲ್ದ ಬೞಿಕ್ಕವಂದಿರುಂ
ನಾಡನೆ ಪತ್ತುವಿಟ್ಟು ಪಱುವಟ್ಟು ಕೆಟಲ್ದಘಪಟ್ಟುವೀಯರೇ ೨೩

ವ॥ ಎಂದೊಡಾ ಕಜ್ಜಮಂ ಮನಂಗೊಂಡು ದುರ್ಯೋಧನನಲ್ಲಿಂದಮೆರ್ದು ಪೋಗಿ ಗೂಢದೊಳ್ ನಾಟವಾಸಗೆಗಳಂ ಸಮೆಯಿಸಿ ತನ್ನ ಮನೆಯೊಳ್ ಪಿರಿದೊಂದೊಸಗೆಯಂ ಮಾಡಿ ಪಾಂಡವರಂ ಬರಿಸಿ ಕರಂ ಪ್ರಿಯಂಗೆಯ್ದಿರಿಸಿ ಪೇಳಮವರೊಳೆಂಬುದಕ್ಕೊಳ್ಳಿತ್ತು ಪೇಳಿಸಿರ್ದೊಂದು ದಿವಸಮವರುಂ ತಾನುಂ ಗೋಷ್ಠಿಯೊಳಿರ್ದುವಲ್ಲಿ ಜೂದಂ ಪೊಣರ್ಚಿ ಪೆಱರನಾಡಿಸಿ ತಾಮುಂ ನೋೞ್ಪಂತೆಗೆಯ್ದಿನಿಸುಪೊತ್ತು ನೋಡುತ್ತಿರ್ದಂತಂತೆ ಮೇಳದೊಳ್ ನುಡಿಯುತ್ತಿರ್ದಣ್ಣ ನಾಮಾಡುವಮೆಂದು ದುರ್ಯೋಧನಂ ಧರ್ಮಪುತ್ರನೊಳ್ ತಗುಳ್ದಾಡುತ್ತಿರ್ದಲ್ಲಿ ಕೆಯ್ಯಡಕದೊಳ್ ದುರಿಯೋಧನಂ ನಾಟವಾಸಗೆಯಂ ಪುಗಿಸಿಯಾಡಿ ವಸ್ತುವಾಹನಂಗಳೆಲ್ಲಮಂ ಗೆಲೆ ಶರಪ್ರಯೋಗದಿಂ ಗೆಲೆ ಭೀಮಾರ್ಜುನರ್ ಮಸಗಲ್ ಬಗೆದಣ್ಣಂಗಂಜಿ ಮಾಣ್ದರಾಗಳ್ ಧರ್ಮಜಂ ಸಿಗ್ಗಿನೊಳ್ ನಾಣ್ಚಿವಡೆ ಕೆಲದವರೆಂದರೀಯೊಡ್ಡಮಂ ಗೆಲ್ದರ್ ಪನ್ನೆರಡು ವರ್ಷಂಬರ ನಾಡನಾೞ್ವೆ

1 ರುಂ 2 ಶಲ್ಯನಿಂ

ದೆಂದು ಸಮಕಟ್ಟಿದೊಡನಂತಪ್ಪುದಕ್ಕೆಂದಾಡಿ ಸೋಲ್ತಾಗಳ್ [1][ಶಕುನಿಯಂ][1] ನೋಡಿ ಕಣ್ಣಱಿದು ದುರ್ಯೋಧನಂ ನೀಂ ಸೋಲ್ಗುವೆಂದೆರ್ದು ತನ್ನ ಮಾಡದೊಳಗಂ ಪೊಕ್ಕಂ ಧರ್ಮಪುತ್ರಾದಿಗಳ್ ತಂತಮ್ಮ ಬೀಡಿಂಗೆವಂದಿರ್ದು ಕಿಱಿದುಂ ಬೇಗದಿಂ ದುರ್ಯೋಧನಂ ತನ್ನ ಪೆರ್ಗಡೆಗಳನಟ್ಟಿದೊಡವರ್ ಬಂದುಮಿಂತೆಂದರ್

ಕಂ॥ ಜೂದಾಡಿ ಸೋಲ್ತುದಂ ತಾಂ
ಸೌಧರ್ಮಿಕೆ ಬಗೆಯದಿರ್ಪುದೆಂದಟ್ಟಿದನೆಂ
ದಾದರದಿನವರ್ ನುಡಿದೊಡೆ
ಜೂದಂ ಸೋಲ್ತೀಯದೆಂಬ ಸಿತಗರುಮೊಳರೇ ೨೪

ವ॥ ಬಂದೊಳ್ಳಿಕೆಯ್ದಿರ್ ಕೊಂಡು ಪೋಗಿಮೆಂದು ಸೋಲ್ತ ವಸ್ತುವಾಹನಂಗಳಂ ತರಿಸಿಕೊಟ್ಟು ನಾಡುಮನೊಪ್ಪಿಸಿ ಪೋದಪ್ಪಿಂ ಕೈಕೊಳಲೆಱಿಮೆಂದುಮಟ್ಟಿ ಪಯಣಮಂ ಸಮಕಟ್ಟಿಸಿ ಇರುತಿರ್ದು ನಡೆವಾಗಳ್ ಭೀಮಾದಿಗಳಕ್ಕುಮಾದೊಡೆನ್ನಂತಾದೊಡೆನ್ನನುಕ್ಕಲಿಸಿ ನೆಲನಂ ಕೊಂಡ್ಡೆ ಪುಣ್ಯಮುಂ ಕೊಳಲ್ ತೀರದೆಂದಣ್ಣನ ನನ್ನಿಯುಂ ಸಲಿಸಲ್ವೇಱ್ಕುದೆಂದು ಪೊಱಲಿಂ ಪೊಱಮಟ್ಟು ಪೋದರದು ಗಾಂಗೇಯಾದಿಗಳ್ ಕೇಳ್ದು ನೆಲನಂ ಗೆಲ್ದಾಮೇಗಿಂ ಕೊಟ್ಟಿರಿಸುವುದೆಂದು ನುಡಿದೆಂತುಮೊಡಂಬಡಿಸಲಾಱದೆ ಪೋದರಂತು ಪಾಂಡವರ್ ತಮ್ಮ ಪೊಱಲೊಳಿರ್ದ ಪೆಂಡಿರ್ ಮಕ್ಕಳೆಲ್ಲರುಮನೊಡಗೊಂಡು ನಾಡಂ ಬಿಸುಟು ಪಯಣಂಬೋಗಿ ನದ ನದೀ ಗಿರಿ ಗುಹಾಗಹ್ವರಂಗಳಂ ಕಳಿದು ಗಂಗಾನದಿಯಂ ಪಾಯ್ದು ನಡೆತಂದೊಂದೆಡೆಯೊಳೊಂದಾಲದ ಮರದಡಿಯೊಳ್ ಬೀಡುವಿಟ್ಟಿರ್ದಲ್ಲಿಗವಿತಮತಿಗಳೆಂಬಾಚಾರ್ಯರ್ವಂದಿರ್ದೊಡೆ ಬಲಗೊಂಡು ಬಂದಿಸಿ ಕುಳ್ಳಿರಿಸಿ ಧರ್ಮಮಂ ಕೇಳ್ದಾಱಿ ಸುಖದಿನಿರ್ದು ಬೞಿಯಂ ತಮ್ಮೊಡನಂದ ದ್ರುಪದ ಧೃಷ್ಟದ್ಯುಮ್ನಾದಿಗಳುಮಂ ಪೆಱರ ಮನಸರ ಪೊೞಲ್ಗೆ ಪೋಗಲ್ವೇೞ್ದನೊಡನೆ ಕೊಂತಿಮಹಾದೇವಿಯುಂ ದ್ರೌಪದಿಯುಮಲ್ಲದುೞಿದ ಪೆಂಡಿರುಮಕ್ಕಳಂ ಕಳಿಪಿ ತಮ್ಮಯ್ವರುಮಾಯಿರ್ವರುಮನೊಡಗೊಂಡು ತೆಂಕಮೊಗದೆ ಪಯಣಂ ಬಂದು ಬದರೀವನಮೆಂಬ ಪೇರಡವಿಯುಂ ಪೊಕ್ಕು ಋಷ್ಯಶೃಂಗಮೆಂಬ ಗಿರಿಯಂ ಕಂಡಲ್ಲಿ ನೆಬಿಲಂಚೆಯಂತೆ ನೆಬಿಲನೆ ತೋರ್ಪ ನೆಬಿಲ ಮರಂಗಳುಮಂ ಮಾಯಾಮಡಿಯಂತೆ ಮೆಯ್ದೋಱುವುದ್ಯಕ್ತಮಪ್ಪ ದಿವ್ಯಮೂಲಿಕೆಗಳುಮಂ ಬಸನಿಯಂತೆ ಪತ್ತಿದರೆನೆ ಪತ್ತುವ ವಜ್ರಲೇಪಂಗಳುಮಂ ಪಾಱುವೆಂಡಿರಂತೆ ಕಂಡ ಕಂಡರನೆ ಪಿಡಿವ ಮ[2][ರು][2]ಳ್ಮಾಱಿಂಗಳುಮಂ ಕಾಮದೇವನಂತೆ ರತಿಯೊಳ್ ಕೂಡುವ ದಂಪತಿಗಳುಮಂ ಮುಂಡೆಯು ತಲೆಯಂತೆ ಕೆಯ್ಸುಟ್ಟ ಸೀಱಿಗಳುಮಂ ಮದಗಜದಂತೆ ಮದ ಪಾಯ್ವ ಪುಲಿಗಳುಮಂ ತುಂಬಿಗಳಂತೆ ಮೊರೆವ ಪಾಯ್ವಾವಿಗಳುಮಂ ಸೊಕ್ಕಿದಂತೆ ದ [illegible]ಗಿ ನರ್ತಿಸುವ ಮೋಗೆಗಳುಮಂ ನೋಡುತ್ತ ಬಪ್ಪರ್ ಮತ್ತಲ್ಲಿ

1 ಶಲ್ಯನು 2 ಗು

ಕಂ॥ ಉರಗಂಗಳ್ ಸುತ್ತಳಿದಿೞ
ತಱುತಿರೆ ಪಿಡದವನೆ ಬಯಸಿ ತಿರಿತರುತೆ[1][ಯ್ತಂ][1]
ದಿರದೆಡೆವಿಡದಡರ್ವುವು ಮುಂ
ಗುರಿ ಗಿರಿಕಂದರದ ಮರದ ತುದಿಗೊಂಬುವರಂ ೨೫

ಕುಸಿದು ಕೊರಲ್ಗಳನನುನಯ
ಪೆಸಕದ ಗಡಣ[2][ದಿ][2] ಪಱಡಗ[3][ಳ][3] ಗಜೞಯಿಂ ಸಮಱು
ತ್ರೊಸೆದಗ್ಗದ ಸಜೞ ಪೊರೆಗಳೊ
ಳಿಸೆದಿರ್ಪುವು ಪೊಜಿಸಿನೊೞಿಗಳ್ ಸೊಗಯಿಸುಗುಂ ೨೬

ಲಲಿತ ರಗಳೆ॥

ತುಱುಗಿ ಪೂತೆಱಗಿ ಸೊಗಯಿಸುವ ಸುರಹೊನ್ನೆಯಿಂ
ಸುರಹೊನ್ನೆಗಳ ಕೆಲದೊಳೊಪವಿಪೆಳಲತೆಗಳಿಂ
ಲತೆಯ ಮನೆಗಳೊಳೊಸೆದು ನೆರೆವ ದಂಪತಿಗಳಿಂ
ದಂಪತಿಗಳಾರವಕೆ ನಲಿವ ಕಳಹಂಸೆಯಿಂ
ಕಳಹಂಸೆಗಳ ನಡೆಯನಿಳಿಪ ಕಿನ್ನರಿಯರಿಂ
ಕಿನ್ನರಿಯರೊಡನೊಡನೆ ಮೊರೆವ ಪೆಣ್ದುಂಬಿಯಿಂ
ತುಂಬಿಗಳ ಮೊರೆಪಕ್ಕೆ ಸೋಲ್ತ ಹರಿಣಂಗಳಿಂ
ಹರಿಣಂಗಳಂ ಸಾರ್ದು ಬಂದೆಸುವ ಶಬರರಿಂ
ಶಬರರಂ ಮುಸಗಿ ಬೆಂಕೊಳ್ವ ಮದಕರಿಗಳಿಂ
ಮದಕರಿಗಳಂ ಪೆಳಱಿ ಪಾಯ್ವ ಕೇಸರಿಗಳಿಂ
ಕೇಸರಿಗೆ ಪೆಳ್ವಳಿಪ ತುರಗಮುಖಿಯರ್ಕಳಿಂ
ತುರಗಮುಖಿಯರನಣಮೆ ಜಱೋಡಿಸುವ ಕಪಿಗಳಿಂ
ಕಪಿಕುಳದ ತೊಂಡಿಕೆಗೆ ನಗುವ ಖೇಚರಿಯರಿಂ
ಖೇಚರಿಯರಂ ನೋಡಿ ನರ್ತಿಸುವ ಸೋಗೆಯಿಂ
ಸೋಗೆನವಿಲಾಡೆ ಕರಮೊಪ್ಪುವ ಪುೞಿಲ್ಗಳಿಂ
ಪುೞಿಲ ನೆೞಲೆಡೆಗಳೊಳು ಸುೞಿವ ತೆಂಗಾಳಿಯಿಂ ೨೭

---

1 ಯ 2 ದೆಅಳಿ 3 ಳಲೆಗಳುಂ

ಕಂ॥ ತೆಂಕಣಗಾಳಿಯು ಸೊಗಯಿಪ
ಸೋಂಕಿನೊಳಿರ್ದೊಗೆದು ಮಿಱುಗಿ ತಳ[1][ತ][1]ಳಿಸುವ ಚೂ
ತಾಂಕುರಮನೊಸೆದು ಕರ್ದುಕಿದ
ಬಿಂಕದೊಳೊಡನುಲಿವ ನಲಿವ ಗಿಳಿವಿಂಡುಗಳಿಂ ೨೮

ವ॥ ಅಂತೊಪ್ಪುವ ಗಿರಿಪ್ರದೇಶಮ[ಂ] ಮೆಚ್ಚಿ ರಮ್ಯಪ್ರದೇಶದೊಳ್ ವಿಶ್ರಮಿಸುತ್ತಮಿಂತಾ ವನಪ್ರದೇಶಂ ಪ್ರವಾಸಂ ಮಾಡದೆ ಸಂತೋಷಮನೀಯೆ ಪಲವು ದಿವಸಮನಿರ್ದಲ್ಲಿಯೊಂದು ದಿವಸಮರ್ಜುನನಂತಂತೆ ವನವಿ[2][ಹರಣಂಗೆಯ್ಯುತ್ತ][2]ಮಿಂದ್ರಕೀಲಮೆಂಬ ನಗರಮಂ ಕಂಡಲ್ಲಿ ಪಸಿದು ಬಾಯ್ದೆಱೆದ ಪೆರ್ವಾವಿನ ಬಾಯ್ಗಳಂ ಬಿಲಮೆಂದು ಪುಗುವ ಬಿಲದಾದಿಗಳುಮನಿಂದ್ರಕೀಲದ ಕೋಡುಂಗಲ್ಲಂ ಕಾರ್ಮುಗಿಲೆಂದು ನಲಿದು ನರ್ತಿಸುವ ನವಿಲುಗಳಂ ಪದ್ಮರಾಗದ ಪೆ[3][ರ್ವ][3]ದಿರ ರಶ್ಮಿಗಳನೆಳೆವಿಸಿಲೆಂದು ಬಿಸಿಲ್ಗಾಯ್ವ ಪನ್ನಗಂಗಳುಮಂ ಪಚ್ಚೆಯ ಶಿಲೆಯಂ ತಾವರೆಯೆಲೆಯೆಂದು ಕರ್ದುಂಕುವ ಕೋಗಿಲೆಗಳುಮಂ ಚಂದ್ರಕಾಂತದ ಶಿಳಾತಳಮಂ ತಿಳಿಗೊಳನೆಂದು ಪರಿತಪ್ಪ ಹರಿಣಂಗ[4][ಳುಮಂ][4] ಸ್ಫಟಿಕೋಪಳಂಗಳಂ ಬಯಲ್ಗಿತ್ತು ತಾಗಿ ಪೆಡಂಮಗುೞ್ವ ಮದೇಭಂಗಳುಮಂ ಚೋದ್ಯಂಬಟ್ಟು ನೋಡುತ್ತಂ ಬರ್ಪೊಂದೆಡೆಯೊಳೊಂದು ಪೆರ್ಪಿದರ

ಹರಿಣಿ॥
ಪೊದಱ ತುದಿಯೊಳ್ ಭಾಸ್ವದ್ವಿದ್ಯಾಧರೇಂದ್ರನನೊರ್ವನಂ
ಸದಭಿನುತನಂ ತಿಣ್ಣಂ ಕಟ್ಟಿಕ್ಕಿ ಪೋದನುದಗ್ರ ನೀ
ರದಪಥಚರಂ ಬಲ್ಲಾಳ್ ಮತ್ತೊರ್ವನೆಂದಱಿದೆಯ್ದೆ ಬಂ
ದ[5][ಧಿಕ][5]ಗುಣನಂ ಪಾರ್ಥಂ ಕಾರುಣ್ಯಭಾವದೆ ನೋಡಿದಂ ೨೯

ವ॥ ನೋಡಿ ಕಟ್ಟಂ ಬಿಡುವೊಡೆಯೆವ....ನಂದು ಬಿಲ್ಲನೇಱಿಸಿಕೊಂಡು ಪೊದಱ ಮೊದಲನಿರ್ಬಾಯನಪ್ಪಂಬಿನೊಳೆಚ್ಚಾಗಳೊರ್ಮೊದಲೆ ಮೊದಲಿಂದಂ ಕಡೆಯೆ ಬಂದು ವಿದ್ಯಾಧ....... ಮಂತೆ ಬಿಡಿಸಿದಾಗಳಾತಂ ನಿನ್ನ ಮಹಾಪ್ರಸಾದದಿಂ ಬರ್ದೆನೀವೆ ನೀನಾರ್ಗೇಕೆ ಕಟ್ಟುಪಟ್ಟೆಯೆಂದೊಡಾನುತ್ತರಶ್ರೇಢಿಯ ವಿದ್ಯಾಧರನೆಂ ಇಂದ್ರರಥ........... ನೊರ್ವನೆನ್ನ ಪಗೆವಂ

ಕಂ॥ ಇಟ್ಟೆಡೆಯಾಗಿರೆ ಖಚರಂ
ತೊಟ್ಟನೆ ಕೊಳೆ ಬಂದು ಪಿಡಿದುಕೊಂಡಂ....
........................ಕುದಿದುಂ
ಕಟ್ಟಿನೊಳಾನವರಭವತೆಱದಿಂ ಬೆಂದೆಂ (?) ೩೦

1 ದ 2 ಹ 3 ರ್ವ 4 ಳುಂ 5 ಮಿತ

ವ|| ಇರುಳು ಕಟ್ಟಂ ಕಳೆವಾಱುಸಿದೊಡಾಱುದೆನೆನ್ನಳಿಪಂ ತೋಱುದೆನೆನ್ನಱುವ ವಿದ್ಯೆಗಳಂ ನೀನೆ ಸಾಧಿಸಿಕೊಳ್ಳೆಂದು ಮಂತ್ರಪದಂಗಳುಮಂ ಸಾಧನೋಪಾಯಮುಮಂ ಪೇಳ್ದಡಾ ಕ್ರಿಯೆಯೊಳ್ ವಿದ್ಯೆಗಳಂ ಸಾಧಿಸಿಕೊಂಡಿರ್ಪಿನಮಾತನಂ ಕೊಲಲೊಲ್ಲದೆ ಕಟ್ಟೆಕ್ಕಿ ಪೋದ ಮೇಘರಥಂ ತನ್ನ ಸಾಹಸಮಂ ತೋಱಲ್ ತನ್ನವರನೊಡಗೊಂಡು ಬಂದು ಮೊಕ್ಕನೆವೋಗಿ ಕಡೆದ ಪೊದಱುಮನ್ನಪೃತ್ತಿಗಂ ತಂತ್ರಕ್ಕಿರಲೆಡೆವಡೆದಂತೆ ಬೀಡು ವೆತ್ತಿರ್ದಿಂದ್ರರಥನುಮಂ ಆತನಂ ಬಿಡಿಸಿ ನೋವನಾಱುಸಿ ಮೇಗಿಲ್ಲದಂತಿರ್ದರ್ಜುನನುಮಂ ಕಂಡು ಜಿಕ್ಕಸಂಬಟ್ಟು ನೋಟ್ಪಿನಸರ್ಜುನಂ ಕಂಡೀತನಾರ್ಗೆಂದಿಂದ್ರರಥನಂ ಬೆಸಗೊಂಡೊಡೀತನಲ್ತೆ ಮುಳಿದನ್ನನಿಲ್ಲಿ ಪೊದಱೊಳ್ ಬಲ್ಗಂಡಿಕೆಯಿನಾಳಿಪೆಟ್ಟಿದೊನೆಂದೊಡರ್ಜುನನಾ ಬಂದಾತನನಿಂತೆಂದಂ

ಕಂ|| ಮಱಿಹಿಕ್ಕಿ ಪಿಡಿದು ಕಟ್ಟಿದ
ಮಱುಕಮ ನೀನಿಂತು ತೋರ್ಪೆಯಣ್ಮಲೆ ನೀನೀ
ನೆಱೆದ ಚತುರ್ಬಲ ಸಹಿತಂ
ತಱುಸಂಪೆನ್ನಿದಿರೊಳಾಂತು ತೋರ್ಪುದು ಛಲಮಂ ೩೧

ವ|| ಎಂದ ಮಾತಿಂಗೆ ಮೇಘರಥ[ಂ....ಕಿನಿ]ಸಿ ಕಯ್ದುಗೆಯ್ಯಲ್ ಬಗೆದಾಗಳಾತನ ಪಡೆ ಮಸಗಿ ತನ್ಮಾಳ್ವನಂ ಪೆಱಗಿಕ್ಕಿ ನೂಂಕಲ್ ಬಗೆದಾಗಳರ್ಜುನಂ ಬಿಲ್ದೆಗೆದೆಚ್ಚೊಡಂಬಿನೊಳ್ ಪಡೆಯೆಲ್ಲಮೊಡನೆ [1][ಮ][1]ಮ್ಮೞಿಯಾ[2][ಗೆ][2] ಮೇಘರಥಂ ವಿದ್ಯೆಗಳಂ ಬೆಸಸಿದಾಗಳ್ ಪಾರ್ಥಂ ಪ್ರತಿವಿದ್ಯೆಗಳಿಂ ಭೇದಿಸಿ ಗೆಲೆ ಮೇಘರಥಂ ಬೆಳ್ಕುತ್ತ ಗಗನಮಾರ್ಗದಿನೋಡುವನನಿಂದ್ರರಥನೆಯ್ದಿ ಪಿಡಿದು ತನ್ನ ಕಟ್ಟಿದಂತಾತನಂ ಕಟ್ಟಿ ತಂದರ್ಜುನನ ಮುಂದಿಕ್ಕಿದೊಡರ್ಜುನಂ ಕಂಡು ಕರುಣಿಸಿ ಕಟ್ಟಂ ಬಿಡಿಸಿ ನೀನಿನ್ನೀತಂ ಗಂಜಿ ಬೆಸಕೆಯ್ದು ಬಾೞೆಂದು ಕಳುಪಿದನಾಗಳಿಂದ್ರರಥನರ್ಜುನನನತ್ಯಾಗ್ರಹಂಗೆಯ್ದು ವಿಮಾನಮನೇಱುಸಿ ತನ್ನ ಪೊೞಲ್ಗೊಯ್ದು ಪಲವುಂ ವಸ್ತುಗಳಂ ವಿದ್ಯೆಗಳಂ ಕೊಟ್ಟು ಮಗುೞೆ ಕಳಿಸಿದೊಡರ್ಜುನ[ಂ] ನಾಡೆಯಿಂದಂ ಮಗುಟ್ದಣ್ಣನಲ್ಲಿಗೆವಂದೊಡಿನ್ನೆಗ ಮೆತ್ತ ಪೋದೆಯೇಕೆ ತಡೆದೆಯೆನೆ ತತ್ಪ್ರಪಂಚಮನಱಿಯೆಪೇೞೆ ತಮ್ಮನ ಸಾಹಸಮಂ ಮೆಚ್ಚಿ ನಚ್ಚಿ ಸಂತೋಷದೊಳಿರ್ದಲ್ಲಿಂದಮಂತೆ ಬಂದು ಮಹಾನದಿಯಂ ಪಾಯ್ದು ಶ್ರೀಪರ್ವತದಾಸನ್ನಪಥದೊಳ್ ಪಯಣಂಬೋಗಿ ಕಾಂಚೀಪುರದೊಳ್ ವಿಶ್ರಮಿಸಿರ್ದು ಕೆಲವು ದಿನಸದಿಂ ಪಶ್ಚಿಮಾಭಿಮುಖರಾಗಿ ಪಯಣಂ ಬಂದು ಬನವಾಸಿದೇಶದೊಳ್

---

1 ಮೊ 2 ಗ

ಚಂ|| ಸುರಭಿತರ ಪ್ರಕೀರ್ಣ ವನರಾಜಿಗಳಿಂ ಕಮನೀಯ ಪದ್ಮಸಂ
ವರ ಜಲಖಾತಿಕಾವಳಯದಿಂ ಕರಮುನ್ನತವಪ್ಪ ಕೋಟೆಯಿಂ
[1][ಸುರಪ][1] ನರೇಂದ್ರ ನಿರ್ಮಿತ ಜಿನಾಲಯದಿಂ ಸೊಗಸಿಪ್ಪುದಂ ಮನೋ
ಹರತರಮುಂ ವಿರಾಟಪುರಮುಂ ಸುಖದಾಗರಮುಂ ಸರಾಗದಿಂ ೩೨

ವ|| ಪೊಕ್ಕು ತೀರ್ಥನಾಥ ಜಿನಾಲಯಮುಂ ಕಂಡು ಬಲಗೊಂಡು ಜಿನೇಂದ್ರಂಗೆ ನೊಸಲೊಳ್ ಕೆಯ್ಯನಿಟ್ಟು ಪೊಡೆವಟ್ಟು ಕ್ರಿಯಾಪೂರ್ವಕಂ ಸ್ತುತಿಯಿಸಿ ಋಷಿಸಮುದಾಯಮುಮಂ ಯಥಾಕ್ರಮದಿಂ ಬಂದಿಸಿ ಕಿಱಿದುಪೊತ್ತು ವಿಶ್ರಮಿಸಿರ್ದಿಂತಪ್ಪ ತೀರ್ಥಸ್ಥಾನದೊಳಿರ್ಪುದೊಳ್ಳಿತ್ತೆಂದು ತನ್ನೊಳಾಳೋಚಿಸಿ ಪೆಱವು ಪೆಸರ್ಗಳಂ ತಮಗೆ ಮಾಡಿ ಪೇೞತೇಱತ ನಿಯೋಗದೊಳ್ ಮನೆವನೆಗಳಂ ಕೈಕೊಂಡಿರ್ದುದರತ್ತ ದುರ್ಯೋಧನನಾಸ್ಥಾನಿಕೆಯೊಳ್ ಶಕುನಿ ಬಿನ್ನಪಮೆಂದಿಂತೆಂದಂ

ಕಂ|| ಪನ್ನೆರಡು ವರ್ಷದವಧಿಯು
ದಿನ್ನಿದರಂ ನೆಱತಗುಮವರ ವೃತ್ತಿಯನಾರು
ಮ್ಬನ್ನವು ನೆಗಟ್ಟಿತ್ತವೇೞ್ಪುದು
ಸನ್ನಿಗೆ ಮಾಣ್ದಿರ್ದರುಂತವರ್ ಮಾಣ್ದಪರೇ ೩೩

ವ|| ಎನೆ ದುರ್ಯೋಧನನವರಿನ್ನೆಲ್ಲಿ ದೀರ್ಪೋಪರೆಂದುದ್ಧತನಾಗಿ ನುಡಿಯೆ ಭೀಷ್ಮನೆಂದಂ ಮೃಗಗಣಂ ಸಿಂಗಮನಱಸುವುದುಂ ಪಕ್ಷಿಗಳುಂ ಗರುಡನಂ ಬಗೆಯದುದುಂ ಮಾನಸರ್ ಪಾಂಡವರನಱಸುವುದುಂ ಮರುಳ್ತನಮೆನೆ

ಕಂ|| ಕೊರಲ ಸೆರೆ ಬೀಗಿ ಬೆಮರು
ತ್ತಿರೆ [ಸ್ಫೈ] ಕಣ್ ಕೆಚ್ಚನಾಗೆ ಬಾಯಿಪೊರ್ೞಡು
ತ್ತಿರೆ ಪುರ್ವು ಕಿಱಪೆ ಕಡುಬಂ
ಕುರುಪತಿ ಭೀಷ್ಮಂಗೆ ಕಿನಿಸಿ ಕಿಂಕಿಱವೋದಂ ೩೪

ವ|| ಅಕ್ಕು ನೀಮಾಗಳಾಪೊಡಮವರನೆ ಪಿರಿಯರುಮರಿಯರು ಮಾಡಿ ನುಡಿವಿರೆನ್ನ ಬೀಡಿನೊಳಾವಂಗೆ ಸಮನವರೆಂದಿಂತೆಂದಂ

ಕಂ|| ಕರ್ಣಂಗೆ ದಾನಗುಣ ಸಂ
ಪೂರ್ಣತೆಗೆ ವಿನೂತ ವಿಪುಳದವೊಱತ ಯಶೋ ವಿ
ಸ್ತೀರ್ಣಂಗೆ ಬಗೆದು ನೋಡೆ ಮ
ಹಾರ್ಣವ ಪರ್ಯಂತ ಧರೆಯೊಳೇಂ ದೊರೆಯೊಳರೇ ೩೫

1 ಖಚರ

ವ|| ಆತನೞಿವಱಿವೋಟ್ಟಿದೀ ಕೃಪ ಕೃತವರ್ಮ ದ್ರೋಣಾಚಾರ್ಯ ಭಗದತ್ತ ಸೈಂಧವ ಶಲ್ಯ ದುಶ್ಶಾಸನಾದ್ಯನೇಕ ರಾಜಕುಮಾರರನಾರಂ ಪೇೞ್ವುದೆಂದುಚ್ಚಾಟಿಸಿ ನುಡಿದಂ ಬೞಿಯುಮಿನಿಸರಸಾಶ್ವತ್ಥನುಮಂ ಬಗೆದು ಮತ್ತಂ ಭೀಷ್ಮನೆಂಗುಮಂತೆ ನಿನ್ನ ಪುರುಷ ಸಂಗ್ರಹದ ಬಲ್ಲಾಳ್ತನದೞವನಱಿಂಬಮಾದೊಡಂ ಮುದುಗಣ್ಣಳ ಮಾತಂ ಕೇಳ್ವುದಾರಯ್ವದೆಂದಾಱಿ ನುಡಿದೊಡಂಬಡಿಸಿ ಚರರ್ವರರೊಳ್ಳಿತ್ತಾರಯ್ದು ಬನ್ನಿಮೆಂದಟ್ಟಿದೊಡೆ ಕೆಲವು ದಿವಸದಿಂ ಬಂದಾ ಚಾರರೊಂದರಗಿನ ಮಾಡದಿಂ ಪೋಪುಸಾಯುಮಾದಿಯಾಗೆ ವಿರಾಟಪುರ ಪ್ರದೇಶಂಬರಮಾದ ಸ್ಥಾಂತರಮುಮನಱಿಯೆ ಮಿಯ್ಯಿಗಿದಿರ್ಮಪಾಯಮುಮುಮನವದಿ[ರ್] ನೆರೆದೊಡೆ ಬರ್ಪಮೆಂಬುದುಮಂ ಬಂದ ಬಲ್ಲಾಳ್ತನಮುಮನೊಳ್ಳಿತ್ತಾರಯ್ದುಱಿದು ಬಂದು ಬಿನ್ನಪಂಗೆಯ್ದಾಗಳ್ ಕುರುರಾಜಂ ತನ್ನಲ್ಲಿ ಬುದ್ಧಿಯುಳ್ಳರುಮಂ ಪ್ರತಾಪಮುಳ್ಳರು ಮನೊಬರ್ಳಿಗೆವಂದು ಏಕಾಂತವಿದಿನ್ನೇಗೆಯ್ವುದೆನೆ ಸುಶರ್ಮನೆಂಬ ಮಂತ್ರಿ ಯಿಂತೆಂದಂ

ಕಂ|| ಅಱಿಯಲಣಮಾಗದಂತಿರೆ
ಮಱಸಿ ನಿಯೋಗದೊಳೆ ರೂಪುಗರೆದಿರ್ದೊಡವೇಂ
ತುಱುಗೊಳೆ ಮಾಣ್ಬರೆ ಮಾಣರ್
ತಱಿಸಂದಿಸ್ತಪ್ಪರಿಯೆದ್ದು ತನ್ನಂ ತೋಱರ್ ೩೬

ವ|| ಅದಱಿಂದಲ್ಲಿಯ ತುಱುವಂ ನಮ್ಮ ಬಲವೆಲ್ಲಮನಟ್ಟಿಕೊಳಿಸಿ ಪೊಱಮಟ್ಟಿಯಿತ್ತಂದನಿಕ್ಕಿ ನಿಶ್ಚಿಂತಂ ಮಾಡಿರ್ಪೆಮೆಂದೊಡಿದಪ್ಪುದೆಂದಾ ಕಜ್ಜಮನೆ ಕೆಯ್ಕೊಂಡು ಮಱುದಿವಸಂ ತನ್ನ ಸಮಸ್ತ ಸಾಧನಮಂ ವಿರಾಟಪುರದ ತುಱುಗೊಳಲಟ್ಟಿದೊಡಾ ನೆರವಿ ಮಮುಣಂಬೋಗಿ ವಿರಾಟಪುರಮನೆಯ್ದಿ ತುಱುವಿನೇಳ್ಗೆಯೊಳೊಂದುಮಂ ಪೋಗಲೀಯದೆ ಪೊಲನೆಲ್ಲಮಂ ಬಳಸಿ ಕವಿದು ತುಱುವಂ ಕೈಕೊಳ್ವಾಗಳ್ ಗೋವರ್ ಕಂಡು

ಕಂ|| ಇಂತೆಂಬುವೊಳವೆ ಕಣೆಗೊ
ಳ್ವಂತಪ್ಪ ಕಿರಾತಸೇನೆಯಲ್ಲಂಬುಧಿ ಪ
ರ್ಯಂತ ಧರೇಶನ ಚಾತು
ರ್ದಂತಬಲಂ ಮುತ್ತಿಕೊಂಡುದಾದೊಡವೇನೋ ೩೭

ಉತ್ಸಾಹ||

ಎಂದು ಮಸಗಿ ಬಿಲ್ಲನೊತ್ತಿಕೊಂಡು ಮುಳಿದು ಸಾ
ರ್ದಂದು ನಿಂದು ಮಾಣದೆಚ್ಚೊಡವರ ಬಿಲ್ಲುಮೆ
ಯ್ತಂದು ಕುಣಿದು ಮಣಿಯದೆಚ್ಚೊಡಂಬು ಗಗನ ಭಾಗದೊಳ್
ಬಂದವಸಾಗಿ ಪಾಱಿವವು ತಮಂಧಮಪ್ಪಿನಂ (?) ೩೮

ಕಂ॥ ನೆಱಕಗೊಂಡಂಬಿನ ಕೋಳಂ
ನೆಱೆಯಿ ಮುಸುಂಗೊಂಡುಮಾರ್ಪು ಸಮನಿಸಿತೆಂತು[ಂ]
ತುಱುಗೊಳ್ ಸಾವೆಮಗೆಂತುಂ
ತೋಱದ ತಪಃಫಲಮೊ ಪೇೞಿಮೆನುತಂ ಬಿರ್ದರ್ ೩೯

ಕಂ॥ ಅಱಕೆಯ ಬಲ್ಲಾಳಪ್ಪರೊ
ಳಿಱುವುದು ದೊರೆಕೊಂಡುದಣ್ಮಿ ಸಾವೆಡೆಯುಂ ತಾಂ
ತುಱುಗೊಳ್ವಿಡೆಯೆಂದೆಡೆ ಪೋ
ಪೆಱದೇಂ ಗಳ ನಮ್ಮ ಸಯ್ಪು ಪೊಗೞಲಳುಂಬಂ ೪೦

ವ॥ ಎಂದೆಂದು ಪೊ[1][ಕ್ಕೆ][1]ಚ್ಚು ಪಾಯ್ದು ನೆತ್ತಱುಂ ಬೞಲ್ದು ಬಿರ್ದರಂತು ಗೋವರ ನೆರವಿಯಂ ಮಾರ್ಪಡೆಯರ್ ಕಂಡವರ್ ಗೋವರುಂ ತುಱುಳಾಳ್ಗಳುಂ ತಕ್ಕುದಂ ಬಗೆಯಪೆ ಪೇಡರಂತೆ ತುಱುಗೊಳಲ್ ಬಂದ ನಾವೆ ಗೋವನೆಂದೊಡೊರ್ವನೆಂದವನಂತೇ ಕಂಪಿಯಾಳ್ದರ ಬಿಸದ ಪೊಲ್ಲಮೆ ನಮ್ಮದಲ್ಲಾಳ್ದನದೆಂದು ಪೊಕ್ಕು ಕಾದಿ ಸತ್ತರಂತು ಪಿರಿದು ಪೊತ್ತು ಕಾದಿ ಗೋವರಂ ತವೆ ಕೊಂದು ತುಱುವಂ ಕೈಕೊಂಡು ನಡೆವಮೆಂಬನ್ನೆಗ ಮೊರ್ವ ಗೋವಂ ಬರ್ದುಂಕಿ ಪೋಗಿ ಪುಯ್ಯಲಿಡುತಂ ಪೊೞಲಂ ಪೊಕ್ಕು ವಿರಾಟಂ ಗಿಂತೆಂದು ಬಿನ್ನಪಂಗೆಯ್ದಂ

ಕಂ॥ ಅಸದಳಮಾಗಿರೆ ಪೆರ್ವಡೆ
ಮುಸಗಿ ನೆಲಂ ಮೂರಿವಿಟ್ಟ ತೆಱದೊಳ್ ನಾಲ್ಕುಂ
ದೆಸೆಯಂ ಕವಿತಂದೀಗಳ್
ಬಿಸಸನದೊಳ್ ಕೊಂದು ಗೋವರಂ ತುಱುಗೊಂಡರ್ ೪೧

ವ॥ ಇಂತಪ್ಪುದಂ ನೀವಱುವಿರೆನೆ ವಿರಾಟಂ ತ್ರಿಸ್ಥೂಳಂ ಮುನ್ನ ಪುರಕ್ಷೋಭ ಮಾಗಿರ್ದು ಸಮಸ್ತ ಸಾಧನಸಹಿತಂ ನಡೆಯೆ ಮೆಯ್ಗರೆದಿರ್ದ ಪಾಂಡವರೊಂದೆಡೆಗೆವಂದು ನಾಮೇಗೆಯ್ವಮೆಂದಾಳೋಚಿಸುವಾಗಳರ್ಜುನನಿಂತೆಂದಂ

ಕಂ॥ ಏ ಪಡೆ ಮಾತಿದು ಕೌರವ
ಭೂಪತಿ ನಮ್ಮರವ[2][ನಾರಯಲ್][2] ನೆಗೞ್ದ ತೆಱಂ
ಭೂಪಾಳರೆಲ್ಲರಪ್ಪಡೆ
ಗೋಪಾಳರನಿಂತು ಕೊಂದು ಕೊಳ್ವರೆ ತುಱುವಂ ೪೨

---

1 ಕ್ಕಿ 2 ನುದಮಂ ಕೇಳ್ದಾ ನಾರಯ್ಯಲ್

ವ|| ಇದು ಕೇಳಿದಲ್ಲಿ ನಿನ್ನ ರಥಸಾರಥ್ಯದೊಳ್ ನೆಗೞ್ದುಂ ದಮಿದಕ್ಕೆ ನೆರಗಂ ಬಗೆದು ತುಱುಗೊಳೆ ಮೆಯ್ದೆಗೆವ್ವದು ತಕ್ಕುದಲ್ತೆಯೆರಡುಮಲ್ಲದೆಯುಮವಧಿಯ ದಿವಸಮುಂ ಪೋದುವು ನಾಮಿನ್ನು ಮದದೊಳಡಂಗಿರ್ದೊಡಮಱಿಗೆಯ್ತಕ್ಕೆ ಕಡಂಗಿದೊಡಂ ನಿಮ್ಮಿಂದಂ ಕಷ್ಟರಿಲ್ಲೆಂಬ ಮಾತಂ ಧರ್ಮಜಂ ಮೆಚ್ಚಿ ನರನ ಕಜ್ಜಮನೆ ಕೆಯ್ಕೊಂಡು ಬೇಗಮಿರ್ದ ತಂತಮ್ಮಾಯುಧಂಗಳಂ ಕೊಂಡು ನಡೆಗೊಂಡು ಪುಯ್ಯಲಿಗರೊಡನೆ ಪೋಱಮಟ್ಟು ವಿರಾಟನ ಪೆಱಗಂ ಬರೆ ವಿರಾಟಂ ತುಱುವಿನ ಕೋಳ್ವಾಯನೆಯ್ದಿ ಮೃತ್ಯುವಿನ ಬಾಯ ನೆಯ್ದಿದಂತೆ ತಲ್ಲಱಿಸಿಯುಂ ಪೋಱಱಿಯಂ ತಗುಳ್ದಿಯ್ದದಾಗಳ್ ಬಲದ ಪಡಿಬಲದವರ್ ಕಂಡು ಮುಗುಳ್ದು ನಿಂದು ಕಾದೆ ವಿರಾಟನ ಬಲಂ ಪೇಸೇಱಿ ಸತ್ತ್ವಗಂ ಕಂಡು ಪೊಡಪ್ಪುಗೆಟ್ಟುಗಿಯೆ ಪಾಂಡವರ್ ಕಂಡು ವಿರಾಟನಂ ಪೆಱಗಿಕ್ಕಿ ಮಾಱಾಂತರನಿಕ್ಕಿ ಕಾದುವಾಗಳುಱಿದ ಬಲಂಗಳುಂ ಗೋಱುಂಡೆಗೊಂಡು ನಿಂದು ನೋಡಿ ಪಾರ್ಥನಂಬಿನ ಮಸಕಮುಮಂ ನಾಡಾಡಿಯಲ್ಲದ ಸಕಮುಮಂ ಕಂಡಿಂತೆಂಬರ್

ಕಂ|| ಸುರನಿವನಸುರನಿವಂ ಖೇ
ಚರನಿವನಲ್ಲದೊಡೆ ಪಾಂಡುರಾಜನ ತನಯಂ
ನರನಿವನಾಗಲೆವೇೞ್ಪುದು
ಧುರದೊಳ್ ಪೆಱನಿಂತು ಕಾದನೆಂದರ್ ಪಲಬರ್ ೪೩

ಒಂದೆ ಸರಂ ತಿರುವಾಯಿಂ
ಬಂದರೆಬರನಿಕ್ಕಿದೊಡನೆ ರಿಪುಗಳೊಳೊರ್ವಂ
ಗೊಂದೆ ಸರಮಾಗೆ ನಡಯಿಸು
ವಂದಮನೊಡನೊಂದೆ ಸರದೊಳಿಲ್ಲಂ ಪೊಗೞ್ದರ್ ೪೪

ಜಾಣ್ಬುದುರನೊದವಿಸುತ್ತಿರೆ
ನಾಣ್ಬಲವಂ ಪಡೆಯೆ ನೆಗೞ್ದ ಗಂಡರನೆ ಕರಂ
ಪುಣ್ಬುವುವುಱಿದವರಂ ಕಡೆ
ಗಣ್ಬುವುವಂ ಬಾಯುಮುಱಿವುವಿಂತರ್ಜುನನಂ ೪೫

ಅಭಿನವಸಂಭವನಪ್ಪನ
ನುಭಯ ಭವ ಭ್ರಷ್ಟನಂ [ಮಿಗೆ] ಬಂಚಿಸಿಂ ಬಂ
ದಭಯಮನಘಟನಸಂಕಟ
ಸುಭಟನನಾಯ್ದುಱಿದು ಕೊಳ್ವ[ವ]ರ್ಜುನನ ಶರಂ ೪೬

ವ|| ಅಂತರ್ಜನಸಂಬಂಧು ಕೊಳೆ ಪೊಡರ್ಪುಳ್ಳರೆಲ್ಲಂ ನೋಡುವರುಂ ಸಾವರು
ಮಾಗೆ ಭಯಮುಳ್ಳರೆಲ್ಲಮುಳ್ಳಾಡುವರುಮೋಡುವರುಮಾಗೆ ಕಾದಿ ಕೊಂಡ ತುಱುವಿ
ನೊಳೊಂದು ಕರೆಗಱುವನಪ್ಪೊಡಂ ಪೋಗಲೀಯದೆ ಮಗುೞ್ಚಿ ವಿರಾಟನಂ ಕೈಕೊಳ
ಲ್ವೇೞ್ದು ಮತ್ತಮಿಂದಿರ್ಕೆ ನಿಂದಪ್ಪುರುಮಂ ಕುರುಬಲದೊಳ್ ಕಲಿಯಂತೆಂಬರ್

ಕಂ|| ಈತಂ ಪಾರ್ಥಂ ನಂಬಿ
ದಾತಂ ಧರ್ಮಜನಗುರ್ವು ಪರ್ವಿದ ಗದೆವಿಡಿ
ದಾತಂ ಭೀಮಂ ಪೆಱಗಿ
ರ್ದಾತಂಗಳ್ ನೆಗೞ್ದ ನಕುಳ ಸಹದೇವರ್ಕಳ್ ೪೭

ಅಪ್ಪರ್ ಪಾಂಡವರಲ್ಲದ
ಗೊಪ್ಪದು ನಮ್ಮಾ ಸಮಸ್ತ ಬಲಮುಂ ಗೆಲ್ವಂ
ತಪ್ಪ ಪರಾಕ್ರಮಮಿ[1][ಲ್ಲಿಂ][1]
ತಪ್ಪುದನಾಳ್ದಂಗೆ ಪೋಗಿ ಪೇೞ್ವುದೆ ಕಜ್ಜಂ ೪೮

ವ|| ಎಂದು ದಂಡನಾಯಕರುಂ ಪಲರ್ ನಾಯಕರುಮೊಂದೆಡೆಗೆ ವಂದೆಲ್ಲಿಯು
ಮೊಳ್ಳಿದರಪ್ಪ ತುಱುಲಸಂದರ್ ತುಱುಗೊಳಲ್ ಪೋಗಿ ಸತ್ತರೆಂಬುದೊಂದಯಶಮಂ
ಮಾಡದೆ ಪೋಪಂ ಬನ್ನಿಮೆಂದು ಮಗುೞ್ದು ಪಯಣಂಬೋದರಿತ್ತ ಪಾಂಡವರ್ ಗೆಲ್ಲಂ
ಗೊಂಡು ವಿರಾಟನಂ ಕೈಕೊಂಡು ತುಱುವಂ ಮುಂದಿಗೊಂಡು ಮಗುೞ್ವಾಗಳ್
ವಿರಾಟನುಮುತ್ತರನುಂ ಪಾಂಡವರಪ್ಪುದನಱಿದು ತಮ್ಮ ರಥಂಗಳಿಂದಿೞಿದು ಬಂದೆಱಗಿ
ಬಿನ್ನಪ[ಂ] ಮೆಯ್ಗರೆದಿರ್ಪುದೇನೆನ್ನಂ ಬೆಸಕೆಯ್ಸಿಕೊಂಡು ನೀವಿಲ್ಲಿರ್ದರಸುಗೆಯ್ವುದೆಂದತಿ
ಭಕ್ತಿಯಿಂ ಹಸ್ತ್ಯಶ್ವರಥಂಗಳನೇಱಿಸಿ ಮಹಾಮಹಿಮೆಯಿಂ ಪೊೞಲಂ ಪೊಕ್ಕು ತನ್ನ
ಮಾಡಮಂ ಪೊೞಲುಮನವರ್ಗೊಪ್ಪಿಸಿ ಸರ್ವಪ್ರಿಯದಿಂ ವಿನಯಮನುಂಟುಮಾಡಿ
ಬೆಸಕೆಯ್ಯುತ್ತಿರೆ ಪಾಂಡವರಲ್ಲಿರೆ ಮಹಾವಿಭೂತಿಯುಂ ಖ್ಯಾತಿಯುಂ ಪೆರ್ಚೆ ಶೌರ್ಯಮು
ಮೌದಾರ್ಯಮುಂ ನೆಗೞೆ ಸುಖದಿನಿರ್ದರಂತಿರ್ದರುಮಂ ಕೌರವನ ಗೆಯ್ದುಯೋಗ
ಮುಮಂ ದ್ವಾರಾವತಿಯೊಳಿರ್ದ ನಾರಾಯಣನುಂ ಬಲದೇವನುಂ ಕೇಳ್ದು ಪಾಂಡವರ
ನಲ್ಲಿರಿಸಲಾಗದೆಂದಾಳೋಚಿಸಿ ಸತ್ಯಕನನವರನೊಡಗೊಂಡು ಬಾಯೆಂದಟ್ಟಿದೊಡಾತಂ
ಬಂದು ಪಾಂಡವರಂ ಕಂಡು ಪಲದೆಸಂ ಕಂಡಱಿಯೆಮಾಗಿ ಕರಂ ನೆನೆದೆವು ಬರ್ಕೆಂದು
ನಿಮ್ಮ ಮಾವಂಗಳು[ಂ] ಮಯ್ದುನರ್ಕಳುಂ ಬೞಿಯನಟ್ಟಿದರೆಂದತ್ಯಾಗ್ರಹಂಗೆಯ್ದು
ವಿರಾಟಸಹಿತಮೆಲ್ಲರುಮನೊಡಗೊಂಡು ಪೋಗಿ ದ್ವಾರಾವತಿಯೊಳ್ ನಾರಾಯಣಂ
ಮೊದಲಾಗೆ ಬಂಧುಗಳೆಲ್ಲರುಮಂ ಕಂಡು ನಿಶ್ಚಿಂತಮಿರ್ದರಂತಾ ಸ್ವಜನ ಸುಜನ
ಸಂಪರ್ಕದಿಂ

1 ಲ್ಲಿನಿಂ

ಕಂ॥ ಅತಿಶಯ ವಿಭವದಿನಮರಾ
ವತಿಯೊಳ್ ದಿವಿಜೇಂದ್ರನಿಪ್ಪ ತೆಱದಿಂ ದ್ವಾರಾ
ವತಿಯೊಳುಪೇಂದ್ರಂ ವಿಭವೋ
ನ್ನತನುಂ ಮಹಿನುತನುಮಾಗಿ ಸುಖದಿಂದಿರ್ದಂ ೪೯

ವ॥ ಅಂತಿರ್ಪಿನಮಲ್ಲಿಗೆ ಸಿರಿಯನೊರ್ವಂ ವಣಿಕ್ಕುಲಾಧಿಪತಿಯ ಬಹಿತ್ರಂ ಗಾಳಿಯ ವಶದಿಂ ಸಾರ್ತಂದೊಡೆ ಮುಱುವಾರದೊಳ್ ಬಹಿತ್ರಮನಿರಿಸಿ ವಣಿಕ್ಪತಿಗಳ್ ಪೊೞಲಂ ಪೊಕ್ಕು ತಮ್ಮ ತಂದ ಸಾರವಸ್ತುಗಳಂ ನಾರಾಯಣಂಗೊಪ್ಪಿಸಿದೊಡಾತನುಮವರ್ಗೆ ಪಾರಿಪ್ರಮೋಕ್ಷಮಪ್ಪಂತು ಕೊಟ್ಟಡೆ ಕೆಲವು ದಿವಸವಿರ್ದುಮಲ್ಲಿಂದಂ ಪಯಣಂ ಬಂದು ಮಗಧವಿಷಯಮನೆಯ್ದಿ ರಾಜಗೃಹಮಂ ಪೊಕ್ಕು ಈ ವಸ್ತುಗಳ್ಗಿಲ್ಲಿ ಪೆಱರಾರುಂ ಗ್ರಾಹಕರಿಲ್ಲೆಂದು ಜರಾಸಂಧಚಕ್ರವರ್ತಿಗೆ ತಮ್ಮ ತಂದ ರತ್ನಂಗಳಂ ತೋಱುವಾಗಳ್ ನೋಡಿ ಚೋದ್ಯಮೆಂದು ನಾಡೆಯುಂ ಬೇಗದಿನಿಂತೆಂದಂ

ಕಂ॥ ಇಂತಪ್ಪ ರತ್ನಜಾತಿಗ
ಳೆಂತುಮಗೋಚರದೊಳಿಲ್ಲದಿರವದಱಿಂ ನೀ
ವೆಂತೆಯ್ದಿದಿರೆಂ[1][ತು ತಂದಿ][1]
ರೆಂತಿವು ದೊರೆಕೊಂಡು[2][ವೆಂತು ಬಂ][2]ದಿರೊ ಪೇ[3][ೞಿಂ][3] ೫೦

ವ॥ ಎಂದೊಡಾಮಪ್ಪಡೆ ವಣಿಗ್ವಂಶಜರ್ಕಳುಮರ್ಥೋಪಾರ್ಜನಾ ನಿಮಿತ್ತದಿಂ ಜಲಯಾತ್ರೆಯೊಳ್ ಪೋಗಿ ಚೀನ ಮಹಾಚೀನಂಗಳಂ ಪೊಕ್ಕು ಚಕ್ರವರ್ತಿಗೆ ಯೋಗ್ಯಮಪ್ಪ ಪಟ್ಟೆಸ ಭಂಡಾರಮಂ ಕೊಂಡು ಮಗುೞ್ದು ಬಪ್ಪಾಗಳೆಮ್ಮ ಬಹಿತ್ರಂ ಸಮುದ್ರದೊಳಗೆ ನಾಲ್ವತ್ತೆಣ್ಗಾವುದದಿಂ ದೇವನಿರ್ಮಿತಮಾಗಿರ್ದ ದ್ವಾರಾವತಿಯೆಂಬ ಪೊೞಲಂ ಪೊಕ್ಕುದಂ ದೇವಲೋಕಮಂ ಗೆಲ್ದುಮದಱ ನಡುವಣ ಕರುಮಾಡಮಂ ಋತುವಿಮಾನಮಂ ಗೆಲ್ದಲ್ಲಿಗಧಿಪತಿಯಪ್ಪ ನಾರಾಯಣನಂ ದೇವೇಂದ್ರನೆ ಗೆಲ್ದು ಪೋಗಿ ಕಂಡೆಮ್ಮ ತಂದ ಸಾರವಸ್ತುಗಳೀತಂಗೆ ತಕ್ಕುವೆಂದಾತಂಗವೋಲಗಿಸಿದೊಡಾತನವಂ ಕೈಕೊಂಡು ಮೂಱು ದಿವಸಂ ತನ್ನ ಕೊಂಡವಕ್ಕಂ ನೂರ್ಮಡಿಯಕ್ಕುಮೆಂದಿನಿತ್ತೊಡಲ್ಲಿ ಕೆಲವು ದಿವಸಮರ್ಥಿಯೊಳಿರ್ದಲ್ಲಿಂದಮಿತ್ತ ಬಂದೆವು

ಕಂ॥ ಜಲನಿಧಿಭಂಡಾರಮುಮಂ
ಗಲಂಘ್ಯಮಪ್ಪೆಡೆಯಾಂಪ ಪಡೆಯುಂಗಾಣಂ
ಬೆಲೆ ಕೆಲಕೆಗುಡುವದನಮಾ
ಗಿರ್ಪ ವಸ್ತುಗಣೆಣೆಯೊಳವೇ (?) ೫೧

1 ತುಂ ತಱಿಸುಂದಿ 2 ಮದೆಂತುತಂ 3 ಳಿವಿದಂ

ವ॥ ಎನೆ ಕೇಳ್ದಕ್ಕಂ ಸಾಲ್ಗುಮಾತನಾಕಾರ(?)ಕುಲ'[ನಾ][1]ತನಾರ ಮಗನೆನೆ ಹರಿವಂಶದ ಸಮುದ್ರವಿಜಯಾದಿಗಳೊಂಬದಿಂಬರಿಂ ಕಿಱಿಯ ವಸುದೇವನೆಂಬೊನಾತನ ಮಗನೊರ್ವಂ ಬಲದೇವನೆಂಬೊನಚಿಂತ್ಯಬಲಪರಾಕ್ರಮನಾತನಿಂ ಕಿಱಿಯಂ ನಾರಾಯಣನೆಂಬಂ ವಾಸುದೇವ ಸಾಹಸದೊಳ್ ನೆಗೞ್ದು ಪಾಂಡವರ್ ಮೊದಲಾಗನೇಕ ರಾಜಕುಮಾರ ಪರಿವೇಷ್ಟಿತನಾಗಿ ರಾಜ್ಯಂಗೆಯ್ಯುತ್ತಿರ್ದನೆಂದಾಗಳ್

ಕಂ॥ ಎಂತೆಂತೋ ನೀವೆಂಬುದು
ಭ್ರಾಂತಾಗಿರ್ದಪುದು ಯಾದವರ್ ಕಿಚ್ಚಂ ಪಾ
ಯ್ದಂತಕಮುಖಮೆಯ್ದಿದ ಮಾ
ತಿಂತಾಯ್ತೇ ಜಲಧಿಯೊಳಗೆ ನೆಲಸಿರ್ದಪರೇ ೫೨

ವ॥ ಎನೆ ದೇವ ತಪ್ಪಿಲ್ಲೆಂದೊಡರಸಂ ಮುನಿದು

ಕಂ॥ ಈ ಮಹಿಯೊಳ್ ತಲೆದೋಱದೆ
ಭೀಮ ಮಹಾಂಬುಧಿಯೊಳುಱಿದಡಾನಲ್ಲಿಗೆಮಂ
ದೇಮಾತದಱೊಳಗಣ ಬಡ
ವಾಮುಖಮಂ ತಮಗೆ ಯಮಮುಖಂ ಮಾಡದಿರೆಂ ೫೩

ವ॥ ಎಂದು ಗರ್ಜಿಸಿ ಮಡಿವರಿತ್ತ ರತ್ನಂಗಳ್ಗೆ ತಕ್ಕ ಬೆಲೆಯಂ ಕೊಟ್ಟು ಕಳುಪಿ ತನಗಾಗಿ ನೆಗೞ್ವ ಪಲವುಂ ಮಂಡಳಿಕರ್ಗಂ ಕುಱುಂಬ ನಿಕರಕ್ಕಮಾಟವಿಕರ ಬಲಕ್ಕಂ ಬಱಿಯಟ್ಟಿಬರಿಸಿ ಸನ್ನಣಂಗಳನೋಸರಿಸಿ ನಿಜತಂತ್ರಕೆಲ್ಲಂ ಪೇೞ್ದಲ್ಲಿ ಯುದ್ಧಮಂ ಸಮಕಟ್ಟಿ ಸಂಗ್ರಾಮಭೇರಿಯಂ ಪೊಯ್ಸಿ ಪೊಱಮಟ್ಟಿರ್ದುದಂ ವಾಚಸ್ಪತಿಯೆಂಬ ಮಂತ್ರಿ ಕಂಡೀ ಕಜ್ಜಮನಾರಾಳೋಚಿಸಿ ನೆಗೞ್ದಿನೆಂದುಮಱಿಯೆನೆನಗೇಂ ಕೆಮ್ಮಂಗಿರಲಾಗದಿದನಾರಯ್ಯಪೇೞ್ವುದೆಂದರಸನಲ್ಲಿಗೆವಂದೇಕಾಂತಮಂ ದಯೆಗೆಯ್ವುದೆಂದಾಗಳಂತೆಗೆಯ್ವೆಮೆಂದು ಮತಿವಂತನೆಂಬ ಪೆರ್ಗಡೆಯುಂ ಬರಿಸಿ ಮಂತಣಮಿರ್ದಲ್ಲಿ ವಾಚಸ್ಪತಿಯೆಂಗುಂ ಪೇೞ ನೀಮೀಗಳ್ ನಾರಾಯಣನೊಳೇನೆಂಬುದಂ ಕೇಳ್ದು ಮೇವೇೞಲ್ ಬಗೆದಿರಾತಂಗಂ ಮಮಗಮಾರ್ಗೆ ದೈವಬಲಮುಂಟೆಂಬುದಂ ಮುನ್ನಮಾರಯ್ವುದೆಂದಡೆ ನೀನೆ ಪೇೞೆಂದೊಡಾತನಿಂತೆಂದಂ

ಕಂ॥ ಒರ್ವನೆ ಕಂಸನನಿಕ್ಕಿದ
ಗುರ್ವುಂ ನೀನಟ್ಟಿದಮಿತ ಸಾಧನಮೆಂದೋ
ಗರ್ವದೆ ಗೆಲ್ದುಂದಳಮುಂ
ಪೂರ್ವಾರ್ಜಿತ ಪುಣ್ಯದಳವನೇಂ ಸೂಚಿಸವೇ ೫೪

1 ದಾ

ದೇವೇಂದ್ರಸನ್ನಿಭಂ ವಸು
ದೇವಂ ತಾಂ ತಂದೆ ನೆಗಟ್ದ ಬಲದೇವಂ ಮ
ತ್ತಾ ವಿಭುವಿಂಗಣ್ಣಂ [1][ತಾಂ][1]
ದೇವರ ದೇವಂಗೆ ದೇವನೆಂಬುದ ಬಗೆಯಾ ೫೫

ಇಂಬಿನೊಳಿರಲ್ಕೆ ಪೆಱದೆಡೆ
ಯಿಂಬಲ್ಲೆಂದಿಂದ್ರನೊಂದು ಪುರಮಂ ತಾನಂ
ದಂಬುಧಿಯೊಳ್ ಸಮೆದಿರಿಸಿದು
ದಂ ಬಗೆವುದು ಹರಿಯ ಪಿರಿಯ ಸುಕೃತೋದಯಮಂ ೫೬

ಗಂಡುಗುಣದಗ್ಗಳಿಕ್ಕೆಯ
ಪಾಂಡವರೇಕೈಕ ವೀರರಯ್ವ[2][ರ][2] ನಣ್ಪಂ
ಕೊಂಡಾಡಿ ನಯದೆ ಚಿತ್ತಂ
ಗೊಂಡೋಲಗಿಪುದುವೆ ದೈವಬಲಮಂ ಪೇೞ್ಗುಂ ೫೭

ಕರಮುರಿಯುರಪ್ಪ ವಿದ್ಯಾ
ಧರರನಡುರ್ತೆಯ್ದೆ ಜಡಿದು ನುಡಿದಾಹವದೊಳ್
ನೆರೆದೆೞಿದುಕೊಂಡ ಕನ್ಯಾ
ಹರಣಂಗಳ್ ಪುಣ್ಯದಳವನೇಂ ಪ್ರಕಟಿಸವೇ ೫೮

ವ। ಇಂತು ದೈವಬಲಮಾತಂಗುಂಟಾಗಿ ತೋಱುವಪ್ಪುದಾವ ಬಲದಿಂ ದೈವ ಬಲಮೆ ಬಲಮಾಗಿ ನೆಗೞ್ವುದೆಂದು ನುಡಿದೆತ್ತಾನುಮಾ ನುಡಿಗೇವಯ್ವುಗುಮೆಂದುಂ [3][ಯುಕು][3]ತಿಯುಮಂ ಬಗೆದು ನೋಡೆ ತುೞಿಲಸಂವಂಗೆ ಕಿಱುದೊಂದು ನೀಱಂ ಪೊಕ್ಕಂಗೆ ಮುಳಿಯಲಾಗೆಂದೊಡೆ ಸಮುದ್ರದೊಳಗಿರ್ದೊಂಗೆಂತು ಮುಳಿಯಲಪ್ಪುದೆಂದು ಗೆಲ್ಲದ ನಯಮಂ ತೋಱು ನುಡಿಯೆ ನೀನೇನನೆಂದಪೆಯೆಂದು ಮತಿವಂತನಂ ಬೆಸಗೊಂಡೊ ಡಾತನಿಂತೆಂದಂ

ಕಂ॥ ವಿಕ್ರಾಂತಮುೞಿದು ಧರಣೀ
ಚಕ್ರಂ ಬೆಸಕೆಯ್ದೆವಲ್ಲದೀತನ ಮನೆಯೊಳ್
ಚಕ್ರಂ ಪುಟ್ಟಿದುದೆಂದೊಡ
ತಿಕ್ರಮಿಸಲ್ಕಿಗಳಾರ್ಗೆ ತೀರ್ಗುಮೆ ಮರುಳೇ ೫೯

---

1 ತಮ್ಮಂ 2 ರುಮು 3 ಯ

ನಾಡಾಡಿಯಲ್ತು ಪವಣಿಸೆ
ವೇಡೀತನ ಪಡೆಯನೊಯ್ಯನಿಂ ಚಿಂತಿಸಿ ನೀಂ
ನೋಡ ಧರಾತಳಮನಿತುಂ
ಬೀಡುವಿಡಲ್ ನೆಱೆಯದಿಱಿಯಲಾಪಂ ನೆಱೆವೊಂ ೬೦

ವ|| ಇಂತಪ್ಪ ಬಲ್ಲಾ[1][ಕ್ರ್ರ]ವನಾತನಱಿದುಮಱಿದೆ

ಕಂ|| ಕೊಂದಂ ನೃಪನಳಿಯನನಾ
ಟಂದಂ ಬಱಿಕನುಜತನುಜವರ್ಗಮನದನೇ
ನೆಂದು ಕಡೆಗಣಿಪರಾಯತಿ
ಕುಂದೆ ಕರಂ ಬನ್ನಮೊಂದೆ ಬಾಳ್ವುದೆ ಗಂಡರ್ ೬೧

ವ|| ಈತನ ಬಲ್ಲಾಳ್ತನದ ಪೆಂಪಿನಿರ್ದುದು ಬನ್ನದ ಪೆಂಪಿನಿವಿರಿದು ಪೆರ್ಗಡೆ ಕೊರ್ವಡೆ ಪ್ರಾಣಕ್ಕೆ ಕೊರ್ವುದೊ ನಾಣ್ಗೆ ಕೊರ್ವುದೆಂದಾಗಳ್ ಜರಾಸಂಧನುಮದನೆ ಮೆಚ್ಚಿ ಸಮರೋದ್ಯೋಗಕಾರ್ಯಮನೆತ್ತಿಕೊಂಡಾಯೆಡೆಯಿಂದಮೆರ್ದುಪೋಗಿ ನಯ ದೊಳಂ ಭಯದೊಳಂ ತನಗಪ್ಪ ನೆರವಿಯೆಲ್ಲಮಂ ಬರಿಸಿಕೊಂಡಂತು ಮೂವತ್ತಮೂಱ ಕ್ಷೋಹಿಣೀ ಬಲಂ ತನಗೆ ನಿಜಬಲಮಾಗೆ ಮನಂಪೆರ್ಚೆ ಮಸಗಿ ನಡೆವಾಗಳ್

ಪೃಥ್ವಿ||
ತರುಪ್ರಕರ[2][ವಾ][2]ಳನಂ ಘನತರಾಯುಧಜ್ವಾಳನಂ
ಮರುತ್ಪಥ ಮಳೀಮಸಂ ಜನಿತ ಸರ್ವದಿಕ್ಕಾಮಸಂ
ಕರೀಂದ್ರಭಯಮಾಪನಂ ಕನಕ ಕುಂಭೀ ನಿರ್ಘೋಷವನಂ
ಧರಿತ್ರಿತಳ ಗರ್ಜನಂ ದಿನಪರಶ್ಮಿಪ್ಪೈ ಸಜ್ಜನಂ (?) ೬೨

ವ|| ಇಂತಾದುತ್ಪಾತಂಗಳಂ ಬಗೆಯದೆ ಪರಿಭವಘಾತಂಗಳಂ ಬಗೆದು ಪಯಣಂ ಬೋಗಿ ಹಸ್ತಿನಪುರದೊಳ್ ಪಾಂಡವರ್ಗೆ ಬಿಗುರ್ತುರಿಯುತ್ತಿರ್ದ ದುರಿಯೋಧನಂ ಜರಾ ಸಂಧನ ಬಂದ ಕಾರ್ಯಸ್ಥಿತಿಯನಱಿದು ಉಂತೆಯಾಡುವಂಗೆಱೆಯದವನಾದಂತೆ ಮಸಗಿ ಪನ್ನೊಂದಕ್ಷೋ[ಹಿ]ಣಿ ಬಲಂಬೆರಸುಮಿದಿರಂ ನಡೆದು ಪೋಗಿ ಕಂಡು ದೇವ ನೀಂ ಮುಳಿದಿರ್ಪ್ಪಂತಪ್ಪಂತವರೇವಿರಿಯರಾ ಯಾದವರ್ಗಂ ಪಾಂಡವರ್ಗಮಾನೆ ಸಾಲ್ವೆನೆಂದೊ ದಂತೆ ನಿನ್ನಳವಾದೊರೆಯಾದೊಡಮೆನ್ನ ಮುಳಿಸಿಂತಲ್ಲದಡಂಗದೆಂದಾತಂಗತಿಪ್ರಿಯಂ ಗೆಯ್ದು ಸಂತೋಷಂಬಟ್ಟು ಕೂಡೆ ಬಿಟ್ಟರ್ದಂ ಮತ್ತಮಂತೆ ಕೂಡಿದ ಸಮ[3][ವಾ][3]ಯಿ ಗಳಪ್ಪರಸುಗಳುಂ ಮ್ಲೇಚ್ಛರಾಜರುಂ ಮುನ್ನೆ ವಸುದೇವನೊಳಂ ನಾರಾಯಣನೊಳಮುಘ

1 ಳಳ 2 ವಾಳವಾಚಾ 3 ರಾ

ಪಟ್ಟು ಮುಟ್ಟುಗೆಟ್ಟು ಬಾಱುತ್ತಿರ್ದ ವಿದ್ಯಾಧರರೆಲ್ಲಂ ಬಂದು ಕೂಡಿಕೊಂಡಂತಲ್ಲಿ ನೆರೆದ ಪೆರ್ವಡೆ ಪಯಣಂಬೋಪಾಗಳೆಲೆಯಿಕ್ಕಿದ ಬಿಂಜಮೆ ನಡೆವಂತೆ ಧನುರ್ಬಲಂ ನಡೆಯೆ ತನುವ ತೊಱೆಯುಕ್ಕುವಂತೆಯೆಣೆಬಲಂ ನಡೆಯೆ ಸಮುದ್ರದ ತೆರೆಗಳಂತೆ ತರತರದೋಳಿ ಪಟ್ಟು ರಥ[ಂ] ನಡೆಯೆ ಚತುರ್ವಿಧ ದೇವನಿಕಾಯ ವಿಮಾನ ಪಙ್ತಿಗಳೆಲ್ಲಮೊಡನೆ ನಡೆ ವಂತೆ ರಥಸಮೂಹಂ ನಡೆಯೆ ಲೋಕದ ಬೆಟ್ಟುಗಳೆಲ್ಲಮೊಡನೆ ನಡೆವಂತೆ ಪಡೆ ನಡೆಯೆ ಪಡೆಯ ಮುಂದಾದ ಬೆಟ್ಟುಂ ಘಟ್ಟಂಗಳ್ ಸಮಭೂಮಿಯಾದವು ಪೆಱಗಣವರ್ಗೆ ಸಮ ಭೂಮಿಯೆಲ್ಲಂ ದರಿವಿರ್ದು ಪರಿವಿರ್ದು ಪಳ್ಳಮುಂ ಕೊಳ್ಳಮುಮಾದೊಡೆಲ್ಲಂ ಬತ್ತಿದ ಮಹಾಸಮುದ್ರದಂತೆ ನೀರ್[1][ತ್ರಗುಱು][1]ದು ಮಳಲು ನೆಲನಾಯ್ತಲ್ಲಿಂ ಪೆಱಗಣ ನೆರವಿಗಾ ಮಣಲೆಲ್ಲಂ ಪುಡಿವಿಟ್ಟು ಪಾಱುತಂತು ಪುಲ್ಲಕಲ್ಲ ನೀರ ಮರಂಗಳನೇವೇೞಲುವೇೞ್ಪುದಂತ ರಿಕ್ಷಕ್ಕೆ ನೆಗೆವ ಪಕ್ಷಿಜಾತಿಗಳೆಲ್ಲಮಾ ಪಡೆಯ ಕಡೆಗಾಣದೆ ಮಗುೞ್ದು ಪಱಿಯಿಗೆಗಳೊಳ ಮಾಯುಧಾಗ್ರಂಗಳೊಳಂ ಪಾಯ್ದೊಡನೆ ಪೋದವಿಂತು ನೆಲಂ ಮೂರಿವಿಟ್ಟಂತೆ ಪೋದ ದೆಸೆಯ ನಾಡುಂ ಕಾಡುಮುೞಿಯದೆ ಪಯಣಂಬೋಗಿ ಕುರುಕ್ಷೇತ್ರಮನೆಯ್ದೆ ಬಿಟ್ಟಿರ್ದಾ ನೆಲಂ ಕಾಳೆಗಕ್ಕಿಂಬಾಗಿರ್ದುದೆಂದು ಬಗೆಯುತ್ತಿರ್ಪಿನಮಲ್ಲಿಗೆ ನಾರದನಾಕಾಶ ದಿನಿೞಿತರೆ

ಕಂ|| ಶಾರದ ನೀರದದೊಳ್ ಮಱೆ
ಸಾರೆ ತನುಚ್ಛವಿ [2][ಪಡುವಣ][2]ದಿಂದಿೞಿತಪ್ಪಾ
ಕಾರದ ನಾರದನೆಂದವು
ನಾರದನಭಿವರ್ಣಿಸಲ್ಕೆ ಬಲ್ಲರ್ ಜಗದೊಳ್ ೬೩

ವ|| ಎಂಬಂತಿರೆ ತೊಳಗಿ ಬೆಳಗಿ ಧರೆಗಿೞಿತಂದು ಬಂದು ಜರಾಸಂಧಚಕ್ರ ವರ್ತಿಯುಂ ಕಂಡಾಗಳೇೞಲಿಕ್ಕಿ ಕುಳ್ಳಿರ್ದೊರ್ನೊಳ್ಳಿತು ಪ್ರಸ್ಥಾನದೊಳಾದಿನಾರಾಯಣ ನಲ್ಲಿಗೆ ಬೇಗಂ ಪೋಗಿ ನೀವಿಂತೆನ್ನಿಂ

ಶಿಖರಿಣಿ||
ಜರಾಸಂಧಂ ಬಂದಂ ಮುಳಿದ ಜನನೆಯ್ತಪ್ಪ ತೆಱದಿಂ
ಕುರುಕ್ಷೇತ್ರಂ ಸೂತ್ರಂಬಿಡಿದ ಸಮರಿಟ್ಟಂದದ ಕಳಂ
[3][ಧುರಕ್ಕೊಳ್ಳಿತ್ತೆಂದೆತ್ತಿ][3]ಱಯಲಿದಿರಂ ಬಂದನನಿಸಲ್
ಬರ[4][ಲ್ವೇ][4]ೞಿಂ ಪೇೞಿಂ [5][ಕು][5]ಸಿದು ಬದುಕಲ್ಕಾ[6][ಗ][6] ಮನುಜಂ ೬೪

---

1 ತ್ತುಗುಳಿ 2 ಪಶ್ಚಿಮಾಭಿಮುಖ 3 ಸಮರಕ್ಕೊಳ್ಳಿತಿ 4 ವೇ 5 ಕ್ನ 6 ಗಮ

ವ॥ ಎಂದ ಮಾತಂ ಕೇಳ್ದು ನೀವಿಂತೆನೆ ಮಾಣ್ಬ ಗಂಡನಲ್ಲೆನೆಂದಾಗಳೆ ನಭಸ್ಥಳಕ್ಕೊಗೆದು ಮಹಾಯುದ್ಧಮಂ ಕಾಣಲ್ವಡೆದ ರಾಗದೊಳ್ ಪವನವೇಗದೊಳ್ ಪೋಗಿ ದ್ವಾರಾವತಿಯನೆಯ್ದಿ ಕೃಷ್ಣರಾಜೇಂದ್ರನಂ ಕಂಡೊಡಾತನತಿಪ್ರಿಯದಿನೇೞಲಿಕ್ಕಿ ಕುಳ್ಳಿರ್ದೀನನೇನುಂ ಸ್ತ್ರೀರತ್ನಮುಳ್ಳೆಡೆಯನಱಿವು ಬಂದೊಡೆ ಪೇೞಿಮೆನೆ ನಾರದನಿಂತೆಂದಂ

ಕಂ॥ ವನಿತಾರತ್ನಂಗಳವೇಂ
ನಿನಗಱಿಯಪೆ ಮೂಱು ಲೋಕದಿಂ ಪೊಗೞುಸುತಿ
[1][ರ್ಪನಂತು][1] ವೀರಶ್ರೀಯುಂ
ನಿನಗೊಲ್ವಂತಾಗಿ ಮಾಡಿ ಕೂಡಲ್ ಬಂದೆಂ ೬೫

ವ॥ ಎನೆ ರಾಗಿಸಿ ಪೇೞುವುದಾವುದೆನೆ ಜರಾಸಂಧಂ ನಿನ್ನಿರವಂ ಕೇಳಿ ಮುಳಿದು ಪಯಣಂಬಂದು ಕುರುಕ್ಷೇತ್ರದೊಳ್ ಬಿಟ್ಟಿರ್ದನ್ನಂ ನೀಮುಂ ಪೋಗಿ ನಾರಾಯಣಂಗಿಂತೆಂಬುದು ಜರಾಸಂಧಂ ಮುಳಿದು ಕುರುಕ್ಷೇತ್ರಂ ತನಗಮೆನಗಂಕದ ಕಳನಕ್ಕುಮಡೆ ಬಕ್ಕೆಯಣ್ಮದೊಡೆಲ್ಲಿ ಪೊಕ್ಕಡಂ ತಲೆಯಂ ಕೊಳ್ವೆನೆಂದಟ್ಟಿದ ನಿನ್ನಪ್ಪಡಂ ನೀಮಱಿವಿರೆಂದೊಡಪ್ಪುದಿನ್ನಪ್ಪುದನಾನಱಿವೆಂ ನೀಮೆನ್ನ ವೀರಶ್ರೀಯ ಮದುವೆಯನಾಕಾಶದೊಳಿರ್ದು ನೋಡುತ್ತಿರಿಮೆಂದೊಡಂತೆಗೆಯ್ವೆನೆಂದು ನಾರದಂ ಪೋದ ಬೞಿಯುಮಾ ಪಡೆಮಾತಂ ಬಲದೇವಂಗಱಿಪಿದೊಡಾತಂ ಬಾ ನಾಮಿಾ ಮಾತಂ ಸಮುದ್ರವಿಜಯಂಗಱಿಪಿ ನೆಗೞ್ವಮಲ್ಲದೆ ನೆಗೞ್ವಂದು ನಮ್ಮ ವಿನಯಕ್ಕೆ ದೋಷಮೆಂದೊಡಕ್ಕುಮದುಮಂ ಕೇಳ್ದಪೆನೆಂದಲ್ಲಿಗೆ ಪೋಗಿ ಸಮುದ್ರವಿಜಯರುಮಂ ಪಾಂಡವರುಮುಗ್ರಸೇನಾದಿ ರಾಜಪುತ್ರರುಮಂ ಬರಿಸಿ ತನ್ನಲ್ಲಿಗೆ ಜರಾಸಂಧನಟ್ಟಿದ ಪಡೆಮಾತಂ ಪೇೞ್ದುದಕ್ಕೆ ನಿಮ್ಮಡಿಯೇನೆಂದಪಿರೆನೆ ಸಮುದ್ರವಿಜಯ ಮಹಾರಾಜನಿಂತೆಂದಂ

ಕಂ॥ ಬಲದೇವನೀತ ನೀನುಂ
ವಿಳಸತ್ ಶ್ರೀವಾಸುದೇವ ಪದವಿಯೊಳೊಸೆದಿ
ರ್ದೊಲೆದೀ ಮೂಱುಂ ಖಂಡದ
ನೆಲನಂ ಸುಖದಾಳ್ದು ಚಕ್ರವರ್ತಿಯೆಯಪ್ಪೈ ೬೬

ವ॥ ಎಂಬಾಗಳುಂ ತಪ್ಪಲಾಗಂತಪ್ಪಭ್ಯುದಯಕ್ಕಿದು ಕಾಲಮೆಂದೊಡುಂತೆ ಕುಣಿಸಂಗೆ ಪಱೆವಡೆದಂತೆ ಹರಿ ರಾಗೋದಯದಿಂ ಪೊಱಮಟ್ಟಾಗಳಂಗೆ ನಿಮ್ಮಡಿ ವೇಡಾಮೆ ಸಾಲ್ವೆನೆಂದ ಪಾಂಡವರ ಮಾತಂ ಮೆಚ್ಚಿ ನಿಮ್ಮಳವಾದೊರಂತೆ ದಲಮಾ

1 ರ್ಪಂತುಮಾಡಿ

ಡೊಡವೆನಗೆ ಮಾಣಲಾಗದೆಂದು ಪುತ್ತ್ರಂ ಸಮುದ್ರವಿಜಯಮಹಾರಾಜಂಗೆ ಕೆಯ್ಯಂ ಮುಗಿದಿಂತೆಂದಂ

ಕಂ॥ ನೇಮೀಶ್ವರನುಂ ತ್ರಿಜಗ
ತ್ಸ್ವಾಮಿಯನೋಲಗಿಸುತಿರ್ಪುದೀ ಪುರವರಮುಂ
ನೀಮಭಿರಕ್ಷಿಪುದಿನಿತಂ
ಸ್ವಾಮಿ ದಯಂಗೆಯ್ವುದೆಂದು ಬಾಗಿದೊಡಾಗಳ್ ೬೭

ವ॥ ನಿಮಗೆ ಸಾಧ್ಯಮಪ್ಪ ಕಾರ್ಯಮನಱಿದಿರ್ದೆಮಿದನೇಕೆ ಮಾರ್ಕೊಳ್ವ ಮಂತೆಗೆಯ್ವೆಮೆನೆ ಪ್ರಸಾದಮೆಂದು ಬಂದು ಕರುಮಾಡದೊಳಿರ್ದಾಗಳ್ ಪ್ರಯಾಣ ಭೇರಿಯುಂ ಪೊಯ್ಸಿದಾಗಳೆಲ್ಲರುಂ ತಂತಮ್ಮಾಯುಧಂಗಳುಮಂ ವಾಹನಂಗಳುಮಂ ಸನ್ನಣಂಗಳುಮನಿಂಬುಮಾಡಿ ನಡೆವ ಸಾಮಗ್ರಿಯೊಳಿರ್ದರ್ ನಾರಾಯಣನುಂ ವಿದ್ಯಾ ಧರರೊಳಂ ಭೂಮಿಗೋಚರರೊಳಂ ತನಗಪ್ಪ ನೆರವಿಗೆಲ್ಲಂ ಬಱಿಯಟ್ಟಿ ಬರಿಸಿ ಶುಭದಿನ ದೊಳ್ ಸೇನೆಯುಮಂ ಪರಕೆಯುಮನಾಂತು ಪಟ್ಟವರ್ಧನಮನೇಱಿ ಶುಭಶಕುನಂಗ ಳಾಗೆ ನಾನಾವಿಧ ತೂರ್ಯರವಂಗಳೆಸೆಯೆ ಪಟಯಿಗೆಗಳ್ ಮಿಳಿರೆ ಹಿಮವಂತ ಶಿಖರಿ ಸರೋವರದಿಂ ಪೊಱಮಟ್ಟ ಗಂಗಾಪ್ರವಾಹದಂತೆ ಪೊೞಲಿಂ ಪೊಱಮಟ್ಟು ಕಿಱಿದಂತರ ದೊಳ್ ಬೀಡಂ ಬಿಟ್ಟಿರ್ದು ಕಳಿಪುತಂ ಬಂದ ಸಮುದ್ರವಿಜಯಾದಿಗಳುಮಂ ಸ್ತ್ರೀಜನ ಮುಮಂ ಮಗುೞ್ಚಿ ಮಱುದೆವಸಂ ಪಡೆ ನಡೆಯುವೆಡೆಯೊಳೋಜೆಯಿಂ ಸಮಕಟ್ಟಿ ನಿಚ್ಚವಯಣಂಬೋಗಿ ಕುರುಭೂಮಿಯನೆಯ್ದಿ ಜರಾಸಂಧನ ಬೀಡಿಂಗೈದುಯೋಜನ ದೊಳ್ ಬಿಟ್ಟಿರ್ದನಂತು ಹರಿ ಬಂದು ಬಿಟ್ಟುದಂ ಜರಾಸಂಧಂ ಕೇಳ್ದು ಮತಿವಂತನು ಮನಾಗತಮತಿಯುಮೆಂಬ ಪೆರ್ಗಡೆಗಳಂ ಕರೆದು ನೀಮುಂ ಹರಿಯಲ್ಲಿಗೆವೋಗಿ ನಿನಗೆ ಜರಾಸಂಧಂ ಕರುಣಿಸುವಂತು ಸ್ವಾಮಿ ಕೊಲ್ಲದಿರು ಬಾೞ್ದಲೆವಂದೆನೆಂದು ಕಾಣೆಂಬುದಂ ನುಡಿದು ಜಡಿದು ಪೇೞ್ದು ಬನ್ನಿಮೆಂದಟ್ಟಿದೊಡವರ್ ಬಂದು ನಾರಾಯಣನಂ ಕಂಡೊ ಡೇಱಲಿಕ್ಕಿ ಕುಳ್ಳಿರ್ದು ಜರಾಸಂಧ ಚಕ್ರವರ್ತಿ ನಿಮಗಿಂತೆಂದು ಬೆಸಸಿಯಟ್ಟಿದೊಂ

ಚಂ॥ ಅಱಿಯದೆ ಮುನ್ನಗೆಯ್ದು ಕಡುದೋಷದಳುರ್ಕೆಗೆ ಬೆಚ್ಚಿ ಬಂದೆನೆಂ
ದಱಿಯಮೊಗಕ್ಕಟೆಂದು ಕರುಣಿಪ್ಪುದು ಕಾವುದು ನೀನೆ ಕಾಯೆ ಮೆ
ಯ್ಯಱಿಯದೆ ಬರ್ದನಿಂತು ಕಡುದೋಷದಿನೆಯ್ದೆ ರಸಾತಳದತ್ತ ಪೊಕ್ಕಡಂ
ನೆಱವನೆ ಬಾೞಲೆಂದೆಱಪುದೊಳ್ಳಿತು ಸಾವುದುಮೆಂತುಮೊಳ್ಳಿತೇ ೬೮

ವ॥ ಎಂದಟ್ಟಿದನಿದಾತನ ಬೆಸಸಿದ ಮಾತಾಮುಮೆಮ್ಮಱಿವ ಕಜ್ಜಮುಂ ಪೇೞ್ವೆವೇೞ್

ಕಂ॥ ಎಱಿತಯನೊಳಡುರ್ತು ಮಾಱಿಾಂ
ತಿಱುವುದು ನಯಮಲ್ತು ವಿನಯಮಲ್ತೆಂತಕ್ಕಂ
ನೆಱಿತಯದೆ ಬುದ್ಧಿಯ ಪೆಂಪು
ಮೆಱಿತಯದೆ ಮುಳಿದಿಱುವು ಸತ್ತು ಕಿಡದಿರು ಮರುಳೇ ೧೯

ಊನನಧಿಕಂಗೆ ಮುಳಿದ ಸ
ಮಾನಂ ವಿಗ್ರಹಮನೊಡರಿಸಲ್ಕಕ್ಕುಮೆ ಪೇೞ್
ನೀನವನೊಳಿಱಿದು ಸಾಯದಿ
ರಾನೆಯೊಳೊಡೆಕೊಂಡಮಾಡಿ ಗೆಲ್ದವರೊಳರೇ (?) ೨೦

ದೇವರ್ ದಯೆಗಿಡುವಂತಾ
ನೇವರಿಯೆಂ ತಂದೆನೆನ್ನ ಬಾೞ್ದಲೆಯಂ ನೀ
ನೋವದೆ ಕೊಳ್ಳೆಂದೆಱಗಿದೊ
ಡಾ ವಿಭು ಕರುಣಿಸುಗುಮಲ್ಲದಂದೇವಾೞ್ವೆ ೨೧

ವ॥ ಅಂತಾತನಟ್ಟಿದ ಕರುಣಮುಮಂ ನಮ್ಮ ಪೇೞ್ದ ಬುದ್ಧಿಯುಮಂ ಕೈಕೊಳ್ವುದು ಕೊಳ್ಳದಂತಾವ ಬಲಗರ್ವಮಿತನಿಂ ಮುನ್ನಂ ನಂಬವೇಡ ನಂಬಿ ಬಂದೆಯಪ್ಪೊಡಂ ಮಾತಂ ಗಮನಿಸನಱಿಪಿದಪ್ಪೆನೆಂದು ಕೇಳಲೆ ಬಲದೇವನೆಂಬಣ್ಣಲೆ

ಕಂ॥ ನೇಗಿಲುಳಲೊಳ್ಳಿತದು ಪಿಡಿ
ದಾಗಳುಮೊಕ್ಕಲಿಗನಂತೆ ಕಪ್ಪಡಮುಟ್ಟಾ
ಳಾಗಿರ್ದೆಮ್ಮರಸನ ಪೊಱ
ವಾಗಿಲನೋಲಗಿಪುದೊಳ್ಳಿತವಱಿಂದಿರಿವೋ ೨೨

ವ॥ ಎಂಬುದುಂ ಹರಿ ಕೇಳ್ದು ಪೆರ್ಗಡೆತನಂ ಬಂದಂಗೆ ಮುಳಿಯಲಾಗ ತನ್ನಂ ತಾಂ ಪೊಗೞಲ್ಕಾಗದೆಂದು ಕೆಮ್ಮಗಿರ್ದೊಡಂತೆ ಪೆಟ್ಟುವೆರ್ಚಿ ನುಡಿಯೆ ಹರಿಯ ಬಲದ ದೆಸೆಯೊಳಿರ್ದವಷ್ಟಂಭದಿಂ ಧನಂಜಯಂಗಿಂತೆಂದಂ

ಕಂ॥ ಕುಲಭೂಭೃತ್ಪತಿಯೊಳ್ ಮು
ನ್ನೆಲಸಂ ಜೂಜಾಡಿ ಸೋಲ್ತುದಲ್ಲದೆ ಮತ್ತಂ
ನೆಲಸೋರ್ತ್ತಡಂಗಿ ಬರ್ದ
ಣ್ಣಲೆ ಪೇೞಿಂ ಸೀಸುವಿಱಿವ ಬಗೆಯಿಂ ಬಂದಾ ೨೩

ವ॥ ಎಂದು ನುಡಿದ ಪೆರ್ಗಡೆಯ ಮಾತಂ ಭೀಮಂ ಕೇಳ್ದು ಮುಸಗಲ್ ಬಗೆದು ಬಲದೇವಸ್ವಾಮಿಯು ಕಣ್ಣಱಿದು ಪಾಣೆ ಭೀಮನುಮಿಂತೆಂದಂ

ಕಂ॥ ಪಿಡಿದ ಬಡಿ ತಿಣ್ಣಮಾಂ ಬ
ಲ್ಡಡಿಗನೆನೆಂದಡ[1][ಱಿ][1]ಪಂದೆ ಚಕ್ರೇಶ್ವರನೊಳ್
ಕಡುದೊಡ್ಡಿತಾದ ಮುಸಕವ
ದುಡುಗುವೆ [ಸಲೆ] ಜಗದೊಳಿನ್ನಪಣಕನುಮೊಳವೇ ೭೪

ವ॥ ಎಂದಂತೆ ನೋಟ್ಪಿರ್ಜುನನಂ ಕಂಡಿಂತೆಂದಂ

ಕಂ॥ ಇವನೆಮ್ಮರಸಂಗಾಳ
ಪ್ಪವನಾಳಾಗಿರ್ದ ಕರ್ಣನೆಂಬಣ್ಣನ ಕೀ
ಳ್ಪನ[2][ನ][2] ಡೊರೆಯುಲ್ಲ[3][ಮಿಂ][3]ತ
ಪ್ಪವರ್ಗಳನೊಡಗೊಂಡು ಬಂದನೀ ಕಲಿಯಣ್ಣಂ ೭೫

ವ॥ ಅಂತರ್ಜುನನುಮನಲೆಪಾತನ ಕೆಲದೊಳಿರ್ದ ನಕುಳನಂ ಕಂಡಿಂತೆಂದಂ

ಕಂ॥ ಏಳಿದ ಗಂಡರನಿವರಂ
ಕಾಳೆಗಕೆ ಸರ್ದೆಯ್ದಿದಿರ್ಚಿ ಬಿಡಪಡೆ ಪುತ್ರಂ ಗೋ
ಪಾಳಕ ನಿನಗಿದು ಪೊಲನೇ
ನಾಳಿದವಾಳ್ಗೊಂಡು ಕಾಳೆಗಂ ಗೆಲೆಪಂದಾ (?) ೭೬

ವ॥ ಎಂದಪರ ಪೆಱಗಿರ್ದ ಉಗ್ರಸೇನ ಮಹಾರಾಜನಂ ಕಂಡಿಂತೆಂದಂ

ಕಂ॥ ಅಸಿಪಂಜರದೊಳ್ ಮುನ್ನಂ
ಕುಸಿದಿರೆ ಸೆಱೆಯಿಟ್ಟು ನೆಲನನಾಳ್ದಂ ತನಯಂ
ನಿಸದವೆ ಮಗನಂ ಕೊಂದಂ
ಗೊಸೆದಾಳಾದಣ್ಣ ನೀನುಮಿಱಿಯಲ್ ಬಂದಾ ೭೭

ವ॥ ಎಂತೀತಂಗೆ ತಲೆ ನೆರವಿಂಗನಂದೇಳಿದರನೆನಿತಂ ನುಡಿವುದೆನೆ ಹರಿಯೆಂಬಂ ನಿನಗೆ ಮುಳಿವುದೆನುಗೆ ಪಾಟಿಯಲ್ಲದಿರ್ದೊಡೇಕೆ ಮಾಣ್ಣೆಯಿನ್ನುಂ ನುಡಿ ಬಾಟಿಪ್ಪ್ದರಂ ಜಡಿಯಲಾಗೆನೆ ಪೆರ್ಗಡೆಯೆಂಗುಂ ನೀಂ ಮನದೊಳೇವಯ್ಸಿಯುಂ ಭಾಷೆಯೊಳೊತ್ತಿ ನುಡಿವಪೆಯೆಮ್ಮ ಪೇಟ್ದಿ ಕಜ್ಜಮನೊಲ್ಲದಂತಾವಳವಿನೊಳೊಲ್ಲೈ

1 ಜಿ 2 ಲನ 3 ನಿನ್ನಂ

ಕಂ॥ ನಿನಗೆತ್ತಣಳವೊ ಗೋವುಳಿ
ಗನ ಮಗನ್ನೆ ಪಚ್ಚಪಸಿಯು ಗೋವನೆಯಾಗಿ
ರ್ದನಿತಾನುಂ ನೀ[1][ವೆನಿಸು][1]
ರ್ವಿನದಿಂದೇಳಿದನನಿಱುವುದಧಿಕನನಿಱುವಾ ೭೮

ವ॥ ಎನೆ ಸತ್ಯಕಂ ಮುಳಿಯಲ್ ಬಗೆದೊಡೆ ವಸುದೇವನೆಂವನೀತಂಗೆ ಮುಳಿವೆ ಯಿಾತನಾತನಾಗಿ ಜಡಿವನ್ನೊನಾತಂಗೆ ಗಜಜಲಿನ್ನೆಗವೊಪ್ಪ[2][ದೇ][2]

ಕಂ॥ ಕರಿಪತಿಗಳೊಕ್ಕವೇ ಕೇ
ಸರಿಯು ಸರಂಗೇಳದೆಡೆಯೊಳಿರ್ದಡೆ ಧರಣೀ
ಶ್ವರನಪ್ಪ ಜರಾಸಂಧಂ
ಹರಿ ರಣದೊಳಿದಿರ್ಚದನ್ನೆಗಂ ಗರ್ಜಿಸವೇ ೭೯

ವ॥ ಎಂದ ಮಾತಂ ಹರಿ ಮನದೊಳೆ ಮೆಚ್ಚಿ ನೀಮಾರುಮೇನುವೆನವೇಡ ಕೇಳಿಲಿ ಪೆರ್ಗಡೆ ನೀನೆಂಬಂತಾಮೇರ್ವಿಯೆಮೆಮ್ಮ ಕಿಱುಕುಳರಪ್ಪುದನೆ ಬಗೆಯದೆ ಪಮುಳ ಮಾಗಿ ಕಾದಲ್ವೇೞಿಅಂದಪರನತಿಪ್ರಿಯಂಗೆಯ್ದು ಕಳಿಪಿ ನಾಳೆ ಕಾದುವಮೆಂದು ಸಮ ಕಟ್ಟಿ ರಣಭೂಮಿಯುಂ ಸಮಱಲ್ವೇೞ್ದು ಸಂಗ್ರಾಮಭೇರಿಯುಂ ಪೊಯ್ಸಿ ಇಷ್ಟದೇವ ತಾರ್ಚನ ಪುರಸ್ಸರಂ ಶಾಙ್ಗ್ರಾಯುಧಮಾದ್ಯನೇಕಾಯುಧಮುಂ ಪೂಜಿಸುತ್ತಿರ್ದನತ್ತ ಜರಾಸಂಧನುಂ ಪೆರ್ಗಡೆಗಳ್ ಪೋಗಿ ಬಂದ ಮಾತಂ ಕೇಳ್ದು ಮುಳಿದು ವಿಜೃಂಭಿಸಿ ಕೇಳಿಮಿಂ ಪೆಱದು ಮಾತಿನೊಳೇಂ

ಕಂ॥ ಕರಮೇಳಿದರಂ ಕೊಲ್ವೆನೆ
ಕರುಣಿಪೆನೆಂದಟ್ಟೆ ನೋಡಿದೆಂ ಗೆಲ್ಲಮೊ[3][ಳಿಂ][3]
ಹರಿವಂಶತರೂನ್ಮೂಳನ
ಕರನಪ್ಪೆಂ ನಾಳೆ ಕಾವ ಗಂಡರುಮೊಳರೇ ೮೦

ವ॥ ಎನೆ ಸಭಾಸದರೆಂದರ್ ದೇವ ನೀಂ ಮುಳಿವೊಡಂ ಗಾಳಿ ನಂಜಪ್ಪಡಮಾರ್ ಕಾವರಾರ್ ಬರ್ದುಂಕುವರೆನುತಿರ್ದಿಂ ಬೞಿಯುಂ ದುರ್ಯೋಧನಂ ಮೊದಲಾಗೆ ತನ್ನ ಪಡೆಯೊಳುಳ್ಳರಸುಮಕ್ಕಳೆಲ್ಲರುಮಂ ಬರಿಸಿ ನಾಳೆ ಕಾದುವಮೆಂದು ಸಮಕಟ್ಟಿ ಕರ್ಣಂಗೆ ಸೇನಾಪತಿಪಟ್ಟಂಗಟ್ಟಿ ರಣಭೇರಿಯುಂ ಪೊಯ್ಯಲ್ವೇೞ್ದು ಸಮರಭೂಮಿಯುಂ ಸಮಱು ಮಂತಾಗಿ ನಿಯಮಿಸಿ ಕೆಲರಂ ತಟಿಮ್ಮೋಪಣೆವಿಡಿಸಲ್ವೇೞ್ದು ಕೆಲರನಿರುಳೊಳ್ ಕೊಳ್ಳಿ ವೀಸಿಸಲ್ವೇೞ್ದು ಚಕ್ರಂ ಮೊದಲಾಗಾಯುಧ ವಾಹನಂಗಳನರ್ಚಿಸುತ್ತಮಿರ್ದನಂದಿನ

1 ಮುಮೆನಿಸಿರಾನು 2 ಳೆ 3 ಳೆ

ದಿವಸಮೆರಡುಂ ಪಡೆಯ ಸುಭಟರಿಷ್ಟದೇವತಾಯುಧಂಗಳಂ ಪೂಜಿಸುತ್ತಂ ದಾನ ಸನ್ಮಾನಂಗಳಂ ವಿರಾಜಿಸುತ್ತಮಿರ್ದರ್ ಕೆಲರನುಪರಂಬಡೆದುದಕ್ಕೆ ರಾಗಿಸುತ್ತಂ ನಲ್ಲರೊಡನೆ ಭೋಗಿಸುತ್ತಮಿರ್ದರ್ ಕೆಲರ್ ನುಡಿಪಳಿಗಳಂ ಪೊಗೞಿಸುತ್ತ[ಂ] ಮೆಚ್ಚವಣಿಗೆಯವರಂ ತೆಗೞಿಸುತ್ತಮಿರ್ದರ್ ಕೆಲರ್ ವೀರಸಂನ್ಯಾಸಿಗಳಾಗಲುಂ ರಿಣಮುಂ ನೀಗಲುಮಿರ್ದರ್ ಕೆಲರ್ ಪೂಣ್ಕೆಯನೊಲ್ಲದೆಯುಮನುವರ ಚಿಂತೆಯಿಲ್ಲದೆಯುಮಿರ್ದೀಗಳಾಗಿದಿರೆ ರೂಪಗಂಡಡಂ ಕೆಯ್ದುಗೊಂಡಡಮುೞಿಯಲಕ್ಕುಮೆನುತಿರ್ದರ್ ಕೆಲರ್ ಕರ್ಣನ ಬೀಡಿನಲ್ಲಿ ಕೆಲರ್ ತುೞಿಲಸಂದಿಕೆಯ ಪಸುಗೆಗಳಂ ಮುನ್ನಱಿಯದೆ ನೆಗೞ್ದೀಗಳಣ್ಮಿ ಸತ್ತೊಡೆ ಕಲಿಯಕ್ಕುಂ ತುೞಿಲಸಂದನಾಗಲಱಿಯರೆನುತಿರ್ದರದಂ ಕೇಳ್ದೊರ್ಬನೆಂದಂ ಸತ್ತೊಡೆ ತುೞಿಲಸಂದೊನಾಗಂ ಕಲಿಯಕ್ಕುಮೆಂಬೈ ಕಲಿತನಂ ತುೞಿಲಸಂದಿಕೆಯೊಳಗತ್ತೆಯೆಂದೊಡೊಂದು ಗುಣಮುಲ್ತದುಮೆರಸಾಱುಂ ಗುಣಂಗಳಂ ನೆಱೆಯೆ ಕೈಕೊಂಡು ನೆಗೞ್ದಿವನಲ್ಲದೆ ತುೞಿಲಸಂದನೆಂಬ ಪೆಸರಂ ಪಡೆಯನದೆಂತೆನೆ

ಕಂ॥ ಕಲಿತನವಭಿಮಾನಂ ನಿ
ರ್ಮಳ ಧರ್ಮಂ ತ್ಯಾಗಮೆಸೆವ ಸತ್ಯಂ ಶೌಚಂ
ನೆಲಸಿರ್ದೀ ಗುಣ ಮೂಱುಂ
ನೆ[1][ಲೆ][1]ಯುಳ್ಳಂ ತುೞಿ[2][ಲಸಂದನಲ್ಲದ][2]ಡಲ್ಲಂ ೬೧

ಮ॥ ನೆಲನೆಂತೀ ಸಚರಾಚರಪ್ರತತಿ ನಿಂತಾಧಾರಮುಂ ಮಾೞ್ಕೆಯಿಂ
ಕಲಿಯಪ್ಪೊಂದು ಗುಣಂ ಸಹಸ್ರಗುಣಮಿಂಗಾಧಾರಮೆಂದೊಳ್ಪಿನ
ತ್ತೊಲಿಪೊಪ್ಪಿರ್ದ ತಪೋಧನಂಗೆ ತುೞಿಲಾಳಪ್ಪೊಂಗೆ ಕೇಳಿಂ ಕರಂ
ಚಲಮೆಂತುಂ ಕಲಿಯಾಗವೇೞ್ಕುಮದಱಿಂ ಶ್ರೀ ವೀರಸಿದ್ಧಾಂತದೊಳ್ ೬೨

ಕಂ॥ ಎಲ್ಲ ಗುಣಂಗಳ್ ಮಣ್ಣಿಂ
ದಲ್ಲದೆ ಕರಮೊದವಿಬಾರವದಱಿಂದಂ ಕೆ
ಚ್ಚಿಲ್ಲದ ಮರನುಂ ಕಲಿತನ
ವಿಲ್ಲದ ನರನುಂ ಭವಕ್ಕೆ ನಿತ್ತರಿಸುಗುಮೇ ೬೩

ಚಂ॥ ಅಱಿವೆಡೆಯಲ್ಲಿ ತಕ್ಕನಱಿದೀವೆಡೆಯಲ್ಲಿ ನಿಜಾಭಿಮಾನಮಂ
ಪೆಱದೆಡೆಯಲ್ಲಿ ಶೌಚಗುಣಮಂ ಸಲೆ ಕಾವೆಡೆಯಲ್ಲಿ ನನ್ನಿಯಂ
ನಿಱಿವೆಡೆಯಲ್ಲಿ ಧರ್ಮದೊದವಿಂದೆ ಕುಸಂಸೃತಿ ಬಂಧಮೆಲ್ಲಮಂ
ಪಱಿವೆಡೆಯಲ್ಲಿ ಚಾರುಭಟನಣ್ಮುವದಣ್ಮು ಗುಣಂಗಳಾಶ್ರಯಂ ೬೪

1 ಱಿ 2 ಲಾಳಿವರೊಳೊಂದುಗುಂದಿದೊ

ವ|| ಇಂತೆಲ್ಲಾ ಗುಣಕ್ಕಮಧಿಷ್ಠಾನಮಾಗಿರ್ಪ ಕಲಿತನಮಂ ಮುನ್ನಮುಂಟು ಮಾಡುವುದು[ಂ] ಬಱಿಯಂ

ಕಂ|| ಅಭಿಮಾನದಿಂದೆ ಮನುಜಂ
ವಿಭು ಕಲಿಯಾಪೊಡಮೊಳಗೆ[ನೆ][1] ನೃಪರೊಳ್ ಪೆಱರೊಳ್
ವಿಭವದೊಳೆಡಱಿಳೊಳ್ ಕಾವುದೆ
ಸುಭಟಗುಣಂ ದೀನವೃತ್ತಿ ತುಱಿಲಾಳ್ತನಮೇ ೮೫

ಮ|| ಎಡಱಾದಂದಳಿಪುಣ್ಮಿ ಪೋಗಿ ಪೆಱರಂ ದ್ರವ್ಯಂಗಳಂ ಬೇಡಿಕೊಂ
ಡಡೆ ಮಿಕ್ಕಿರ್ದಭಿಮಾನಮೋಡುಗುಮದೇನೋ ದೋಷಮಲ್ತೇ ಗುಣ
ಕ್ಕೆಡೆಯಾದೊಳ್ತುಱಿಲಾಳ್ದದೊಳ್ದಮಸಿಗಂ ಮುಂ ಭೈಕ್ಷಮಂ ಬೇಡಿಕೊ
ಳ್ವಡೆ ಕೊಳ್ಗರ್ಥಮ ಬೇಟಮಾಪೊಡಱಿಗಂ ನಾಣ್ಮಾತ್ರೆಯುಂ ಗಂಡರೇ ೮೬

ಕಂ|| ಜ್ಞಾನಂ ತಪಸಿಗೆ ಲಸದಭಿ
ಮಾನಂ ತುಱಿಲಾಳ್ಗೆ ಸಾರಮಪ್ಪುದಱಿಂದ
ಜ್ಞಾನಿ ತಪಸ್ವಿಯೆನೆಂದುಂ
ದೀನಂ ತುಱಿಲಾಳೆನೆಂದುಮೆನೆಸೆವರೆ ಜಗದೊಳ್ ೮೭

ಉ|| ಕೇಳಿಕದಲ್ಲಿ ಸೂಳೆಮನೆಯಲ್ಲಿ ನಿಜಾಲಯದಲ್ಲಿ ಭೂಪನಾ
ರ್ತೀಪಡೆಯಲ್ಲಿ ಜೂದಿನೆಡೆಯಲ್ಲಿ ಕರಂ ಪಸಿದಲ್ಲಿ ಪಣ್ಣಲಂ
ತೀವಿದ ತೋಟದಲ್ಲಿ ಬೆಳೆದೊಪ್ಪುವ ಕೆಯ್ವೊಲದಲ್ಲಿ ಪೊರ್ದಿ ನಿಂ
ದಾಪಗಮಾಗೆ ಕಾವುದಭಿಮಾನಮನೊಳ್ತುಱಿಲಾಳ್ ನಿರಂತರಂ ೮೮

ವ|| ಅಂತಭಿಮಾನಮೆಂಬ ಗುಣಮನೆಲ್ಲೆಡೆಯೊಳಂ ಕಾವುದಲ್ಲಿಂ ಬಱಿಯಂ

ಕಂ|| ತನಗೆ ಮುಳಿದಿಱಿಯಲೆಯ್ತ
ಪ್ಪನನಲ್ಲದೆ ಕೆಮ್ಮನಿರ್ದು ಬಾಳ್ವ ಸು[2][ಗುಣನಂ][2]
ಮುನಿದು ಕೊಲಲಾಗದೆಂಬುದಿ
ದನುಪಮ ಗುಣಗಣ[ಮೆ] ತುಱಿಲಸಂದವರ ಧರ್ಮಂ ೮೯

ಶಾ|| ಜೆನ್ನಿತ್ತಾತನನಳ್ಕಿ ಕೈಮುಗಿದು ಬಾಯ್ವಿಟ್ಟಿರ್ದೋನಂ ತನ್ನೊಳಿಂ
ಬನ್ನಂ ಕೆಯ್ಕೊಗೆ ಪುತ್ರನೇಱಿಪಮನಂ ಪುಲ್ಗಚ್ಚಿ ನಿಂದಾತನಂ
ತನ್ನಾಯಂಗಿಡೆ ಬೆರ್ಚಿ ಪೋಗಿ ಜಲಮಂ ಪೊಕ್ಕಾತನಂ ಶೌರ್ಯಸಂ
ಪನ್ನಂಗೊಳ್ತುಱಿಲಾಳ್ಗೆ ಕೊಲ್ಲದುದೆ ತಾಂ ಧರ್ಮಂ ಬಲಂ ವೀರರಂ ೯೦

1 ಪೊಱಗೆ 2 ಗಣಮಂ

ಕಂ॥ ಬ[1][ಱುಬ][1]ನನೇಳಿದನಂ ಮೆ
ಯ್ಯಱಿಯದೊಸಂ ಬೆರಲಸಳಿಪಿ ಕರ್ಚಿದೊಸಂ ಕಾ
ಲ್ಗೆಱಗಿದನನಿಱಿಯಲಾಗದಿ
ದಱಿಕೆಯ ಕಡು ತುೞಿಲಸಂದರಪ್ಪರ ಧರ್ಮಂ ೯೧

ಚಂ॥ ಅಱಿಯಿಱಿಯಲ್ಕಬಿಲ್ ಪರಿದು ಮುತ್ತಿಕೊಳಲ್ ಬಿಡದಾವನಪ್ಪೊಡಂ
ಸೆಱೆಯಿಡಲುಂ ಪಿಸುಣ್ನುಡಿಯುಲುಡ್ಡಿಸಿ ಸೂಱೆಗೊಳಲ್ ವಿಶಿಷ್ಟರಂ
ಮಱುಗಿಸಲಿಂತು ಮುಕ್ಕಲಱಿಯೇಱಿಱಿಯಲ್ ಕರಮೇಳಿಪರ್ಕಳಂ
ಪಱಿಪಡೆ ಬಗ್ಗಿಸಲ್ಕಣಮುಮಾಗದು ಕೇಳ್ ತುೞಿಲಾಳ ಧರ್ಮಮಂ ೯೨

ವ॥ ಧರ್ಮಮೆಂಬ ಗುಣಮನಿಂತು ಸಲಿಸುವೊಂದು ತುೞಿಲಸಂದನಲ್ಲದೆಯುಂ

ಕಂ॥ ಕುಡಲಿಲ್ಲ ತಕ್ಕುದೆಂಬೊಂ
ದೆಡೆಯೊಳ್ ತನ್ನಳವಿಯಿಂದಮಾಯದ ಲೋಭಂ
ಕಡುವಂದೆಯ ಲೆಕ್ಕಮದೇ
ಪಡೆಮಾತೆಂದಱಿದುದಾರನಪ್ಪೊಂ ತುೞಿಲಾಳ್ ೯೩

ಮ॥ ಮನುಜಂಗರ್ಥಮೆ ತಳ್ತು ಪತ್ತಿದ ಬಹಿಃಪ್ರಾಣಂ ಬಹಿಃಪ್ರಾಣಮಂ
ಮನದೊಳ್ ಚಿಂತಿಸದೀವನಾದೆ ನಿಜಾಂತಃಪ್ರಾಣಮಂ ನೆಟ್ಟನೀ
ವನೆ ಮತ್ತಂತಱಿ[2][ದೀ][2]ವೆನೆಂಬ ಗುಣಮಂ ಕೆಯ್ಕೊಂಡು ತಳ್ತಿರ್ದೊಡಾ
ತನೆ ವೀರಂ ರಣಶೂರನಾತನೆ ಜಯೋದಾರಂ ಮನುಷ್ಯರ್ಕಳೊಳ್ ೯೪

ಕಂ॥ ರಾಗಂ ಪ್ರಿಯತಂಗೆ ಧನ
ತ್ಯಾಗಂ ತುೞಿಲಾಳ್ಗೆ ಯೋಗವೊಳ್ದಪಸಿಗೆ ಮ
ತ್ತಾಗಲೆವೇೞ್ಪುದದಲ್ಲದೊ
ಡೇಗೆಯ್ವುದೊ ಗೆಯ್ಯದಣ್ಮು ತಪಮೆಂಬಿನಿತಂ ೯೫

ಶಾ॥ ಇಂತೊಂಗಲ್ಲದೆ ಧರ್ಮದೊಳ್ಪೆಸೆಗುಮೇ ತಕ್ಕಲ್ಲಿ ಗೆಲ್ಲಂ ತಗು
ಳ್ದೀತಂಗಲ್ಲದೆ ಕೀರ್ತಿ ತಾಂ ಪರೆಗುಮೇ ಮೋಹಂ ಭಯಂದಕ್ಕುಮೆಂ
ದಿತ್ತಂಗಲ್ಲದೆ ಗಂಡವಾತೆಸೆಗುಮೇ ಧರ್ಮಂ ಯಶಂಗಂಡು ಮೆ
ಯ್ವೆತ್ತಿರ್ಪೊಂತೆಸೆಪೊಂದುದಾರಗುಣಮಂ ತಾಳ್ದಿರ್ಪುದಂತಂಬರಂ ೯೬

---

1 ಱಿವ 2 ಗೀ

ವ|| ತ್ಯಾಗಮೆಂಬ ಗುಣಂ ತುಱುಲಾಳ್ಗವೋಘಂ ಬೇೞ್ಪುದೆಂದು ಮತ್ತ ಮಿಂತೆಂದಂ

ಕಂ|| ಸತ್ಯಗುಣಮಾಱುಗುಣದೊಳ
ಮತ್ಯಂತ ಮಹಾವ್ರತಂಗಳೆಂಬಯ್ದಱೊಳಂ
ಸ್ತುತ್ಯಮದುಂಟಾದಂದೌ
ಚಿತ್ಯಾಳಂಕಾರಮೆರಡು ಭವಕಂ ಸಾರಂ ೯೭

ಮ|| ನುಡಿಯುಂ ತಪ್ಪಿದವಂಗೆ ತಪ್ಪುಗುಮೆ ಪೇೞ್ ಸಾವೆಂತುಮಾ ತಪ್ಪಿನೊಳ್
ಪಡೆದಂಪಾ ಧನಮಂತೆ ನಿಂಪಪುದೆ ಕೇಳೆತ್ತಾನುಮಂತೋಡಿ ನಿಂ
ದಡಮೇಂ ದುರ್ಗತಿಯಾಗದಿರ್ಪುದೆ ಪೇೞ್ ಮತ್ತೇತಱಿಂ ನನ್ನಿಯಂ
ಕಿಡಿಸದಾಂತಿಱಿವಾಣ್ಮನೆಂತು ತುಱುಲಾಳಕ್ಕುಂ ಮಹಾಪಾತಕಂ ೯೮

ಕಂ|| ಪುಸಿದವನುಂ ರಣಮುಖದೊಳ್
ಪುಸಿದವನುಂ ಕೇಡಿನೊಳ್ ಸಮಂ ಬಲಮೇನಲಿಂ
ಕುಸಿದವನೊರ್ವನೆ ಕೆಡುಗುಂ
ಪುಸಿದೊನ ನಂಬಿದನ ಕೇಡದಿನ್ನುಡಿಯಲ್ಕೇ ೯೯

ಉ|| ಸ್ನೇಹದಿನಕ್ಕೆ ಬಲ್ಲಿದರಿನಪ್ಪ ಭಯಾಕುಳದಿಂದಮಕ್ಕೆ ದು
ರ್ಮೋಹದಿನಕ್ಕೆ ನಂಬಿದೆಡೆಯೊಳ್ ಪುಸಿ ಪೊರ್ದಿದನಂತೆ ತನ್ನ ಮಿ
ಕ್ಕೈಹಿಕಮುಂ ಪರತ್ರೆಯುಮನಳಿದನಾ ಕಡುಪಾತಕಂ ಮಹೋ
ಗ್ರಾಹಮದಲ್ಲಿ ತಳ್ತಿಱಿದೊಡೇಂ ತುಱುಲಾಳ್ಗಳ ಲೆಕ್ಕಮಕ್ಕುಮೇ ೧೦೦

ವ|| ಅನಱಿಂ ಸತ್ಯಮೆಂಬ ಗುಣಂ ತುಱುಲಾಳ್ಗವೋಘಂ ಬೇೞ್ಕು[ಂ] ಮತ್ತಂ

ಕಂ|| ಪರಧನಮುಂ ಕರಮೊಪ್ಪುವ
ಪರವನಿತಾಜನಮುಮಳಿಪಿ ಕಳಲುಂ ಕೊಳಲುಂ
ದೊರೆಗಾಗದೆಂಬ ಶೌಚದ
ಭರಮುಂ ತಾಳ್ದಿದನೆ ತುಱುಲನಂದಂ ಜಗದೊಳ್ ೧೦೧

ಚಂ|| ಪರವಧುಗೊಲ್ದು ವೀರಸಿರಿಗೊಳ್ಪನುಮನ್ಯಧನಂಗೊಳಲ್ಕೆ ಕೊ
ಕ್ಕರಿಸದೆ ಕೊಂಡುಮೊಳ್ಪುಗೊಳಲಿರ್ಪನುಮೇಂ ಜಗದೊಳ್ ಮರುಳ್ಗಳೋ
ತ್ಕರತೆದೆ ಮೂಡಪೋಗಿ ಪಡುಮೆಯ್ದುವೆನೆಂಬವನಂತೆ ಶೌಚಮುಂ
ಪರಿಹರಿಸಿರ್ದು ಬರ್ದಿಱಿಯಲಿರ್ಪಳಿಯಾಳ್ ತುಱುಲಾಳ ಲೆಕ್ಕಮೇ ೧೦೨

ಕಂ॥ ಒತ್ತೆಗೊಳಲಿಪ್ಪಳುಂ ಪೆಱ
ಳಿತ್ತ ಕುಲಾಂಗನೆಯುಮಲ್ಲದುೞಿದವರೆಲ್ಲಂ
ಪೆತ್ತರ್ ಸೋ[1][ದರರೆ][1]ನಗೆಂ
ಬುತ್ತಮ ಗುಣವಿಲ್ಲದಾತನುಂ ತುೞಿಲಾಳೇ ೧೦೩

ಉ॥ ಓದಿದನೊಳ್ ಪರಾಂಗನೆಯೊಳೋತೊಡಗೂಡಿದನೊಳ್ ಸರಾಗದಿಂ
ಕೂಡುವಳೆಂಬ ಡೊಂಬಿಸಿರಿ ಪಾತಕಿ ನಾಣಿಲಿ ಕೆಟ್ಟ ಬೂತು ನಾ
ಟಿಕ್ಕೋಡೆಯನಗ್ಗದಕ್ಕನುೞಿದಾನಳುಮೊಲ್ವಳೆ ಕೀರ್ತಿಯೆಂಬವಳ್
ನೋಡಳು ನಿಂದು ಬೀರಸಿರಿ ಕೇಳಳನಂದಿರ ಮಾತನಪ್ಪಡಂ ೧೦೪

ವ॥ ಅದು ಶೌಚಗುಣಮೊಳ್ಪದೞಿಂತಾಱುಗುಣವಿಲ್ಲದೊಂ ತುೞಿಲನಂದ ನಾಗನಿಂತಿಪ್ಪತ್ತೆಂಟು ಮೂಲಗುಣವಿಲ್ಲದೊಂ ತಪಸ್ವಿಯಾಗನೆಂಬುದು ವೀರಸಿದ್ಧಾಂತ ಮಂತಪ್ಪ ಗುಣಂಗಳನುಳ್ಳಾತಂ ಮೇಗರಸನಕ್ಕೆ ಕೆಳಗೆ ಪೊಲೆಯನಕ್ಕಾವ ಕುಲಮಾದೊಡಂ ತುೞಿಲನಂದನೆಂಬೊನಕ್ಕುಮಂತಪ್ಪಾತಂ ಕಿಱುಕುಳನುಂ ಕಡ್ಡನುಮಾಗಲಾಗ ಧೈರ್ಯ ವಂತನಪ್ಪುದೆನೆ

ಕಂ॥ ಅಳಿಪಿ ಕಿಱಿದಕ್ಕೆ ಕೆನ್ನಾಸೆ
ಗಳಗಳಿಸುತ್ತೇಳಿದರ್ಕಳೊಳ್ ಬಿಡದೆ ತಗು
ಳ್ದಳಿಪಳಿಯಾಡುವ[2][ನೆಂತುಂ][2]
ತುಳಿಯಕ್ಕುಂ ತುೞಿಲನಂದನಕ್ಕುಮೆ ಧರೆಯೊಳ್ ೧೦೫

ಚಂ॥ ಅರಸರ ಪಾಱುಪೆಂಡಿರೊಳಡಂಗದ ರಾಜಸುತರ್ಕಳೊಳ್ ಬೞಿ
ಕ್ಕರಸುಗೆಯಲ್ಕೆ ಪಾರ್ವ ಕಡುಜೂಂಟರೊಳೊಂದದೆ ಮಿಕ್ಕ ನಂಟರೊಳ್
ಪೊರೆದುಮುಪಾಯದೊಳ್ ನಡೆವ ದೈತ್ಯರೊಳುದ್ಧತರಪ್ಪ ಭೃತ್ಯರೊಳ್
ಕರಮೆ ತಗುಳ್ದು ಪತ್ತಿ ತುೞಿಲಾಳ್ಗೆಡೆಗೊಂಡಡೆ ದೋಷಮೆಯ್ದದೇ ೧೦೬

ವ॥ ಅದಱಿಂ ತಪಸ್ವಿ ಪಾಪಕ್ಕಂಜಿ ನಡೆವುದು ತುೞಿಲನಂದಂ ದೋಷಕ್ಕಂಜಿ ನಡೆವುದೆಂಬುದಾಗಮಮಾಗಿಯುಂ ತಪಸ್ವಿ ಪಾಪಪ್ರಮಾದಮಾದೊಡಂ ಪ್ರಾಯ ಶ್ಚಿತ್ತದಿಂ ಕಳೆಗುಂ ತುೞಿಲನಂದಂಗೆ ದೋಷಮೆನಿಸು ಬಂದು ಮುಟ್ಟಿದೊಡಂ ಪುಳಿ ಮುಟ್ಟಿದ ಪಾಲ್ ಮಗುೞ್ದು ಪಾಲಾಗದಂತಾತನಣ್ಮಿಸತ್ತೊಡಂ ತುೞಿಲನಂದನಾಗನಣ್ಮ ನಂದಿಗಂ ಪುಲಿಗಮುಂಟವರೊಳ್ ಪಸುಗೆಯಱಿಯ ನೆಗೞ್ತೆಯುಂ ತೊಲಗಿ ದೋಷ ಮೆಂಬುದುಮುಂಟಾಸುಭಟನದಱಿಂದಸಿಧಾರಾವ್ರತಿಯಾದನಂತಾರ್ಪಾತನನುವರದೊಳ್

1 ದರರೆ 2 ನಂ

ಕುದುರೆಯೇಱಿದಾತನಾನೆಯೇಱಲಕ್ಕುಮಾನೆಯನೇಱಿದಾತಂ ಕುದುರೆಯೇಱಲಾಗ
ಬಿಲ್ವಿಡಿದಾತನಡ್ಡಗಯ್ದುವಿಡಿಯಲಕ್ಕು[1][ಮ][1]ಡ್ಡಗಯ್ದುವಿಡಿದಾತಂ ಬಿಲ್ವಿಡಿಯಲಾಗ
ಬಿಲ್ವಿಡಿದೊನುಗಿಪ್ಪೊಡೆ ಬಿಲ್ಪಡೆಯಾಗ ತಗರುಗಿವಂತುಗಿವುದು ಬಿನ್ನಿತ್ತುಗಿಯಲಾಗ
ಘೋಳಾ[2][ಯಿಲ][2]ನುಲ್ಲಟಿಸುವಲ್ಲಿ ತನ್ನಾಯುಧ[ಮುಂ] ತುರಗಮುಂ ಬೀೞೆ ಬಳ
ಲಾಗಾನೆಯೇಱಿದೊನಾನೆ ಬೆರ್ಚಿ ಬಿದಱಿ ಪಱಿವೊಡಾನೆಯುಂ ಕೊಂದು ಮಿಱಿದರ್ಂ
ನಿಲಲೆವೇೞ್ಪುದಡ್ಡಗೆಯ್ದುವಿನ ಕಾಲಾಳ್ ಪೆಱಗಡಿಯಿಡಲಾಗ ಕೊಳ್ಗೊಳದೊಳ್
ಬೀೞ್ವಾತಂ ಮೆಯ್ಯುಱಿಯದೆ ಬೀೞ್ವಾಗಳಾಳ್ದನಲ್ಲಿ ಸತ್ತೊಡಾಳೆಂತುಂ ಬಾೞಲಾಗ
ದೆಂದಿಂತು ವೀರಸಿದ್ಧಾಂತದ ಪಸುಗೆಯುಂ ಕೆಱಿಪಱಿೞೆ ನುಡಿಯುತ್ತಿರ್ದಮಂ ಕೇಳ್ದು
ಮೆಚ್ಚಿ ಕೆಲರ್ ಮುನ್ನಱಿಯದೊಡಮಿನ್ನಱಿದು ನೆಗೞ್ವಮೆಂದು ಜೋಳವ ಪಾೞಿಗಂ
ನುಡಿವಳಿಗಂ ಯಶಕ್ಕಂ ಗತಿಗಂ ತಕ್ಕ ಸಾವಾವುದಱೞಾವುದಾವುದನಾರ್ ಮೆಚ್ಚು
ವಂದಮುದನೆ ಪರಿಚ್ಛೇದಿಸಿ ನುಡಿಯುತ್ತಿರೆಯಿರೆ

ಕಂ॥ ಹರಿಗನುಪಮ ವಿಕ್ರಮ ಕೇ
ಸರಿಗೆ ಜಯೋದಯಮನಭಿನವಿಪ್ಪವೊಲಾಗಳ್
ಪರೆಯೆ ತಮಮಂ ಕರೆಯೆ ಮೃಗಂ
ಮೊರೆಯೆ ಮಧುಭ್ರಮರಸರ್ಕನುದಯಂಗೆಯ್ದಂ ೧೦೭

ವ॥ ಅಂತಾದಿತ್ಯನುದಯಂಗೆಯ್ವಾಗಳ್ ಜರಾಸಂಧಂ ಕೆಯ್ಗೆಯ್ದು ಪಟ್ಟವರ್ಧನ
ಮನೇಱಿ ನಾನಾವಿಧ ಛತ್ರ ಚಾಮರ ಧ್ವಜ ಶಂಖ ಕಹಳಾದಿ ರಾಜಚಿಹ್ನಂಗಳ್ವೆರಸು
ತನ್ನ ಸಮಸ್ತ ಸಾಧನಮುಂ ಮುಂದಿಗೊಂಡತಿ ಕ್ರೋಧೋದ್ಧತನಾಗಿ ಬೀಡಿಂ ಪೊಱಮಟ್ಟು
ಬಂದು ಸಮರಭೂಮಿಯೊಳ್ ನಿಂದು ಸೇನಾನಾಯಕನಪ್ಪ ಕರ್ಣಂಗೆ ಪಡೆಯನಿಂಬಾ
ಗೊಡ್ಡೆಂದು ಬೆಸಸಂ ಪೇೞ್ವಾಗಳಂತೆಗೆಯ್ವೆನೆಂದು ಭೀಷ್ಮ ಭೂರಿಶ್ರವ ಶಲ್ಯ ಯಶೋ
ವರ್ಮ ಕೃಪ ಕೃತವರ್ಮ ವೀರಧ್ವಜ ಹೇಮಧ್ವಜ ನಾಗಧ್ವಜ ವೃಷಭಸೇನ ಇಂದ್ರಸೇನ
ಭಗದತ್ತ ಜಯದತ್ತ ತಾರಕ ಅಶ್ವತ್ಥಾಮ ಹೇಮಪ್ರಭ ದುರ್ಯೋಧನ ದುಶ್ಶಾಸನ
ದ್ರೋಣ ಬಾಣಾಸುರ ಜಯಂತ ದುಂದುಭಿ ಜಯದ್ರಥ ಕನಕವರ್ಮ ಅರಿವಾಹ ಸೈಂಧ
ವಾದ್ಯನೇಕ ರಾಜೇಂದ್ರರ್ಕಳಂ ಕರೆದು ಪದ್ಮವ್ಯೂಹಮಾಗೊಡ್ಡಿದಪ್ಪೆ ನೀಮೆಱಿವಿರಿ ಎಸ
ೞೊಳ್ ನಿಮ್ಮ ನಮ್ಮ ಚಾತುರ್ದಂತ ಬಲಮುಂ ಬೆರಸೋಡಿ ನಿಲ್ವೆಮೆಂದಿರಿಸಿ ಬೞಿಯಮ
ಪರಾಜಿತ ಅಜಿತಂಜಯ ಸಿಂಹಕೇತು ಸಿಂಹರಥ ಕಾಳಯಮ ಭಾನುಮಿತ್ರಾದಿ ಬಂಧು
ರಾಯಿಕ ತಂತ್ರಮೆಲ್ಲಮುಂ ಸರ್ವಸನ್ನಣಂಗೆಯ್ದು ಬರಿಸಿ ಪದ್ಮಕೇಸರಂಗಳಾಗಿರಿಸಿ ಕೇಸರ
ದೆಡೆಯೆಡೆಯೊಳ್ ವೀರಭಟಸೇನೆಯುಂ ಬಳಸಿಯುಮಿರಿಸಿ ನಡುವೆ ಗಜೇಂದ್ರಘಟೆಯುಂ
ಸುತ್ತಾಗಿರಿಸಿಯುಮಲ್ಲಿಂದೊಳಗೆ ಧವಳಾತಪತ್ರ ಮಹಾಧ್ವಜ ಚಾಮರಾನ್ವಿತಂ ಪಟ್ಟವರ್ಧನ

1 ವ 2 ಹ

ಮಹಾಗಜೇಂದ್ರಮನೇಱಿ ಜರಾಸಂಧ ಚಕ್ರವರ್ತಿಯುಂ ಕರ್ಣಿಕೆಯಾಗಿರಿಸಿ ನಭೋಭಾಗದೊಳ್ ವಿದ್ಯುತ್ಪ್ರಭ ವಿದ್ಯುದ್ರಥ ವಿದ್ಯುದ್ಗತಿ ನಳಿನಧ್ವಜ ರೌದ್ರಕೇಶ ನೀಳಕಂಧರ ಅದ್ರಿನಿಭ ಅಶನಿವೇಗ ಅಂಗಾರಕ ಉದಯಾರ್ಕ ಅಸಹ್ಯರೂಪ ಅಪ್ರತಿಮನೆಂದು ಮತ್ತಮೆನಿಬರಾನುಂ ವಿದ್ಯಾಧರರಾಜರುಂ ನಿಮ್ಮ ನಿಮ್ಮ ಸಮಸ್ತ ಬಲ ಸಹಿತಂ ಚಕ್ರರತ್ನಮುಮಂ ಬಳಸಿಯುಮೊಡ್ಡಿ ನಿಲ್ಲಿಮೆಂದಿರಿಸಿದನಿಂತು ಕರ್ಣಂ ಸೇನಾಪತಿಯಾಗಿ ಜರಾಸಂಧನ ಪಡೆಯೆಲ್ಲಮಂ ಪದ್ಮವ್ಯೂಹದೊಳೊಡ್ಡಿದುದಂ ನಾರಾಯಣಂ ಕೇಳ್ದರ್ಜುನಂಗೆ ಸೇನಾಪತಿ ಪಟ್ಟಮಂ ಕಟ್ಟಿ ನಮ್ಮ ಪಡೆಯುಂ ಬೇಡಿಂ ಪೊಱಮಡಿಸಿ ನಡೆಯಿಮೆಂದು ತಾಂ ಮಜ್ಜನಂಬೊಕ್ಕು ಕೆಯ್ಗೆಯ್ದು ಅರ್ಹತ್ಸರ್ವಜ್ಞನನರ್ಚಿಸಿ ನೇಮಿನಾಥನಂ ನೆನೆದೆಱಗಿ ಸೇಸೆಯುಮಂ ಪರಕೆಯುಮನಾಂತು ವಿಜಯಹಸ್ತಿಯನೇಱಿ ರಾಜಚಿಹ್ನಂಗಳ್ವೆರಸು ಪದಿನೆಂಟಕ್ಷೋಹಿಣೀ ಬಲಮುಮಂ ಮುಂದೆಗೊಂಡು ಪೊಱಮಟ್ಟು ರಣಭೂಮಿಯಲ್ಲಿಗೆನಂದರ್ಜುನನಂ ಕರೆದು ಪಡೆಯನಿಂಬಾಗೊಡ್ಡಿಮೆಂದೊಡಂತೆಗೆಯ್ವೆನೆಂದು ಗರುಡವ್ಯೂಹಮಾಗೊಡ್ಡಲ್ ಬಗೆದು ಅಕ್ಷೋಭ ಅಮಿತಸಾಗರ ಹಿಮಗಿರಿ ವಿಜಯಾಚಳ ಪ್ರಪೂರಣ ಅಭಿಚಂದ್ರ ಸತ್ಯಂಧರ ಶಕ್ತಿಧರ ಅಕ್ಷಂಜಯ ವಿಜಯ ದ್ರುಪದಾದಿ ನರೇಂದ್ರವರ್ಗಮನವರವರ ಸಮಸ್ತ ಸೇನೆವೆರಸು ಗರುಡನ ಬಲದೆಱಂಕೆಯಾಗೊಡ್ಡಿ ನಿಱಿಸಿದಂ ಧರ್ಮಪುತ್ರಂ ಭೀಮಸೇನಂ ನಕುಳಂ ಸಹದೇವಂ ಸುಮುಖಂ ದಟ್ಟಾರ್ಜುನ ಮಲಯಧ್ವಜ ಘಟೋತ್ಕಚ ಅಭಿಮನ್ಯು ರಾಷ್ಟ್ರವರ್ಧನ ಹಿರಣ್ಯವರ್ಮ ವಿರಾಟಾದಿ ಭೂಪಾಳರನೆಡದೆಱಂಕೆಯಾಕಾರಮೊಳೊಡ್ಡಿ ನಿಱಿಸಿದಂ ಪೃಥುರಥ ರಥನೇಮಿ ಪೌಷ್ಟ್ರ ನೀಳಕುಮಾರ ಜರಾವಿಷ್ಣು ಚಿತ್ರಭಾನು ಸಾಗರಚಂದ್ರಾದಿ ರಾಜಕುಮಾರರ್ಕಳಂ ತಂಡಮಾಗಿ ನಿಲಿಸಿ ತಾನುಮನಾವೃಷ್ಣಿಕುಮಾರನುಂ ಕಣ್ಗಳಾಗಿದ್ದು ಮಣಿಮಿತ್ರ ಸೋಮದೇವ ವಸುದೇವ ಅಂಶುಮಾಲಿ ಭಗ್ನಸೇನ ದೇವಮುಖಾದಿಗಳ್ ಕಾಲಾಗಿ ನಿಂದರ್ ಉಗ್ರಸೇನ ದೇವಸೇನ ಕೀರ್ತಿಧ್ವಜ ಸಿಂಹಕೇತು ದೀಪಾಯನಾದಿ ಬಂಧುಜನ ಸಹಿತಂ ಗಜಾರೂಢರಾಗಿ ರಾಜಚಿಹ್ನಂಗಳ್ವೆರಸು ಪುಂಛಪ್ರದೇಶದೊಳ್ ನಾರಾಯಣಂ ಬಲದೇವನುಮಿರ್ದರಶನಿವೇಗ ಸಿಂಹದಾಡ ಮಾನಸವೇಗ ಅರುಣಚಂದ್ರ ರಣಚಂದ್ರ ದಧಿಮುಖ ಅಕಂಪನ ವರಾಹಕಂಧರ ಪಿಂಗಳ ಜಯವರ್ಮ ವೈರಿದಾಡ ಅರಿಮರ್ದನಾದಿ ವಿದ್ಯಾಧರರಾಜರ್ ತಂತಮ್ಮ ಪಡೆವೆರಸು ಬಲದೇವ ವಾಸುದೇವರಗ್ರಪ್ರದೇಶಾಗ್ರಂಬರದೊಳೊಡ್ಡಿ ನಿಂದರಿಂತು ಹರಿಸೇನೆ ಗರುಡವ್ಯೂಹಮಾಗೊಡ್ಡಿದರಂತೆರಡುಂ ಬಲಮೊಡನೆ ಪಱೆಯುಂ ಪೊಯ್ಸಿ ಕೈವೀಸಿದಾಗಳ್

ಉ॥ ಒಂದು ಸಮುದ್ರ ಮುಮ್ಮ್ರಿ[ದ]ದೊರ್ಮೊದಲೆತ್ತಿರೆ ಮೇರೆದಪ್ಪಿ ಮ
ತ್ತೊಂದು ಮಹಾಸಮುದ್ರಮದನಾಂತವೊಲಾಗೆರಡುಂ ಬಲಂಗಳೊಂ
ದೊಂದಱೊಳುಣ್ಮಿದಂ ಮಸಗಿ ತಾಗಿ ಭಯಂಕರಮಾಗೆ ತೂರ್ಯನಾ
ದಂ ದಿವಿಜರ್ಕಳಲ್ಲಿಪರಮೆಯ್ದಿತು ಭೋಂಕೆನೆ ಬೆರ್ಚುವನ್ನೆಗಂ ೧೦೮

ವ॥ ಅಂತು ತಾಗಿದಾಗಳೆರಡುಂ ಪಡೆಯ ಧನುರ್ವಲಂ

ಚಂ॥ ಸರಭಸದಾರ್ದು ಪೊಕ್ಕು ಕುಣಿದಾರ್ದೆಸೆ ಸಂತತಮತ್ತಮಿತ್ತಲುಂ
ಶರನಿಕರಂ ಕರಂ ಬಿಡದೆ ಪಾಱೆ ನಭಸ್ಥಳದೊಳ್ ನಿರಂತರಂ
ಬಱಿನೆೞಲಾಯ್ತು ಮುನ್ನಮದಱಿಂದೆ ಬೞಿ[1][ಕ್ಕದೆೞಲ್ದ][1] ಜೊಂಪಮಾ
[2][ಯ್ತುಱೆ][2] ಕಣೆಪಂಜ[3][ರಂ][3] ತಗುಳ್ದು ಕತ್ತಲೆಯಾಯ್ತು ರಣಾಗ್ರಭೂತಳಂ ೧೦೯

ಕಂ॥ ತೋಡುಡುಗದೆಸುತಮಿರೆ ಮಾ
ರ್ಪಡೆಯ[4][ರುಮಮ][4]ರಮಯಮಂಗಳೆನಿತನಿತಱೊಳಂ
ಕೊಡೆ ನಡೆ ಮೆಯ್ಗುಳಂಬಿನ
ಮೂಡಿಗೆಯೆನೆ ಪೋಲ್ತು ಕೆಡೆದರುಗ್ರಾಹವದೊಳ್ ೧೧೦

ಮ॥ ಬಯಲಿಲ್ಲಂಬರದಲ್ಲಿ ಪಾಱುವಿಸುಗಳ್ಗೆಂಬನ್ನೆಗಂ ನಾಂಟಲೆ
ಲ್ಲಿಯುಮಂಬಿಂಗೆಡೆಯಿಲ್ಲ ಭೂತಳದೊಳಿನ್ನೆಂಬನ್ನೆಗಂ ಪಾಱೆ ವಿ
ಸ್ಮಯಮಪ್ಪಂತಿರೆ ನಾಂಟೆ ಬಾಣಮಯಮಾಯ್ತು ಲೋಕಮಂತಲ್ಲದೀ
ಕ್ರಿಯೆ ದಾನುಷ್ಕರಿನಾದುವಲ್ತೆನಿಸುಗುಂ ನೋೞ್ಪಂಗೆ ಬಿಲ್ಲಾಳ್ಗೆಗಂ ೧೧೧

ವ॥ ಅಂತಗುರ್ವಾಗಿ ಕಾದಿ ಬಿಲ್ವಡೆ ಪಡಲ್ವಡಮಪ್ಪುದಂ ಕಂಡು ದೞಿಂದೞಿದ ನಾಯಕರ್

ಕಂ॥ ತಮ್ಮ ಬಲಮಿಱಿವಿನಂ ಕರ
ಮುಮ್ಮಳಿಸಿ ಕಡಂಗಿ ಕಾದಲಪ್ಪಳಿಸಿ [5][ದೞಿಂ][5]
ದೊಮ್ಮಳಿಸುತ್ತೆ ಕರಂ ಮುಳಿ
ಸಿಮ್ಮಸಗಿ[ಸುತಮಿರೆ] ತಾಗಿ ತಟ್ಟುತ್ತಿಱಿದರ್ ೧೧೨

ವ॥ ಅಂತು ದೞಿಂ ಮಮ್ಮೞಿಯಾದಿಂ ಬೞಿಯಂ

ಕಂ॥ ತಡೆದಿರದೆ ಬೇಗಮೆರಡುಂ
ಪಡೆಯು ರಥಂ ರಥಮೊಳಾಂತು ಕಾದಿ ಹಯಂಗಳ್
ಕೆಡೆಯೆ ರಥ ಮುಱಿಯೆ ಸಾರಥಿ
ಮಡಿಯೆ ಕೆಲರ್ ಸುರಗಿಗಿಟ್ಟು ಪಾಯ್ದುಱಿದಿಱಿದರ್ ೧೧೩

ವ॥ ಅಂತು ರಥಯುದ್ಧಮಾದಿಂ ಬೞಿಯಂ

1 ಕ್ಕೆ ಸೋಂಪೆ ತಣ್ಣೆಳಲದ 2 ಯ್ತು 3 ರದಿಂ 4 ರ 5 ರೆ ದಳವು

ಕಂ॥ ಕಟ್ಟಾಳ್ಗಳಪ್ಪ ಜೋದರ
ನೊಟ್ಟೈಸುತೆ ಜಿಟ್ಟು ಜಿಟ್ಟೆಯೊಳ್ ತಾಗುವವೊಲ್
ನೆಟ್ಟನೆ ಬೆಟ್ಟನೆ ತಾಗಿದು
ದಿಟ್ಟೆಡೆಯುಪ್ಪಿನೆಗವೆರಡು ಪಡೆಗಳ ಘಟೆಗಳ್ ೧೧೪

ವ॥ ಅಂತೆರಡುಂ ಬಲದ ಘಟೆಗಳ್ ತಾಗಿ ಕಾದೆ ಜೋದರ್ ಕಾರ್ಮುಗಿಲ ಪೆರ್ಮುಗಿಲ ಕಱಿಪಂತೆ ಶರವರ್ಷಂಗಳಂ ಕಱಿದು ಪಿಂಡಿವಾಳದಿಂ ಪಾಱುಂಬಳಿಗಳಿಂ ತಾವಿರ್ದೊಂದೊರ್ವರ ಕಾಲ್ಗಾಪಿನಾಳಂ ತವೆಯಿಱಿದೆಯ್ದೆ ನೂಂಕಿದಾಗಳ್

ಕಂ॥ ಕಾಲಾಳಿಱಿವೈದೇಱಿಂ
ಬಾಲದ ನಾಲ್ಕೇಱಿನೆಂಟು ಕೈಯೇಱುಗಳಿಂ
ಕಾಲಿನ ಮುಳಿದಿಱಿವೇಱಿಂ
ಮೇಲಪ್ಪೊಂಬತ್ತುತೆಱದ ಕೋಡೇಱುಗಳಿಂ ೧೧೫

ವ॥ ಇಱಿಯಿಸಿ ತಟ್ಟುತ್ತು[ಂ] ಕಾದಿ ವಾರಣ[ಂ] ಮಮ್ಮೞಿಯಾದಿಂ ಬೞಿಯಂ

ಕಂ॥ ಅವಸರವಱಿದಾಳ್ದಂಗಿಱಿ
ದವಸರದೊಳ್ ಮಾಣಲಾಗದೆಂದಣಿಯಣಿಯೊಳ್
ತವದ ಮುಳಿಸಿಂದಮೆಯ್ತಂ
ದವಯವದಿಂ ತಾಗಿ ತಳ್ತು ಕಾದಿದುದೆತ್ತಂ ೧೧೬

ವ॥ ಅಲ್ಲಿಯೊರ್ವ ವೀರಭಟಂ ತನ್ನೊಳಿದಿರ್ಚಿ ಸಿತ್ತರಿಸಲಾಱದೋಡುವನಂ ಕಂಡಿಂತೆಂದಂ

ಕಂ॥ ಕೆಲನಂ ನೋಡಿದೊಡಂ ಚಿಃ
ನೆಲನಂ ನೋಡಿದೊಡಮಿಱಿಯೆನೆನಗಿನಿಸಾನುಂ
ತೊಲಗಿದಡೆ ಸಾಲದೇ ನೀಂ
ತಲೆ ಪರೆದಿರೆ ಪರಿದು ಸೇದೆಗಿಡದಿರು ಮರುಳೇ ೧೧೭

ವ॥ ಎನುತವಮಂತಂತೆ ನಡೆದೊಂ ಮತ್ತೊರ್ವ ವೀರಭಟಂ

ಚಂ॥ ನೆಗೞ್ವಿನಮುಂಡ ಜೋೞದ ಋಣಂ ಶ್ರಮಮುಂ ಕಳೆಯಲ್ ಮಹಾರಣ
ಕ್ಕಗಿಯದೆ ಪೊಕ್ಕು ತಳ್ತಿಱಿವ ಸದ್ಭಟನಂ ಕಲಿ ಪಾಯ್ದು ಗುರ್ವು ಕೆ
ಯ್ಮಿಗೆ ಮೊಗಮಿಕ್ಕಿ ಪೇರುರಮನಗ್ಗಳಿಪೋಗಿಱಿದಂತೆ ಕೋಪದಿಂ
ನೆಗಪಿದೊಡಂ ಭಟಂ ಗಜದ ಕೊಂಬಿನೊಳುಯ್ಯಲನಾಡಿ ನೀಡಿದಂ ೧೧೮

ವ॥ ಅಂತೆನಿಬರಾನುಂ ವೀರಭಟರಾಯುದ ಪಸುಗೆಗಳಂ ಮೆಱೆವ ಶೌರ್ಯ ವೀರ್ಯ ಪರಾಕ್ರಮದಿಂ ನೆಱೆಮೊತ್ತಿರಂತಂದಿನ ತುಮುಳ ಯುದ್ಧದೊಳ್

ಲಲಿತ ರಗಳೆ॥

ಪಱಿದಿರ್ದ ಕೆಯ್ಗಳಿಂ ಸುರಿದ ಪುಣ್ಮೆಯ್ಗಳಿಂ
ಪುಂಜಿಸಿದ ನೆಣಗಳಿಂ ರಂಜಿಸುವ ಪೆಣಗಳಿಂ
ಮುಱಿದ ಪೆರ್ಡೊಡೆಗಳಿಂ ಮಿಱುಪ ಬಾಳುಡಿಗಳಿಂ
ನೆತ್ತರ ಕಡಲ್ಗಳಿಂ ಸುತ್ತಿಱಿದೊಡಲ್ಗಳಿಂ
ಬಿರ್ದೆಸೆವ ಖಂಡದಿಂ ಪದ್ದುಗಳ ತಂಡದಿಂ
ಕೆಡೆದಿಭಪ್ರಕರದಿಂದುಡಿದ ರಥನಿಕರದಿಂ
ಮಡಿದಿರ್ದ ಹರಿಗಳಿಂ ಬಿಡಮಾಟ್ಪ ನರಿಗಳಿಂ
ಉಲಿವ ಶಾಕಿನಿಯರಿಂ ನಲಿವ ಡಾಕಿನಿಯರಿಂ
ಪುಳು ಮರುಳ್ಗಳಾಟದಿಂ ಹಲವಟ್ಟೆಯಾಟದಿಂ ೧೧೯

ಕಂ॥ ಅತಿ ರೌದ್ರ[1][ಮು][1]ತಿಭಯಂಕರ
ಮತಿವಿಸ್ಮಯಮತ್ಯುದಗ್ರಮತಿತೀಕ್ಷ್ಣತಮ
[ಮ್ಮ]ತ್ಯಾಸುರಮತ್ಯದ್ಭುತ
ಮತಿ ವಿಭವತ್ಸುರಸಮತ್ಯಪೂರ್ವಂ ಯುದ್ಧಂ ೧೨೦

ವ॥ ಇಂತಂದಿನ ಕಾಳಗದೊಳ್ ಜರಾಸಂಧನ ಪಡೆಯೊಳೆರಡಕ್ಷೋಹಿಣಿ ಬಲಂ ಸತ್ತತ್ತು ನಾರಾಯಣನ ಬಲದೊಳೊಂದಕ್ಷೋಹಿಣಿ ಬಲಂ ಸತ್ತತ್ತಾಗಳಾದಿತ್ಯನಸ್ತ ಮಾನಕ್ಕೆ ಸಂದನಂತೆರಡುಂ ಪಡೆಯೊಳ್

ಕಂ॥ ಧುರದೊಳತಿಕ್ರೋಧದೆ ನಿ
ರ್ಭರದೊಳ್ ಕಡುವೀರರಿಱಿಯುತಿರೆ ನೆತ್ತರ ಸು
ಟ್ಟುರೆ ನೆಗೆದಿನನಂ ಪೊರ್ದಿದೊ
ಡರುಣಚ್ಛವಿಯಾದನೆನಿಸಿ ಪಡುವಣ[ಕಿ]ಱಿದಂ ೧೨೧

1 ಚು

ವ॥ ಆಗಳೆರಡುಂ ಬಲದ ಸೇನಾಪತಿಗಳುಂ ತುಱುಬಿಲಸಂದರುಳ್ಳ ನೆರವಿಗಿರುಳಿಱಿಯಲಾಗೆಂದೊಡ್ಡಣಮನುಡುಗಿದೊಡಿರ್ವರರಸುಗಳುಂ ತಂತಮ್ಮ ಬೀಡಂ ಪೊಕ್ಕು

ಹರಿಣಿ॥

ತುಮುಳಸಮರಂ ಬೇಡಿಂ ದ್ವಂದ್ವಾಜಿಯಪ್ಪುದು ನಮ್ಮ ಗಂ
ಡುಮುಳವು[1][ಮದಂ ತೋರ್ಪಮಾ][1]ವೆಂದೆರಟ್ ಬಲದಲ್ಲಿಯು
ತ್ತಮದ ಸುಭಟರ್ ತಾಮುಂದೊಂದೊರ್ವರೊಳ್ ಸಮಕಟ್ಟಿ ವಿ
ಕ್ರಮಗುಣಯುತರ್ ಪಾರುತ್ತಿರ್ದರ್ ಸುಖಂ ಬೆಳಗಪ್ಪುದಂ ೧೨೨

ಗದ್ಯ॥ ಇದರ್ಹತ್ಸವಜ್ಞ ಪಾದಪದ್ಮ ವಿರಾಜಿತೋತ್ತಮಾಂಗ ಶ್ರೀ ಬಂಧುವರ್ಮ ನಿರ್ಮಿತಮಪ್ಪ ಹರಿವಂಶಾಭ್ಯುದಯದೊಳ್ ಜರಾಸಂಧ ಪ್ರಯಾಣ ವರ್ಣನಂ

**ಏಕಾದಶಾಶ್ವಾಸಂ**

---

1 ಮಂ ತೋರ್ಪನಾ

# ದ್ವಾದಶಾಶ್ವಾಸಂ

ಕಂ॥ ಅಂತು ಪಡೆಯೊಳಗೆ ಮಾ
ಱಾಂತರನಿಱುಪೇಕ್ಷಿಕವೀರರೇಱಂ ನೋಡಲ್
ಬಂದುದಯಾದ್ರಿಯೊಳಗೆ
ತಂದಂ ಘನತಿಮಿರಹರಣನತಿಶಯಕಿರಣಂ (?) ೧

ವ॥ ಅಂತಾದಿತ್ಯನುದಯಂಗೆಯ್ವಾಗಳ್ ನಾರಾಯಣನೊಡ್ಡಣಕ್ಕೆಸಂದು ನೀವಿಂದು ಸೇನಾಪತಿಯಾಗಿಮೆಂದುಗ್ರಸೇನ ಮಹಾರಾಜನಂ ಪೇೞ್ದಂ ಧರ್ಮಪುತ್ರನು ಮಾತನೊಡನೆ ಶ್ವೇತನಂ ಪೇೞ್ದನಂತಿರ್ಬರುಂ ತಂತಮ್ಮ ಪಡೆಯ ಚಾತುರ್ದಂತಬಲಮ ನೊಡ್ಡಿರ್ದರತ್ತ ಜರಾಸಂಧನೊಡ್ಡಣಕ್ಕೆಸಂದು ಶತ್ರುಕ್ಷಯನೆಂಬ ಮಂಡಳಿಕನಂ ಸೇನಾಪತಿ ಮಾಡಿ ಪೇೞ್ದನಾತನೊಡನೆ ದುರಿಯೋಧನಂ ಗಾಂಗೇಯನಂ ಪೇೞ್ದನಂತವರುಂ ತಂತಮ್ಮ ಬಲಮನೊಡ್ಡಿನಿಂದೊಡುಗ್ರಸೇನ ಮಹಾರಾಜಂ ಶತ್ರುಕ್ಷಯಂಗಿದಿರಂ ನಡೆದು ಕಾದಿದ ಸಮಂ ಕಂಡು ಗಾಂಗೇಯಂ ಶ್ವೇತ[ನ]ನಾಂತು ಕಾದೆ

ಕಂ॥ ಚತುರಂಗಂ ಚತುರಂಗದೊ
ಳತಿ ಕೋಪದಿನೞಿಯೆ ಕಾದುವಾಗಳಗುರ್ವ
ಪ್ರತಿಮಮಮಾನಮಚಿಂತಿತ
ಮತರ್ಕ್ಯಮದ್ಭುತರಸಾಂಗಮಾ ರಣರಂಗಂ ೨

ವ॥ ಎನಿಸಿ ಪಡಲ್ವಟ್ಟು ತನ್ನ ಬಲಮುಂ ಗಾಂಗೇಯಂ ಕಂಡು ರಥಮನೆಯ್ದೆ ನೂಂಕಿ ನಿಂದಪರಿಮಿತ ಶರಸಮೂಹಮೊಡನೆ ನಡುವಿನಮೆಚ್ಚೊಡಂಬೇಱುಂಗೆ ಬೞಲ್ದಾ ಶ್ವೇತಂ ಬಿರ್ದನಾಗಳ್ ಕುರುಬಲಮಾರ್ದು ಪಱಿಯುಂ ಪೊಯ್ಸಿದೊಡದನುಗ್ರಸೇನ ನಱಿದು ತನಗಿದಿರಾಂತೊಂಗೆಯ್ದೆ ಪರಿಯಿಸಿ ಕಾದಿ ಶತ್ರುಕ್ಷಯನಿಕ್ಕಿದೊಸಂತಂದಿನ ದಿನಸನೊಡ್ಡಣಮನುಡಿಗಿಬಂದಿರಡುಂ ಪಡೆ ಬೀಡಿನೊಳಿರ್ದದನಂತೊರ್ವರೊರ್ವರ ಕಾಳಗಮ[ಂ] ನೋಡುತ್ತಿರಲಾಗ ಪಲರುಮೋರೊರ್ವರೊಳ್ ಪೊಣರ್ದು ಕಾದುವ ಪೆಂದಿರುಳಂ ಕಳಿಸಿ ಬಯ್ಗುರುಳಿರ್ದರಡುಂ ಬಲಮೊಡ್ಡಿ ನಿಲೆ ಜರಾಸಂಧಂ ತನ್ನ ಕಿಱಿಯ ಮಗಂ ಕಾಮಮಂತನನಿಂದು ನೀನಭಿಮುಖನಾಗಿ ಕಾದೆಂದೊಡವನ ಬರವನಱಿದು

ಬಳದೇವನಾತನಸಾಂತಂ ಮುನ್ನಿನ ದೆಸಸಂ ಗೆಲೆ ಕಾದಿದ ಮನಂ ಪೆರ್ಚೆನೊಳ್ ನೂಂಕಿದ ಗಾಂಗೇಯನಂ ದ್ರುಪದನಂತು ಪುಲ್ಕೊರಡಿಯು ಕಾಳ್ಕಿಚ್ಚು ತಗುಳ್ದಂತಿದಿರಬಲಮುನಟಿಯೆ ಕಾದುವುದಂ ಕಂಡು

ಹರಿಣಿ॥

ಮನದೊಳಿನಸುಂ ಪೆಂಪಂ ಕೆಯ್ಕೊಳ್ಳದೇಳಿದರಪ್ಪ ದು
ರ್ಮನುಜರಿಱಿಯಲ್ ಮುನ್ನಂ ಬಂದಿರ್ದೊಡೇನಱಿಗಂಡಿಯಾ
ಯ್ತ್ರ[1][ನೆ][1] ಸುಖಮಿರ[2][ಲ್ ನೀಂ][2] ಪೋಗಿಂ[ದೆ] ನಿರಾಕುಳವೆಂದು ಘೋ
ಷಿಸಿವಿಡಿಸುತಂ ಬಂದಂ ಶಲ್ಯಂ ಮಹಾಬಲಗರ್ವಿತಂ ೩

ವ॥ ಎಂದು ಗಾಂಗೇಯನಂ ಸೆಱಗಿಕ್ಕಿ ಮಾವನಪ್ಪ ದ್ರುಪದನೊಡನೆ ಕಾದುವಾಗಳಾತನ ಬಲ್ಲಾಳ್ತನದ ಪೆಂಪಂ ಕಂಡು

ಮ॥ ಕಲಿಯುಂ ಬಲ್ಲಾಳುಮೆನ್ನಿಂದೊಳರೆ ಪೆಱರು[3][ವೆಂ][3]ಬೀ ಹಟತ್ಕಾರದಿಂದಂ
ಮಲೆದೆಯ್ತಂದೆಮ್ಮ ಮಾವಂಗಿದಿರಿದಿ[4][ರುರೆ][4]ಬಂದಾಂತೆ[5][ಯಾಂತಂತೆ][5] ತಿಣ್ಣಂ
ನಿಲವೇಟಿಂದಪ್ಟೆ ಪಾರ್ಥಂ ಮುಳಿದಿರದೆಡೆಗೊಂಡಾಂತಡಾ ಶಲ್ಯಭೂಭೃ
ದ್ಬಲಮುಬ್ಬಾಡಿತ್ತು ಬೇಗಂ ಕರಡಮುನುರಿ ತಳ್ತಟ್ಟದೊಂದಂದದಿಂದಂ ೪

ಕಂ॥ ಶಲ್ಯನುಮವಂಗೆ ಕುಸಿದೊಡ
ಖಲ್ಯನುಮಾಗಿರ್ಪನೆಂಬ ಬಗೆಯಿಂ[6][ದಿ][6]ಷ್ಟಾ
ದಿಲ್ಯಮನನಾಗಿ ಕಾದುಮ
ಪೊಲ್ಲ ಮಹಾಶೌರ್ಯಪಳವನೇನಂ ಪೇೞ್ವಂ (?) ೫

ವ॥ ಅಂತವರಿರ್ವಲದ ಕಾಳೆಗದಗುರ್ವಿಂಗೆರಡುಂ ಪಡೆ ಬೆಕ್ಕಸಮಾಗಿ ನೋಡುತಿರ್ದರನ್ನೆಗಮಶನಿಘೋಷನೆಂಬಂ ಬಲದೇವನೊಳಾಂತು ಕಾದುತ್ತಿರೆ ಬಲದೇವನಂ ಸೆಱಗಿಕ್ಕಿ

ಕಂ॥ ದಾರಣನಭಿನುತ ಗುಣಸಂ
ಧಾರಣ[ನ]ನುಗ್ರ ಭವದ್ವಿಷಾಭಂ ವಿದ್ವಿ
ದ್ವಾರಣ ಘಟಾಳಿದರ್ಪನಿ
ವಾರಣ ವಾರಣಮುನಣೆದು ನೂಂಕಿದನಾಗಳ್ ೬

1 ನ 2 ಲಿಂ 3 ಮಿನ್ನಂ 4 ರಂ 5 ನಾಂತೆಂತಿರೆ 6 ಗಿ

ವ॥ ನೋಂಕಿ ಹತ[1][ವಿ][1]ತತ ಕೋಳಾಹಳಮಾಗೆ ತೊತ್ತುೞಿಮುೞಿಯಿಸಿ ಮಾರ್ಬಲಮಂ ಪೇಸೇೞಿ ಕೊಂಡಶನಿಘೋಷನನಿಕ್ಕಿದಂ ವಜ್ರಕಾಯಮಂ ಕಂಡು ತನ್ನಾನೆಯಂ ನೋಂಕಿ ಪಿರಿದು ಪೊತ್ತು ಕಾದುತ್ತಿರೆ ನೇಸರ್ಪಟ್ಟೊಡೆ

ಕಂ॥ ಇರುಳುಣಲಿಂತಾಗ ತಪೋ
ಭರಸಹಿತಂಗಂತೆ ತುಱಿಲಸಂದಂಗೆ ತಗು
ೞ್ದಿರುಳಿಱಿಯಲಾಗದೆಂತಿಂ
ತೆರಡುಂ ಪಡೆ ಪೋಗಿ ಮಗುೞ್ದು ಪೊಕ್ಕರ್ ಬೀಡಂ ೭

ವ॥ ಪೊಕ್ಕಿರುಳೆಲ್ಲಮಾಯುದ ಪಸುಗೆಗಳ ಮಾತನೆ ನುಡಿಯುತ್ತಿರ್ದು ಬೆಳಗಾದಾಗಳೆಂದಿನಂತೆರಡುಂ ಪಡೆ ಸಮರಭೂಮಿಗೆ ಬಂದೊಡ್ಡಿನಿಂದಲ್ಲಿ ಸತ್ಯಕಂ ವಜ್ರಕಾಯನಂ ಕೊಂದಂ ಜಯದ್ರಥನುತ್ತರನಂ ಕೊಂದಂ ನಕುಳಂ ಭೂರಿಶ್ರವನಂ ವಿರಥಂ ಮಾಡಿದಂ ಮಹಾಸೇನಂ ದುಂದುಭಿಯುಂ........ವಸುದೇವಂ ವಜ್ರಮುಷ್ಟಿಯನಿಕ್ಕಿದಂ ಧೃಷ್ಟದ್ಯುಮ್ನಂ ಕೃಪನುಂ ಸಮಗಾಳೆಗಂಗಾದುತ್ತಿರೆಯಿರೆ ನೇಸರ್ಪಟ್ಟೊಡೆರಡುಂ ಬಲಮೊಡ್ಡಣ ಮಸುಡುಗಿ ಬಂದು ಬೀಡಿನೊಳಿರ್ದಿರುಳಂ ಕೞಿಪಿ ಬಯ್ಗುರುಳಿರ್ದು [2][ಪೞಿ][2]ಯಂತೆ ಬಂದೊಡ್ಡಿನಿಂದರನ್ನೆಗಂ ದುರ್ಯೋಧನ[ಂ] ಶಶಪ್ರಕರರೆಂಬ ದಾನವರುಂ ವಿದ್ಯಾಗರ್ವಿತರುಂ ಪಾಂಡವರನೆ ಭರಂಗೆಯ್ದಿಂತುಂ ಕೊಲ್ಲಿಮೆಂದು ಪೇೞ್ದೊಡವರ್ ಮಾಯಾಬಲಮುಂ ವಿಗುರ್ವಿಸೆ ಪಾರ್ಥನಱಿದು ತನಗಂ ವಿದ್ಯಾಗರ್ವಮುಳ್ಳುದಱಿನಿದನಾನಲ್ಲದೆ ಪೆಱರ್ ಭೇದಿಸರೆಂದಾ ಮಾಯಾಬಲಕ್ಕಿದಿರಂ ನಡೆವವರ ಮಾಯಾವಿದ್ಯೆಗೆ ತಾಂ ಪ್ರತಿವಿದ್ಯೆಯಂ ಪೊಣರ್ಚಿ ಕಾದುತಿರ್ದರನ್ನೆಗಮಾ ಪ್ರಸ್ತಾವದೊಳ್

ಕಂ॥ ದ್ರೋಹ[3][ರಮಾಳಂ ಮಾಡುವೆ
ನಾಹವ][3]ಮಂ ಕಂಡು ಮಾಣೆನೆಂ[4][ದಂದಿಂ][4]ತೀ
ಮಾಹಾತ್ಮ್ಯದಿಂದೆ ಚಕ್ರ
ವ್ಯೂಹಮನೊಡ್ಡಿರ್ದು ನಿಂದ ಕೌರವರಾಯಂ ೮

ವ॥ ಅಂದು ದುರ್ಯೋಧನಂ ಚಕ್ರವ್ಯೂಹಮಂ ಪಾಂಡವರ ಮೊನೆಗೆ ಸಾರ್ಚಿ ತಂದೊಡ್ಡಿ ಮಾರ್ಮಲೆಯುತ್ತಿರ್ದುದುಮಂ ಪೊರ್ದಿ ಬಂದಲೆವುದುಮಂ ಯಾದವರುಂ ಪಾಂಡವರುಮಱಿದು ನಾಮಾವೊಡ್ಡಣಮನೊಡ್ಡು ವಸುದನೆಂತು ಭೇದಿಸುವಮೆಂದೊಂದೆ ಡೆಗೆವರ್ಪುದುಮಭಿಮನ್ಯು ಬಂದೀ ಬೆಸನನೆನಗೆ ದಯಗೆಯ್ಯಿಮೆಂದು ಹೞಿಗಂ ಧರ್ಮಪುತ್ರಂಗಂ ಕೆಯ್ಯಂ ಮುಗಿದು ಬೇಡಿದಾಗಳ್ ಧರ್ಮಜಂ ಮನದಳವನಱಿವನಪ್ಪುದಱಿಂ

1 ಪ 2 ಪೞೆ 3 ...ಳ ಮಾಡುವೆನಿನ್ನಾಹವ (ಓಲೆ) ರಮಾಳ ಮಾಡುವೆನಿನ್ನಾಹವ (ಕಾಗದ) 4 ದತಿಗಿಂ

ದಿಕ್ಕಿನೆಂದೊಡೆ ಪೊಡೆವಟ್ಟು ಬೆಸಂಬಡೆದು ಜೀವಿತಂಬಡೆದನಂತೆ ಗುಡಿಗಟ್ಟಿ ಸನ್ನಣಂ ಗೆಯ್ದು ತನ್ನ ಬಲಮುಂ ಕೂಡಿಕೊಂಡು ರಥಾರೂಢನಾಗಿ ಯುದ್ಧಾಭಿಮುಖದೊಳ್ ಪರಿಯಿಸುವಾಗಳ್ ದ್ರುಪದ ಧೃಷ್ಟದ್ಯುಮ್ನ ಘಟೋತ್ಕಚಾದಿಗಳುಂ ಪಾಂಡವರುಂ ಕುಮಾರನನೊರ್ವನನಟ್ಟಿ ನೋಡುತ್ತಿರಲಾಗೆಂದು ಸನ್ನಣಂಗೆಯ್ದು ಪೆಱಗಣಿಂ ನೂಂಕಿದ ರಾಗಳಾ ವ್ಯೂಹದ್ವಾರಪಾಲಕರಾಗಿ ನಿಜಬಲಸಹಿತಮೊಡ್ಡಿರ್ದ ದ್ರೋಣಾಚಾರ್ಯರ್ಗಂ ಕುಮಾರಂ ಬೆಸನಂ ಕೈಕೊಂಡು ಬರ್ಪ ಬರವಂ ಕಂಡು ತನ್ನವರನಂತೆ ಮಾಣಿಸಿ ತಾನಿ ನಿಸಡ್ಡಂ ಬಂದು

ಕಂ॥ ಬೀರರ್ ಪಲಬರುಮೊಳ[ರವ]
ರಾರುಂ ಬರಲಣ್ಮರಲ್ಲಿ ಬರಲಕ್ಕುಮೆ ನೀಂ
ಬಾರದಿರು ಕೂಸೆ ಬಂದೊಡೆ
ಬಾರದು ಮಗುೞಲ್ ಸುರಾಸುರಪ್ರಭುಗಳ್ಗಂ ೯

ವ॥ ಎಂಬುದಂ ಕೇಳ್ದಭಿಮನ್ಯುವಿಂತೆಂದಂ

ಕಂ॥ ತಂದೆಯು ಬಿಲ್ಲೊವಜರಿರೇ
ನೆಂದೊಡಮಾಂ ನಿಮಗೆ ಮುಳಿಯೆನುಸಿರದೆ ನೀವು
ರ್ದಂದದೊಳೆ ಮಿಡುಕದಂತಿರಿ
ಮೆಂದವರಂ ಕಱಿಯೆ ನರಸುತಂ ಪರಿಯಿಸಿದಂ ೧೦

ವ॥ ಪರಿಯಿಸಿ ಚಕ್ರವ್ಯೂಹದೊಳಗಂ ಪೊಲೆಗೇರಿಯನಾನೆ ಪೊಕ್ಕಂತೆರಡುಂ ಕೆಲನುಮನಲ್ಲಾಡೆ ಪುಗುತರೆ ಚಕ್ರವ್ಯೂಹದ ಮುಱಿವಿನೊಳಗಳಿಟ್ಟಿಡೆಯು ಕೃಪ ಕೃತವರ್ಮ ರೆಂಬ ನಚ್ಚಿನ ನಾಯಕರಿರ್ವರುಮೆರಟಿಕ್ಕಿಸೆಯೊಳೊಡನೆ ಬಂದು ತಾಗಿದಾಗಳಭಿಮನ್ಯು ವೈಶಾಖಮಂಡಳಮೆಂಬ ಸ್ಥಾನಕದೊಳ್ ನಿಂದು ಬಹುವಿದ್ಯ[ದ]ಮಿಸಲಂಬಂ ತೊಟ್ಟು ತೆಗೆದು

ಕಂ॥ ಎಡಕಂ ಬಲಕಂ ಸೂಱ್ ಸೂ
ೞಿಡೆಮಡಗದೆ ಮುಗುೞ್ದು ಜೇಗಮಿಸುತೆೞಂ[1][ದೊಂ][1]ದಂ
ಪೊಡೆವಡಮುರಗದ ಕಡುಪೆರ
ಡೆಡೆಗಂ ಮಗುಳ್ವಂತುಟಾಯ್ತು [2][ಪೇ][2]ಗಾಯ್ಲ್ಕೆಯೊಳ್ ೧೧

ವ॥ ಅಂತೆರಟಿಕ್ಕಿಸೆಯ ನೆರವಿಯುಮನೊಡನೆ ಪಡಲ್ವಡಿಸಿ ನಾಯಕರಿರ್ವರುಮಂ ಮುಟ್ಟುಗಿಡಿಸಿ ಕಾದುವನ್ನೆಗಂ ಪೆಱಗಂ ಬರ್ಪ ಭೀಮ ದ್ರುಪದಾದಿಗಳುಂ ದ್ರೋಣ ಶಲ್ಯ

---

1 ದು 2 ಚೇ

ವಿಕರ್ಣಾದಿಳ್ಗಡ್ಡವಾಗಿ ಕಾದುತಿರ್ದರನ್ನೆಗಮಭಿಮನ್ಯುವಿದಿರಾಂತರಂ ಗೆಲೆ ಕಾದಿ ಪುತ್ತ್ರರೊಳಗಣಂತೆ ರಥಮಂ ಸಗಲ್ವೇಱಿದ್ದಾಗಳ್ ಸ್ಥಾನಕದೊಳ್ ನಿಂದು

ಕಂ॥ ಶರಸಂಧಾನಕ್ರಿಯೆಯಿಂ
ದೆರಡುಂ ದೆಸೆಗೆಸುತವಂತೆ ಪರಿಯಿಸಿ ಲೋಗೇ
ಶ್ವರದೊಳಗೆ ಬಂಡಿನರಿವಂ
ತಿರೆ ಚಕ್ರವ್ಯೂಹದೊಳಗೆ ಪರಿದತ್ತು ರಥಂ ೧೨

ವ॥ ಆಗಳ್ ವ್ಯೂಹದ ಕಟ್ಟು ಕಟಿಲೆ ಕುಮಾರನಥಟು ಕಣ್ಣೊಳ್ ತೊಟಲ್ದು ಬಲವೊಡ್ಡಿಱಿಯಲ್ ಬಗೆದು ತಳಮಳಗಾದೊಡೊರ್ವಂ ಭೀಷ್ಮರನೆಯ್ದೆವಂದು ತಾವರೆಗೊಳನಂ ಪುಂಜು ಕವಿದಂತಭಿಮನ್ಯು ಪುಗುತಂದನೆನೆ ಭೀಷ್ಮರ್ ತಮ್ಮ ರಥಮನೆಯ್ದೆ ಪರಿಯಿಸಿ ಬಂದಿಂತೆಂಬರ್

ಕಂ॥ ಬಲಸಹಿತಮೆಲ್ಲಮಿರ್ದಂ
ತೊಳಗಾದ್ವೆ ವೊಮ್ಮ ನೀನೆ ನಿನ್ನುಮನಿನ್ನಾ
ನೊಳಕೆಯ್ದೆನೆನ್ನ ಪೇೞ್ದುದ
ನೊಳಕೊಂಡೆನ್ನತ್ತ ಬಂದು ಸುಖಮಿರಲಾಗಾ ೧೩

ವ॥ ಎಂಬುದನಭಿಮನ್ಯು ಕೇಳ್ದು ಮುಳಿದಿಂತೆಂದಂ

ಕಂ॥ ಏನೇನೋ ಕೂಸಿವನೆಂ
ದೇನುಂ ಸಂಕಿಸದೆ ನುಡಿದೊಡೇನಾಯ್ತಿಂತಿಂ
ತೀ ನೆರವಿಯೆಂಬ ಕಾಗೆಗ
ಳಾನಂಬಂ ತುಡೆ ನಭಕ್ಕೆ ಪಾಱವೆ ಮರುಳೇ ೧೪

ಬನ್ನಮನೊಳಕೊಂಡಳಿಪಿಂ
ದೆನ್ನಲ್ಲಿಗೆ ವಂದು ಕಾಣ್ಬುದೆಂಬುದನೆನೆ ಕೂ
[1][ರ್ತನ್ನಂ][1]ಜದಿರಿನ್ನಲಸದಿ
ರಿನ್ನಾಂತಿಱಿಯೆಂಬುದಜ್ಜ ನೀನಿಂತೆಂಬಾ ೧೫

ಮಾರ್ಪಡೆಯೊ[2][ಳವಿ][2]ದಪುಮೇಂ
ಕೂರ್ಪುದೆನಗಾಯುಮೊಳ್ಪುಮಂ ಕೀರ್ತಿಯುಮಂ
ಕೂರ್ಪುಮನೊದವಿಪ ಮಾತೆನೆ
ತ್ತರ್ಪ್ಪುದು ಬಱಬರ್ಪ ಮಾತುದಪ್ಪದೆ ನಂಟಂ ೧೬

1 ತರನಂ 2 ೮

ವ|| ಪೊಲ್ಲಕೆಯ್ದು[ನ]ನುಯ್ದಿರ್ ನೀವಿಂತು ನುಡಿದೆನ್ನಂ

ಕಂ|| ಪತ್ತಿಸುವುದನಾಂ ಕಂಡು
ತೃಪ್ತಿಸುವುದಿದಕ್ಕೆ ನಿಮ್ಮನೊಂದಿಸಿ ನೇರ್ತ-
ಪ್ಪಂ ತಮ್ಮನೀತನೆನಿಪನೆ
ಪೆತ್ತಾಂ ಮಗನಿಂತು ಬಂದ ಮುತ್ತಯ್ಯನುಮಂ ೧೭

ವ|| ಎಂದು ರಥಮನಿನಿಸು ತೊಲಗಿಸಿ ಕಳಿಯೆ ಪರಿಯಿಪೆ ಮಾರ್ಬಲಮೆಳಗೆಯ್ಯ ಮೇಲೆ ಕಾಲ್ಪುರದ ತೊಱೆ ಪರಿದಂತಾನುಂ ಬೇಸಗೆಯೊಳಡವಿಯೊಳುರಿ ಪರಿದಂತಾನು ಮಾಗೆ ರಥಂ ಪರಿತಂದು ದುರ್ಯೋಧನನ ಸಾಧನಮನೆಯ್ದೆ ಪಂದಾಗಳಾತನ ಮಗಂ [1][ಲಕ್ಕಣಂ][1] ಕಂಡೆಯ್ದೆ ನೂಂಕಿದೊಡಭಿಮನ್ಯು ಮುಳಿದೆಚ್ಚಲ್ಲಿಂಮುನ್ನಮಾಹವದೊಳ್

ಕಂ|| ಮುಱಿದ ವರೂಥಂಗಳ ನಡು
ಪಱಿದ ಹಯೋತ್ಕರದ ಕೆಡೆದ ಹರಿನಿಕರಮೆ ಪುಣ್
ಸುರಿಯುತ್ತಿರೆ ಬಿರ್ದ ಬಂಟರೆ
ಮೆಱೆದಾಡುವ ಭೂತಗಣಮೆ ನೋಲ್ಪಂಗೆತ್ತಂ ೧೮

ವ|| ಅಂತಗುರ್ವಾದ ಕೊಳ್ಗುಳದೊಳೆ

ಉ|| ಜೋಳದ ಲೆಕ್ಕಮಂ ಕಳೆವೆನಾಂ ತಲೆಯೊಳ್ ಕಡುಗೂರ್ತ ಕೂರ್ಮೆಯಿಂ
ಮೇಳದ ಲೆಕ್ಕಮೆನ್ನೆರೆಯದಾಳ್ದನುಮಿಲ್ಲಿವನಂತಱಿಂದಮಾ
ಮೇಳಮುಮಾಳ್ದನುಂ ಖಗನಿಶಾಚರ ಘಟ್ಟಿತಮಾಗೆ ಬೀೞೆ ನೀ
ಜೋಳದೊಳಾಡಿ ಮೆಚ್ಚಿಸುವೆನಾಳ್ದನನೆಂಬವೊಲಟ್ಟೆಯಾಡುಗುಂ ೧೯

ಕಂ|| ಇಂತೆಮ್ಮಾಳ್ದನ ಋಣಮಂ
ತೆತ್ತೆನೆನುತ್ತೊಡನೆ ರಾಗದಿಂ ತಮ್ಮಣ್ಣಂ
ಕೊತ್ತಳಿಗೆ ಮೆಱೆವ ತೆಱದೊಳ್
ಕೊತ್ತಳಿಗಾಡಿದನನೇಕವಿಧ ಲಯಗತಿಯಿಂ ೨೦

ವ|| ಅಂತಗುರ್ವಾದುದಿನ ಕೊಳುಗುಳದೊಳಭಿಮನ್ಯುವೊಂದಕ್ಷೋಹಿಣೀಬಲಮಂ ಕೊಲ್ವುದುಂ [1][ಲಕ್ಕಣಂ][1] ಕಂಡೆಯ್ದೆ ನೂಂಕಿದೊಡೆಯಭಿಮನ್ಯು ಮುಳಿದು

---

1 ಲಕ್ಕಣ

ಕಂ॥ ಕೆಡೆವಿನಮಶ್ವಂಗಳ್ ರಥ
ಮುಡಿವಿನಮಾ ರಥಮನೆಸೆವನುಂ ಲಕ್ಕ[1][ಣನುಂ][1]
ಮಡಿವಿನಮರಿಬಲಮುಚ್ಚರಿ
ಪಡುವಿನಮೆಚ್ಚಂ ಸುರೇಂದ್ರತನಯನ ತನಯಂ ೨೧

ವ॥ [2][ಲಕ್ಕಣನ][2]ನಂತು ಕೊಂದು ವೀರಶ್ರೀಯಂ ತಂದು ಪಗೆಪಡೆಯೊಳಿಂ ಗಡರಾರಿಂದು ಬಿಲ್ಲಸೂಱ ನಿಂದು ಪೊಗೞಿಸುತ್ತಿರ್ಪುದಂ ದುರ್ಯೋಧನಂ ಕಂಡು ಚಕ್ರವ್ಯೂಹದ ಬಲ್ಪೞಿದುದಕ್ಕಂ ಮುನ್ನಂ ಚಿಕ್ಕಸಂಬಟ್ಟು ಬೞಿಯಂ ಮಗನಳಿದುದಕ್ಕುಬ್ಬೆಗಂ ಬಟ್ಟನಂತು ನೋವಿನುಮ್ಮಡಿಸೆ ಸ್ಫುರಿಸದೆ ಮೂರ್ಛೆವೋಪನಿತಾಗೆ ಚೇತರಿಸಿರ್ದಿರ್ ನಮ್ಮಲ್ಲಿ ಗಂಡರಾರಿರ್ದಿರೆನೆ ಗಂಡರಿನ್ನುಮನಿಬರಾನುಮೊಳರನ್ನೆಗಂ ಬೆಸನನೆನಗೆ ದಯೆಗೆಯ್ಯಿಮೆಂದು ಬೇಡಿಕೊಂಡು

ಕಂ॥ ಬಂಧನಮುಂ ಪಱಿಯುತ್ತೆ ಮ
ದಾಂಡೋದ್ಧತ ರೌದ್ರಭಾವಯುತ ಗಂಧ ಮಹಾ
ಸಿಂಧುರಮೆಯ್ತರ್ಪಂತಿರೆ
ಸೈಂಧವನೆಟ್ಟಿಂದು ತಾಗಿದಂ ನರಸುತನೊಳ್ ೨೨

ವ॥ ಆತನಂತು ತಾಗಿದುದಂ

ಕಂ॥ ಕುಸಿದು ಕಳಶೋಭವನುಂ ಕಂ
ಡೆಸುತಿರೆ ಬಂದೆಡೆಯೊಳಾಂತನಾಗಡೆ [ದಲ್] ಖಂ
ಡಿಸುವೊಂ ಬಾಣಗಳಂ ಪುಂ
ಜಿಸಿದಂತಿರೆ ಪೊದೞ್ದುದವರ್ಗೆ ಮೇರೆಯುಪ್ಪಿನೆಗಂ ೨೩

ವ॥ ಅಂತಭಿಮನ್ಯುವಯಾಸ್ತ್ರಮಾನಂಬರಂ ಕಾದುತ್ತಿರೆ ರಥದೊಳಗುಳ್ಳಾಯುಧಂಗಳೆಲ್ಲಂ ತವುಕಲಾಗೆ ಸಾಣ್ದು ಮಾಣ್ದಿಸುವುದಂ ಸೈಂಧವಂ ಕಂಡು

ಕಂ॥ ಮಾಱಾಂತೆನಿನಿಸು ಪೊತ್ತು
ನ್ನಾಱಿತ್ತೈ ನೀಂ ಮಗನೆ ಕಾದುಕೊಳ್ಳೆಂದು ಕರಂ
ಜೀಱಿತರ್ದು ನಭಕೆ ತಲೆ ಸಲೆ
ಪಾಱಿ ಮಹೋಗ್ರ ಪ್ರತಾಪಿ ಸೈಂಧವನೆಚ್ಚಂ ೨೪

---

1 ಣನುಂ 2 ಲಕ್ಕಣನು

ವ॥ ಸೈಂಧವನಭಿಮನ್ಯುವಂ ಕೊಂದು ರಥಮುಂ ಕೊಳ್ಳ ವಾದಿಯುಂತುದ್ವೃತ್ತನಾಗಿ ವಿಜಯಪಟಹಮಂ ಪೊಯ್ಯಿಸಿ ನಿಂದು ದುರ್ಯೋಧನಂ ಕಂಡು ರಾಗಂ ಪೊಂಪುಳಿಯಾಗೊಸಗೆವೆಱೆಯುಂ ಪೊಯಿಸಿದನನ್ನೆಗವಿತ್ತ ಸಂಸಪ್ತಕರ ಮಾಯಾಯುದ್ಧಮನರ್ಜುನನೆಂತಾನುಂ ಭೇದಿಸಿ ಬಂದು ಧರ್ಮಪುತ್ರನಂ ಕಂಡು ತನ್ನ ಕಾದಿದ ವಿದ್ಯಾಬಲದ ಚಲದ ಸಾಹಸದ ಮಾತುಗಳಂ ನುಡಿಯುತ್ತಿರ್ದನಿತ್ತ ನಾರಾಯಣನೊಡ್ಡಿನೊಳ್ ವಸುದೇವಂ ಜರಾಸಂಧನ ಸಾಮಂತನಪ್ಪ ವಜ್ರಕುಂಡಳನೆಂಬ ಬಲ್ಲಾಳನಂ ಗೆಲ್ಲಂ ಕಾದಿ ಪಾರ್ಗುಣಲಿಕ್ಕುವಂತೆ ಬಯ್ಗುಂಬೊತ್ತಿಕ್ಕಿದನನ್ನೆಗಂ

ಕಂ॥ ದುರುಳನಭಿಮನ್ಯು ಸತ್ತೊಡೆ
ನರನಂ ಕೇಳಿಸುವೆನೆಂದು ಬಿನ್ನನೆ ಪೋಪಂ
ತಿರೆ ಬೆಳಗನುಡುಗಿ ಮೆಲ್ಲನೆ
ಖರಕಿರಣಂ ಪೋದನಸ್ತಶೈಳಕ್ಕಾಗಳ್ ೨೫

ವ॥ ಅಂತು ನೇಸರ್ಪಟ್ಟೊಡೆಲ್ಲಂ ತಂತಮ್ಮ ಬೀಡುಗಳ್ಗೆ ಪಂದಿರ್ದಲ್ಲಿ ಯಾದವ ಪಾಂಡವರೆಲ್ಲಮರ್ಜುನನಲ್ಲಿಗೆ ವಂದು ಚಕ್ರವ್ಯೂಹದೊಳಭಿಮನ್ಯು ನಿಜ್ಜಟನಾಗಿ ಪೊಕ್ಕು ಪಲಬಂ ಗೆಲೆ ಕಾದಿ [1][ಲಕ್ಷ್ಮಣನಂ][1] ಕೊಂದು ನಿಂದೊನಂ ಸೈಂಧವಂ ಬಂದು ಕಾದಿ ಕೊಂದನೆಂಬುದನರ್ಜುನಂ ಕೇಳ್ದಾಗಳೆ ತಗುಳಲ್ ಬಗೆದು ದುಃಖಾಗ್ನಿಯುಂ ಕ್ರೋಧಾಗ್ನಿಗೆಲೆ ನರನಿಂತೆಂದಂ

ಕಂ॥ ಎ[2][ಲ್ಲರ್][2] ಕೇಳಿಂ ಪೊಣ್ದುಂ
ಪೊಲ್ಲೆನಲಿಂ ನಾಳೆ ನೇಸಱಿಂದೊಳಗೆ ಕರಂ
ಬಲ್ಲಾಳಂ ಸೈಂಧವನಂ
ಕೊಲ್ಲದೊಡಗ್ನಿಪ್ರವೇಶದಿಂದಂ ಮಡಿವೆಂ ೨೬

ವ॥ ಎಂಬ ಪ್ರತಿಜ್ಞೆಯುಂ ನುಡಿದೊಡೆಲ್ಲಂ ಬಾಯುಂಬಟ್ಟಿರ್ದರಂತೆಂದಿನಿರುಳೆಲ್ಲಮಭಿಮನ್ಯುವಿನ ಕಾಳಗ........ನಿನ ಮಾತುಮರ್ಜುನನ ಪ್ರಾಣ್ದೆಯ ಮಾತುಂ ತಗುಳೆ ಬೆಳಗಾದಾಗಳರ್ಜುನನೊಡನೆ ಪೊಱಮಟ್ಟು ಪಾಂಡವರುಂ ಯಾದವರುಮೊಡ್ಡಿ ನಿಂದರಿತ್ತ ಜರಾಸಂಧನುಂ ಕೌರವನುಂ ಬಂದೊಡ್ಡಿ ನಿಂದರ್ಜುನನ ಪ್ರತಿಜ್ಞೆಯನಱಿದು ಶಲ್ಯ ಮಹಾರಾಜನುಂ ಭೀಷ್ಮನುಂ ದುಶ್ಶಾಸನನುಮುಂ ಮೊಯ್ಗಾವಾಗಿಸಿದರ್ ಜರಾಸಂಧಂ ತನ್ನ ಪಿರಿಯ ಮಗನಂ ಕಾಳಯಮನೆಂಬನಂ ಪೇಱಿತ್ತೂ ಜಾತನಂ ಜಿತಶ್ರುಮಾರನಾಂತಂ ವಜ್ರಶಲನಂ ವ್ಯಾಘ್ರಕೇತುವಾಂತು ವೃಷಭಸೇನನನುಕ್ಕಮುಖನಾಂತಂ ಭೂರಿಶ್ರವನಂ ಸತ್ಯಕ

1 ಲಕ್ಕಣೆಯುಂ 2 ಲ್ಲಂ

ನಾಂತಂ ಭಗದತ್ತನಂ ಭೀಮಸೇನನಾಂತನಂತು ಕಾದೆ ತ್ರಿಗರ್ತನಾತನ ಗಜಂ ಸುಪ್ರತೀಕ ಮನೆಯ್ದೆ ಪೊಕ್ಕು ದಟ್ಟ ಸಮಾಯುದ್ಧಂಗೆಯ್ದು ಗೆಲ್ದಂ ಭೂರಿಶ್ರವಂ ಸತ್ಯಕನಂ ವಿರಥಂ ಮಾಡಿಮುಡಿವಿಡಿದನರ್ಜುನಂ ಕಂಡು ಮುಳಿದಾದಮಾನಸಂ ಕಾದಿ ಭೂರಿಶ್ರವನನಿಕ್ಕಿದಂ ಇಕ್ಕಿ ಬೇಗಮಿವನಂ ಕೊಂದಮನೆನ್ನ ಮಗನಂ ಕೊಂದನಂ ಕೊಲ್ವೆನೆಂದು ಕೆಂಗೋಲ್ ಮಸಗಿದ ಜನಸಂತತಿಯುಲಿ ಮುನ್ನೆ ಮಾಣು ಸೈಂಧವನಂ ಕಾಪು ಕೈಕೊಂಡು ಮಹಾಶಲ್ಯರಾಜ ನೆನಗೆ ಮಾಣಲಾಗೆಂದು ತನ್ನ ಸಮಸ್ತ ಬಲಂಬೆರಸು ಅರ್ಜುನನನಾಂತು ಕಾದುವಾಗಳ್

ಕಂ॥ ಇಂಬಱಿಂದು ಕುಣಿದು ಕೆಗೆದಿದಿ
ರಂ ಬಂದೆಸು[1][ತಮಿರೆ][1] ಬಿಲ್ಲ ಪೆರ್ನಡೆಯುಂ ಕಂ
ಡಂಬರತಳಮಂಬಿನಮಯ
ಮೆಂಬನಿತೆಚ್ಚಂ ಧನಂಜಯಂ ಕಡುಮುಳಿಸಿಂ ೨೭

ವ॥ ಅಂತೆಚ್ಚು ನಾಲ್ವರಂ ಬಲಮುಂ ನಾಲ್ವರಂ ಗಳಿಗೆಯೊಳ್ ಪಡಲ್ವಡಿಸಿ ಶಲ್ಯ[ಂ] ತಳ್ತು ಕಾದುತ್ತಮರ್ಜುನದಿಂ ಕಿರೀಟಿಯಾಡಿ ಪತ್ತ್ರಂ ನೂಂಕಿದಾಗಳ್ ದ್ರೋಣಾಚಾರ್ಯರುಂ ಬಂದಾಂತೊಡಮವರೊಳ್ ಮುನಿಸನಿನಿಸುಂ ಬಿಡದು ಕಡುಮನ್ನಣೆ ಮನೆ ಮೀಱಿದು ಕಾದುತ್ತಿ[2][ರ್ದ][2]ರ್ಜುನನಂ ಪೋದೊಡಿಲ್ಲಿ ತಡೆಯಾಗಲಾಗೆಂದು ವಿರಥಂ ಮಾಡಿ ನೀವಿನ್ನುಳಿಗಂಗೆಯ್ದ ಪೋಪುದಂತಿರಿಮಿಂದತ್ತ ನೂಂಕಿದೊಡೆ ಭೀಷ್ಮರ್ ಬಂದು ನೋಡಿಯರ್ಜುನನೇನೆಂಗೆಂದು ಕಡೆಗಣಿಸಿ ಕಾದುತ್ತಿರ್ದ ವಿನಯದ ಪಾಟಿಯುಂ ಬಗೆ ದೊಡೆ ಜೋಳದ ಪಾಟಿಗೆ ಮೋಸಮಂತಪ್ಪುದುಂ ಪ್ರಾಣಕ್ಕೆ ಪೊತ್ತು ಪೋದಪುದು ಮಾಣಲಿಂತುಮಾಗದೆಂದು ರಥಸಂಘಾತಂಗೆಯ್ದು ಕಣೆಪಂಜರದೊಳಿರಿಸಿ ನೀವಿನ್ನುಮ ವರದ ಪಸುಗೆಯುಂ ಬಗೆಯುಮೇಱಲ್ಪು ಗತಿಯುಂ ಬಗೆಯುಂ ಮುಂದೆ ನೂಂಕಿದನೆಂದೆನಿಸು ನೂಂಕಿದಾಗಳ್ ದುರ್ಯೋಧನಂ ಬಂದಾಂತಡನಾತನನೊಂದೆ ಘಳಿಗೆಯೊಳಿಕ್ಕಿ ಪೊತ್ತಂ ನೋಡಿ ಮಱಿಜು ಜಾಮಸಿತಾದಪಾತನೊಡ್ಡಣಿಕ್ಕೆ ಬಂದನೊ ಬಾರನೊ ಬಾರದೊಡಿಲ್ಲಿ ಪೊಕ್ಕಡಂ ತಲೆಯುಂ ಕೊಳ್ಳೆನೆಂದು ಕಡುವೇಗದಿನೆಯ್ತಪ್ಪಿನಮೆನ್ನನಿಂದು ಕೊಲ್ಲದೊಡೆ ಕಿಚ್ಚು ಪುಗುವೆನೆಂದಿರ್ದ್ದಣ್ಣಂಗಳಿದಿರ್ದ ಗೆಲ್ದಪುದು ತಾಱಿಲಸಂದುಂಗಾಯಮುಳ್ಳೊತಂ ಗಾನೆ ಕಿಚ್ಚಾಗಿ ಮಡಿಪ್ಪೆನೆಂದು ತಾಗಿದ ಸೈಂಧವನಂ ಕಂಡು ರಾಗದಿಂ ತಾನುಂ ಕಾದಿ ಬೇಗಮಿದಿರ್ಬಲಮುಂ ತವಿಸಿದ್ಘನನೆಯ್ದೆ ನೂಂಕಿದಿರ್ದಂತೆಂದು

ಕಂ॥ ಎನ್ನಾತ್ಮಜನಂ ಕೊಂದಾ
ದುನ್ನತಿಕೆಯೊಳಿನಿತು ಪೊತ್ತುವರೆಗಂ ಬದ್ದೈ
ನಿನ್ನನ್ನರಾರೊ ಗಂಡರ್
ಮುನ್ನಂ ಬಗೆವಾಗಳಿನ್ನುಮವನೀತಳದೊಳ್ ೨೮

1 ವ 2 ರ್ದ

ವ॥ ಎನೆ ಸೈಂಧವನಿಂತೆಂದಂ

ಕಂ॥ ಆಂ ಚಲದಿಂ[ದಂ] ನಿನ್ನಂ
ಪಂಚತ್ವಕ್ಕೆಯ್ದು ಕೊಳ್ಳೆ ಗೆಲ್ಲಕೆ ಮುನ್ನಂ
ಸಂಚರವಿಕ್ಕುವಂತಿರೆ
ಮುಂಚಿ ಭವತ್ಸುತನನಿಕ್ಕಿದೆನಗದು ಗೆಲವೇ ೨೯

ವ॥ ಎಂಬುದುಂ ಕೇಳ್ದಪ್ಪುದಪ್ಪುದು ಬಲ್ಲಾಳ ಮಾತಿಂತಪ್ಪುದು ನಿನಗೆ ಮುನ್ನಿಂ ತಪ್ಪುದಾತರ್ಜ ನಿಲ್ಲೆಂದು

ಮ॥ಸ॥
ದಿವಿಜರ್ ಕೆಯ್ವಾರದಿಂದಂ ಗಗನತಳದೊಳಿರ್ದಾರೆ ವಿದ್ವಿಷ್ಟ ಭೂಭೃ
ನ್ನಿವಹಂ ಬೆಕ್ಕಸತ್ತು ಬಾಯ್ವಿಟ್ಟಿಗಿದಗಿ[ದಿರ]ದಳ್ಕಾಡೆ ಬಳ್ಗೆಯ್ದು ಮಾಱಾಂ
ತನ[1][ನಾಯಕ್ವಂ][1]ಗಳಂ ಸೂತನುಮೊಡೆಗಿಡೆ ತಪ್ಪಂತಿರೆಚ್ಚರ್ಜುನಂ ಸೈಂ
ಧವನಂ ಕೊಂದಂ ನವಂಗಲ್ಲಿದೆ ಸುಹಿತತಳದೊಳ್ ಪೂಣ್ದುದಿನ್ನಾರ್ಗೆ ಸಲ್ಗುಂ ೩೦

ವ॥ ಆಗಳರ್ಜುನನ ಮುನಿ[2][ಸಾಱಿ][2]ದದೆ ಮಗನ ಸತ್ತುಬ್ಬಿಗಂ ಬರಲ್ ಬಗೆದು ದನಾಂ ನೋಡಲಾಱೆನೆಂಬಂತಾದಿತ್ಯನಸ್ತಮಾನಕ್ಕೆ ಸಂದೊಡುಱಿದ ಪಡೆ ಬೀಡಿಂಗೆ ಮಗುಱ್ದುದರ್ಜುನನುಂ ಬೀಡಿಂಗೆ ಬಂದು ರಥದಿಂದವಿೞಿದು[3][ಮಂ][3]ದಂಗೆ ನೀರೆಱೆದು ತನಗಾತನ ಮಾತೆ ಮಾತಾಗೆ ಬೀಡಿಂಗೆಲ್ಲ ತನ್ನ ಮಾತೆ ಮಾತಾಗೆ ಬೆಳಗಾದೊಡೆ ಮತ್ತಮೆರಡುಂ ಬಲಮೊಡ್ಡಿ ನಿಲೆ ಮುನ್ನಿನ ದಿವಸಮರ್ಜುನನಾಱೆಂದು ಪಲರ್ಗಱಿವಂ ತಂದು ಸೈಂಧವನಂ ಕೊಂದು ಪೂಣ್ದ ಪೂಣ್ಕೆ ಸಂದು ಪೋದುದಕ್ಕೆ ಕಟಿಲ್ದುಟಿಲ್ದಿರ್ದಾತನಿನಾತಂಗೀತನಲ್ಲದೆ ಪೆಱರಾರೆಂಬೊರ್ಗೆಯುಂ ದುರ್ಯೋಧನಂ ಕರ್ಣನ ಮೊಗಮಂ ನೋಡಿ ದೊಡಾಳ್ದನ ಕಣ್ಣಱಿದಿಂದೆನ್ನ ಕಾಳೆಗಮಂ ನೋಡಿಮೆಂದು ನೂಂಕುವಾಗಳಾತನೊಡನೊಂದಕ್ಷೋಹಿಣಿ ಬಲಮಂ ಪೇೞ್ದೊಡೆ ಕೂಡಿಕೊಂಡು ಮಸಗಿಬರ್ಪನಂ ಘಟೋತ್ಕಚನಾಂತು ವಿದ್ಯಾಬಲದೊಳನೊಂದಕ್ಷೋಹಿಣಿ ತವೆಯೆಱೆದೆಯ್ದೆ ನೂಂಕಿದೊನಂ ಕರ್ಣಂ ಕಂಡು ಶಕ್ತಿಯಿಂದಿಟ್ಟು ಕೊಂದು ಜಯಪಟಹಮಂ ಪೊಯ್ಸಿ ನಿಂದನಿತ್ತ ನಾರಾಯಣನೊಡ್ಡಣದೊಳ್ ಬಲದೇವಂ ನೂಂಕಿದೊಡಾತನಂ ಜರಾಸಂಧನ ಮಗಂ ಕಾಳಯವಂ ಮೂಸಾಸಿರ್ಬರ್ ಮಕುಟಬದ್ಧರ ನೆರವಿನೆರಸಾಂತು ಕಾದೆ ಬಲದೇವನನಿಬರುಮನಿಕ್ಕಿ ನಿಂದಂ ಮತ್ತಂ ದುರ್ಯೋಧನನ ಪಡೆಯೊಳ್ ದ್ರೋಣಂ ನೂಂಕಿದೊಡೆ ದ್ರುಪದನಾಂತೊಡಾತನಂ ದ್ರೋಣನಿಕ್ಕಿ ನಿಲೆ ತಮ್ಮಯ್ಯನನಿಕ್ಕಿದುದಂ ಧೃಷ್ಟದ್ಯುಮ್ನಂ ಮಸಗಿ ನೂಂಕಿ

1 ನುಂಮಯ್ಯಂ 2 ದ್ಯಾಡಿ 3 ಮ

ಕಂ|| ಆಲೀಢಂ ನೆಲೆಯೊಳ್ ಪ್ರ
ತ್ಯಾಲೀಢಕ್ರಮದೊಳಿರ್ದು ತೆಗೆದಿಸೆ ಬಿಲ್ಲೊಳ್
ಮೇಲೆನಿಸಿದೊವಜ[1][ರಿ][1]ಪು ಕೊಳೆ
ಕಾಲಮುಖಪ್ರಾಪ್ತನಾದನಾ ರಣಮುಖದೊಳ್ ೩೧

ವ|| ಅಂತು ದ್ರೋಣಾಚಾರ್ಯರ್ ಸತ್ತುದಂ ದುಶ್ಶಾಸನಾದಿಗಳ್ ನೂರ್ವರು ಮಱಿದು ಬಂದು ತಾಗೆ ರಾಗದೊಳ್ ಭೀಮಂ ಧೃಷ್ಟದ್ಯುಮ್ನನಂ ಪೆಱಗಿಕ್ಕಿ ಪೊಕ್ಕಾಂತು ಗದೆಯೊಳನಿಬರುಮನೊಂದೊಂದೆಪೊಯ್ಲೊಯ್ದು ಕೊಂದಂ ಜರಾಸಂಧನ ತನ್ಮ್ರಂ ಶಂಕು ಕರ್ಣವೆರಸರುಸಾಸಿರ್ವರ್ ಮಕುಟಬದ್ಧರ್ ನೂಂಕಿದೊಡವರಂ ಸುಂದರಾಂಗನುಂ ಗೆಲು ವಿಜಯಪಟಹಮಂ ಪೊಯ್ಸಿದಾಗಳ್ ನೇಸಱ್ ಪಟ್ಟೊಡೆರಡುಂ ಬಲಮೊಡ್ಡಣಮನುಡಿಗಿ ಬೀಡಿಂಗೆವಂದಿರ್ದೊಡಲ್ಲಿ ದುರ್ಯೋಧನಂ ಪ್ರಧಾನಪುರುಷರ ಸಾವಿನೊಳ್ ಚಿಂತಿಸಿರೆ ನಿಮಗಾಳಾರಾನುಮಿಲ್ಲಮಂತೇಕೆ ಚಿಂತಿಸುವಿರೆಂಬ ಕರ್ಣನ ಮಾತಿಂಗೆ ಮೆಚ್ಚಿಯುಂ ನಚ್ಚಿಯುಮಾತಂಗೆ ವೀರಪಟ್ಟಮಂ ಕಟ್ಟಿದೊಸಗೆಯು ಮಾತಂತೆ ಪರೆಯೆ ಪಾಂಡವರ್ಕಳರ್ಜುನಂಗೆ ವೀರಪಟ್ಟಮಂ ಕಟ್ಟಿದೊಡರ್ಜುನಂ ಕರ್ಣನಲ್ಲಿಗೆ ನಾಳೆ ಪೆಱರೊಳ್ ಕೂಡ ವರದೆ ತಾನುಮಾನುಂ ಕಾದುವಮೆಂಬುದಂ ಪೇೞ್ದು ಬನ್ನಿಮೆಂದು ಬೂತನಟ್ಟಿದೊಡವರ್ ಬಂದು ಕರ್ಣನಂ ಕಾಣ್ಬಾಗಳಾತನ ಚಾಗಮಂ ಕೊಳಲ್ ಪುಗುವ ಪೊಱಮಡುವ ನೆರವಿಯ ಸಂದಣಿಯೊಳಂತಾನುಮೊತ್ತಿ ಪೊಕ್ಕು ನೋೞ್ಪಾಗಳೆಂತಪ್ಪವರಿರ್ದವರೆಂದೊಡಾಱುಂ ಗುಣದೊಳ್ ಸಲೆ ನೆಗೞ್ದಸಿಧಾರಾವೃತ್ತಿಗಳಾಗಿರ್ದ ತುಱುಱಲಸಂದರುಂ [2][ಪೆಣ್ಗಾಪೆವೆಂಬವ][2] ಮೆಯ್ಯನಿಱಿಯೆಮೆಂಬರುಂ ಪರಿವ ನೀರ್ಗುಡಿಯೆವೆಂಬರುಂ ಪೊಯ್ದೊಡೆ ಬಿರ್ದವೆನಲ್ಲೆಂಬರುಂ ಕುದುರೆಯುನಿಱಿಯೆಮೆಂಬುರುಂ ಸ... ಗೆ ನೆರವುವೆಂಬರುಮೊರ್ವರನೊಂದಲ್ಲದಿಱಿಯೆವೆಂಬರುಮನಿತು ನೊಂದಡಂ ಪ್ರಾಣಮುಳ್ಳೊಡೆ ಬೀೞೆವೆಂಬರುಂ ವೀರಸಂನ್ಯಾಸಂಗೆಯ್ವರುಂ ರಣದೀಕ್ಷೆಗೊಂಬರುಮುತ್ತರಾಂಗಣಮಂ ಕೆಯ್ಕೊಡವರುಂ ಪೆಱವುಂ ದಾಯದ ಮಸುಗೆಗೊಂಡಾಡುವರುಂ ತಂತಮ್ಮ ಗುಣಂಗಳ ಪೊಣ್ಮೆಯುಮಂ ಪೊಗೞಿಸುತ್ತುಂ ತೆಕ್ಕನೆ ತೀವಿರ್ದ ಸುಭಟಜನದ ನಡುವಿರ್ದ ಷಡ್ಗುಣ ಸಂಪೂರ್ಣನಂ ಕರ್ಣನಂ ಕಂಡರ್ಜುನನಿಂತೆಂದಟ್ಟಿದನೆಂದು

ಕಂ|| ತನಗೊಸೆದು ವೀರಪಟ್ಟಮ
ನನುವರದೊಳ್ ನಚ್ಚಿ ಕಟ್ಟಿದಂ ತನ್ನಾಳ್ದಂ
ಮನದೊಳದಂ ನೆನೆದೆಂತುಂ
ಘನಮಪ್ಪುದು ನಾಳೆ ತನಗಮೆನಗಂ ಯುದ್ಧಂ ೩೨

1 ಽ 2 ಪೆಣಾವಪೆವವ

ವ|| ಇದಾತನ ಪರಾಕ್ರಮನೊಂದಿಂಪನೆಸಮಾತ್ರದಿಂದೊಡೆ

ಕಂ|| ನರನಿರ್ದಂ ಪೂರ್ಪಾಡಿಯೊ
ಳರಿದೆನಗಾವುದಱ ಗರ್ವಮಾವುದಱಳವೇ
ವಿರಿಯೆನಿದನೊಲ್ಲೆನೆನ್ನದೆ
ಮುಗುಳೇ ನೀನಿಂತು ವೀರಪಟ್ಟಮನಾಂಪೋ ೩೩

ವ|| ಎನೆ ಕರ್ಣನೆಂದಂ ಪೊಲ್ಲದೆಂದೆಂ ಬಲ್ಲಾಳ್ತನದ ದೆಸೆಯ ತುಱಿಲಾಳ್ತನಂ ಪಲವಂ ಕೊಲ್ವುದೆ ಗೆಲ್ಲಂ ವೀರಸಿದ್ಧಾಂತದೋಜೆಯೊಳ್ ಸಲೆ ನೆಗೞ್ದನೆಂದಾಂ ಪಟ್ಟ ಮನಾಂತೆನದು ನಾಳೆ ಕಾಣಲಕ್ಕುಂ ಪೋಗೆಂದಾ ಬಂದೊಂಗೆ ಪೇೞ್ದನಿತ್ತ ಕಳಿದ ನಂತಿರ್ದರುಂ ನಾಳೆ ಕಾದುವ ಸಮಕಟ್ಟಂತಂತೆ ಪರೆಯೆ ಬೆಳಗಾದಾಗಳೆರಡುಂ ಬಲಮುಂ ಪೊಡ್ಡಿಸಿರೆ ಜರಾಸಂಧಂ ತನ್ನ ಮಹಾಸಾಮಂತಂ ಜಯದ್ರಥನೆಂಬೊನಂ ನೂಂಕಪೇೞ್ದ ನತ್ತ ನಾರಾಯಣನ ಜನದಿಂ ಮಹಾಪದ್ಮನೆಂಬ ಮಹಾಸಾಮಂತನಾಂತು ಕಾದು ತ್ತಿರ್ದನುೞಿದ ನೆರವಿಯುಂ ಪಾಂಡವರುಂ ಹರಿಯುಮರ್ಜುನನ ಕಾಳಗಮಂ ನೋೞ್ಪ ನೆಂದು ಬಂದಿರ್ದರಾ ಕೌರವರಾಜನುಂ ಜರಾಸಂಧನುಂ ಬೆರಸುೞ್ದ ನೆರವಿಯೆಲ್ಲಂ ಕರ್ಣ ನನುವರಮಂ ನೋಡಲೆಂದು ಬಂದಿರ್ದರಿರ್ವರ ಯುದ್ಧಮಂ ಕೇೞ್ದು ಕಿನ್ನರ ಕಿಂಪುರುಷ ಗರುಡಾದ್ಯನೇಕಾಮರಗಣಮೆಲ್ಲಂ ಬಂದು ತಂತಮ್ಮ ವಿಮಾನಂಗಳನೋಳಿಯಿಂ ನೀೞ್ದ ಗಗನಭಾಗದೊಳ್ ನೋಡುತಿರ್ದರಾಗಳ್ ಕರ್ಣಂ ತನ್ನ ವೀರಭಟವೇಷವೆರಸು ಕಾಕ ಧ್ವಜಮನೆತ್ತಿಸಿ ಪಟುಪಟಹರವಂಗಳೆಸೆಯೆ ತನಗೆ ನಿಜಮಪ್ಪ[1] [ಜಯಂ][1] ಗುಣಂಗಳನೆ ಪೊಗೞುತ್ತುಂ ಬಂದು ತಮ್ಮ ಬಲಮೆಲ್ಲಮಂ ಪೆಱಗಿಕ್ಕಿ ಮುಂದೊಡ್ಡಿ ನಿಂದನದಂ ಕಂಡರ್ಜುನಂ ನಿಜಸಾಧನಂ ಬೆರಸು ವಾನರಧ್ವಜಮನೆತ್ತಿಸಿ ಸಾಹಸಮನೆ ಪೊಗೞು ತ್ತುಂ ತೂರ್ಯಧ್ವಜನಿಗಳೆಸೆಯೆ ನೂಂಕಿ ಪೊಕ್ಕು ಕರ್ಣನಿದಿರೊಳಾಂತನಂತಿರ್ವರುಂ ತಂತಮ್ಮ ಚಾತುರ್ಬಲಂಗಳಂ ಕಾದಿಸಿದೊಡೆರಡುಂ ಬಲದೊಳೋರೊರ್ವರಪ್ಪಡಮುೞಿ ದರುಮಿಲ್ಲೆಂಬುದೊಂದು ಪೆಸರಾಗೆ ತಳ್ತಿಱಿದು ಮಮ್ಮಱಿದಾಗೆ ಮುಂದಣ ಬಲಂ ತಪ್ಪೊಡೆದಿರ್ವರುಂ ರಥಂಗಳಂ ಸಾರ್ಚಿ ಶರಸಂಧಾನಂಗೆಯ್ದು ಪಿರಿದು ಪೊತ್ತು ಕಾದಿ ಕರ್ಣನುತ್ತರಿಸಲಾಱದೆ ದಿವ್ಯಶಕ್ತಿಯುಕ್ತ ಬಾಣಂಗಳಿಂ ಕಾದಲ್ ಬಗೆದು

ಕಂ|| ಅನಲಶರದಿಂದಮಿನಸುತ
ಮುನಿದೆಚ್ಚೊಡೆ ಪರ್ವಿದುರಿಯ ಪಡೆ ಕವಿತರೆ ಕಂ
ಡೆನಸುಂ ಮಾಣದೆ ಪಾರ್ಥಂ
ವನ ನದಿಶರದಿಂದಮೆಚ್ಚು ಕಿಡಿಸಿದನಾಗಳ್ ೩೪

---

1 ಠಂ

ಗಿರಿಶರದಿ ಕರ್ಣನೆಚ್ಚೊಡೆ
ಗಿರಿಮಯಮಾಗೊಡನೆ ಕವಿವುದಂ ಕಾಣುತೆ ಭಾ
ಸುರ ವಜ್ರಶರದೆ ಭೇದಿಸಿ
ಸುರೇಂದ್ರಸುತನೆಂಬುದಂ ನರಂ ಪ್ರಕಟಿಸಿದಂ ೩೫

ತಿಮಿರಾಸ್ತ್ರದಿನೆಸೆ ಕರ್ಣಂ
ತಮೋಮಯಂ ಕವಿದುಬರ್ಪುದಂ ಕಂಡಾಗಳ್
ಕಮಲಪ್ರಿಯಬಾಣದಿನೆ
ಚ್ಚಮರೇಂದ್ರಾತ್ಮಜನದಂ ವಿಭೇದಿಸಿ ಕಳೆದಂ ೩೬

ವ|| ಇಂತು ಪಲವುಂ ತೆಱದ ದಿವ್ಯಾಸ್ತ್ರರೂಪದ ಬಾಣಂಗಳಂ ಕರ್ಣನೆಸುವಾಗಳೆಲ್ಲಮಾತ್ಮಬಲಂ ಮುನಂಗೊಳೆ ಪಾರ್ಬಲಂ ಭಯಂಗೊ[1][ಳೆ ದೇ][1]ವರಸುಂಗೊಳೆ ಬರ್ಪ ಮಹಾಕಾರಂಗಳನಕಾರಣ ತಕ್ಕಂದಂ ಪ್ರತಿದಿವ್ಯಾಸ್ತ್ರಂಗಳನೆಚ್ಚು ಭೇದಿಸಿ ಕಾದುವರ್ಜುನನ ದಿವ್ಯಶಕ್ತಿಯುಂ ಕರ್ಣಂ ಕಂಡತಿಕುಪಿತನಾಗಿ ತನ್ನ ನಚ್ಚುವ ಉರಗಾಸ್ತ್ರಮುಂ ತೊಟ್ಟು ತೆಗೆದೆಚ್ಚಾಗಳ್

ಮ|| ಉರಗಾಸ್ತ್ರಂ ಬರೆ ನೋಱ್ಪ ದಿವ್ಯರಗಿವರ್ ದೈತ್ಯರ್ಕಳಳ್ಕಾಡಿದರ್
ಪರಿ [2][ಬೆಳ್ಪು][2]ತ್ತುಮದಗ್ರ ಯಾದವಬಲಂ ಗೋಟಿಂಡೆಗೊಂಡತ್ತು ಖೇ
ಚರವರ್ಗಂ ಬೆಱಗಾಯ್ತು ಭೀಕರಮಿದಂ ಕಾವನ್ನರಾರ್ ಸತ್ತನೀ
ಶರದಿಂದರ್ಜುನನೆಂದು ಪಾಂಡವಬಲಕ್ಕಾಯ್ತಾಕುಳವ್ಯಾಕುಳಂ ೩೭

ವ|| ಅಂತು ಭಯಂಕರಾಕಾರಮಾಗಿ ಬರ್ಪಂಬನರ್ಜುನಂ ಕಂಡು

ಕಂ|| ಗರುಡಾಸ್ತ್ರದಿಂದೆ ತೆಗೆನೆಱೆ
ದುರಗಾಸ್ತ್ರಮನೆರಡುಖಂಡಮಾಗೆಚ್ಚಾಗಳ್
ಕುರುಬಲ ಕುಮುದಂ ಮುಗಿದುದು
ಹರಿಪಾಂಡವ ಸೈನ್ಯ ಕಮಲವಲರ್ದುದು ನಯದಿಂ ೩೮

ವ|| ಅದಂ ಕಂಡು ಕರ್ಣನಿಂ ತಡೆಯಲಾಗೆಂದೆಯ್ದೆ ನೂಂಕಿ ಶಕ್ತಿಯನಿಟ್ಟೊಡದು ವನರ್ಜುನಂ ಖಂಡಿಸಿ ಕಳೆದು ಪರಾಕ್ರಮದಳವಂ ತಳೆದು ವಿಲ್ಲಮೋಜಂ ನಿಂದಿಂತೆಂದು

1 ಳದೆ 2 ಬೆಳ

ಕಂ|| ಏನಣ್ಣ ಕೌರವರ್ಕಳ
ಸೇನೆಯುಮಾ ಸೇನೆಯಧಿಪನುಂ ತನಗೆ ಕರಂ
ನೀನಾಸೆಯೆಂದು ನಂಬಿದೊ
ಡೇನುಂ ಗೆಲಲಾಱದಳವು ಸಾಹಸದಳವೇ ೩೯

ವ|| ಎಂಬುದಂ ಕೇಳ್ದು ಕರ್ಣನುಮಂತೆ ನಿಂದಿಂತೆಂದಂ

ಕಂ|| ಗೆಲಲಾರ್ಪುದೊಂದು ಸಾಹಸ
ಮಲಂಘ್ಯಗುಣಗಣದಿನಾದ ಪುಣ್ಯದಿನಕ್ಕುಂ
ಬಲಮಿನಿತಲ್ಲದೊಡಿನಿಸುಂ
ತೊಲಗದೆ ನಿಂದಿಱುವ [1][ತುೞಿಲಸಂ][1]ದಿಕೆ ಪೊ[2][ಲದೇ][2] ೪೦

ಆಱುಂ ಗುಣಮುಂ ಕುಂದಿಸ
ಲಾಱದೆಸಗೆಯೊಳೆ ನ[3][ಡೆ][3] ತುೞಿಲಾಳ್ಗಳ್ ಗೆಲಲೇ
ನಾಱದೊಡೇಂ ದೋಷಮೆ ಪೊಱ
ಮಾಱದೆ ನಿಂದಿಱಿದು ಸತ್ತೊಡಾತನೆ ಬರ್ದಂ ೪೧

ವ|| ಮತ್ತಮೊಂದು ಮಾತಂ ಕೇಳಾ

ಕಂ|| ಆವ ತೆಱದಿಂದಮಕ್ಕೆಮ
ಸಾವಿನೆಗಂ ದೋಷಮೆ[4][ಯ್ದ][4]ಲೀಯದೆ ಮೇಲಪ್ಪುದಱಿಂ
ಭಾವಿಸಿ ನೋಡಿರೆ ಸುಭಟನ
ಸಾವುದೆ ತುೞಿಲಾಳ್ತನಕ್ಕೆ ಕಳಶಂ ಪೆಱದೇಂ ೪೨

ವ|| ಎಂಬುದಂ ಕೇಳ್ದರ್ಜುನನೆಂದನಪ್ಪುದೀ ಮಾತಾರ್ಗಮಪ್ಪುದೆಂಬೊಡಾಳ್ದಂ ನಚ್ಚದೆಯುಂ ನಿಮ್ಮ ನೆರವಿ ಮೆಚ್ಚಿಯುಂ ಪೊಗೞಿಸದೆ ಮುಟ್ಟಂ ಬರ್ದೊರ ಮಾತು ನಿನಗಪ್ಪಡೆ ಪರಿದುಪಡೆ ಪೊಗೞಿ ನೆಗೞಿಯುನ್ನುಮೇಳಿವನಾಗದೆ ಕೆಯ್ದುಗೆಯ್ಯೆಂದು

ಕಂ|| ನಚ್ಚುವುದೊಂದಂಬಂ ತೊ
ಟ್ಟೆಚ್ಚೊಡೆ ನೆಱೆಗೊಂಡ ಸರದೊಳಾಗದೆ ಕರ್ಣಂ
ಪೊಚ್ಚಱುಗೆಟ್ಟುರದೌಡಂ
ಕಚ್ಚಿ ಮಹಾರೌದ್ರಭಾವದಿಂದಂ ಕೆಡೆದಂ ೪೩

1 ತಳಿಲಸಾಂ 2 ಲ್ಲಾಸಿ 3 ಡೆವ 4 ಯ್ದೆವರ

ವ॥ ಆಗಳ್ ನೋಡುತ್ತಿರ್ದ ಸುರರುಂ ನರರುಮಾರ್ದ ಕುರುಬಲದ ನರಸಿ[1][ದಿ][1]ರ ಸಾರ್ದರಜ್ಜುನಂ ವಿಜಯಶಂಖಮನೊತ್ತಿ ಸಿ[2][ದಾದಿ][2]ರ ಧರ್ಮರಾಜಂ ಜಯಧ್ವಜಮನೆತ್ತಿಸಿ ದನನುಂ ಕಂಡು ಶಕುನಿ ಕಿನಿಸಿ ನೂಂಕಿದೊಡೆ ಭೀಮಸೇನಾರ್ಜುನನುಂ ಪೆಱಗಿಕ್ಕಿ ಪೊಕ್ಕಾಂತು ಬಲಿಯೊಳ್ ಸಿಲುಕಿದ ಶಕುನಿಸಗಣನುಂ ಬಡಿಯೊಳ್ ಪೋದುಸಂತೆ ನೆರವಿಯೆಲ್ಲಮುಂ ಪೋದಿ ಕೊಂದನತ್ತ ಮಹಾಪದ್ಮಂ ಜಯದ್ರಥನಂ ಗೆಲ್ದನಾಗಳ್ ನೇಸಱ್ ಪಟ್ಟೊಡೆ ರಥಮುಂ ಪಡೆ ಬೀಡು ನೆಲೆಗೆಯ್ದೆಂದಿನ ದಿವಸದೊಳ್ ಸಲ್ಲಿಂ ಕರ್ಣಾರ್ಜುನರ್ಕಳ ಕಾಳೆಗದ ಪಡೆ ಮಾತೆ ಮಾತಾಗಿ ಬಯ್ಗುರುಳಿರ್ದ ಸುನ್ನಿಸಂತೆ ನಾರಾಯಣ ಜರಾಸಂಧರ್ಕಳೊಡ್ಡಿ ನಿಂದರ್ ದುರ್ಯೋಧನಂ ಕಣಾಂ ಸತ್ತಿಂ ಬಱಿಯುಂ ಆಕಾಶಂ ಪೇಲೆಗವಿದಂತಾನುಂ ದಿಸೆಗಳೆ ಪಿಡಿದು ನುಂಗುವಂತಾಗಿ ಮುಱುಕದೊಳ್ ಸ್ಫುರಿಸದ ಬೆಳಗಪ್ಪ ಜಾವದೊಳೊರ್ವನೆ ಮೆಯ್ಗರೆದು ಪೋಗಿ ಪಡೆಯೊಳ್ [illegible] ದಾಯ ಮುಱುಕಮನಡಂಗಿಸಲುಮೀ ಕೊಳಂ ನೆರೆಗುಮೆಂದು ಪೆಱಗಾಗಿಯುದ್ದ ಬಂದು ವೈಶಂಪಾಯನ ಕೊಳದೊಳ್

ಕಂ॥ ಜಳವಿ[3][ಹಗಂ][3]ಗಳ್ ಮಲರೊಳ
ಗುಲಿವಳಿಗಳುಮಳವುಗಳಿಯೆ ತಳಮುಳಗುಡೆ ಗೊಂ
ದಳಗಳರವದಿಂದುಲಿದವು
ಕೊಳವೊಳಕೊಳಲಂಜಿ ಪುಯ್ಯಲಿಡುವಂತಾಗಳ್ ೮೮

ವ॥ ಅಂತವನುಮುದಂ ಕೇಳುತ್ತುಮೆಲ್ಲ ದೆಸೆಯುಮನುಂ ನೋಡುತ್ತುಂ ಪೊಕ್ಕು ತನಗೆ ಜಲಸ್ತಂಭ ಪ್ರಯೋಗಮುಳ್ಳುದಱಿಂ ಮುಳುಗಿರ್ದನತ್ತ ಕೌರವಬಲದೊಳ್ ಕೃಪ ಕೃತವರ್ಮ ಅಶ್ವತ್ಥಾಮಾದಿಗಳವರನುಂ ಕಾಣದೆ ಬೆಕ್ಕಸಂಬಟ್ಟು ಮೊಡ್ಡಣಕ್ಕೆ ವಂದಿರ್ದ ಪಾಂಡವರಂ ತವಿಸ್ವದಿರೊಳ್ ಕೌರವಪತಿಯುಂ ಕಾಣದೆ ಸಂಕಟಂಬಟ್ಟಿನಿತಾನುಮುಪಾಯ ದಿನಾರಯ್ದು ಭೇದಿಸಿ ಕೊಳನಂ ಪೊಕ್ಕಿರ್ದದನಱಿದೀ ಪದದೊಳ್ ಕೆಯ್ಗೆ ಮಾಡುವ ಮೆಂದು ಭೀಮಸೇನಂ ಭರಂಗೆಯ್ದು ಪಲವಾಗಳೆಲ್ಲರುಮಾತನೊಡವೋಗಿ ಕೊಳನಂ ಮುತ್ತಿರ್ದಲ್ಲಿ ಧರ್ಮಪುತ್ರನಿಂತೆಂದಂ

ಕಂ॥ ಜಲಮುಂ ಪೊಕ್ಕಿರ್ದವನಂ
ತೊಲಗಲ್ ಕಡೆಯಿಲ್ಲದಳಿಪಿ ಪುಲ್ಗರ್ಚಿದನಂ
ಚಲಮುಳಿದಿರೆ ಬೆನ್ನಿತ್ತನ
ನಲಂಘ್ಯಗುಣನಪ್ಪ ತುಱುಲವಂದಂ ಕೊಲ್ಲಂ ೮೯

ವ॥ ಎನೆ ಭೀಮಂ ಮೊದಲಾಗೆ ಪಲರುಂ ಪಗೆವನನೆಂತುಂ ಕೊ[4][ಲ್ವ][4]ಮೆಂದೊಡೆ ಕೊಲ್ವರ್ ಪಗೆವನನಲ್ಲದೆ ಕೆಳೆಯನನೆಂತುಂ ಕೊಲ್ಲರುಣ್ಮರ್ ಪಸಿದೊಡಲ್ಲದೇಕುಣ್ಮರದ

---

1 ದು 2 ದ 3 ಹಂಗ 4 ಲ್ವ

¹[ಱಂತೆ]¹ ಪಗೆಯುಂ ಕೊಲ್ವಲ್ಲಿ ²[ಪಸುಗೆ]²ಯಱಿಯದೆ ಕೊಲ್ವುದುಂ ಪಸುಗೆಯಱಿಯದಲ್ಲಿಯೆ ಪಸಿದುಣ್ಬಲ್ಲಿ ಕೊಂಡವಗ್ರಹದುವೞಿಯುದುಣ್ಬುದನೆ ಬೆಕ್ಕಸಮಾಗಿಯುಂ ಕೆಲದಂ ತಪ್ಪೊಡೆ ಪೊಱಮಡಿಸುವನೆಂದು ಪಱಿಯುಂ ಪೊಯ್ಸಿದಾಗಳ್ ದುರ್ಯೋಧನಂ ಬೆರ್ಚಿ ಮಸಗಲ್ ಬಗೆದುದನಱಿದರ್ಜುನನಿಂತೆಂದಂ

ಕಂ॥ ತಳವೊಡೆವಿನೆಗಂ ತಳ್ತಿಱಿ
ದಳವಲ್ಲದೆ ನೊಂದು ಬಿರ್ದ ಮೆಯ್ಯಱಿಯದೆ ಕೊ
ಳ್ಗೊಳದೊಳಗಿರ್ಪು³[ದದೇಂ]³ ಕೊಳ
ದೊಳಗೆಸಡಿರ್ಪ ತೆಱ⁴[ದಿಂದಮಿ]⁴ಪ್ಪುದು ದೊರೆಯೇ ೪೬

ವ॥ ಎನೆಯುಂ ಪೊಱಮಡದುದಕ್ಕೆ ಭೀಮಂ ಕಿನಿಸಿ ಸಿಂಹನಾದಂಗೆಯ್ವಾಗಳಾ ಧ್ವನಿಗೆ ಗಜೇಂದ್ರಂ ಮುಳಿವಂತೆ ಮುಳಿದಂಬುಧಿಯಂ ವರುಣಂ ಪೊಱಮಡುವಂತೆ ನಾನಾಭರಣಾಳಂಕೃತ ಮಣಿಮಕುಟ ವಿರಾಜಿತ ಗದೆಯುಂ ಪಿಡಿದು ಪೊಱಮಟ್ಟಾಗಳೆಲ್ಲರುಮಂ ಮಿಕ್ಕು ಭೀಮನಿದಿರಂ ಪೊಕ್ಕು ತಾಗಲ್ ಬಗೆವಾಗಳ್ ಧರ್ಮಪುತ್ರನನ್ನೆಗಂ ಮಾಣೆಂದು ದುರ್ಯೋಧನಂಗಿಂತೆಂದಂ

ಕಂ॥ ಇಮ್ಮುಳಿಸನುಱಿದು ಬಂದಿಂ
ತಮ್ಮಂದಿರೊಳೊಂದಿ ನಿಂದು ನೆಲವಸುಗೆಗಳಂ
ನಿಮ್ಮಯ್ಯನಿಂತು ಮೊದಲೊಳ್
ತಾಮ್ಮಾಡಿದನಂತೆ ಸುಖದಿನಾಳ್ದಿರಲಾಗಾ ೪೭

ವ॥ ಎಂಬ ಮಾತಂ ಕೇಳ್ದು ಕುತ್ತವೆತ್ತ ಮದವಸ್ತಿಯಂತೆ ಮಸಗಿ

ಕಂ॥ ಇನ್ನಿಮ್ಮಾಕೀಟ್ಸರಿಯೊಳ್
ಬನ್ನಂಬರೆ ಬಂದು ಕಾಣ್ಬೆನೇ ಮರುಳರಿರೆಂ
ತೆನ್ನಳ⁵[ವಂ]⁵ ಬಗೆಯದೆ ನುಡಿ
ದೆನ್ನಲ್ಲಿಗೆವೋಪಿರಣ್ಮೆನುತಂ ಪೊಕ್ಕಂ ೪೮

ವ॥ ಅದಂ ಕಂಡು ಭೀಮ[ಂ] ನೀಮಾರುಂ ಮಸಗದೆ ನೋಡುತ್ತಿರಿಮೆಂದು ಗದೆಯುಂ ತಿರುಪ್ರುತ್ತಮೆಯ್ದ್ವೊಡೆ ದುರ್ಯೋಧನನುಮೆಯ್ದೆ ಪೊಕ್ಕ ದಱಿ⁶[ಯು]⁶ಗದೆಯುಂ ನಿರ್ವಿದಾನಗೆಯ್ದು ಪೊಯ್ಯಱಿದಂತಾಂತ ಕೆಯ್ಯಱಿದು ಪೂಣ್ದು ಪೆರ್ಚಿಯುಂ

---

1 ಱಿಂ 2 ಪುಸು 3 ದಿನಿ 4 ನಂ ನೀಂ 5 ಯುಂ

ಕಂ|| ಗಜತಂತ್ರನಿಪುಣ ಶಿಕ್ಷಿತ
ನಿಜಿತತ್ವದೆ ಹಸ್ತಿ[1][ವಿದ್ಯೆಯುಮಿಂಜಯು][1] ಮಹಾ
ಗಜಯುದ್ಧದಂಡದಿಂ ಭೂ
ಭುಜರ ಗಜಾಯುದ್ಧಮಾಸುರಂ ಧಾರಿಣಿಯೊಳ್ ೪೯

ವ|| ನಾಡೆಯುಮಂ ಪೊತ್ತಾಂತು ಕಾದುತ್ತಿರ್ದಲ್ಲಿ ಭೀಮನೆಂದನಿನಿತು ಬೇಗಂ ಕಾಳೆಗಮಂ ಕೊಂಡು ನಿಲ್ವುದೆನ್ನಿಂದಾದುದಂತೆನೆ ನಿನಗಾ

ಕಂ|| ಕಾಲನೆ ನಿಡು ದಂಡಾಯುಧ
ಮಾಲೋಕಿಪೊಡಱಿದಿರ್ಚಿ ಬಾಟಿಲ್ ಬಗೆವಾ
ಕೋಲಾಟಮಾಡುವಂತಿದು
ಲೀಲೆಯಿನಿಂತಾಂತು ಕುಣಿದು ಪೋಗಲ್ ಪಡೆಯೈ ೫೦

ವ|| ಎಂದೊಡಿನ್ನಾರಳವುಗಮಂ ನುಡಿದು ತೋರ್ಪುದಱಿಂ ಕೂಳೇನಿಲ್ಲಿಯೆ ಕಾಣಲಕ್ಕುಮೆಂದು ನಿಂದೊನಂ

ಕಂ|| ಬಱಿಸಿಡಿಲೆ ಬಂದುದೆಂಬಂ
ತಱಿವಳವೊಯ್ದಾಂತ ಗದೆಯೊಳಾಗಳ್ ಭಾಗ[ಂ]
ಮುಱಿಯುತೆ ಜೀಱಿಱಿದೋರ್ಗೆದಾ
ಮುಱಿ ಪಾಱಿತು ಸಾಣೆವೊಯ್ದ ಗುಣಿ ವಲ್ಲಭದೊಳ್ ೫೧

ವ|| ಅಂತಾ ಪೊಯ್ಲೊಳ್ ಗದೆ ಮುಱಿದುಱಿಗದೆಯೊಳಿಟ್ಟು ನೆಗೆದನಂ

ಕಂ|| ಇಟ್ಟ ಗದೆಯುಡಿ[2][ಯೆ ನಾಣ್ ನಾ][2]
ಣ್ಮೆಟ್ಟಾಗಿರೆ ಪೊಯ್ಯೆ ಪೊಯ್ದು ಕೆಡೆದೊಡೆಯುಮಂ
ಪೊಟ್ಟ ನುಡಿದೆಱಗುತಿರೆಯಿರೆ
ಕಟ್ಟಾಳ್ ಮುತ್ತೊಂದುಪೊಯ್ದುಡುಡಿವುಡಿಯಾದೊಂ ೫೨

ವ|| ಪೊಯ್ದು ಪಗೆಯ ಜೇರೊಳ್ ಬಿನ್ನಿರಂ ಪೊಯ್ದಂತೆ ಭೀಮಂ ರಾಗದಿಂ ವಿಜಯಪಟಹಮಂ ಪೊಯ್ಸಿ ನಿಲೆ ಧರ್ಮಪುತ್ರಂ ಬನ್ನಿಂ ನಿಮಗಿದೆ ಗೆಲ್ಲಮೆಂದೊಡಗೊಂಡು ಬರೆ ಬಂದು ಮುನ್ನಿನಂತೆ ನಾರಾಯಣನ ಕೆಲದೊಳಿರ್ದು ನಿಂದನಂತು ದುರ್ಯೋಧನನಂ ಗೆಲ್ದು ಬಂದಿರ್ದನಂ ಹರಿ ಕೇಳ್ದು ಮೆಚ್ಚಿದನಂತಪ್ಪುದನತ್ತ ಜರಾಸಂಧನಱುವುಳಿಗಂಬುಟ್ಟು ದುರ್ಯೋಧನನೆತ್ತಿ ತಲೆಸಿ ನೋಡಿ ನಾಡೆ ನಿಕ್ಕಸಂಬುಟ್ಟು ಪ

1 ವೈದ್ಯಮಿರಿಂಜ 2 ಯನಾಸ್ಮ

ನ್ನೆಗಂ ನೇಸಱ್ ಪಟ್ಟೊಡೊಡ್ಡಣಮನುಡಿಗಿ ಬೀಡಿಂಗೆ ವಂದಿರ್ದಲ್ಲಿ ದುರ್ಯೋಧನ[ನ] ಬಿಱಿಸಿ ನೊಂದುದನಶ್ವತ್ಥಾಮಂ ಕಂಡಟಿಲ್ದು ಪೋಗಿ ಪಾಂಡವರ ಬಲಮನಿರುಳ್ ಪೊಕ್ಕು ಧೃಷ್ಟದ್ಯುಮ್ನನಂ ಕೊಂದು ಪಾಂಚಾಲರ ತಲೆಯುಂ ಕೊಂಡುಬಂದು ದುರ್ಯೋಧನನ ಮುಂದಿಕ್ಕಿದೊಡೆಯಿವು ಪಾಂಡವರ ತಲೆಗಳಲ್ಲಂ ಪಾಂಚಾಲರ ತಲೆಗಳೆಂದೊಡಶ್ವತ್ಥಾಮಂ ಸಿಗ್ಗಾಗಿ ತಲೆಯುಂ ಬಾಗಿದಂ ದುರ್ಯೋಧನಂ ನಿವೃತ್ತಿಗೆಯ್ದು ಮುಡಿಪಿದನಂದಂತಾತನ ಸಂಸ್ಕಾರಕ್ರಿಯೆಯೊಳಂ ಬೀಡೆಲ್ಲಮಕ್ಷತಮಾಗಿದ್ದು ಬೆಳಗಾದಾಗಳೊಡ್ಡಣಕ್ಕೆ ವಂದವತ್ತ ಹರಿಯುಂ ಪಾಂಡವರುಂ ಬಂದೊಡ್ಡಿದರಾಗಳೆ ಜರಾಸಂಧನುೞಿದ ತನ್ನ ಬಲದಂ ಗಾರಗಂ ಪವನವೇಗಂ ಪಿಪ್ಪಲಿಕಂ ವಿದ್ಯು[ತ್ಪ್ರ]ಭಂ ವಿದ್ಯುದ್ರಥಂ ನ[1][ಳಿನ][1]ಧ್ವಜಂ [2][ನೀ][2]ಳಕಂಧರಾದಿ ವಿದ್ಯಾಧರಸೇನೆಯುಂ ಬೆಸಸಿದೊಡೆ ಗಗನಸ್ಥಳದೊಳ್ ಮಸಗಿ ಬಪ್ಪುದಂ ನಾರಾಯಣಂ ಕಂಡು ತನ್ನ ಪಡೆಯೊಳಗಣ ಅಶನಿವೇಗ ಮಾನಸವೇಗ ಸಿಂಹದಾಡ ಅರುಣಚಂದ್ರ ದಧಿಮುಖ ಅಕಂಪನ ಹರಿಕಂಧರ ವರಾಹಕಂಧರ ಅನಾದೃ[ತ] ಕುಮಾರದಿ ಖೇಚರವರ್ಗಮುಂ ಬೆಸಸಿದೊಡಂತೆರಡುಂ ಪಡೆಯ ವಿದ್ಯಾಧರರ್ ಬಂದು ತಮ್ಮೊಳ್ ತಾಗಿ ಕಾದುವಲ್ಲಿ

ಮ॥ ದ್ವಿರದಾದ್ರಿಜ್ವಳನಾಂ[ಧ]ಕಾರಮಯಮಾಗೆಯ್ತರ್ಪ ಬಾಣಂಗಳಂ
ಹರಿವಜ್ರಾರ್ಣವ ಭಾಸ್ಕರೇಷುಚಯದಿಂ ನಿರ್ಭೇದಿಸಂತು ಭಯಂ
ಕರ ನಾನಾಸ್ತ್ರಚಯಂಗಳಿಂದಮಿಱಿಯುತ್ತಿರ್ದದ್ಭುತಾಕಾರ ಖೇ
ಚರ ಯುದ್ಧಕ್ಕಗಿದ[3][ತ್ರದಂದು][3] ದಿವಿಜಾ[4][ನೀಕಂ][4] ನಭೋಭಾಗದೊಳ್ ೫೩

ವ॥ ಅಂತಗುರ್ವಾದ ಖಚರ ಸಮರ ಸಂಘಟ್ಟಣದೊಳೆ

ಕಂ॥ ಮಣಿಯದೆ ಖೇಚರ ಸುಭಟರ್
ಪೆಣೆದು ಮಹಾ ರೌದ್ರಭಾವದಿಂದಿಱಿವಾಗಳ್
[5][ಅಣಿಯಿನೆಱಿ][5]ಕೊಂಡ ತೆಱದಿಂ
ಪೆಣಗಳ್ ಬೀೞ್ತಿಂದುಮಂಬರಾಗ್ರದಿ[6][ನಂತುಂ][6] ೫೪

ವ॥ ನೇಗಂತು ಖಚರಯುದ್ಧಮುಡಿಯೋಳ್ ಭೂಮಿಗೋಚರ ಯುದ್ಧಮುಂ ತೆರಡುಂ ನೆಲೆಯು ಯುದ್ಧಮುಂದಿನ ದಿವಸಂ ತಗುಳ್ದು ಖೇಚರಯುದ್ಧದೊಳೆನಿಬರಾನುಂ ವೀರಭಟರಣ್ಮಿ ಮುಮ್ಮೞಿಯಾದಲ್ಲಿಯೊರ್ವ ಬಲ್ಕಣಿಯಪ್ಪ ತುಱಿಲಸಂದಂ ಕಡಿತಲೆ ಗೊಂಡು ನಡೆದು

---

1 ಣಿ 2 ನ 3 ತ್ತು... 4 ನಿಕರ 5 ...ನಿಳ 6 ನೇಶಾ

ಮ॥ ಕಡುಗಲಿದ್ದ ನಾನಮುಂದೆ ಪ್ರೋಯ್ದು ಮುರಿದಟ್ಟಿ ಯುತ್ತಿಪ್ಪನಂ ವಾರಣಂ
ನಡೆಪ್ರೋಯ್ದ ತ್ರಿ ಕರಾಗ್ರದಿಂ ಪಿಡಿದು ಮುಗಿಳ್ದಾಡೆಯುಂ ಕಯ್ದುನಂ
ಬಿಡಿದಾಕಾರದೊಳಂಕಿಸುತ್ತೊಗೆ ಗಂ ವಿದ್ಯಾಧರೇಂದ್ರದ್ವಿಪಂ
ಪಿಡಿದಲ್ಲಿಂ ಗಗನಾಂತರಕ್ಕೆಡೆ ಸುರಸ್ತ್ರೀ ತಬ್ಬಿಗಾ ವೀರನಂ ೫೫

ವ॥ ಇಂತು ತನ್ನೆಯ್ದೆ ನಂದನುಮಾಸಣ್ಣ ನೆಲಕ್ಕೆ ನಂದನುಮಂ ಸುರಾಂಗನೆಯ ರೊಯ್ಯೆ ರೌದ್ರಮಾದ ಕೊಳ್ಗುಳದೊಳ್ ಬಲದೇವನಂ ನೂಂಕಿ ವೃಷಭಸೇನನಸಿಕ್ಕಿದಂ ವಸುದೇವಂ ವಜ್ರೇಶನಂ ಗೆಲ್ದಂ ಜರತ್ಕುಮಾರ ಅರಿಷ್ಟನೇಮಿ ಸುನೇಮಿ ಜಯಂತ ಅರ್ಕಪ್ರಭ ನೀಲಪ್ರಭ ಕಪಿಲ ಪಾಂ[1][ಡು][1]ಕುಮಾರಾದಿಗಳ್ ಜರಾಸಂಧನ ಮಕ್ಕಳಪ್ಪ ಕಾಳಯುಮಾದಿಗಳನಾಂತಿಱಿಪಡಿಸಿದರ್ ಧಾರಣ ಪೂರಣ ಅಭಿಚಂದ್ರಾದಿಗಳ್ ತಂತಮ್ಮಿದಿರಾಂತ ಬಲಮನಱಿದಂತೆ ಮಾಡಿ ಸಿಂದಂಬರದೊಳ್ ಅನಾವೃಷ್ಟಿಕುಮಾರಾದಿ ಖೇಚರಸ್ಸೈನ್ಯಸಂಗಾರವೇಗಾದಿ ಖಚರಸೇನೆಯುಂ ಗೆಲೆಯಿಱಿದೋಡಿಸಿದರಂತೆರಡೆಡೆಯೊಳಂ ತನ್ನ ಬಲಂ ಸೋಲೆ ಜರಾಸಂಧನತಿ ಕುಪಿತನಾಗಿ ತನ್ನ ನಂಬಿದ ವೀರಭಟಸೇನೆ ವೆರಸು ನೂಂಕಿದಾಗಳನಂ ಕಂಡು ನಾರಾಯಣನಿದಿರಂ ನೂಂಕಿ ಕೆಯ್ಯಂ ಬೀಸಿದಾಗಳ್

ಕಂ॥ ಪಡೆಯೆರಡಱ ಪಱಿಗಳ ರವ
ಮೊಡನೊಗೆದವು ಸುರರ ನೆರವಿಗಳ ಕಿವಿ ಶಬ್ದಂ
ಗಿಡುವಿನೆಗಮುಳ್ಕಿ ಬಾಯುಂ
ಬಿಡುವಿನೆಗಂ ನಾಡೆ ಬೆಕ್ಕಸಂಬಡುವಿನೆಗಂ ೫೬

ಎರಡುಂ ಪಡೆಯ ಧನುರ್ಧರ
ರಿರದೆ ತಗುಳ್ದಾರ್ದು ಸಾರ್ದು ಮುಳಿದಿಸೆ ನೆತ್ತರ್
ಸುರಿಯೆ ಪೊನಲ್ ಪರಿಯೆ ಮರುಳ್
ತಿರಿಯೆ ಕರಂ ರೌದ್ರಮಾದುದು ಕೊಳ್ಗುಳನಾಗಳ್ ೫೭

ಸಯ್ಯಣ್ಣಗತ್ತಿಯೆಡೆಯೊಳ್
ಪಯ್ಯಬಿಲ್ಗಲ್ಪಿಯೆಡೆಯೊಳ್ ನೆಗಟ್ದವರ್ಗಳ್
ಕೆಯ್ಯಂಬಪ್ಪೊಡುಱಿ
ಮೆಯ್ಯಂಬುಂ ಕಿಬ್ಬಿ ಕೊಂಡು ಕೂಕಿಱಿದೆಚ್ಚರ್ (?) ೫೮

---

1 ಡು

ಅವಸರಮುಂ ತಾರದೆ ತಾ
ನವಸರಮೆನಗಾಗದಂತು ಪೊರೆಮಾೞ್ದನ[1] [ದೊಂ][1]
ದವಸರಮಿಱಿಯಲಿದನ[2] [ಸರ][2]
ಮವಸರವಿ[3] [ದಕೊಳ್ಳಲಿ ಬೀೞ][3]ಮೆಂದಾರ್ದೆೞ್ಚರ್ ೫೯

ಅವಯವಮೆನಿತನಿತುಮುದಂ
ಬನರ[4] [ಮದಾದೊ][4]ಡೆನೆ ನಡೆಯುಮವಯವದಂಬಂ
ತವುವಿನೆಗವೆೞ್ಚುಪಾಯ್ತು
ಪ್ಪವರಂತೊಡನೆೞ್ಚು ಪಾಯ್ದುವರುಣಜಲಂಗಳ್ ೬೦

ವ|| ಅಂತು ಧನುರ್ಬಲಮುಗಿಯದಗಿಯದೆ ಕಾದಿ ಮುಮ್ಮಱಿಯಾದಿಂ ಬಱಿಯಂ ಧರ್ಮಜಂ ಲೋಹಜ ಮಲ್ಕಜ[5] [ಮು][5]ಷ್ಟಜ ಶೃಂಗಜ ತೇಜಂಗಳೆಂಬ ಸಂವರಣ ಸಮಸ್ತ ಸನ್ನಾ [ಹ] ವಿರಾಜಿತ ತುರಂಗಮುಮ[6] [ಱಂಗದೊಳ್][6] ತಾಗಿ ತಟ್ಟುತ್ತಡುತರ್ದು ಕಾದಿಪಡೆಯೊಳ್

ಕಂ|| [7] [ಇಂದು][7] ದೆಸೆಗು[8] [ರು][8]ಳೆ ಪಶ್ಚಿಮ
ಮೊಂದಿದ ಮುಂದೊಂದು ದೆಸೆಗೆ ಕೆಡೆತಪ್ಪಿನಮೆ
ಯ್ತಂದಿಱಿಯೆ ಸಮನೆ ಪಜ್ಚಂ
ದಂದಮನನುಕರಿಸಿ ಬಿರ್ದವಲ್ಲಿ ಹಯಂಗಳ್ ೬೧

ಚಂ|| ಮುಱಿವವೆ ಕಾಲ್ಗಳದ್ದಿಱಿವೇಱಿನ ಬಲ್ಪಿನೊಳಂತೆ ಪಚ್ಚಿಮಂ
ಪಱಿವವೆ ಕುತ್ತುವೆತ್ತಿ[9] [ರ್ದಗಳುಂ ಕುಱಿ][9]ವೋಗಿ ಪಿಮುಳ್ದ ಪು[10] [ಣ್ಗಳುಂ][10]
ಮುಱಿವವು ಪೆರ್ಮರುಳ್ ಬಿಸಿಯ ನೆತ್ತರನೊಯ್ಯನೆ ಕೊಂಡುಗೊಂಡು ತ
ಳ್ತಿಱಿವವು ಮತ್ತಮಿಾ ತೆಱದಿನಾಯ್ತು ತುರಂಗ ಮಹಾರಣಾಂಗಣಂ ೬೨

ವ|| ಮತ್ತಂ

ಮ|| ತುರಗಾರೋಹಕನೋರ್ವನುಗ್ರಭಟನಂ ಕಂಡೆಯ್ದೆ ಮುಯ್ವೆರ್ಚಿ ನಿ
ರ್ಭರದಿಂ ಪೊಯ್ಸನಪಂಗಮಂ ಹಯದಿನಾಯ್ತೀ ಮರ್ಮ[11] [ಮೆಂದಪ್ಪ][11]ಕಂ
ಧರಮಂ ಮೊಕ್ಕನೆ ಪೋಗೆ ಪೊಯ್ದು ದೆಸೆದಿರ್ದಂತಾ ಶಿರಂ ಯೋಗಿನೀ
ಶಿರದೊಳ್ ಪತ್ತಿಸಿದಂತೆ ಜಿರ್ದಪೆ ಮುಗಳ್ಮೆಂದದಂ ನೋಡಿದಂ ೬೩

1 ಟೊಂ 2 ಸು 3 ಸಕೊಳೆ ಬೀಳೆ 4 ಮಾಗೊ 5 ರ 6 ಳುಗಳೊಳ್
7 ...ಂಡು 8 ರ 9 ದಗಳಳಿ 10 ಣರುಂ 11 ಮಂ ದಶ

ವ|| ಅಲ್ಲಿಂ ಬಟಿಕೆ ಧನು ಶಕ್ತಿ ಮುಸಳ ಚಕ್ರ ಸಿಂಡಿವಾಳ ಕಣೆಯ ಪರಸು ಗದಾದ್ಯನೇಕವಿಧಾಯುಧ ಪರಿಪೂರ್ಣ ರಥಂಗಳನತಿರಥಾರ್ಧರಥ ಮಹಾರಥರ್ಕಳ್ ಜೋದರ ಸಹಿತಮೋಜೆ ಪರಿಯಿಸಿ ರಥದೊಳ್ ತಾಗಿ ರಥವುಮುಬ್ಬಾಡಿದಿಂ ಬಟಿಯುಂ ಜರಾಸಂಧಂ ಹಸ್ತಿಸಾಧನಮಂ ಪೆಸಸಿದೊಡೆ ನಾರಾಯಣಂ ತನ್ನಾನೆವಡೆಯುಂ ಪೆಸಸಿದಾಗಳ್ ತಾಗಿ ಮುನ್ನಂ ಯಂತ್ರಮುಕ್ತಾಯುಧಂಗಳಂ ಕಾದಿದಿಂ ಬಟಿಯಂ ಪಾಣಿಮುಕ್ತಂಗಳಿಂ ಕಾದಿ ಮತ್ತಮಲ್ಲಿಂ ಬಟಿಯುಂ ಮುಕ್ತಾಮುಕ್ತಂಗಳಿಂ ಕಾದಿ ತಳ್ತ ಬಟಿಯ ...............ರ್ಮವುಕ್ತಂಗಳನಿಜುಂದಂತಿರಡುಂ ಬಲದ ಘಟಿ ಕೆಡೆದಾಗಳ್ ಜರಾಸಂಧಂ ವೀರಭಟನ ಸೇನೆಯುಂ ನೂಂಕಿದೊಡೆ

ಕಂ|| ವೀರಭಟಸೇನೆ ಕವಿತರೆ
ನಾರಾಯಣ ಸುಭಟಸೈನ್ಯಮೂಂತಿಱಿಯೆ ಮಹಾ
ಘೋರಮಪಾರಂ ರೌದ್ರಾ
ಕಾರಂ ರಣರಂಗಮುದ್ಯತಾಳಂಕಾರಂ ೬೪

ಆಡಿದವಟ್ಟಿಗಳೊಡನ
ಬ್ಬಾಡಿದವರ್ಬಲಮುಮಂತಸೃಗ್ಜಳದೊಳಗೋ
ಲಾಡಿದವು ಮರುಳ್ ಕುಣಿ [ಕುಣಿ]
ದಾಡಿದವಂಬರದೊಳೊಸೆದು ನಾರದಗೊರವಂ ೬೫

ವ|| ಆಗಳ್ ಜರಾಸಂಧಚಕ್ರವರ್ತಿ ತನ್ನ ಬಲಂ ಕಿಡಿಸತ್ತುದಂ ಕಂಡು ರಥಮನೇಱ್ದು ನೂಂಕಿದೊಡೆ ನಾರಾಯಣಂ ರಥಮನಿದಿರಂ ನೂಂಕಿ ನಿಂದಾತನೆಚ್ಚ ಬಾಣಂಗಳನೆಡೆಯೊಳ್ ಖಂಡಿಸಿದೊಡೆ ಕಿನಿಸಿ ವಿದ್ಯಾಯುದ್ಧಂಗೆಯ್ಯೆ ಹರಿ ಬೇಗಂ ಪ್ರತಿವಿದ್ಯೆಗಳಂ ಛೇದಿಸಿ ನಿಂದುದಂ ಕಂಡು ಶಕ್ತಿಯನಿಟ್ಟೊಡಾ ಶಕ್ತಿಯುಮಂ ವಜ್ರಕೋಟಿದಿನಾಂತು ಗೆಲ್ದುದಂ ಕಂಡಮನೋಕನುಮನಂ ಮಾಣೆನೆಂದಾ ಚಕ್ರಮಂ ಕೊಂಡು ನಿಮಿರ್ದಾಗಳ್

ಮೇಘವಿಸ್ಫೂರ್ಜಿತ||
ಸುರಾಸ್ತ್ರಾದಂ ದಾಯಂ ಬಿಡುವಿನೆಗಮತ್ಯುಗ್ರರೂಪಂ ವಿಭಾಸ್ವ
ತ್ಸುರಾಶ್ಚಾರ ಪ್ರಕಾರಾಮರುಳಿಬರ್ಪಂದದೊಂದರ್ (?)
ಸು[ರಾ]ಚಕ್ರಂ ಶಕ್ರಂಗಳಸಲಿದಂಬಂತು ಬರ್ಪಾಗಳೆಲ್ಲಂ
ಜರಾಸಂಧಂ ಕೊಂದಂ ದಯೆಯನೆಸುತಂ ಚಿಕ್ಕಸಂಬಟ್ಟರಾಗಳ್ ೬೬

ಹರಿಣಿ||

ಅಸುರರಗಿದುತ್ತಿರ್ದರ್ ದಿವ್ಯಾಸ್ತ್ರಮಂ ಮನಮಿಕ್ಕಿದರ್
ದಿಸೆಗಳೊಡನಾಕಂಪಂಗೊಳ್ವನ್ನಮಾದವು ಭೀತಿಯಿಂ
ವಸು[1][ಧೆ ಸುಗಿಯುಲ್ ಸಾರ್ದತ್ತಳ್ಕಿ][1]ತ್ತು ಯಾದವ ಸೈನ್ಯಮೇ
ಸಕಲದಳಮುಗುರ್ವಾಯ್ತೋ ಚಕ್ರಾಗಮಂ ಸಮರಾಗ್ರದೊಳ್ ೬೭

ವ|| ಅದಂ ಕಂಡು ಮಸಪಗೊಂಡು ಪಿಡಿದುಕೊಂಡು ನೀವಿರ್ದೆಯ್ದೆ ನೋಂಕಿ ನಿಂದು

ಉ|| ಕಂಸನಸಿಕ್ಕಿದಲ್ಲ ನೃಪವಿಗ್ರಹಮುಕ್ಕ್ಯಮದಾಗದೆಂದು ಪೋ
ಗಂ ಸಮಕಟ್ಟಿ ಪೋಗಿ ಸುಖಮಿರ್ದೊಡೆ ಯಾದವವಂಶವೃಕ್ಷವಿ
ಧ್ವಂಸನಮಪ್ಪಿನಂದುರದೆ ಬಂದೊಡದೀ ತೆಱನಾಯ್ತು ಜೇಡ ನೀ
ನಿಂ ಮಣಿಸೊಕ್ಕುಗೆಟ್ಟ[2][ರವಿ][2]ಪೇಂ ನಡೆ ಗೆಲ್ಲದೊ[3][ಳೊ][3]ಳ್ಳಿತಕ್ಕುಮೇ ೬೮

ವ|| ಎನೆ ಜರಾಸಂಧನುಮಿಂತೆಂದಂ

ಕಂ|| ಮಱೆದೆನೆ ಕಂಸಂಗೊಂದೊಂ
ದಿಱಿವಗೆಯುಂ ಗೆಲ್ವೆನೆಂದು ಬಗೆದು[4][ರು][4]ವಗೆಯುಂ
ನೆಱಿಪುವೆನಣ್ಮೆಂದಾಗಳ್
ತಱಿಸಂದತಿಕುಪಿತನಾಗಿ ಬಾಳಂ ಕಿೞ್ತಂ ೬೯

ವ|| ಅದಂ ಕಂಡಕ್ಕೆ ಜಮುಂ [5][ನೀನಿದಱೊಳೇನೆಯ್ದುಯೊ][5] ಬಾಳಂ ಕಿೞ್ತೊಡೆ ಕೋಟಿಗಂಗೆ ಫಲಮೇನಿನಸಕ್ಕುಂ ನಿನಗಿನಿಸಪ್ಪೊಡಮಾಗದಣ್ಮ

ಚಂ|| ನೆಱೆದಿರು ತಿಣ್ಣನೆಂದು ಹರಿ ಚಕ್ರದಿನಿಟ್ಟೊಡೆ ತನ್ನೃಪಶ್ಶಿರಂ
ಪಱಿವು ಸಿಡಿಲ್ದು ಪೋದೊಡಿಳೆಗೆ[6][ಯ್ದೆ][6] ಬೞಲ್ದ ಜಗತ್ತು ಭೀತಿಯಿಂ
ದೆಱೆಗಮೊಡೆಲ್ಲಮುಂ ಕೆಱಗುಮಂತಿರೆ ಮಾಡಿ[7][ದ][7]ನೇಂ ಪ್ರತಾಪ[8][ಮುಂ][8]
ನೆಱಿಪಿದನೇಂ ಜಗತ್ತ್ರಿತಯದೊಳ್ ನೆಗ[9][ಳ್ವಂ][9]ತಿರೆ ನೀರಜೋದರಂ ೭೦

ಕಂ|| ಆಗಳೆ ಪೂಮಳೆ ಕಱೆದವ
ತ್ತೋಗಡಿಸದೆ ನೋಡಿ ತಣಿದು ನಾರದಮುನಿಪಂ
ರಾಗದಿನಾಡಿದನೊಸೆದವು
ಬೇಗಂ ವಿಜಯಾನಕಂಗಳೆಸೆದವು ಗುಡಿಗಳ್ ೭೧

1 ದೆವಸಸುಗಲು ಸಾರ್ದತಳಿ 2 ರಿಪು 3 ಡೊ 4 ರ 5 ಣ್ಣನಿದರೊಳಗೆಯ್ದೆನೊ 6 ಯ್ವ 7 ದೆ 8 ಮಾಂ 9 ಳಂ

ವ॥ ಇಂತಲ್ಲಿಪೆನ್ನ ಗೆಲ್ದುಮಂ ಖೇಚರ ಭೂಚರಸೈನ್ಯಮುಮಱಿಯದೆಂದು ನಾರಾಯಣಂ ಪಾಂಚಜನ್ಯಮೆಂಬ ಶಂಖಮಂ ಪೂರಿಸಿದೊಡಾಳಿದ ರಿಪುಸಾಧನಮೋಡಿತ್ತು ಬಲದೇವಾದಿ ಯಾದವಬಲದ ನಾಯಕರ್ ತಮ್ಮ ಮುಂದಣ ಪಡೆಯಂ ಗೆಲ್ದು ಹರಿಯಲ್ಲಿಗೆ ವಂದಿರ್ದರಾ ಬಾಳನಾಯಕರನೆತ್ತಿ ಜರಾಸಂಧ ಸಹಿತಂ ಪಿರಿಯರಪ್ಪರಸುಗಳ ಪೆಣಂಗಳಂ ಜಾಲಿಸವೇಳ್ದು ತೋಳ್ಗ[1][ಳಿಸಂಜೇಱಿಸಿ][1] ಬೀಡಿಂಗೆ ವಂದು ಚಕ್ರಂ ಮೊದಲಾಗಳುಂ ಮಹಾರತ್ನಂಗಳುಮೆರಸಂಪುದಕ್ಕಂ ಶತ್ರುಕ್ಷಯಮಾದುದಕ್ಕಮೊಸಗೆಯುಂ ಮಾಡಿಮುಱಿದೆಸಮ ಸಮುಱಂಬೋಗಿ ದ್ವಾರಾವತಿಯನಮರಾವತಿಯನಿಂದ್ರಂ ಪುಗುವಂತೆ ಕೃಷ್ಣರಾಜೇಂದ್ರಂ ಪುಗುವಾಗಳ್

ಉ॥ ಯಾದವವಂಶದೊಳ್ ನೆಗೞ್ದ ಚಕ್ರಧರಂಗೆ ಮುರಾಂತಕಂಗೆ ಪ
ದ್ಮೋದರ ನಾಮಧೇಯ ವಿಭುಗೆಯ್ದೆ ವಿಚಿತ್ರ ಕಳತ್ರ ಪುತ್ರ ಮಿ
ತ್ರಾದಿ ಸಮಸ್ತ ಬಂಧುಜನಮಾದರದಿಂದಿದಿರ್ವಂದು ಮಂಗಳಾ
ಶೋದಿತ ವಾಕ್ಯದಿಂ ಪರಸಿ ಸೇಸೆಯನಿಕ್ಕಿದರಾದಮುಕ್ಕಿಱಿಂ ೭೨

ವ॥ ಅಂತು ಸೇಸೆಯುಮಂ ಪರಕೆಯುಮನಾಂತು ಪೊಗೞ್ತೆಗೆ ಮೆಯ್ಯಾಂತು ಪೊೞಲಂ ಪೊಕ್ಕು ನೇಮಿನಾಥಂಗೆಱಗಿ ಸುಖಮಿರೆ ಶುಭಮುಹೂರ್ತದೊಳ್ ಸಾಮಂತ ಮಹಾಸಾಮಂತ ಮಂಡಳಾಧಿಪತ್ಯಾದಿ ಪರಿವಾರ ಪ್ರಧಾನರುಂ ಯಾದವಕುಲ ಪ್ರಧಾನರುಮಿರ್ದು ಸಿಂಹಾಸನಾರೂಢಂ ಮಾಡಿ ನಾರಾಯಣಂಗೆ ಪಟ್ಟಮಂ ಕಟ್ಟಿದಾಗಳ್

ಕಂ॥ ಏವೊಗೞ್ವುದಯ್ಯ ನೆಗೞ್ದಮ
ರಾವತಿಗಂ ದ್ವಾರವತಿಯೆ ಮಿಗಿಲಿಂದ್ರಂಗಂ
ದೇವಕಿಯ ಸುತನೆ ಮಿಗಿಲೆನೆ
ಭೂವಿಳಸಿತನಾಯ್ತು ಪುರಮುಮಾ ನೃಪನಿರವುಂ ೭೩

ವ॥ ಎಂದು ಪೊಗೞೆ ನೆಗೞೆ ಪಟ್ಟಂಗಟ್ಟಿದ ಪೆಂಪು ಮುಗಿಲಂ ಮುಟ್ಟೆ ಪರಾಕ್ರಮದಸುಕ್ರಮದಿಂ ಪರಚಕ್ರಂಗಳೆಲ್ಲಮಂ ಬಾಯ್ಕೇಳಿಸಲೆಂದು ವಿಜಯದಶಮಿಯೊಳ್ ದಿಗ್ವಿಜಯಂಗೆಯ್ದು

ಮ॥ಸ್ರ॥
ಮಗಧರ್ ದ್ವೀಪಾಂತರಕ್ಷ್ಮಾಧಿ ಪರಚಳನಿವಾಸಾಧಿನಾಥರ್ ಮಹಾಮಂ
ಡಲಿಕಾಸರ್ ದಕ್ಷಿಣಶ್ರೇಢಿಯ ಖಚರಕುಳಾಧೀಶರಾದೆಲ್ಲರುಂ ಬಾ
ಪ್ಪಲಿಮಿತ್ತುಂ ತಮ್ಮ ಸರ್ವಸ್ವಮನೊಡನೆ ಭಯಭ್ರಾಂತಿಯಿಂ ತೆತ್ತುಮಿರ್ಪಂ
ಬಳೆಪ ಪ್ರದ್ಯೋಗಿ ಬಾಯ್ಕೇಳಿಸಿ ಮಗುೞ್ದನುದಾತ್ತ ಪ್ರತಾಪಂ ಮಹೀಶಂ ೭೪

1 ಳಿಸಂಜೇಱಿಸಿ

ವ|| ಅಂತು ನಾರಾಯಣಂ ಶ್ರೀಖಂಡಮಂಡಳಾಧಿಪತಿಯುಮರ್ಧಚಕ್ರವರ್ತಿಯು ಮುಜ್ವಳ ಕೀರ್ತಿಯುಮಾಗಿ ಮಗುಳ್ದು ಬಂದು

ಮ|| ಸುರರಾಜಂ ಸುರಲೋಕಮಂ ಪುಗುವ[ವೊ]ಲ್ ನಾನಾ ವಿಧಾಳಂಕ್ರಿಯಾ
ಕರಮಂ ದ್ವಾ[1][ರ][1]ವತೀ ಪ್ರಸಿದ್ಧಪುರಮಂ ಜೆಲ್ವಾಗೆ [2][ನಾರೀಜನಂ][2]
ಬೆರಸಾತ್ಮಪ್ರಿಯ ಮಿತ್ರವರ್ಗಮಿದಿರ್ವಂದಾನಂದದಿಂ ಕಂಡು ವಿ
ಸ್ತರದಿಂ ಸೇಸೆಯ[ನಿ]ಕ್ಕೆ ಪೊಕ್ಕು ಸುಖದಿಂದಿರ್ದಂ ಪಯೋ[3][ಜೋ][3]ಧರಂ ೭೫

ಗದ್ಯ|| ಇದರ್ಹತ್ಸರ್ವಜ್ಞ ಪಾದಪದ್ಮವಿರಾಜಿತೋತ್ತಮಾಂಗ ಶ್ರೀ ಬಂಧುವರ್ಮ ನಿರ್ಮಿತಮಪ್ಪ ಹರಿವಂಶಾಭ್ಯುದಯದೊಳ್ ನಾರಾಯಣ ವಿಜಯವರ್ಣನಂ

**ದ್ವಾದಶಾಶ್ವಾಸಂ**

---

1 ರಾ 2 ಪಾರವ ನಾರೀಜನಮೆಲ್ಲರುಂ 3 ಜ

# ತ್ರಯೋದಶಾಶ್ವಾಸಂ

ಕಂ॥ ಅಂತು ಹರಿವಂಶತಿಳಕನ
ಸಂತಗುಣಂ ದ್ವಾ[1][ರ][1]ವತಿಯೊಳಮರಾವತಿಯೊಳ್
ಸಂ[2][ತಸ][2]ದಿನಮರವಿಭುವಿ
ಪ್ಪಂತಿರೆ ನಿಶ್ಚಿಂತಮಿರ್ದನಿಪ್ಪನ್ನೆವರಂ ೧

ಮಂದಾನಿಲ ರಗಳೆ॥

ಪುಗೆ [ಶುಕ]ಪಿಕಸಮಿತಿ ವನಾಂತರದೊ[3][ಳ್
ಒ][3]ಗೆದೊಪ್ಪಿರೆ ಸಸಿ ಗಗನಾಂತರದೊ[4][ಳ್][4]
ತೆಂಗಾಳಿಯುಂ ಬರುತಿರೆ ಮೃದುಪದ[5][ದೊಳ್][5]
ಭೃಂಗಾಳಿಗಳೆಱಗೆ ವನಸ್ಪತಿಯೊಳ್
ತುಱುಗಿರೆ ಕೊನೆಗಳ್ ಸೆಳೆಗೊಂಬುಗಳೊಳ್
ಮಿಱುಪಲರ್ಗಳಿನೊಪ್ಪಿರೆ ಲತೆವನೆಗಳ್
ಸುರಿಯುತ್ತಿರೆ ಮಾಮರದೊಳೆ [6][ನನೆಗಳ್][6]
ಕರಮೊಪ್ಪಿರೆ ಪೂಮರದೊಳೆ ನನೆಗಳ್
ಕುಸುಮಿಸುತಿರೆ ಮೆಲ್ಲನೆ ಸಂಪಗೆಗಳ್
ಪೊಸಗಂಪಂ ಪಸರಿಸೆ ಮಲ್ಲಿಗೆಗಳ್
ತಳಿ[7][ತೆಸೆ][7]ದಿರೆ ಪಲವುಮಶೋಕೆಗಳೊಳ್
ಮೀಳಿವುಯ್ಯಲು ಸೊಗಯಿಸೆ ನಂದನದೊಳ್
ವಿರಹಿಗಳ ಮನಕ್ಕಟಿಲೊದವೆ ಕರಂ
ನೆರೆದೊಪ್ಪುವರ್ಗೊಗೆಯೆ ರತಿಪ್ರಕರಂ
ಪಿಂ[8][ದೋ][8]ಳದ ಗಾಮರವೆಸೆಯೆ ಕರಂ
ಬಂದತ್ತು ಬಸಂತಮದತಿ ಸುಕರಂ ೨

---

1 ರಾ 2 ತೊಷ 3 ಳಗೆಯು। ವೊ 4 ಳು 5 ಗತಿಂಯೊಳು 6 ನೆಗಳು 7 ಸ 8 ಡೊ

ಕಂ॥ ಎಂತಿರೆ ಸೊಗಯಿಸುಗುಂ ವನ
ಮಂತಿರೆ ಕಡುರಾಗವೊದವುಗುಂ ದಂಪತಿಗ
ಳ್ಗೆಂತಿರೆ ವಿಯೋಗಿ ಮಱುಗುಗು
ಮಂತಿರೆ ಬಂದುದು ಬಸಂತಮಭಿನುತ ಕಾಂತಂ ೩

ವ॥ ಅಂತು ವಸಂತಗಾಲ ಬಂದುದಂ ವನಪಾಲಕ[1][ನೆರವಿ][1] ಪೂರ್ವಾಪೂರ್ವಮಪ್ಪ ಪಲವುಂ ಕುಸುಮಂಗಳಂ ಕಂಡು ಚಕ್ರವರ್ತಿಯಲ್ಲಿಗೆ ಬಂದು ಕಂಡು ವಸಂತದ ಬರವನಱಿಯೆ ಬಿನ್ನಪಂಗೆಯ್ದೊಡರಸನೊಸೆದು ಜಲಕ್ರೀಡೆಯಾಡಲ್ ಬಗೆದು ತನ್ನರಸಿಯರ್ಕಳುಂ ಪೇಳದ ಸೂಳೆಯರುಂ ನೇಮಿಕುಮಾರಾದಿ ಕುಮಾರಗಣಮುಂ ತಾನುಂ ಪಸದನಂಗೊಂಡು ಮಹಾವಿಳಾಸದಿಂ ಬಂದುದ್ಯಾನಮಂ ಪೊಕ್ಕು ಪಂಚರತ್ನ ಶಿಳಾಖಚಿತಮಪ್ಪ ಜೊಡ್ಡಣಬಾವಿಯಂ ವನಿತಾಜನ ಸಹಿತಂ ಪೊಕ್ಕಾಗಳ್

ಕಂ॥ ಪೊಲೆ ಬಲ್ಮುಗುಳಂ ಪೊಲೆ
ವಲಮ ಕರ್ಣಮಿನನೊಳ್ಗುರುಳ್ ತುಂಬಿಗಳಂ
ಸಲೆ ಪೊಲ್ಲು ಕೊಳನೆ
ನಲಿದಾಡುವ ತಿಱದಿನಾಡಿದರ್ ಕಾಮಿನಿಯರ್ (?) ೪

ಅಲರಿವು ಮೊಗಮಿವು ಮೀನಿವು
ಕುರುಳಿವು ತುಂಬಿಯು ಬಂಬಲವೆಂದಱಿಯಲು ಕಾಗೆ
ದ ಲಲನೆಪೊಲಾಡುವಾಗಳಾ ಪೂಗೊಳದೊಳ್ (?)
............................................... ೫

ಕಾಡುತ್ತಮೆಯ್ದೆ ಪೋರ್ಕುಳಿ
ಯಾಡುತ್ತಂ ನಯದೆ ಚಲ್ಲವೋಡು[2][ತ್ತಮದೋ
ಲಾಡುತ್ತಂ ರಾಗದಿ ಬರೆ][2]
ನೋಡೆ ಕರಂ ಕಾಂತೆಯರ್ ಕರಂ ಸೊಗಯಿಸಿದರ್ ೬

ಪತ್ತುತ್ತಂ ಹರಿಯಂ ಕೆಲ
ರೊತ್ತುತ್ತಂ ನೀರೊಳಾಳ್ವಿನಂ ಜುಂದನದಿಂ
ಮೆತ್ತುತ್ತಂ ಜೀರ್ಕೋಳವಿಯೊ
ಳೊತ್ತುತ್ತಂ ರಾಗದಿಂದಮಾಡಿದರಾಗಳ್ ೭

1 ನರವು 2 ತ್ತಂ ರಾಗದಿ ನೋಲಾಡುತ್ತಂ

ನೀರೇಜವದನೆಯರ್ ಶೃಂ
ಗಾರರಸಂ ತುಳುಂಕಿಲದುಲಟಿಹದ ಜಗದಾ (?)
ಧಾರನನಧಿಕನ ನೇಮಿಕು
ಮಾರನ ಮೊಗಮೊಳ್ ಕಡಂಗಿ ತುಳುಕಿದರಾಗಳ್ ೮

ವ॥ ನಮಿಕುಮಾರನಂತವರ ಸ್ವಭಾವದ ಪೊ[1][ಯ್ಲಂ][1]ಗದಾಂತದ ತನ್ನೀರ ಪ್ರೊ[2][ಯ್ಲ][2]ಗಳ್ಕನಸಲ್ಲಿ[3][ನವಂ ಪ][3]ರಿದು ಮಾಣ್ದಾಗಳ್ ಜಲಕ್ರೀಡೆಯನುಪಸಂಹಾರಿಸಿ ನಾರಾಯಣನುಂ ನೇಮಿಕುಮಾರನುಂ ಪೊಱಮಟ್ಟು ಪೊರಮಟ್ಟು ನಿಂದಲ್ಲಿ ತಮ್ಮಣ್ಣನ ಸನ್ನೆಯನಱಿವಾಂತು ಕುಮಾರನೆ[4][ನ್ನೊ][4]ಲ್ಲನಣಿಗೆಯುಂ ಪಿಱಿ[5][ಯು][5]ಮೆಂದು ಸತ್ಯಭಾಮೆಗೆ ಪೇಱಿಱ್ದುಡಾಕೆ ಕಡುಮುಳಿದು ನೋಡಿ

ಕಂ॥ ಏ[6][ನೀ ನಿನ್ನೊ][6]ಲ್ಲಣಿಗೆಯ
ನಾನೇಂ ಪಿಱಿವ[7][ಪ್ಪುದೆ ಕರ][7] ತಕ್ಕುದು ಜೇಡಾ
[8][ನೀನೆ][8]ನಗೆ ಚಕ್ರವರ್ತಿಯೆ
ಭೂಮತನಾ[ದಾ]ದೇವಿ[9][ಯೇಂ][9] ಬಾಱುವಳೇ ೯

ವ॥ ಅಂತಪ್ಪುದಪ್ಪುದಾನುಂ ಭಾ[ಗಿ]ನಿಯುಮೆಂಬ ಮಾತಪ್ಪುದೆನ್ನನುಂ ನಿನ್ನುಮನಱಿಯದೆ ನುಡಿದೋಡೇನೆಂದು ತೆಗಟ್ಟಿ ಬಗ್ಗಿಸಿ ಪೋಪಾಗಳ್ ರುಗ್ಮಿಣಿ ಮಹಾದೇವಿ ಸತ್ಯಭಾಮೆಯುಸಿಸಿಸು[10][ಮ][10]ಲ್ಲಮೆಂದೆಂಗು ಮಾತೇಕೆ ನೇಮಿಕುಮಾರನ ನಮಹಾಸ್ಯಂಗೆಯ್ದು ಮುಳಿದು ನುಡಿದಿರಾತನ ಪೆಂಪನಱಿಯರೆ ಸ್ವರ್ಗಲೋಕದಿಂ ಬಂದಿಂ ಪುಟ್ಟು[11][ವಮೆಂ][11]ದು ಮುನ್ನಱುದಿಂಗಳುಂ[12][ಟಿ][12]ನೆ

ಕಂ॥ ದೇವೇಂದ್ರ ದೇವಿಯರ್ ಶಿವ
ದೇವಿಗೆ ಕರಮೊಸೆದು ಗರ್ಭಶೋಧನೆಗೆಯ್ಯಲ್
ಭಾವವಿಶುದ್ಧಿಯೆ ಬಂದಿ
[13][ದಾರ್ನ][13]ವಿಧದ ಮಹಾತ್ಮ್ಯದಳ[14][ವದೇಂ][14] ಕೇವಳವೋ ೧೦

ಅಂದೆ ತಗುಳ್ದಿಂದ್ರನ ಬೆಸ
ದಿಂದ[ಂ] ಬಹು ಕನಕವೃಷ್ಟಿ ಸುರಿತಪ್ಪುದುಮಂ
ಬಂದಮರಸಹಸ್ರಂ ಕಾ
ಪಂದಮುಮಂ ಕಂಡುಮಾತನಂ ನೀನಿ[ಱಿ]ಪಾ ೧೧

1 ಮ್ಯಾಂ 2 ಮ್ಯು 3 ರಂ... 4 ನೆನ್ನೊ 5 ದಿ 6 ನೆನೊ ನಿನ್ನುಟ್ಟೊ 7 ವ್ರುದೆ ಕರು 8 ನ 9 ಮಾದೇಂ 10 ವ 11 ಮವೆಂ 12 ಜೆ 13 ವರ್ಣ 14 ವೆಂದೆಂ

ವ॥ ಅದಲ್ಲದೆಯುಂ

ಉ॥ ಆತನ ಪುಟ್ಟಿದಂದೊಸೆದು ಬಂದಮರಪ್ರಭು ಕೆಯ್ಯನೆತ್ತಿ ತಾ
ನಾತನನೆತ್ತಿಕೊಂಡು ಸುರಹಸ್ತಿಯನೇಱಿಸಿಕೊಂಡು ಪೋಗಿ ಸ
ನ್ನೂತ ಸುರಾದ್ರಿಯಲ್ಲಿರಿಸಿ ಪಾಲಸಮುದ್ರದ ನೀರನೊಪ್ಪೆ [1][ತಾ
ನಾತ][1]ತಿಭಕ್ತಿಯಿಂ ಮಿಸಿಸೆ ನಿಂದಳವೇನಿದು ಮರ್ತ್ಯರಂದಮೇ ೧೨

ವ॥ ಇಂತು ಭುವನತ್ರಿತಯ ಸ್ವಾಮಿಯಪ್ಪಾತಂಗೆ ನೇಮಿನಾಥಂಗೆ ಬೆಸಕೆಯ್ವುದ
ನೆಲ್ಲ ಪಡೆಯಲಕ್ಕುಮೆನೆ ಸತ್ಯಭಾಮೆ ಎನ್ನಾಣ್ಮನಳವು ಸಾಮಾನ್ಯಮೆ

ಕಂ॥ ಹರಿ ಪುಟ್ಟಿದಂದೆ ಕೇಳ್ದಱಿ
ದರಿ ಬೆಸಸೆ ಕೊಲಲ್ಕೆ ಬಂದ ದೇವತೆಗಳನೆ
ಣ್ಬರುಮಂ ಗೆಲ್ದೊಂದಳವುಂ
ಧರೆಯಱಿದೊಡಮತ್ತಮೇಕೆ ನೀಂ ಮೆಯ್ವಱಿಯಾ ೧೩

ಉ॥ ಗೋಕುಳ ರಕ್ಷಣಕ್ಕಗಮನೆತ್ತಿದನದ್ಭುತ ಕಾ[2][ಳಿಮಾ][2]ಹಿಯುಂ
ಪ್ರಾಕಟಮಾಗೆ ಕೊಂದನಹಿಶಯ್ಯೆಯನೇಱಿವನೇಱಿಸಿದ್ದನು
ಗ್ರಾಕರ ಶಾರ್ಙ್ಗಮಂ ನಯದಿನೊತ್ತಿದನೊಪ್ಪುವ ಪಾಂಚಜನ್ಯಮಂ
ಭೀಕರಮಿಂತು ವಿಷ್ಣುವೆ ಪರಾಕ್ರಮಮೆಂಬುದನೇನೊ ಕೇಳಿರೇ ೧೪

ಕಂ॥ ಸಂದಿರ್ದ ಮಲ್ಲರಂ ಗೆ
ಲ್ವಂದಮುಮಂ ನೆಗಟ್ದ ಕಂಸ ವಿಧ್ವಂಸನದೊಂ
ದಂದಮುಮಂ ಶಿಶುಪಾಲ[3][ದೊ][3]
ನೆಂ ದಮುಮಂ ಬಗೆವೊಡಿನ್ನುಮತಿಶಯಮೊಳವೇ ೧೫

ಮ॥ ಅಱಿಯಾ ಜಂಭವತೀ [4][ಸತೀ ಹರಣಮಾದಾದಂ][4]ದು ವಿಕ್ರಾಂತಮಂ
ಮಱೆದೋ ನೀನೆ ವಲಂ ಪ್ರಣೂತ ವಿಪುಳ ಶ್ರೀನುಜ್ಜಿ ನೇಂದುಜ್ಜನಂ
ತಱಿದುಗ್ರಾಜಿಯೊಳಿರ್ದುಕೊಂಡು ವಿಳಸಚ್ಚಕ್ರಾದಿ ರ[5][ತ್ನಂಗಳಂ
ತಱಿಸಂದಾದಿ][5]ರವುಂ ತ್ರಿಖಂಡಧರೆಯಂ ತಾಳ್ದಿರ್ದ ಮಾಹಾತ್ಮ್ಯಮಂ ೧೬

ವ॥ ಅಂತಪ್ಪ ಚಕ್ರವರ್ತಿಯ ಮಹಾದೇವಿಯೆನಗಂ ಬೆಸನಂ ಪೇಟ್ದಿರೆಂಬುದೇನೆಂ
ದೊಡನೆ ಧರಾಚಕ್ರದೊಳ್ ಚಕ್ರವರ್ತಿ ನಾರಾಯಣನಿಂ ಪ್ರತಾಪಿಯುಂ ಬಲ್ಲಾಳ್ಗಳು
ಮಿಲ್ಲೆಂಬುದಂ ನೀನಱಿಯೆಯಲ್ಲಿಂದಗ್ಗಳಮಾನಱಿವೆನಾತನ ಸಾಹಸಂಗಳಂ ನೀನೀಗಳಾತನ

1 ತಾಂ ತಂದ 2 ಳಿಯಾ 3 ದಾ 4 ಹರಣದೊಳಾದೊಂ 5 ತ್ನ...

ಸಾರೆಯಾಗಿ ಕೇಳಿಂ ನುಡಿದಿಂತಾಗಿರುಳುಂ ಪಗಲುಮೊಸೆರ್ದುಂ ಮಱೆಯದೆ ನೆನೆಯುತ್ತಂ ಪೊಗೞುತ್ತಮಿರ್ಪಂ ನಿಮ್ಮ ತಪಸ್ಸಳವುಮುಪಮಾತೀತಮಾದೊಡಂ ತ್ರಿಭುವನಸ್ವಾಮಿಯಪ್ಪ ನೇಮಿಕುಮಾರನ ಬೆಸನನುಲ್ಲಂಘಿಸಲಾಗ[1][ದಿರೆ ಕೆಟ್ಟಿ][1]ನೆನೆಯುಂ ಮುಳಿದು ಪೋಪಾಗಳ್ ಬನ್ನಿಂ ಪೋಪಮೆಂದು ನೇಮಿಕುಮಾರನುಂ ನಾರಾಯಣನುಂ ಕೆಯ್ಗೆಯ್ದು ಬಸದಿಂ ಪೊಱಮಟ್ಟು ಬಂದು ಪೊೞಲಂ ಪೊಕ್ಕಿರ್ದಲ್ಲಿ ನೇಮಿಕುಮಾರನತ್ತಿಗೆಯು ಮಾತಿಂಗೇನುಮಲ್ಲಯುಂ ಮಹಾಪುರುಷರಳಿಪಂ ಸ್ತ್ರೀಜನಮೆಂತರಿಪರ್ಕೆ ಹಿತಕಾರ್ಯಂಗಳುಂ ಪ್ರತಾಪಂಗಳುಮಗ್ಗಳಮಾಗಿಪ್ಪುದಪ್ಪನಿನಿಸಾನುಂ ತೋರ್ಪೆನೆಂಬ ಬಗೆಯೊಳಂತಿರ್ದಣ್ಣನಾಯುಧಶಾಲೆಯಂ ಪೊಕ್ಕು ಕಾಪಿನವರನೊಟ್ಟಯ್ಸಿ ದಿವ್ಯಾರ್ಚನೆಯಿಂದರ್ಚಿಸಿರ್ದ ನಾಗಶಯ್ಯೆಯನೇಱಿ ಪಟ್ಟಿರ್ದ ಶಾಙ್ರ್ಗಾಯುಧಮನೇಱಿಸಿ ಪಾಂಚಜನ್ಯಮನೊತ್ತಿದಾಗಳ್

ಚಂ॥ ಪಱಿದವು ಲಾಯಮುಂ ತುರಗ ಸಂಕುಳಮೆತ್ತಿ ಪೊದಳ್ದ ಕಂಬಮುಂ
ಮುಱಿದವು ದಂತಿಗಳ್ ಮಸಗಿತಬ್ಧಿ ನೆಲಂ ನಡುಗಿತ್ತು ಬೆರ್ಚಿ ಮೆ
ಯ್ಮಱೆಯದೆ ಕಾಂತೆಯಂ ತಳೆದುಂಗನೆಯರ್ ಬಲದೇವನಲ್ಲಿ ಬೆ
ಳ್ಕಱಿಮಸಿತಾಗೆ ನಿಂದನತಿಕೋಪದೆ ಬಾಳೆಬಿಲಿರ್ದನಚ್ಯುತಂ ೧೭

ವ॥ ಅಂತಾ ಶಂಖಧ್ವನಿಗೆ ಪುರಕ್ಷೋಭಮಾದೊಡೆ ಕಾಪಿನಾಳ್ ಬಂದು ನಾರಾಯಣಂಗೆ ಬಿನ್ನಪಂಗೆಯ್ದನೀಗಳೆಮ್ಮ ಕಾಪನುಱದೆ ನೇಮಿಕುಮಾರಂ ನಾಗಶಯ್ಯೆಯನೇಱಿ ಶಾಙ್ರ್ಗಾಯುಧಮನೇಱಿಸಿ ಪಾಂಚಜನ್ಯಮನೊತ್ತಿದನೆಂದಡೆ ಹರಿ ಕೇಳ್ದು ತೊಟ್ಟನೆ ಬೆಱಗಾಗಿ ಬೆಕ್ಕಸಂಬಟ್ಟು ಬಾಯೊಳ್ ಕೆಯ್ಯನಿಟ್ಟು ನೀಡುಮಿರ್ದು ತನ್ನೊಳಿಂತೆಂದು ಬಗೆಗುಂ

ಕಂ॥ ಆತನೆ ರಾಜ್ಯದ ಮೊದಲಿಗ
ನಾತನೆ ಕರಮಧಿಕನಪ್ಪ ಸಾಹಸಪುರುಷಂ
ಮಾತೇನೊ ರಾಜ್ಯಮೋಹಮ
ನಾತಂ ಬಗೆದಾಗಳಾಗದೆಂಬರುಮೊಳರೇ ೧೮

ವ॥ ಎಂದು ಪರಿಚ್ಛೇದಿಸಿ ಮನದೊಳುಳ್ಳುಜ್ಜುಗದಿನಂಜುತ್ತಿರ್ದೊಂದು ದಿವಸಂ ಕಾಳಿಗದ ಮಾ[ತಂ][2] ಕೇಳ್ದು ಸತ್ವಮುಳ್ಳವರಾರೆಂದು ನುಡಿಯುತ್ತಿರ್ದಾಗಳ್ ಭೀಮಂ ಬಲ್ಲಿದನೆನೆ ಕೆಲರ್ ಬಲದೇವಂ ಬಲ್ಲಿದನೆಂದೊಡೊರ್ವನಿಂತೆಂದಂ

1 ದೆಕೆಟಿ 2 ತು

ಕಂ॥ ವ್ಯೋಮಚರಸಮಿತಿ ನೆಱೆಯದು
ಭೂಮಿಚರರ್ ನೆಱೆಯರೊಳರೆ ಪ್ರೋರ್ಕ್ಷಳಿಮಾಡಲ್
ನೇಮಿಕುಮಾರನ ಸತ್ವಂ
ಸಾಮಾನ್ಯಮೆ ಬಗೆವೊಡೆಂತುಮುಪಮಾತೀತಂ ೧೯

ವ॥ ಎಂದೊಡೆ ಹರಿಯಾತನಂ ಕರೆಯಲಟ್ಟಿ ಬರಿಸಿ ನೀನೆ ಬಲ್ಲಿದನೆಂಬರ್ ನೇಮಿಕುಮಾರಂ ಬೊಟ್ಟುದೋಱಿಸಂ ಬಾಯೆಂದೊಡೆ ಕುಮಾರನಿಂತೆಂದಂ

ಕಂ॥ ಪೊಡವೀಶ ಬೊಟ್ಟುದೋಱಿಪ
ಪೊಡರ್ಪದೇಕಜ್ಜಮೆಂತುಮಿದಿರ್ಪ್ಪಡಮೆ
ನ್ನೆಡಗೆಯ್ಯ ಕಿಱುಕುಣಿಕ್ಕೆಯ
ಮುಡಿಯೊತ್ತಿರೆ ನೋೞ್ಪಮೆಂದು ನೀಡಿದ ಬೆರಲಂ ೨೦

ವ॥ ನಾರಾಯಣಂ ತನ್ನ ಪಿರಿದು ಕೆಯ್ಯೊಳ್ ಪಿಡಿದೊತ್ತಿದೊಡೆ ಬೊಟ್ಟನೊತ್ತಿದಂತಾಮುದಿಲ್ಲ ತಾನೊಂದು ಕಡಿತಲೆಪಟ್ಟುಮನೊತ್ತಿದಂತೇಂ ತನ್ನ ಕೆಯ್ ಚಳಿತು ಪತ್ತುವಿಟ್ಟು ಮೊಗಂಗೆಟ್ಟು ನಿಲೆ ಹರಿಯು ಮನದೇನಮನಱಿದು ಬಲದೇವನೆಂದನಿಂತಪ್ಪ ಮಹಾಸತ್ವನಪ್ಪೊಡಪ್ಪುಟ್ಟಿ ದ]ನಂ ನೀನೆ ಪಡೆದುಯ್ವ ನಿನ್ನನ್ನರಾರ್ ಪುಣ್ಯವಂತರೆಂದಾಱಿಸಿ ನುಡಿದೊಡಂ ಕಿಱಿದಾನುಂ ಬೇಗದಿಂದೋಲಗಮಂ ಪರಿಯುಮೇೞ್ದು ತಾನುಂ ಬಲದೇ[ವ]ನುಮೇಕಾಂತವಿದನಂತಪ್ಪ ಬಲಗರ್ವಿತಂ ರಾಜ್ಯಮನಾಸೆವಟ್ಟಾಗಳೇಗೆಯ್ವಮೆನೆ ಬಲದೇವನಿಂತೆಂದಂ

ಕಂ॥ ಸ್ವರ್ಗಾವತರಣದಿಂ ಬೞಿ
ಸ್ವರ್ಗಕ್ಕೆಱೆಯಾತನೆಱಗಿ ಪೂಜಿಸಿ ಪೋದಂ
ಸ್ವರ್ಗಬರೆ ಕಾವರವರಪ
ವರ್ಗಶ್ರೀಯಲ್ಲದುೞಿದ ರಾಜ್ಯಮನೊಲ್ಲರ್ ೨೧

ವ॥ ಅದಱಿಂ ನೀನಿದಕ್ಕಿನಿಸು ನಿಶ್ಶಂಕಿತನಾಗಾತಂಗೆ ಸಂಸಾರ ವಿರಕ್ತಿಯಪ್ಪಂತು ಮಾಡಿದಪ್ಪೆನೆಂದೊಡಮಂತೆಗೆಯ್ವೆನೆಂದಲ್ಲಿಂಪೞಿಮರ್ದೆ ಕೆಲವು ದಿವಸಂ ಬಲದೇವಸ್ವಾಮಿ ನೇಮಿಕುಮಾರಂಗೆ ಮದುವೆಯಂ ಮಾೞ್ಪೆಮೆಂದು ಸಮುದ್ರವಿಜಯಾದಿಗಳನೊಡಂಬಡಿಸಿದುಗ್ರಸೇನ ಮಹಾರಾಜನ ಮಕ್ಕಳಪ್ಪ ರಾಜೀವಮತಿಯೆಂಬಳ್ಕೆರಸಯ್ಯೂರ್ವರ್ ಕನ್ನೆಯುಮಂ ವಿವಾಹಕ್ಕೆ ಸಮಕಟ್ಟಿ ರತ್ನಮಯಮಪ್ಪ ವಿವಾಹಮಂಟಪಮಂ ಮಾಡಿಸಿ ತತ್ಸಮೀಪದೊಳೊಂದೆಡೆಯೊಳ್ ಪಿರಿದೊಂದು ಪಟ್ಟಯಂ ಮಾಡಿಯಲ್ಲಿಯೆನಿತಾನುಂ ಮೃಗದ ಪಿಂಡುಗಳಂ ತಂದು ಪುಗಿಸಿ ನಾರಾಯಣಂ ಬಂದುಪಚಾರ ಸ್ನೇಹದಿಂ ಕುಮಾರನಂ

ವಿವಾಹಕ್ರಿಯೆಗೆಂತಾನುಮೊಡಂಬಡಿಸಿ ಮುತ್ತಿನ ಮಂಡವಿಗೆಯನೆತ್ತಿಸಿ ಕನಕ ಕಳಶಂಗಳಂ ನಿಲಿಸಿ ವಿಳಾಸಿನಿಯರ್ಕಳೆಲ್ಲರುಮಂ ಕೆಯ್ಗೆಯ್ದು ಬರಿಸಿ ಬುಧಜನಮೆಲ್ಲಮಂ ಬರಿಸಿ ಮಂಗಳಕಾರ್ಯ ಮಹಾವಿಭೂತಿಯಿಂ ಸಾಮಗ್ರಿಯಂಗೆಯ್ದು

ಕಂ॥ ಹರಿಪೂಜ್ಯನಪ್ಪ ನೇಮಿಗೆ
ಹರಿಕುಲತಿಲಕಂಗೆ ನೆಗೞ್ದ ಚಕ್ರಧರಂ ತಾಂ
ಹರಿ ಮದುವೆ ಮಾೞ್ಪನೆಂದಡೆ
ಪಿರಿದಾದೊಂದೊಸಗೆಯುಳನನೇನಂ ಪೇೞ್ವಂ ೨೨

ವ॥ ಅಂತತಿಶಯಮಪ್ಪೊಸಗೆಯಂ ಮಾಡಿ ನೇಮಿಕುಮಾರನಂ ಕೆಯ್ಗೆಯ್ಸಿ ಪಟ್ಟವರ್ಧನಮನೇಱಿಸಿ ಛತ್ರ ಚಾಮರಾದಿ ರಾಜಚಿಹ್ನಂಗಳೆಸಗೆ ಮಂಗಳ ತೂರ್ಯರವ ಮೊಗೆಯೆ ಕನಕ ಕಳಶಂಗಳ್ ಮುಂದೆ ನಡೆಯೆ ಬಲದೇವ ವಾಸುದೇವ ಸಮುದ್ರವಿಜಯಾದಿಗಳ್ ಮುಂದಿಟ್ಟೊಡಗೊಂಡು ಮದವಳಿಗೆಯ ಮನೆಯೊಳ್ ಮದುವೆ ನೆಱಪುವೆನೆಂದು ಮಹಾವಿಭೂತಿಯಿಂ ಪೊಱಮಟ್ಟು ನಡೆವಾಗಳ್ ತಮ್ಮ ಮನೆಯ ಮುಂದಣ ಕೆಲದೊಳ್ ಸಿರಿಯ ಪಟ್ಟಿಯಿಲ್ಲಂ ತೀವಿ ಗೋೞಿರ್ಮೇಳೆಂಬ ಮೃಗದ ಪಿಂಡಂ ನೇಮಿಕುಮಾರಂ ಕಂಡೀ ಮೃಗಸಮೂಹಮಿಲ್ಲಿಯೇಕಿ[1][ರ್ದಪೆಂ][1]ದು ಬೆಸಗೊಳೆ ಕೆಲದವರೆಂದರ್ ನಿಮ್ಮ ಮದುವೆಯ ಮಹಾಭೋಜನಕ್ರಿಯೆಗೆಂದು ಚಕ್ರವರ್ತಿ ತರಿಸಿದನೆಂದಡೆ ಕುಮಾರಂ ಭೋಂಕನಗಿದು ಕರೆಂಪ್ರಮನುಗಿದು ನಿಱಿಸಿ

ಕಂ॥ ಎಂತೆಂತೊ ಪೇೞಿಮೀ ಮೃಗ
ಸಂತತಿಗಳ್ ಮದ್ವಿವಾಹ ಭೋಜನವಿಧಿಗೆಂ
ದಿಂತಿವು ಬಂದುದೞಿಂದಾಂ
ನಿಂತಲ್ಲದೆ ನರಕಗತಿಗೆ ಬೇಗಂ ಪೋ[2][ಪೆಂ][2] ೨೩

ವ॥ ಎಂದಾಗಳೆ ವೈರ್ಯಾಗಂ ಪುಟ್ಟೆ ನಿರ್ವೇಗಮುದಯಂಗೆಯ್ಯೆ ಪೆಱಗೆ ಬಪ್ಪ ಬಲದೇವಾದಿಗಳಂ ಮುಂದಣ್ಗೆ ಕರೆದಿಂತೆಂದಂ

ಉ॥ ನಿಟ್ಟಿಸಲಾಗದಿರ್ದ ಮನುಜತ್ವದೊಳೀ ಮೃಗವೃಂದಮೆಲ್ಲಮಂ
ನೆಟ್ಟನೆ ಕೊಲ್ಲ ಭೋಗದೆಡೆಗೊಳ್ಳಿಸದಾಮೊಡೆ ಸಲ್ಲೆನಿನ್ನಮಂ
ಬಿಟ್ಟೊಡಮೊಲ್ಲೆನೆಂದೊಡಮನಂತೆನನೇಱಿಸೆ ಮತ್ತಮೆಂಗುಮೇಂ
ಮುಟ್ಟಿ[3][ಮನಂತ][3]ನಂ ಕಳೆದುಮುಣ್ಬರೆ ಸತ್ಪುರುಷರ್ಕಳಾದವರ್ ೨೪

---

1 ದರ್ಪೆಂ 2 ಗಿ 3 ಪುದಾ

ಕಂ॥ ಸಂಸಾರದ ಭೋಗಂ ಸ್ತ್ರೀ
ಸಂ[ಸಂ]ರ್ಗಮುದಲ್ಲದೀಗಳೀ ತೆಱದ ಮಹಾ
ಹಿಂಸೆವಡೆದಂದಧೋಗತಿ
ಗಾಂ ಸಿಕ್ಕಿರದಿೞಿವೆನವಱಿನಿನ್ನಿವನುೞಿವೆಂ ೨೫

ಉ॥ ಇಂ ಪೆಱವೇನುಮೆನ್ನದಿರಿಮಾ ಮಹಿಮಾಕ್ರಿಯೆಯಿಂದಮಿಂತೆ ಮ
ತ್ತ್ರಾಂ ಪೊಱಮಟ್ಟು ಶ್ರೀಜಿನರ ಗೇಹದೊಳಿರ್ದು ತಪೋಭರಕ್ಕೆ ಮೆ
ಯ್ಯಾಂಪೆನಮೋಘಮಲ್ಲ ಪೊಡೆ ಬಲ್ಲಿದನಪ್ಪಘಬಂಧಮೆಲ್ಲಮೆ
ನ್ನಿಂ ಪಱಿಪಟ್ಟು ಪೋಗ[ವ]ವು ಪೋಗವೆ ಮೋಕ್ಷಮನೆಯ್ದಲಕ್ಕುಮೇ ೨೬

ವ॥ ಎಂಬ ಮಾತಿನ ಬಿಣ್ಪಂ ಕೇಳ್ದು ಬಲದೇವ ವಾಸುದೇವರ್ ಬೆಕ್ಕಸಂಬಟ್ಟರ್ ಸಮುದ್ರವಿಜಯಂ ಬೆಱಗಾದಂ ಶಿವದೇವಿ[1][ಯರ್][1]ಮೂರ್ಛೆವೋದರನ್ನೆಗಂ ಲೋಕಾಂತಿಕ ದೇವರ್ ಬಂದು ಆಕಾಶದೊಳಿರ್ದು ದೇವಲೋಕದ ನಮೇರು ಮಂದಾರ ಪಾರಿಜಾತ ಪು[2][ಪ್ಪಂ][2]ಗಳಂ ಪಾದಾಂಭೋಜದೊಳ್ ಸುರಿದಾಕಾಶದೊಳಿರ್ದು ನೇಮಿಕುಮಾರಾ ನೀನೊಳ್ಳಿತನೆ ಬಗೆದ್ದೆ ತೀರ್ಥಕರ ಪುಣ್ಯಮುದಯಂಗೆಯ್ದುದು ನಿಮಗೇವೇೞ್ದುದೆಂದ ನಿತಂ ನುಡಿದು ಶಿವದೇವಿಯರಂ ಮೂರ್ಛೆಯಿಂದೆಚ್ಚರಿಸಿ ನಿಮ್ಮ ಮಗಂ ತ್ರಿಭುವನ ಸ್ವಾಮಿಯಾಗಲಿರ್ಪನಲ್ಲನೀಗಳ್ ತಪಂಬಡದೆ ಮಾಣ್ಬನಲ್ಲಂ ನೀವಿನಿಸಿರ್ದೊಡಂಬಟ್ಟು ನೆಗೞ್ವುದೆಂದು ದೇವರ್ ಪೋದರಾಗಳ್ ನೇಮಿಕುಮಾರನಾಸೆಯಿಂದಮಿೞಿದು ಮೃಗಂಗಳಂ ಬಿಡಿಸಿ ಮಗುೞ್ದು ಮನೆಗೆ ಮಂ[3][ದೊ][3]ಸಗೆ ಮಂಟಪದೊಳಿರ್ದು ಮೆಯ್ಯುಂ ದ್ರವ್ಯಮುಂ ಕಳತ್ರ ಸಂಪರ್ಕಮುಮನಿತ್ಯಮೆಂಬುದಂ ಪೇೞ್ದು ತಾಂ ತ್ರಿಜ್ಞಾನಧಾರಿಯಾಗಿ ಪುಟ್ಟಿದನಪ್ಪುದಱಿಂ ತನ್ನ ಭವಾಂತರಮಂ ಬಲದೇವಾದಿಗಳ್ಗಂ ತಾಯಿಗಂ ತಂದೆಗಮಱಿಯೆ ಪೇೞ್ದು ಸಂಸಾರಸ್ಥಿತಿಯಂದಮನೊಳ್ಳಿತ್ತಱಿಪಿ ನೀಮೆನ್ನನಿಂ ಬಿಡಿಮೆಂದ ನೊಡಂಬಡಿಮೆಂದವರನೊಡಂಬಡಿಸಿ

ಕಂ॥ ಪರಿನಿಷ್ಕ್ರಮಣ ವಿಧಾನದ
ನಿರುಪಮ ಕಲ್ಯಾಣಮಂ ಚತುರ್ವಿಧ ದಿವಿಜೋ
ತ್ಕರಮೊಪ್ಪೆ ಮಾಡಲಂದಾ
ದರದಿಂ ಬಂದತ್ತು ವಿವಿಧ ವಿಭವ ಸಮೇತಂ ೨೭

ವ॥ ಬಂದು ದೇವರ್ಕಳೆ ಕೆಯ್ಕೊಂಡು ಕುಮಾರಂಗಭಿಷೇಕಂಗೆಯ್ದು ಮಂಗಳ ವಸದನಂಗೊಳಿಸಿ ರತ್ನಮಯಮಪ್ಪ ಸಿವಿಗೆಯ[ನೇಱಿ] ಮುನ್ನಂ ಜ್ಯೋತಿಷ್ಕ ದೇವರ್ ಪಾಡಿ ಕೊಂಡಾಡಿ ಆಕಾಶಕ್ಕೊಗೆದು ಬರೆ ಬೞಿಯಂ ಕಲ್ಪವಾಸಿಗದೇವರವರ ಕೆಯ್ಯಿಂ ಕೊಂಡು

1 ಯು 2 ರಂ 3 ದು

ಪೊತ್ತುಕೊಂಡುಜ್ಜಯಂತಗಿರಿಯನೆಯ್ದಿ ಗಿರಿಶಿಖರಶಿಲಾತಲದೊಳಿರಿಸಿ ಕುಮಾರನಂ ಪಸೆ[1][ಯಂ][1]ಮುತ್ತರಾಭಿಮುಖನಾಗಿರಿಸಿ ಪಂಚಮಹಾಶಬ್ದಂಗಳಂ ಬಾಜಿಸಲ್ವೇೞ್ದುಂ ಬೞಿಯಮಂ ದೂ[2][ರಾಂತರದೊ]ಳಿರ್ದೋಲಗಿಸುತ್ತಿರೆ ಕುಮಾರಂ ವಸ್ತ್ರಾಭರಣಂಗಳಂ ಮೆಯ್ಯಿಂ ತೊಲಗಿಸಿ ಪೂರ್ವಾಭಿಮುಖದಿಂ ಪಲ್ಯಂಕಾಸನದೊಳಿರ್ದು ನಮಸ್ಸಿದ್ಧೇಭ್ಯ ಯೆಂದು ಪಂಚಮುಷ್ಟಿಯಿಂ ಕುಂತಳಂಗಳಂ ಪಱಿಯೆ

ಕಂ|| ಆಗಳ್ ದುಂದುಭಿಗಳ ರವ
ಮೋಗಡಿಸದೆ ನಭದೊಳೆಸೆದುದತಿಶಯದಿಂದಂ
ಪೂ[3][ಗ][3]ಳೆ ಸುರಿದತ್ತಂತತಿ
ರಾಗ[4][ದಿನ][4]ಮರರ್ಕಳಾಟ[5][ದಿಂ ಸಲೆಯಿ][5]ರ್ದರ್ ೨೮

ವ|| ಇರ್ದಲ್ಲಿ ಸುರೇಂದ್ರನಿರ್ದು ರತ್ನಪಟಳಕದೊಳ್ ಕೇಶಪಾಶಮನಿಟ್ಟು ಪಾಲ ಸಮುದ್ರದೊಳಿಕ್ಕಿಸೆಂದು ದೇವರ್ಕಳ್ಯೊಳ್ ಕೊಟ್ಟಿಕ್ಕಿ ದ್ರವ್ಯಭಾವಾರ್ಚನೆಗಳಿಂದರ್ಚಿಸಿ ಸ್ತುತಿಯಿಸಿ ದೇವನಿಕಾಯ ಸಹಿತಮಿಂದ್ರರ್ ತಮ್ಮಾವಾಸಕ್ಕೆ ಪೋದರ್ ಬಳಭದ್ರ ಕೇಶವಾದಿಗಳ್ ನೇಮಿಕುಮಾರಂ ನಿಜ್ಜಟನಾಗಿ ದೀಕ್ಷೆಗೊಂಡುದಕ್ಕೆ ಚೋದ್ಯಂಬಟ್ಟು ಪೂಜಿಸಿ ಪೊಡೆವಟ್ಟು ಮಗುೞ್ದು ಪೋದರಂದಿನದೊಡನೆ ಸಾಸಿರ್ವರರಸು ಮಕ್ಕಳ್ ತಪಂಬಟ್ಟರಾ ತಂಗೆ ಕುಡಲೆಂದಿರ್ದ ರಾಜೀಮತಿವೆರಸಯ್ನೂರ್ವರ್ ಕನ್ನೆಯರ್ ತಪಂಬಟ್ಟರಂತು ನೇಮಿನಾಥರ್ ಸಕಳ ವ್ರತಿಗಳಾಗಿ ದೀಕ್ಷೆಗೆಯ್ದು ನೇಮಿಯತಿವೆರಸು ಚರ್ಯಾಮಾರ್ಗ ಕೆಂದು ಬಂದು ಗಿರಿಶಿಖರದಿನಿೞಿದು ಗಿರಿನಗರಮಂ ಚರ್ಯಾಮಾರ್ಗದಿಂ ಪೊಕ್ಕಾಗಳ ಸಾಕ್ಷ್ಯ ವರದತ್ತರಾಜಂ ಕಂಡಿದಿರಂ ಬಂದೆಱಗಿ ತ್ರಿಕರಣಶುದ್ಧಿಯಿನಿಸಿಬರುಮಂ ನಿಱಿಸಿ ದಾಗಳಿಲ್ಲರುಂ ಯಥೋಚಿತ ಕ್ರಮದಿನಾಹಾರಂಗೊಂಡಕ್ಷಯದಾನಮೆಂದು ಪರಸಿದಂದ ರಾಗಳಾತನ ಮನೆಯ ಮುಂದೆ

ಕಂ|| ಪಂಚಮಹಾವ್ರತ ಯತಿ ನಿಲೆ
ಸಂಚಿತ ಪುಣ್ಯಾಗಮಕ್ಕೆ ಮುನ್ನಮೆ ದಿವದಿಂ
ಸಂಚಕರಂ ಬರ್ಪಂತಿರೆ
ಪಂಚವಿಧಂ ರತ್ನರಾಶಿ ಸುರಿದತ್ತಾಗಳ್ ೨೯

ವ|| ಭಟ್ಟಾರರ್ ಮತ್ತೆ ಪೋಗಿ ಉಜ್ಜಯಂತಗಿರಿಶಿಖರಶಿಲೆಯಮೇಱಿ ಚಾತು ರ್ಮಾಸ ಪ್ರತ್ಯಾಖ್ಯಾನಂಗೊಂಡಿರ್ದರ್ ವರದತ್ತರಾಜನುಂ ವೈರಾಗ್ಯಂ ಪುಟ್ಟಿ ಮಗಂಗೆ ರಾಜ್ಯಮಂ ಕೊಟ್ಟು ಪರಿಗ್ರಹದಿಂ ಪಱಿಪಟ್ಟು ಪೂಜಿಸುಟ್ಟು ಬಂದು ನೇಮಿಭಟ್ಟಾರರಲ್ಲಿ

1 ಯ 2 ಜರಾಂತರಗೊ 3 ಮ 4 ದೆವ 5 ಎನಿ

ಸ[1][ನ್ಯ][1]ತರಾಗಿರ್ದರ್ ನೇಮಿನಾಥರುಂ ಮುನ್ನಂ ಧರ್ಮಧ್ಯಾನೋಕ್ತರಾಗಿ ಬೞಿಯಂ ಶುಕ್ಲಧ್ಯಾನಧಾರಣ ಸಂಪೂರ್ಣತೆಯಿಂ

ಚಂ॥ ಘನತರ ಘಾತಿಕರ್ಮತಮಮೊರ್ಮೊದಲೋಡೆ ಮಹಾನುಭಾವದಿಂ
ವನಮಮ ನೇಮಿನಾಥ ವಿಪುಳೋದಯ ಪರ್ವತದೊಳ್ ವಿನೇಯ ಸ
ಜ್ಜನ ನಿಕರಾಂಬುಜಂಗಳಲರುತ್ತಿರೆ ಕೇವಳಬೋಧ ಸಪ್ಪರ
ದ್ದಿನಕರಬಿಂಬಮಭ್ಯುದಯಮಾದುದಶೇಷ ಜಗತ್ರಯಸ್ತುತಂ ೩೦

ವ॥ ಅಂತು ನೇಮಿನಾಥಂಗೆ ಕೇವಲಜ್ಞಾನೋದಯಮಾದಾಗಳ್ ಚತುರ್ವಿಧ ದೇವನಿಕಾಯಮಾಸನಕಂಪದಿನಱಿದು ವಿಳಾಸದಿಂ ನೆರೆದು ಮೆಱೆದು ಬಂದಾಗಳಿಂದ್ರನ ಬೆಸದಿಂ ಧನದಂ ನಿರ್ಮಿಸಿದ ಸಮವಸರಣ ಭೂಮಿವಳಯಮುಮಂ ಮಣಿಕನಕಮಯಮಾಗಿ ಸಮೆದತ್ತಲ್ಲಿ[2][ದರ್ಧ್ವ][2]ದೇಶ ತ್ರಿಮಂಟಪಾಂತರ ತ್ರಿಪೀಠಾಗ್ರಸ್ಥಿತ ಸರ್ವತೋಭದ್ರ ಮಧ್ಯದೊಳಪ್ಪ ಮಹಾಪ್ರಾತಿಹಾರ್ಯ ಚತುಸ್ತ್ರಿಂಶದತಿಶಯ ಸಮೇತನಾಗಿ ಭಟ್ಟಾರಕರೀರೆ ವರದತ್ತಮುನಿಯುಂ [3][ಸರ್ವ][3]ರ್ಧಿ ಸಂಪನ್ನರಾಗಿ ಪ್ರಥಮಗಣಧರರಾದೊಂ ಸೌಧರ್ಮೇಂದ್ರನುಂ ದ್ವಾದಶಗಣದಿಂ ಬಳಸಿಯುಮಿರ್ದ್ದ ಪೂಜಿಸಿ ಪೊಗೞುತ್ತುಂ ಕೇವಲ ಪೂಜಾಕಲ್ಯಾಣಮನಿಂತು ಮಾಡಿದಂ

ಕಂ॥ ದೇವಾದಿದೇವನಪ್ಪನ
ಕೇವಳಬೋಧೋದಯಮುಮಂ ಪ್ರಸಿದ್ಧೋದಯಮುಮಂ
ದೇವನಿಕಾಯ ಸಮೇತಂ
ದೇವೇಂದ್ರಂ ಮಾಡೆ ನೆಱೆಯೆ ಪೊಗೞ್ದನುಮೊಳನೇ ೩೧

ವ॥ ಅಂತು ನೇಮಿಭಟ್ಟಾರಂ ಕೇವಲಜ್ಞಾನೋದಯದಿಂ ತ್ರಿಭುವನಸ್ವಾಮಿಯಾಗಿರ್ದ್ದ ದೇವತೋದ್ಯಾನಕ್ಕೆ ಸಮವಸರಣಂ ಬಿಜಯಂಗೆಯ್ದುದಂ ವನಪಾಲಕಂ ಪೇೞೆ ನಾರಾಯಣಂ ಕೇಳ್ದು ಪೇೞ್ದನಂಗೆ ತುಷ್ಟಿದಾನಂಗೊಟ್ಟತ್ತಲೇೞಡಿಯಂ ನಡೆದೆಱಗಿ ವಂದನಾಭಕ್ತಿಗೆ ಪೋಪಮೆಂದು ಸಾಱಿಸ್ವೇೞ್ದು ತನ್ನ ಸ್ತ್ರೀಜನಾದಿ ಸಮಸ್ತ ರಾಜಕುಮಾರಾಂತಃಪುರ ಪುರಜನ ಪರಿಜನ ಸಹಿತಮತಿಶಯ ವಿಳಾಸದಿಂ ಪೊಱಮಟ್ಟು ಪೋಗಿ ವಾಹನದಿಂದಿೞಿದು ಸಮವಸರಣ ಭೂಮಿಯನೆಯ್ದಿ ದೇವೇಂದ್ರ ನಿರ್ಮಿತಾತಿಶಯ ವಿಳಾಸಂಗಳಂ ನೋಡುತ್ತಮಂತೆಪೋಗಿ ಪೀಠಾಗ್ರಸ್ಥಿತ ಗಂಧಕುಟಿಪ್ರಾಸಾದಮಂ ಮೂಮೆ ಬಲಗೊಂಡು ಭಟ್ಟಾರಕರಭಿಮುಖದೊಳಿರ್ದ್ದ ಕರಕಮಳಮುಕುಳಾಳಂಕೃತನಾಗಿ ಮೆಯ್ಯನಿಕ್ಕಿ ಪೊಡೆವಟ್ಟಷ್ಟಾಂಗವರ್ಚನೆಯಿಂದರ್ಚಿಸಿ

---

1 ಯ್ಯ 2 ದುದ್ಧ 3 ಸಂಪ

ಯಾಗಿರ್ದ ಕಿಂಕರ್ವಾಣಂಗೆಯ್ದು ನಿಜ್ಜಂ ಮನೋವಾಕ್ಕಾಯದಿಂ ಪುಯ್ಯು ಹಾ ಕಷ್ಟದಿನ್ನೀ ಯಂದದಿಂದಂತೆ ಮತ್ತಂ ಮನುಷ್ಯಾಭರಾಂತರಸ್ಥಾನದಾಗಳಾ ನೆತ್ತರೊಳ್ ಶುಕ್ಲದೊಳ್ ಶ್ಲೇಷ್ಮದೊಳ್ ವಾತದೊಳ್ ಪಿತ್ತದೊಳ್ ಮಾಂಸದೊಳ್ ಶಲ್ಯದೊಳ್ ಮಜ್ಜದೊಳ್ ಜಂತ್ರಿನೊಳ್ ಪುಟ್ಟಿ ಮೇಧ್ಯ ಮಾಗಿರ್ಪುದಕ್ಕಂ ಕೇಂ ಪೊಲ್ಲಿವಾಸೊಲ್ಲಿನಿಂತಾದೊಡಿಂ ಬಲ್ಲೆ ನೆಂದಾಗಳೀಕೇಂದ್ರಿಯಾಕಾರದವರ್ ಪೊಕ್ಕಸಂತರ ಭವಂಗಳೊಳ್ ತೊಟಲ್ದಂತಂತು ಮತ್ತಂ ಮನುಷ್ಯಾಸ್ವಯಂಬೆತ್ತಿನೋ ನೋಡು ಸಯ್ಪಿಂ ಭವತ್ಪಾದಮಂ ಪೊರ್ದಲುಂ ಪೆತ್ತಿನಿಂ ಬರ್ದಿಸಿಸ್ನಂಜೆನಿಂ ಗೆಲ್ದಿ ಸತ್ಯಂತ ಶೌರ್ಯಾನ್ವಿತಾ ಸುಪ್ರಸಿದ್ಧಾ ವಿಶುದ್ಧಾ ಮಹಾ ಶೌರ್ಯೋದಾರಿ ದುರಂತಾಪಹಾರಿ ಲಸಜ್ಜ್ಞಾನಮೂರ್ತಿ ಜಗದೀಶ್ವರಕೀರ್ತಿ ಸುರೇಂದ್ರ ಪ್ರಾರ್ಥ್ಯ ಮುನೀಂದ್ರಾಭಿವಂದ್ಯ ಮದೀಯೋಗ್ರಕರ್ಮಾರಿಯುಂ ಬೇಗದಿಂದಿಕ್ಕಿ ನೀನೆನ್ನನಿಂ ಮುಕ್ತಿಯೊಳ್ ಕೂಡು ದೇವಾ [1][ನಮಾಮಿ][1] ನೇಮಿನಾಥಾ ವಿನೂತಾ ಶರಣ್ಯಂ ಶರಣ್ಯಂ ನಮಸ್ತೇ ನಮಸ್ತೇ

ವ|| ಎಂದಿಂತು ಸ್ತುತಿಯಿಸಿ ಗಣಧರದೇವರಂ ಬಂದಿಸಿ ಮುಂದೆ ಕುಳ್ಳಿರ್ದು ಧರ್ಮಮಂ ಕೇಳ್ದನಂತರದೊಳ್ ರುಗ್ಮಿಣಿಮಹಾದೇವಿ ತನ್ನ ಭವಾಂತರಮಂ ಬೆಸಗೊಳೆ ಭಟ್ಟಾರರಿಂತೆಂದು ಪೇಟ್ದರ್

ಕಂ|| ಶ್ರೀಪುರಮೆಂಬುದು ಪೊಲಲಂ
ಶ್ರೀಪತಿ ದುಷ್ಟಾಂತಕಾಖ್ಯನಾಳುತ್ತಿರೆ ಮ
ತ್ತಾ ಪೊಲಲೊಳಗಧ್ಯಯನಾ
ಧ್ಯಾಪನಪರ ಸೋಮಶರ್ಮನೆಂಬಂ ಪಾರ್ವಂ ೩೨

ವ|| ಆತನ ಪಾರ್ವಂತಿ ಲಕ್ಷ್ಮೀಮತಿಯೆಂಬೊಳತ್ಯಂತ ರೂಪ ಯವ್ವನಾಲಂಕೃತೆ ಯಾಗಿರ್ದಳಾಕೆಯುಮಾ ಪೊಲಲನಾಳ್ವರಸನ ಮಗಳ್ ಶ್ರೀಮತಿಯೆಂಬಳತ್ಯಂತ ಸ್ನೇಹದಿಂ ಕೆಳೆಗೊಂಡತಿಪ್ರೀತಿಯಿಂದಮಾಯೊಂದು ದಿವಸಮಾ ಪಾರ್ವನ ಪೆಂಡತಿಯಪ್ಪ ಲಕ್ಷ್ಮೀ ಮತಿ ನಾಲ್ಕಸಿರ್ವಿರ್ದು ಘನಪ್ರಸಾದನಾಲಂಕೃತೆಯಾಗಿ ತನ್ನ ಮನೆಯ ಮುಂದಿರ್ದ ಪಿರಿಯ ಕನ್ನಡಿಯುಂ ನಿಜರಿಸಿ ನೋಲ್ಪಾಗಳ್ ಚತುರ್ಜ್ಞಾನಮಾಗಾದಿಂ ಪುಗುತಂದವರಂ

*ರಗಳೆ|| ಸುರಭಿಶರ ಸು[2][ರಾ][2]ಭಿಜಾತ ದಹನದೂರರಂ
ಪರೀಷಹತರ್ಜದಿರರಂ (?)

1 ನವನಾ  2 ರ

* ಇದು ಹಸ್ತಪ್ರತಿಯಲ್ಲಿ ಹಿಂದಣ ವಚನದ ಭಾಗವಾಗಿಯೇ ಮುಂದುವರಿದಿದೆ. ಇದಾದ ನಂತರ ಮತ್ತೆ ವಚನವೇ ಇರುವುದರಿಂದಲೂ, ಇದು ರಗಳೆಗೆ ಹೊಂದಿಕೊಳ್ಳುವುದರಿಂದಲೂ ಪಾದಗಳಾಗಿ ವಿಂಗಡಿಸಿ ಕೊಡಲಾಗಿದೆ.

ಬಱಿಗೞ್ಚಿಱ್ಚೊಳಲ್ ಬಪ್ಪುದೆನಿಪ ಕೃಶಶರೀರರುಂ
ತಪಃಕ್ರಿಯಾತಿಶೂರರುಂ
ಮಹಾವ್ರತೈಕವೀರರುಂ
ಕರಮೆ ಜಿಂಜಿರಾಗಿ ಮರುಳ ರೂಪಿನೊಳ್ ಸಮಾನರುಂ
ಕಳಂಕವೃತ್ತಹೀನರುಂ
ದುರಿತವ್ರಜನಾ[1][ಶ][1]ನಕ್ಕೆ ತಾಮತೀವ ಭೀಕರರುಂ
ಚರಿತ್ರಭಾರದಾಮರುಂ
ಸಮಾಧಿಗುಪ್ತ ನಾಮರುಂ (?) ೩೩

ವ|| ಕನ್ನಡಿಯೊಳ್ ಕಂಡು ಬೆರ್ಚಿ ಪೊಲ್ಲದಾಯ್ತೆಂದು ಮಂಗಳವಸದನಂಗೊಂಡು ಬೈಕಂಗುಳಿಯನಿನಿದಪ್ಪುದಸುಯಿದುದಡೆಡೆಮಿಮಾಯದೆ (?) ಬಸಿಱ್ ಬೆನ್ನೊಳ್ ಪತ್ತಿ ಬತ್ತಿ ಬಱಸಲಾದ ದೇಸಿಗನಂ ಕಂಡೆನಿಂತಪ್ಪವರನೇಕಿತ್ತ ಪುಗಲಿತ್ತರೆಂದು ಕಾಪಿನವರಂ [2][ಬಿ][2]ಡಿಸಿ ತಾನುಂ ಪಿರಿದಪ್ಪೇವಮಂ ಕೈಕೊಳ್ಳೆ ಪಾಪಂ ಬೆಂಕೊ[3][ಳ್ಳೆ][3] ಮನೆಯೊಳಗಂ ಪೊಕ್ಕಿರ್ದಳಿರ್ದು ಕೆಲವು ದಿವಸಕ್ಕೆ

ಕಂ|| ಉಂಬರಕುಷ್ಠಂ ಮೂಡಿದೊ
ಡಿಂಬೞಿಯೆ ಪುೞುಂಟೆ ಜಾತು ಕೀೞ್ತೊಡದೆಲ್ಲಂ
[4][ಪಿಂಬ][4]ರಿದು ಪಡುಕೆನಾಱು
ತ್ತಂ ಬೇಗಂ ಪುೞಿದು ಕೊೞೆದು ಸವೆಯುತ್ತಿರ್ದಳ್ ೩೪

ವ|| ಅಂತಿರೆ ಮನೆಯುವರುಮಾಕೆಯಾಣ್ಮನು[ಂ] ನಿಚ್ಚ ನಿಚ್ಚಂ ಪೇಸಿ ಮೊಗಮಂ ಮುಚ್ಚಿ ಕೋಲನೂಂಕಿ ಬರ್ದುಕುತ್ತಮುಪ್ಪುಂಕೆ ಸತ್ತಾ ಮನೆಯೊಳಿಲಿಯಾಗಿ ಪುಟ್ಟಿಯಾಕೆಯಾಣ್ಮನೆ ಬಡಿಯೆ ಸತ್ತು ಮತ್ತಮಲ್ಲಿ ಕೊೞೆವಾವಾಗಿ ಪುಟ್ಟಿದೊಡಾತನೆ ಕಂಡು ಸೊಪ್ಪುಗುಟ್ಟಿದೊಡೆ ಮಿಡುಮಿಡುಕಿ ಸತ್ತು ಬೆಳ್ಗತ್ತಿಯಾಗಿ ಪುಟ್ಟಿದಲ್ಲಿ ನಾಯಿತಿನೆ ಸತ್ತು ತಱುಕಾಱರ ಮನೆಯೊಳ್ ನಾಯಾಗಿ ಮನೆಯೊಳಗೆ ಪಟ್ಟಲ್ಲಿಯೆ ಕಿಚ್ಚುಗೊಳೆ ಸತ್ತು ಜಗುನೆಯ ತಡಿಯೊಳಂಬಿಗರ ಬಸಿಱೊಳ್ ತುಂಬಿಗೆಯೆಂಬ ಪೆಸರಾಗಿ ಪುಟ್ಟಿ ಪೊಲ್ಲನಾರ್ಪುದಕ್ಕೆ ಪೇಸಿಯಲ್ಲಿಯುಮವರಟ್ಟೆ ಕಳೆಯೆ ತೊಱೆಯ ತಡಿಗೆ ಪೋಗಿರ್ದಲ್ಲಿಯುಂ

1 ಥ 2 ಬ 3 ಳೆ 4 ಪಿ

ಕಂ|| ಅಳುಕೆ ನೆಲವಕ್ಕೆ ತನು ಕಿಸು
ಗುಳನಾಜಿಃ ಕನಲ್ದು [1][ಕಕ್ಕಳಂ][1]ಗೊಳೆ ಪಂ[2][ಕಂ
ಗಳೊಳಟ್ಟಿಂ][2] ಮೆಯ್ಯ್ ಸಲೆ ಕು
ಕ್ಕುಳಗುದಿ[ಯಿಂ] ಪೊಂಡೆ ಚಿತ್ರಸಾ ತುಂಬಿಗೆಯಾ ೩೫

ವು|| ಬಿಸಿಲೊಳ್ ನೊಂದು [3][ತ][3]ಗುಳ್ದು ಕೊಳ್ಪ ಮುಱಿಯೊಳ್ ತಾಂ ನಾಂದು ಪೆರ್ಗಾಳಿಯೊಳ್
ಕುಸಿದಾಸತ್ತು ನಿರಾಸೆಯಾಗಿ ಮನದೊಳ್ ಬೇಸತ್ತು ನಿಚ್ಚಂ ಕರಂ
ಪಸಿವೊಟ್ಟಯ್ಸೆ ಕನಲ್ದು ಪೆರ್ಚಿ ಮುಱುಕಂ ಮೆಯ್ಯ್ ಜೋಲ್ದು ಕಣ್ಣೆಟ್ಟು ಚಿಂ
ತಿಸುತಂ ಬರ್ದುಗುವೇಂ ತಗುಳ್ದಲೆವುದೋ ದುಷ್ಕರ್ಮಮಾ ಕಾಂತೆಯಾ ೩೬

ವ|| ಅಂತಿರ್ದಲ್ಲಿ ಪಿಡಿದು ಜಾಲಮುಂ ಬೀಸಿಕೊಂಡು ಮೀನಂ ತಿಂದೊಡಂ ಪಸಿವು ಪೋಗದೆ ಕಣ್ಮಸಂಬುಗುವಾಗೆ ಬರ್ದಿ ಬಾಱುತ್ತಿರೆ[4][ತ್ತಾನುಮಲ್ಲಿಗೆ][4] ಮುನ್ನೆ ಪೇಱ್ದ ಸಮಾಧಿಗುಪ್ತಮುನಿಯರ್ ಬಂದು ನೇಸಱ್ಪಟ್ಟುದೆಂದು ರಾತ್ರಿ ಪ್ರತಿಮಾಯೋಗ ದೊಳ್ ನಿಂದು ಬಂದುದನಾಕೆ ಕಂಡಿವರುಮೆನ್ನಂತೆ ಬಡವರುಂ ದೇಸಿಗರುಮೆಂದು ತನ್ನಳಿಪಿ ನೊಳ್ ಮುಱಿವುಗುಮಂತೆ ಪಱುವ ಪಱುಗುಲಂ ತಂದು ಗಾಳಿಗೆ ಮುಱಿವೊಡ್ಡಿ ತನ್ನ ಕರ್ಮದ ದುಃಖಕ್ಕೆ ತೊವಲೊಂದಂತೆ ತೊವಲೊಂದವರಂ ಕಡಿವ ಗುಂಗುಱುಮುಂ ಚಿಕ್ಕ ಡುಮುಂ ನೋವುತ್ತಿರ್ದವರ್ ಕೆಯ್ಯುನೆತ್ತಿಕೊಂಡಾಗಳೆನ್ನನಧೋಗತಿಯಿಂದಮೆತ್ತಿಮೆಂಬಂತೆ ಕೆಯ್ಯಂ ಮುಗಿದು ಮೆಯ್ಯುನಿಕ್ಕಿದಾಗಳ್ ಭಟ್ಟಾರರವಧಿಜ್ಞಾನ[5][ದಿನವ್ವಾ][5] ನಿನ್ನ ಮುನ್ನಿ ನೇಱಿನೆಯ ಭವವಲಟ್ಟಿನುಱಿಯುಲಾಗ ಬಗೆದನುಮ್ಮನಱಿಯುವೇಱ್ವಿಡೆ ಪೇಱಿನೆ ತೊಟ್ಟನೆ ಜಾತಿಸ್ಮರೆಯಾಗಿ ಕುಳ್ಳಿರ್ದು ಕೆಯ್ಯಂ ಮುಗಿದಿಂತೆಂದಳ್

ಶಾ|| ಮುನ್ನಾಂ ನಿಮ್ಮನೆಳ[6][ಲ್ದಿ ಪೇ][6]ಸಿ ಮಗುಳ್ದಾಂ ಕಾಣುತ್ತೆ ಮೆಯ್ಪೆರ್ಚಿ ಬಂ
ದನ್ನಾನಾವಿಧದಿಂದಮಂದಿನ ಮಹಾಪಾಪಂ ಕರಂ ಪೆರ್ಚಿ ತ
ಳ್ತೆನ್ನಂ ದುರ್ಗತಿಗೊಯ್ಯೆ ನೊಂದೆನಮರ್ವೀ ದುಃಖಾಗ್ನಿಯೊಳ್ ಬೆಂದೆನಾಂ
ಮನ್ನಿಪ್ಪಂ ಮುನಿನಾಥ ನಿಮ್ಮನಱಿಪಂ ಬೆ[7][ಳ್ಕು][7]ತ್ತೆ ನಾಂ ಬೆರ್ಚಿದೆಂ ೩೭

ವ|| ಎನೆ ತುಂಬಿಗೆಗೆ ಪಾಪಂ ಪೋಗೆ ತನುಗೆ ಕರುಣಾರಸಮಾಗೆ ಭಟ್ಟಾರರಿಂ ತೆಂದರ್

1 ಕ್ಕಿಕಿದು ಕೆಕೊಕ್ಕಳ 2 ಕಕ್ಕಳಗಳಲ್ದು 3 ತು 4 ತಾದಿವರಲ್ಲಿಗೆ 5 ವ್ವಾ
6 ಲಿಪಿ 7 ಳು

ಕಂ॥ ಕೊಲ್ಲದೆ ಜೀವಂಗಳನಣ
ಮೊಲ್ಲದೆ ಪುಸಿ ಕಳವು ಶೌಚವೆಂಬಿವನಳಿಪಿಂ
ಗಲ್ಲದೆ ದುರ್ಬುದ್ಧಿಗಳಂ
ಕೆಲ್ಲದೆ ನೆಗಟ್ದಿಂದು ಪುಣ್ಯಮುಕ್ಕುಂ ಮಗಳೇ ೩೮

ದೇವಂ ನಿರ್ದೋಷಿಯೆ ತಪ
ಮಾವೆಡೆಯೊಳಮುಳಿಪದಿರವೆ ಧರ್ಮಂ ಪೆಱದೇ
ನೋವುವುದೆ ಜೀವರಾಶಿಯ
ನೀ ವಿಧಿಯನೆ ನಂಬಿ ನೆಗಱ್ತಿರ್ಪುದು ಮಗಳೇ ೩೯

ತಾನೆಂತು ತನ್ನ ನೋವಿಂ
ಗೆಂತುಮೊಡಂಬಡುವನಲ್ಲನಂತಿರೆ ನೋವಂ
ನಾನಾ ವಿಧದಿಂ ಜೀವಗ
ಳೀನೊಂದಂದದೊಳಮಾಗಿಸಲ್ಗಡ ಮಗಳೇ (?) ೪೦

ಸೊಕ್ಕದಿರರ್ಥದ ಮದದಿಂ
ದುಕ್ಕದಿನಧಿನಾಥನೊತ್ತೆಯಣ್ಮಿನ ಪದದೊಳ್
ಸುಕ್ಕದಿರು ನೆಟ್ಟನೆಂತುಂ
ಸಿಕ್ಕದಿರತಿಮೋಹಪಾಶದೊಳ್ ನೀಂ ಮಗಳೇ ೪೧

ಅಱಲದಿರೆಡರೆಡೆಯೊಳ್ ನೀಂ
ತೊಱಲದಿರಿಂಬಿಲ್ಲದೆಡೆಗೆ ಧರ್ಮಕ್ಕೆಂತುಂ
ಬಱಲದಿರು ತೊಱಕದ ಕಾಲದೊ
ಳೆಱಲದೆ ರತಿಶುದ್ಧ ಚಿತ್ತಮಪ್ಪುದು ಮಗಳೇ ೪೨

ಮಾಯಮನುೞಿದುಂ ಧರ್ಮಾ
ಮ್ನಾಯಮನಣಮುೞಿಯಲಾಪ ಪದದೊಳಮೆಂತುಂ
ನ್ಯಾಯದೊಳೆ ನೆಗಱ್ಗುಂ [1][ಸು][1]ಗ
ತಿಯುಸಿೀಯುಂದದೊಳೆ ಪಡೆದು ಸುಖ[2][ಮಿರು][2] ಮಗಳೇ ೪೩

---

1 ಸಲೆ ಸಂ 2 ದಿನಿರ್ಪೆ

ಸಲಿಪನಿತನೆ ಕೈಕೊಳ್ವುದು
ಸಲಿಸಲ್ ನೆಱೆಯದುದನೆತ್ತಿಕೊಳ್ಳದಿರದ ನೀ
ತೊಲಗಿಸದಿರ್ ಮನದಿಂದಂ
ಸಲಿಸಂತಮನೆಯ್ದೆ ಕೊಂಡ ಗುಣಮಂ ಮಗಳೇ ೪೪

ವ|| ಎಂದು ಧರ್ಮದೋಜೆಯುಂ [1][ಕೇ][1]ಳ್ದು ಶ್ರಾವಕವ್ರತಂಗಳನೇಱಿಸಿ ನೀನಿಂತೆಮ್ಮ ಪೇೞ್ದ ತೆಱದೊಳ್ ವ್ರತೋಪವಾಸಂಗಳೊಳ್ ನೆಗೞ್ದ ನಿನ್ನ ಪಾಪಬಂಧಮುಂ ಮೆಯ್ಯ ದುರ್ಗಂಧಮುಂ ಕಿಡುಗುಮದಱಿಂ ನೀಂ ಪೋಗಿ ರಾಜಗೃಹದೊಳ್ ಸುಂದರಿಯೆಂಬ[2][ಜ್ಜಿ][2]ಕೆಯುಮಂ ಸಾರ್ದಿರ್ದು ಮೆಯ್ಯಂ ತವೆ ಭಾವಿಸುತಿರ್ ನಿನ್ನ ಲಕ್ಷ್ಮೀಮತಿಯಪ್ಪಂದಿನ ಕೆಳದಿ ಶ್ರೀಮತಿಯೆಂಬೊಳರಸುಮಗಳೀಗಳ್ ಜಿನಮಹಾಮಹಿಮೆಯಂ ಮಾಡಿಪಪ್ಪೊಳಾಕೆಯು[3][ಮಾ][3]ರ್ಯಕೀಗಣದೊಡನೆವೋಗಿ ನೋಡಲ್ ಬಡಮೆಯೆಂದು ಭಟ್ಟಾರರ್ ಪೋದುಂಬಗರ [4][ತುಂಬಿ][4]ಗೆಯುಮಂ ಮೆಲ್ಲಮೆಲ್ಲನೆ ರಾಜಗೃಹಕ್ಕೆ ಪೋಗಿ ವಸುಂಧರಾ[5][ಜ್ಜಿ][5]ಕೆಯುಮಂ ಸಾರ್ದಿರ್ದು ಪರೀಷಹದಿಂ ಮೆಯ್ಯಂ ದ[ಂ]ಡಿಸುತ್ತಮಿರ್ದಳಿತ್ತ ಕೆಲವು ದಿವಸದಿಂ ಶ್ರೀಮತಿ ಮಾಡುವಷ್ಟಾಹ್ನಿಕ ಮಹಿಮೆಗೆ ಸಮಾಧಿಗುಪ್ತ ವರದತ್ತ ಭಟ್ಟಾರರ್ ಮೊದಲಾಗೆ ಚಾತುರ್ವರ್ಣ ಶ್ರವಣಸಂಘಮೆಲ್ಲಂ ನೆರೆದಲ್ಲಿ ತುಂಬಿಗೆಯುಮಾ ಕಂತಿಯರೊಡನೆ ಬಂದಿರ್ದಲ್ಲಿ ಕಂತಿಯರೆಂದರ್ ಮಗಳೆ ನಿನಗೆ ಮುನ್ನೊಂದು ಭವದೊಳೀ ಮಹಿಮೆಯಂ ಮಾಡುವೀ ಶ್ರೀಮತಿಯೆ ಕೆಳದಿಯೆಂದು ಭಟ್ಟಾರರ್ವೆಸಸಿದಪ್ಪಡೆ ನಿನ್ನನೊಯ್ದು ಕಾಣಿಸುವೆಮೋ ಪೇೞಿಮೆಂದೊಡೆ ತುಂಬಿ ಕೆಯ್ಯಂ ಮುಗಿದಿಂತೆಂದಳ್

ಉ|| ಅಂದಿನ ಪುಣ್ಯದೊಳ್ ನೃಪತಪೂಜೆಯೊಳಾಂ ಕಳೆಗೊಂಡ ಪೆಂಪಿನೊಂ
ದೊಂದಮುಮಂ ಸುಧರ್ಮದನುಬಂಧಮುಮಂ ಕಿಡೆ ತನ್ಮುನೀಂದ್ರರಂ
ನಿಂದಿಸಿ ದುಃಖದೊಳ್ ಮುಳಿಸಿದಂಗೆನಗಾವಱಿವಾವ ಪೆಂಪದೇ
ನಂದದೊಳೀಂ ಮೊಗಂಬೆರಸು ಕಾಣ್ಬೆನೊ ಸನ್ನುತ ರಾಜಪುತ್ರಿಯಂ ೪೫

ವ|| ಎಂದಮಮ ನಿರ್ವೇಗಮಾಗಿ ಮೆಯ್ಮುಮ್ಮಾಯುಮೊಡನೆ ತಪ್ಪುದಿನ್ನೆನಗೆ ಸಂನ್ಯಸನ ಪ್ರತ್ಯಾಖ್ಯಾನಮಂ ದಯೆಗೆಯ್ಯಿಮೆಂದೊಡಂಬಡಿಸಿಕೊಂಡೊಂದು ಗುಹೆಯಂ ಪೊಕ್ಕು ನೋನುತ್ತಿರ್ದಾಕಡಂ ಸಮಾಧಿಗುಪ್ತಮುನೀಂದ್ರರ್ ಕೇಳ್ದು ಶ್ರೀಮತಿಗಱಿಯೆ ಪೇೞ್ದೊಡಗೊಂಡುಬಂದಾ ಗುಹೆಯಂ ಪೊಕ್ಕಾಗಳಾಕೆ ಭಟ್ಟಾರಕರ್ಗೆಱಗಿ ಪೊಡೆವಟ್ಟಿರ್ದಲ್ಲಿ ಇರ್ಬರುಮೊರ್ವರೊರ್ವರಂ ನೋಡಿ ಮನ್ಮವಿಕ್ಷಮಱಿವಿನೊಳ್ ಸೈರಿಸಿ ಪಾಪದ ಫಲವಿಂತುಟು ನೋಡೆಂದು ನುಡಿದಿಂತಪ್ಪ ಗುರುಗಳ್ಗವಿಂತಪ್ಪ ಧರ್ಮಮುಮಂ

1 ಪೇ 2 ಜ್ಞ 3 ಮನಾ 4 ಪಱಿ 5 ಜ್ಞ

ಪಡಪೆಯೊಳ್ಳಿತ್ತಾಯಸ್ತ್ರಂದರ್ಜನೆಯಂ ತರಿಸಿ ಭಟ್ಟಾರರ ಮುಂದಿರ್ದಾರಾಧನೆಯ ಪುಸ್ತಕ ಮನರ್ಜಿಸಿ ಕಿಱಿದು ಪೊತ್ತು ಭಟ್ಟಾರರ ವಕ್ಖಣೆಯಂ ಕೇಳ್ದು ಪೇೞ್ಪುವರ್ಗೆ ಪರಿಯಪ್ಪಿ ಗೆಯ್ಯಲಜ್ಜಿ[ಕೆ]ಯರ್ಕಳಂ ಪೇಟ್ದುವರ್ ಪೋದಮಂತು ಅಂಬಿಗನ ತುಂಬಿಗೆ ಮಹಾ ಮಹಿಮೆಯೊಳ್ ನೋಂತು ಸಮಾಧಿ ಕೂಡಿ ಮುಡಿಪಿ ದೇವಲೋಕದೊಳ್ ಪಳಿತ್ರೋಪ ಮಾಯುಷ್ಯಸ್ಥಿತಿಯೊಳಾಗಿ ಮಣಿಚೂಳೆಯೆಂಬ ದೇವಿಯಾಗಿ ಪುಟ್ಟಿ ದಿವ್ಯಸುಖ ಮನುಂಡಲ್ಲಿಂ ಬಂದು ವಿದರ್ಭರಾಜಂಗೆ ಪುಟ್ಟಿಬಂದೀಗಳೀ ಚಕ್ರಿಗೆ ರುಗ್ಮಿಣಿಮಹಾದೇವಿ ಯಾಗಿರ್ದಿರಬ್ಬ ನೀವೆಂದು ಭಟ್ಟಾರರ್ ಪೇೞೆ ಕೇಳ್ದು ಬೞಿಯಂ ಬಲದೇವಂ ಕೆಯ್ಯಂ ಮುಗಿದಿಂತೆಂದಂ

ಕಂ॥ ಸುರಪತಿ ಮಾಡಿದನಂಬುಧಿ
ಪರಿವೇಷ್ಟಿತ ಪುರಮನಾಳ್ವ ನೃಪನುಂ ಚಕ್ರೇ
ಶ್ವರ ನಿನ್ನಿಂದಂ ನಿಲ್ಕುಮೊ
ಪರವಶದಿಂ ನಿಲ್ಕುಮೋ ಮುನೀಶ್ವರ ಬೆಸಸಿಂ ೪೬

ವ॥ ಎನೆ ಭಟ್ಟಾರರಿಂತೆಂದ[1][ರ್][1] ಪನ್ನೆರಡು ವರ್ಷದಂದಿಂಗೆ ಕಳ್ಳಿಂದಂ ದೀಪಾ ಯನ ಕುಮಾರನಿಂದಂ ದ್ವಾರಾವತಿ ಬೆಂದು ಕಿಡುಗುಂ ನೀನುಂ ಚಕ್ರಿಯುಮಿರ್ವರುಂ ಬರ್ದುಂಕಿ ಪೊಱಮಡುವಿರ್ ಜರತ್ಕುಮಾರ[ಂ] ನಚ್ಚುವಂಬಿನೊಳಾತನೆಸೆಯೆ ಚಕ್ರಿ ಸಾಗುಮೆನೆ ಬಲದೇವಂ ಬೆಕ್ಕಸಮಾಗಿ ನಿರ್ವೇಗಂ ಪುಟ್ಟಿಯುಂ ಸಹೋದರ ಸ್ನೇಹದೊಳಂ ಚಕ್ರಿಯುಂ ಮುನ್ನಮುಗಲಲಾಱದೆ ಮಾಣ್ದಂ ಸಮುದ್ರವಿಜಯನುಂ ವಸುದೇವಾದಿ ಸೋದರರುಂ ಪೆಱರುಂ ವಯೋವೃದ್ಧ ರಾಜೇಶ್ವರರೊಡನಾಗಳೆ ದೀಕ್ಷೆಯಂ ಕೈಕೊಂಡರ್ ಬಲದೇವ ವಾಸುದೇವಾದಿಗಳ್ ಭಟ್ಟಾರರಂ ಬಂದಿಸಿ ಸಮವಸೃತಿಯಂ ಪೊಱಮಟ್ಟು ಬಂದು ಪೊೞಲಂ ಪೊಕ್ಕಿರ್ದಲ್ಲಿ ದೀಪಾಯನಕುಮಾರನಿಂಗುಮೆನ್ನಿಂ ಕಿಡುಗುಮಪ್ಪೊಡಾ ಸದನಾಗಲೀಯೆನೆಂದು ಪರಿಚ್ಛೇದಿಸಿ ತಪಂಬಟ್ಟು ಪೊೞಲಿಂ ಪೊಱಮಟ್ಟು ಪೋದಂ ಮುನಿವಚನಮಂ ಪುಸಿಮಾಡುವೆನೆಂದು ಜರತ್ಕುಮಾರಂ ತನ್ನ ನಚ್ಚುವಂಬೆಲ್ಲಮನೆಲ್ಲರ್ಗಂ ತೋಱೆ ನೋಡೆ ನೋಡೆ ಸಮುದ್ರದೊಳಗೀಡಾಡಿ ತಾನುಂ ಪೊಱಮಟ್ಟು ಪೋಗಿ ಮಹಾರಣ್ಯಮಂ ಪೊಕ್ಕಂ ಪ್ರತ್ಯಕ್ಷದೊಳಂತು ಸರ್ವಜ್ಞಂ ಪೇೞ್ದುದಂ ವಿಷ್ಣು ಮೋಹನೀಯಶಕ್ತಿಯ ವಶದಿಂದ ಮಱೆದು ಸಂಸಾರಮೋಹದೊಳ್ ಪೊೞಲೊಳುಳ್ಳ ಕಳ್ಳೆಲ್ಲಮಂ ನಿರವಶೇಷಮೊಯ್ದು ಡವಿಯೊಳಂ ಬೆಟ್ಟುಗಳೊಳಂ ಪೊಯ್ಸಿ

1 ರು

ಶಾ॥ ಆದೇಶಸ್ಥಿತಿ ಕಾರಣಂಗಳನಡುರ್ತಾದೇಶದಿಂ ತೂಳ್ದು ಪೇ
ಬ್ದಾದೇಶಂ ಪುಸಿಯಕ್ಕುಮೆಂಬ ಬಗೆಯಿಂ ಚಕ್ರಾಯುಧಂ ಚಿತ್ತಸಂ
ಹ್ಲಾದಂ ಕೈಮಿಗೆ ಬಂಧುವರ್ಗ ಸಹಿತಂ ಸಂಸಾರಮಂ ನಿತ್ಯಮೆಂ
ದಾದಂ ಸಂತಸದಿಂದಮಿರ್ದನಖಿಳಶ್ರೀಕಾಮಿನೀವಲ್ಲಭಂ ೪೭

ಗದ್ಯ॥ ಇದರ್ಹತ್ಸರ್ವಜ್ಞ ಪಾದಪದ್ಮ ವಿರಾಜಿತೋತ್ತಮಾಂಗ ಶ್ರೀ ಬಂಧುವರ್ಮ ನಿರ್ಮಿತಮಪ್ಪ ಹರಿವಂಶಾಭ್ಯುದಯದೊಳ್ ನೇಮಿಕುಮಾರ ಪರಿನಿಃಕ್ರಮಣ ವರ್ಣನಂ

**ತ್ರಯೋದಶಾಶ್ವಾಸಂ**

# ಚತುರ್ದಶಾಶ್ವಾಸಂ

ಕಂ॥ ಅಂತು ಮುರವೈರಿ ಪಿರಿದುಂ
ಸಂತಸದಿಂದಿರೆ ಮನೋಜ[1][ನುಂ][1] ಹೃದ್ವಚನಂ
ಭ್ರಾಂತೇನೊ ತಪ್ಪದೆಂದಘ
ಸಂತತಿಯುಂ ಕೆಡಿಪೆನೆಂಬ ಬಗೆಯಿಂದಾಗಳ್ ೧

ವ॥ ಒರ್ವನೆ ರುಗ್ಮಿಣಿಮಹಾದೇವಿಯಲ್ಲಿಗೆ ಬರ್ಪಾಗಳ್ ಗೆಂಟಱಿಂದೊಳಮರಸಿ ಕಂಡೆಂದಿನಂತಲ್ಲದಿಂದೊರ್ವನೆ ಬಂದಪ್ಪನೆನೆಯೆನೆ ಬಂದು ಪೊಡೆಮಟ್ಟನಂ ಏಱಲಿಕ್ಕಿಸಿದೊಡೆ ಮಹಾಪ್ರಸಾದಮೆಂದು ಕುಳ್ಳಿರ್ದೊನನರಸಿಯಿಂತೆಂದಳ್

ಕಂ॥ ಕೊಡೆಯಿಲ್ಲದಡಪಮಿಲ್ಲದೆ
ಮಡದಿಯರೊಡನಪ್ಪರಿಲ್ಲದಾಳಿಲ್ಲದೆ ನೀಂ
ನಡೆದೊರ್ವನೆ ಬಂದೆಯಿದೇಂ
ತೊ[2][ಡಕಿತೆ][2] ಮನೆವಾರ್ತೆ ಮುಳಿಪಂಪೊ ಪೇೞ್ ಮಗನೇ ೨

ವ॥ ಎನೆ ಕಂದರ್ಪಂ ಕೆಯ್ಯಂ ಮುಗಿದು ದೇವಿ ಬಿನ್ನಪಂ ಜೀವನೆಲ್ಲಿಯುಮೊಂದೆಯೆಂದುಮೊರ್ವನೆಂಬುದನಱಿಪುವಂತೊರ್ವನೆ ಬಂದೆನಾಱುಂ ಬೆಳ್ಗೊಡೆಯ ನಡುವೆ ನಿಮಗಂ ಚಕ್ರಿಗಂ ಪುಟ್ಟಿದೆನಪ್ಪುದಱಿಂ ಮನೆವಾರ್ತೆಯ ತೊಡಂಕಿಲ್ಲ ಸಂಸಾರದ ತೊಡಂಕುಂಟು ನಿಮ್ಮ ಪ್ರಸಾದದಿಂದೆನಗೆ ವಿದ್ಯಾಬಲಮುಂ ತೋಳ್ವಲ[ಮು]ಮುಂಟಪ್ಪುದಱಿಂ ಮಾನಸರ್ ಮು[3][ಳಿ][3]ಯಿಸುವರಿಲ್ಲೆಂಟುಂ ಕರ್ಮಕ್ಕೆ ಮುಳಿದೆಂ ನಿಮ್ಮಡಿಯುಂ ಬೀೞ್ಕೊಂಡೆಂ ತಪಕ್ಕೆವೋಗಲ್ ಬಂದೆನಿಂ ಪೆಱದಂ ನುಡಿಮೋ[ಡೊ]ಡಂಬಡೆನೆಂದು ಕೆಯ್ಯಂ ಮೊಸಲೊಳಿಟ್ಟೆಱಗಿದಾಗಳಾದಂತೆಂಬುದೇನೆಂದು ಮೂರ್ಛೆವೋಗಿ ಬಿರ್ದಳನೆಂತಾನುಂ ಮೂರ್ಛೆಯಿಂದೆಚ್ಚಱಿಸಿ ನೀವಿಂತೆನ್ನಗಲ್ಕೆಗಾಱದವರ್ ನೆಱೆಯೆ ಬಾೞಿಸಲಾರ್ಪುದೆಂತುಂ ನೆಱೆದಿರಿಲ್ಲ ಕೇಡುಂ ಸಾವುಮಾಗಿರ್ಪುದಲ್ತು ನಿಮ್ಮ ಕೂರ್ಮೆಗಮೆನ್ನಱಿವಿಂಗಂ ಮೆಚ್ಚಿಟ್ಟೊಡೆ

1 ನ 2 ಡಂಕಿತನೆನೆ 3 ಳಿ

ಕಂ॥ ಕರಿಯುಡಸಿ ಬಿರ್ದ ಕೂಪಾಂ
ತರದೊಳು ಪಿಡಿದಿರ್ದ ಬಿರಗಿಲ್ಲಿ ಕಡಿಯು
ತ್ತಿರೆ ಫಣಿ ಬಾಯ್ದೆಱೆದಿರೆ ಜೇಂ
ದೊರೆಕೊಳೆ ಬಾಯುಂತು ಸಿಂಪ ಜೇಡಸಂತವೊಲಪ್ಪೆಂ (?) ೩

ವ॥ ಅವಱಿಂ ಕಿಡಲೆಂದಿರ್ದ ಮಾನಸನಾಣಿಕ್ಕ ಕೇಡಿಲ್ಲದ ಮುಕ್ತಿಶ್ರೀಯುಂ ಕಂಡಿರ್ಪುದುಂ ನಾಳ್ತೆ ಮಣಿಯುಸೊಡೆವುದುಂ ಕೀಲಿಂಗೆ ದೇಗುಲಮನಟಿವುದುಮಿದಾವುದು ಬುದ್ಧಿಯೆನೆ ಮಗುಬ್ದಂ ರುಗ್ಮಿಣಿಮಹಾದೇವಿಯುಮಿಂತೆಂದಳ್

ಕಂ॥ ಬಾಳಕ್ರೀಡೆಯೊಳಪ್ಪೊಡ
ಮಾಳೋಕಿಸುವನಿತು ಪುಣ್ಯಮಿಲ್ಲದೆ ಪೋದೆಂ
ಲೀಲೆಯ ದಿನಸದೊಳದುಮಂ
ಪಾಲಿಸಿ ನೀಂ ತಪಕೆವೋದಡೆಂತಾಂ ಬಾೞ್ವೆಂ ೪

ವ॥ ಎಂದೊಡಂಗಜನಿಂತೆಂದಂ ಲೀಲೆಯ ತಪದಿಂದನುಪ್ಪುದನಱಿದುಂ ಮ....
....ಚಿಕಸುಮಂ ಮೇಗಣ ಲೀಲೆಯುಮಂ ಕಿಡದೆ ನೆಗೞಲಾಗದಲ್ತೆ ಲೆಯುವ್ವಾ

ಕಂ॥ ನೀಮಿನಿಸಂ ಬಗೆಯರೆ ಲ
ಕ್ಷ್ಮೀಮತಿಯಪ್ಪಂದಿನೊಂದು ಮುನಿವರರಂ ಕಂ
ಡೇವಯ್ಸಿ ಬಯ್ದ ಫಲದಿಂ
ಭೀಮಾದ್ಭ........ದೊಳಗೆ ಮುೞುಗಿದಿರಲ್ತೇ ೫

ಒಂದಿರುಳು ಪಱಿದ ಬಲೆಯುಮ
ನೊಂದಟಿಪಱುಗುಲಮನೊಡ್ಡಿ ಮಱಿಸಾಡಿ ಜಗ
ದ್ವಂದಿತ ಮುನಿಯುಂ ಕಾದಿ
ರ್ದಂದಿನ ಫಲಮ[ತ್ತಿ][1] ತಾಯೆ ಮಱೆದಿರೆ ಪೇೞಿಂ ೬

ವ॥ ಎಂಬುದಂ ಕೇಳುತ್ತಿ ತಿಸತ್ತು ತನಗಂ ವೈರಾಗ್ಯಂ ಪುಟ್ಟೆ ನೀನಱಿದೆಯೆಂದಿರ್ದನಮುಪಧಿಪೇವಿ ಜಲ್ಲ[ಂ]ಬೀಱಿದ ಕಣ್ ಪೊಳೆಯೆ ಮೊಗದ ರಸಭಾವಂ ತುಳುಂಕೆ ನಿಱಿಲ ಸೋಮರ್ುಡಿ ಬಿಸ್ಸೊಕಲೆಯೆ ಬಿಗಿದೊಗೆದ ಮೊಲೆಗಳಲುಗೆ ಅಸಿದಪ್ಪ ನಡು ನಡುಗೆ ಜಘನಭರದಿಂ ಕಾ[ಲ್ವ][2]ಡದಡಿಸಿ ಮೇಲುದು ತೊಲಗೆ ಹಾರಂ ಮಿಳಿರೆ

1 ತ್ತಿ 2 ಲ್ತ

ನೂಲ ತೊಂಗಲ್ ಫಲ್ಕು ಫಳ್ಕೆನೆ ಪರಿತಂದು ಕಾಮದೇವನಿದಿರೊಳ್ ನಿಂದು ಕೇಳೆಂದಿಂತೆಂದಳ್

ಮ॥ ಎಡೆಯೊಳ್ ಕೂಡಿದ ನಣ್ಪೆ ಮುನ್ನಮೆ ಬಸಿಱ್ಪೂಸಿರ್ದು ಕಾ[1][ಪಿಂದಮಿ][1]
ತ್ತೊಡೆ [2][ಮುಂದುಂ][2] ಪೊರೆಕೊಳ್ಳದಿ[3][ರ್ದುದನೆ][3] ಕೊಂಡೈ ಪುಣ್ಯ
ದಿಂದಾ[ದೊ]ಡಂ
ಬಡಿನೊಳ್ ಕೂರ್ತನೆ ತಕ್ತ ತೋಳ್ ಸಡಿಲೆ ಸಾವಪ್ಪಾಕೆಯಿನ್ನೀಂ ತಪಂ
ಬಡೆ ಬದ್ದಿಪ್ಪೆನೆ ಮನ್ಮಥಾ ಬಗೆದು ನೋಡೆನ್ನಂ ಕೊಲಲ್ ತಕ್ಕುದೇ ೭

ಕಂ॥ ಕೊಲ್ಲದ ತಪಮದು ದಿಟದಿಂ
ಸಲ್ಲದು ನಿನಗಿಂತು ಕೊಂದ ಪೆಣ್ಗೊಲೆ ಮುನ್ನಂ
ಪೊಲ್ಲದುಮಂದಪಜಂ[4][ದಿ
ನ್ನಿ][4]ಲ್ಲ ಫಲಪ್ರಾಪ್ತಿ ನಿನ್ನ ತಪದೊಳ್ ಕಾಮಾ ೮

ವ॥ ಎನೆ ಕಾಮದೇವನಿಂತೆಂದಂ

ಉ॥ ಪೆಂಡತಿ ರಂಡೆಯಾಗಿ ಕಡುದುಃಖಮನೆಯ್ದುಗುಮೆಂಬ ಕೂರ್ಮೆಯಿಂ
ಭಂಡಣಕಳ್ಕಿ ಮಾಣ್ಗುಮೆ ಭಟಂ ಮತರಗ್ಗಳದಾಸ್ಪದಂ ಮನಂ
ಗೊಂಡರ ಕೂಟಮೆಂಬ ತೊಡರಂ ಬಗೆದುದ್ಧತ ಕರ್ಮವೈರಿಯುಂ
ದಂಡಿಸಲಾಪುದೊಂದು ತಪಮೆಂಬುದನೊಲ್ಲದೆ ಮಾಣ್ದು ನಿಲ್ಕುಮೇ ೯

ವ॥ ಎಂಬಿನಂ ರತಿ ಬಂದಿಂತೆಂದಳ್

ಕಂ॥ ಚಕ್ರಧರನಾಂತ ಧರಣೀ
ಚಕ್ರದ ಪಿರಿದಪ್ಪ ಭರಮನಾರಾಂಪರೊ [5][ಪೇ
ಟೀ][5] ಕ್ರಮದಿಂದಳ್ಕಿ ತಪೋ
ನುಕ್ರಮದೊಳ್ ನೆಗಱ್ದುಡಱುಗುಮಿಾ ಹರಿವಂಶಂ ೧೦

ವ॥ ಎಂಬುದಂ ಕೇಳ್ದಂಗಜನಾಕೆಗಿಂತೆಂದಂ

ಕಂ॥ ಪಿರಿದಪ್ಪ ರಾಜ್ಯಭರದಿಂ
ಪಿರಿಯವು ದುಃಖ[ಂ]ಗಳೆಯ್ದಿ ನವೆವೆಂ ತುದಿಯೊಳ್
ಹರಿವಂಶದಱುವದೇವುದೊ
ಪರಮಪದಪ್ರಾಪ್ತಿಯಱಿಯದಿರ್ದೊಡೆ ಸಾಲ್ಗುಂ ೧೧

1 ಒಪ್ಪಿ 2 ಸ್ನೆಯು ಮುಂದೊಂ 3 ದುರ್... 4 ದಿ 5 ಪೇಳ್ನೀನೀ

ವ॥ ಎನೆ ಜೀಗದೀತಂ ಮೋಹಕ್ಕೆ ಕ್ರೋಡರ್ಪನಲ್ಲೆಂದಿಂತೆಂದಳ್

ಪೃಥ್ವಿ॥ ರಸಾಯನಸಮಮಣ್ಣ ¹[ನೀಸರುಚಿಯುಪ್ಪ]¹ ಆಹಾರಮಂ
ಪ್ರಸನ್ನವನವಾಸಿಯಾಗಿ ಮಗುಳ್ದಿಪ್ಪೆ ಕಾಂತಾರದೊಳ್
ಪ್ರಶಸ್ತ ಮೃದುಶಯ್ಯೆಯೊಳ್ ಪವಡಿಪ್ಪೆ ತಱಂಬೊತ್ತೆ ನೀಂ
ಸೈರಿಪ್ಪೆ ನಿನಗೆ ಮೆಯ್ಯೊಡಂಬಡುಗುಮೇ ತಪೋಮಾರ್ಗದೊಳ್ (?) ೧೨

ಕಂ॥ ಮುತ್ತಿನ ಮಂಟಪದೊಳಗಿ
ಪೃತ್ತಮ ಕಲುನೆಲೆಯೊಳಿರ್ದು ಸೈರಿಸಲಾರ್ಪಾ
ಮತ್ತಂ ಮಾಡದೊಳಿಪ್ಪಿರ
ಪೆತ್ತಂ ಮುಱಿಚ ಬಿಡದೆ ಸುಱಿಯೆ ಮುರವೊದಲಿರ್ಪಾ ೧೩

ನೆಲಮನೆಯೊಳೋಪಳೊಡನ
ಯ್ಕಲದೆವಸಂ ಸುಖದಿನಿರ್ಪೆಯಂಗಜತಪದಿಂ
ದೊಲೆದೊರ್ಪೆಯೆ ಬಯಲೆಡೆಗಳೊ
ಳಲಸದೆ ನೀಂ ಬೇಟ್ದ ವಾಸದೊಳ್ ಸೈರಿಸುವ ೧೪

ವ॥ ಪ್ರಾಣವಲ್ಲಭೆಯರ್ ನಿನ್ನ ಕುಂತಳಮನಿನಿಸು ತೆಗೆಯೆ ಸೈರಿಸ್ಪೆ ತಲೆಯೆಲ್ಲಮಂ ಪಱಿಯೆ ಸೈರಿಸಲಾರ್ಪಾ ತಂಬುಲಂಗೊಂಡಲ್ಲದೆ ತಂಬುಲಮಂಗುಳದಾ ತಾನೆಯುಪವಾಸಕ್ಕೆ ಮೆಯ್ಯನೊಡ್ಡುವಾ ನಿಚ್ಚಂ ಕತ್ತುರಿಯೊಳ್ ತಿಮಿರ್ದು ನಿಮಿವಾತನೆ ²[ವಿಷ್ಟ]²ದ ಮಲಮಂ ಪೊತ್ತಿರ್ಪಾ ಪಲ್ಲ[ಂ] ನಿಚ್ಚ ಮಲಿವಾ ಜೆನ್ನಿಗನ್ನೆ ಕಿಣಿಪೆರಸಿರ್ಪಾ ದಿವ್ಯಾಂಬರಕರ್ತಿಗನ್ನೆ ದಿಗಂಬರನಪ್ಪಾ ನೆಲನಂ ಮೆಟ್ಟಿಯುಱಿಯದ ಗರ್ಭಸುಖಿಯ್ಯೆ ನಡೆಯಲಱಿವಾ ಭೋಗಕ್ಕಲ್ಲದೆ ಯೋಗಕ್ಕಾರ್ಪಾ ಪರಮೇಶ್ವರಂಗೆ ನಿನಗೆ ತಪಮೆಂಬುದೇನಲ್ಲದೆಯುಂ ರತಿಯುಂ ಕಾಮನುಮಿರ್ಪರೆಂದುಪಮೆ ಮಾಡಿ ಲೋಕಮತೀತಾನಾಗತ ವರ್ತಮಾನ ಕಾಲದೊಳಂ ನುಡಿಯುತ್ತಿರ್ಪುದಂತು ನೀನಗಲ್ಪೆಯೆಂಬುದೇನೆನೆ ಕಂದರ್ಪನೆಂಗುಂ

ಕಂ॥ ಅಂತೆ ತಪಃಕ್ರಿಯೆ ಸೈರಿಸು
ವಂತಿಳಿದಲ್ತೆನಗಮಿಂತಿದುಂ ಪೊಲ್ಲದುದ
ಲ್ತಿಂತಿವು ಸಲ್ಲದುದೆಂದಿದ
ನಿಂತಾ ನೆಗಟ್ದಿಪ್ಪೆನುಂತಗಲ್ಪೆನೆ ನಿನ್ನಂ ೧೫

---

1 ನೀಂ ರೂಕ್ಷಮುಪ್ಪ 2 ಯೆಷ್ಟಿ

ಮ॥ ತೆಱೆಯೆಂತಂತೆ ಸುರೇಂದ್ರಚಾಪದ ಬೆಡಂಗೆಂತಂತೆ ಪ್ರೀತಿರ್ದ ಪೂ
ಮರನೆಂತಂತೆ ಮುಗಿಲ್ಗಳುನ್ನತಿಕೆ ತಾನೆಂತಂತೆ ಮಂಜೊಡ್ಡಿಕೊಂ
ಡಿರವೆಂತಂತೆ ತಟಿಲ್ಲತಾಕೃತಿಯ ಬೆಳ್ಪೆಂತಂತೆ ನಿಮ್ಮಿರ್ದಮೊಂ
ದಿರವುಂ ರಾಜ್ಯದಳುರ್ಕೆವೆತ್ತ ಬರವುಂ ಸಂಯೋಗಮುಂ ಭೋಗಮುಂ ೧೬

ವ॥ ಇಂತಪ್ಪುದನಱಿದು ಮುಂತಪ್ಪುದಂ ಮಱೆದೊಡಂತಪ್ಪುದು ಬುದ್ಧಿ ನಿನಗಮೇನಱಿವಿಲ್ಲಾ ಬಗೆದು ನೋಡಾ ಚತುರ್ಗತಿಯೊಳ್ ಪುಗದೆ ನೆಗೞ್ವುದೆನುತ್ತಿರೆ ವಿದರ್ಭೆ ಕಣ್ಣನೀರುಮುೞಲುಮೊಗೆಯೆ ನಡೆಯುಮೆರ್ದೆಯುಮೊಡನಡಗೆ ನುಡಿಯುಂ ಕಾಲುಮೊಡನೆ ಡಡವಡಿಸೆ ಸೂಲತೊಂಗಲುಂ ಮೆಯ್ಯುಮೊಡನಲುಗೆ ಮುಡಿಯುಮೊಲೆದು ಮೊಡನೆ ಬೞಲೆ ಉದಯರಾಗಮುಮೊಡನೆ ಸಡಿಲೆ ಪರಿತಂದೆಲೆ ಪಾಱಕಾಱಾ ಕೇಳೆಂ ದಿಂತೆಂದಳ್

ಕಂ॥ ಮಾದೆಗನೆನೆಯುಂ ಮಿಗೆ ಮೆ
ಚ್ಚಾದುದುಮಂ ಬೞಿಯನಳಿಪಿ ಬರೆ ನಾ[1][ನುಂ][1] ನೀಂ
ಪೋದುದುಮಂ ನಿನ್ನಾದುದ
ನಾದುದುಮಂ ಬಗೆದು ಕರುಣಿಸೆಲೆ ಕುಸುಮಶರಾ ೧೭

ಪೆಱಪೆಱದೇನೆಂಬೆನೊಯ್ಯಱೆ
ಮಾಱಿಸಿದೈ ಬೀವ ನಿನ್ನ ಗೆಲ[2][ವುಮೊಲವುಮಂ][2]
ತೋಱಿಸಿದೆಯಲ್ಲಿ ಮಿಳಿಯಂ
ಮಾಱಿಸಿದೈ ಬಗೆದು ನೋಡೆ ತಕ್ಕುದೆ ನೆಗೞಲ್ ೧೮

ಸಾಮಾನ್ಯ[3][ಮೆ ಬಗೆಯಲ್ಕೆಂ][3]
ಬೀ ಮಾನನ ಮಗ[4][ಳೆ][4] ನಾಡೆ ಕೊಂಡಾಡುವುದ
ಕ್ಕೇ[5][ವೆಂ][5]ದು ಗೊಡ್ಡಮಾಡಿದ
ಕಾಮುಕರಂ ಸಂದುದೆನ್ನೊಳದು ನಂಬುಗೆಯಾ ೧೯

ನೀನೆನ್ನನೆಂದೆ[6][ಯೇನೇ
ನಾ][6]ನುಂ ಬಗೆಯಲ್ಲದಂತೆ ನೆಗೞ್ದಂ ಬಿಸುಡ
ಲ್ಕೇನಿದು ತಕ್ಕುದೆ ಚಕ್ರಿಯ
ಸೂನುಮೆಯಾನಪ್ಪೊಡಬಲೆಯೆಂ ನಂಬಿದೆನುಂ ೨೦

---

1 ಡಂ 2 ಮ ಬುದೆನ್ನೊಲಮ 3 ಬಗೆವೆನೆಂ 4 ಳಂದು 5 ನೆಂ 6 ಯೆ...

ವ॥ ಅಂತು ಕಾಲಂ ಪೊಲ್ಲದೆನೆ ಕೊಕ್ಕರಿಸಪಾಡಿದುದಂ ಬಂಚಿಸಿ ಪಿಂದೊಯ್ದು ದಕ್ಕಂ ಅಱಲಂ ಪುಟ್ಟಿದೆ ರಾಗಂ ಪುಟ್ಟಿದುದಕ್ಕಂ ಪೊಱಲೊಳಂ ಸಪತಿಯುರ ಮನೆಯೊಳಂ ಬೀಸಂ ಮಾಱಿಂಪಟ್ಟಿದೊಡೆ ಆಗಳತಿಯಾದುದುಮಂ ಇನಿಸೊಂದೊಂದೆ ಸಾಲದೆ ಕರುಣಿಸಲ್ ಕಾಮದೇವಾ ನೀನೆನ್ನಂ ಬಿಸುಟೞಲಿಸಿದ ಪಾಪಮಂ ನೀಗಲಲ್ಲದೆ ಮುನ್ನ ಕಟ್ಟಿರ್ದ ಕರ್ಮಂಗಳಂ ನೀಗುಪಸಿತಾವುದು ತಪಮಿಾ ಭ್ರಾಂತಂ ಬಿಸುಡೆಂದಡೆ ಕಾಮ ದೇವನಿಂತೆಂದಂ

ಉ॥ ನಿನ್ನೊಲವಿಂಗೆ ಮೆಚ್ಚಿ ತೊಡರ್ದಿನ್ನೆಗಮಿರ್ದಡೆ ಸಾಲ್ಗುಮಿಂ ತಗು
ಳ್ದಿನ್ನಸವುಂಕಿ ದುರ್ಗತಿಯೊಳಿರ್ಕುವ ಕರ್ಮಸಮೂಹಮೂಲವಿ
ಚ್ಛಿನ್ನತೆ ಮಾಳ್ಪುದೊಂದು ತಪಮುಂಟದನಾಂ ನೆಗೞ್ದಪ್ಪೆನೇನುಮಿ
ನ್ನೆನ್ನದಿರುಬ್ಬೆಗಂಬಡದಿರಂಬುಜಸನ್ನಿಭಲೋಲಲೋಚನೇ ೨೧

ವ॥ ಎಂಬಿನಂ ನಾರಾಯಣಂ ಬಂದೊಡೆ ಕಂಡೆಱಗಿ ದೇವರಲ್ಲಿಗಾಂ ಬಂದು ಬಿನ್ನಪಂಗೆಯ್ದು ಬೀೞ್ಕೊಂಡು ಪೋಗಲ್ ಬಗೆದಿರ್ದೆನನ್ನೆಗಂ ನೀಮೆೞ್ತಂದಿರೆನ್ನಂ ಬಿಡಿಮೆಂದು ಕೆಯ್ಯಂ ಮುಗಿದೆಱಗಿದಾಗಳ್ ಕಾಮದೇವಂಗೆ ನಾರಾಯಣನಿಂತೆಂದಂ

ಕಂ॥ ನೀಂ ತಪಮಂ ಕೈಕೊಳೆ ಪೆಱ
ರಾಂತಪರಾರೆನ್ನ ರಾಜ್ಯಭಾರಮನಿಂತೀ
ಭ್ರಾಂತನುಱಿ ನೇಮಿಯೆಂದುದ
ನೆಂತುಂ ಪುಸಿಮಾಡಿ ಕಳಿಪೆನಪ್ಪೆನಜೀಯಾ ೨೨

ವ॥ ಎನೆ ಕಾಮದೇವನಿಂತೆಂದಂ

ಕಂ॥ ನೇಮಿಯ ನುಡಿ ಪುಸಿಯಾಗದು
ಭೀಮ ಮಹಾಕರ್ಮವಿಜಯಿಯಾಗಲ್ ಬಗೆದೀ
ಕಾಮನ ಬಗೆ ಪೆಱದಾಗದು
ನೀಮೋತಿಂತರಸುಗೆಯ್ವುದಂಬುಜನಾಭಾ ೨೩

ವ॥ ಎನೆ ಚಕ್ರವರ್ತಿಯೆಂಗುಂ ದಾಡೆಯಿಲ್ಲದ ಸಿಂಗಮುಂ ಕೋಡಿಲ್ಲದಾನೆಯುಂ ತಾವರೆಯಿಲ್ಲದ ಕೊಳನುಂ ಚಂದ್ರನಿಲ್ಲದಿರುಳುಂ ಕಣ್ಣಿಲ್ಲದ ಮೊಗಮುಂ ನೀನಿಲ್ಲದರಸು ಮೊಪ್ಪದು ಕರ್ಚಿದ ಕೆಯ್ಯಂ ಬಿಸುಟು ಪೊಳೆವ ಜಾೞಿಗೆ ಪಱಿಪಡೆಯುಂ ಕಟ್ಟ ನರಿಯು ಕಥೆಯಂತೀಗಳಿನ ರಾಜ್ಯಶ್ರೀಯುಂ ಬಿಸುಟು ಮೋಗಣ ಗತಿಗಾಟಿಸಿದಪರ್ ನೇದೆಗೀಡುವರೆಂ ದೊಡೆ ಮನ್ಮಥನಿಂತೆಂದಂ

ಕಂ॥ ಶ್ರೀ[1][ಯ]1ದು ಮುಂಗೆಯ್ದ ತಪ
ಶ್ರೀಯಿಂ ದೊರೆಕೊಂಡುದಪ್ಪುದೀ ಗೆಯ್ದ ತಪ
ಶ್ರೀಯಿಂ[2][ದ]2ನಂಗೆ ಮುಕ್ತಿ
ಶ್ರೀಯೊಳ್ ಕೂಡಿರ್ಪೊಡೆಂತು ಪೊಲ್ಲದೆ ಚಕ್ರೀ ೨೪

ವ॥ ನಿನ್ನಿಂದಮಗ್ಗಳಮಪ್ಪ ಬಲ್ಲಾಳಾದನುಮಿಲ್ಲ ಅಂತಪ್ಪ ನೀನುಮೆಲ್ಲಂ ರಾಜ್ಯದ ಕೇಡುಮಂ ಕಾಯಲ್ ಬಾರದುದಂ ನಿಮಗೆಱಿಯಲಕ್ಕುಮಾಂ ಬೆರ್ಚಿದೆನೆಂದುಮಿರ್ಪಿನಲ್ಲಿ ನೆಂದೊಡೆಲ್ಲರುಂ ಬೆಕ್ಕಸಮಾಗಿರ್ದರನ್ನೆಗಂ ಶಂಭುಕುಮಾರಂ ಬಂದೆಲ್ಲರ್ಗಮೆಱಗಿ ಕೆಯ್ಯಂ ಮುಗಿದೆನ್ನಣ್ಣನಾದುದನಾನುಮಾದೆನೆನ್ನುಮಂ ಬಿಡಿಸೆಂದಾಗಳ್ ರುಗ್ಮಿಣೀ[3][ಮಹಾದೇವಿಯಾಗಿ]3 ಸ್ತ್ರೀಜನಮುಂ ಹಾಹಾಕ್ರಂದನಂಗಳ್ ನೆಗೞೆ ದುಃಖಂಗೆಯ್ದಂ ಬೞಿಯ ಮೆಂತುಮೊಡಂಬಡಿಸಲಾಱದೆ ತನಗಂ ದುರ್ಮೋಹಮುಂಟದೆಱಿಂ ಹರಿ ತನ್ನ ಮಾಡಕ್ಕೆ ಪ್ದ ಪೋದಂ ಬಲದೇವಂ ವೈರಾಗ್ಯಮುಂಟಾಗಿಯುಮೊಡವುಟ್ಟಿದನನಗಲಲಾಱದಾತನು[ಂ] ತನ್ನ ಮಾಡಕ್ಕೆ ಪೋದನಾಗಳ್ ಸಮುದ್ರವಿಜಯಾದಿಗಳೊಂಬದಿಂಬರುಂ ಸತ್ಯಭಾಮೆ ರುಗ್ಮಿಣಿ ಮೊದಲಾಗೆ ಮಹಾದೇವಿಯರ್ಕಳುಂ ಕೆಲರ್ ಬಲದೇವಸುತರ್ಕಳುಂ ಜೆಸು ಕಾಮದೇವನುಂ ಶಂಭುಕುಮಾರನುಂ ಅನಿರುದ್ಧಕುಮಾರನುಂ ಮೊದಲಾಗೆ ಕುಮಾರವರ್ಗಮು ಮರಸಿಯರ್ಕಳುಂ [illegible] ಮಹಾವಿಭೂತಿಯಿಂ ಪೊೞಲಿಂ ಪೊಱಮಟ್ಟು ಉಜ್ಜಯಂತಗಿರಿಗೆಕ್ಕೆ ಪೋಗಿ ನೇಮಿಭಟ್ಟಾರರ ಸಮವಸರಣಮಂ ಪೊಕ್ಕು ಬಲಗೊಂಡು ಬಂದಿಸಿ ದೀಕ್ಷೆಯಂ ಬೇಡಿ ವರದತ್ತಗಣಧರಸ್ವಾಮಿಯ ಗಣದಲ್ಲಿ ದೀಕ್ಷೆಗೊಂಡುಗ್ರೋಗ್ರಮಾಗೆ ತಪಂಗೆಯ್ಯುತಿರ್ದರಿತ್ತ ನಾರಾಯಣನಾ ಪೋದೊಡಮೇನಾನೀ ರಾಜ್ಯಮಂ ಬಿಸುಡೆನೆಂಬ ದುರ್ಮೋಹದೊಳರಸುಗೆಯ್ಯುತಿರೆ

ಕಂ॥ ದ್ವಾದಶವರ್ಷಂ ನೆರೆದ
ತ್ತಾದೇಶಂ ತಪ್ಪಿತೆಂದು ಮಿಕ್ಕಧಿ[4][ಕರ]4 ಮಾ
[5][ಸಾ]5ದಳವಿಯಱಿಯದೆ ಮಗು
ೞ್ದಂ ದೀಪಾಯನಮುನೀಶ್ವರಂ ಪುಗುತಂದಂ ೨೫

ವ॥ ಅಂತು ದೀಪಾಯನಮುನೀಂದ್ರಂ ದ್ವಾರಾವತಿಯಂ ಪೊಕ್ಕೊಂದು ದಿವಸಂ ಪುರಬಹಿರ್ಭಾಗಾಂತರದೊಳ್ ಕಲ್ನೆಲೆ ನಿಂದೊಡಂದಿನ ದಿವಸಂ ರಾಜಕುಮಾರರ್ ಪಲರುಂ ನೆರೆದಾನೆವೇಂಟೆಗೆ ಪೋಗಿ ಮಗುೞ್ವಾಗಳವರೊಡನೆ ಪೋದ ಪೊಲೆಸೆರವಿ ನೀರಡಿಸಿ ಬೞಲ್ದು ದೊಣೆಗಳೊಳ್ ಮುನ್ನೆ ಪೊಯ್ದಿಂದಿನ ಕಳ್ ಬಳೆದು ತಿಳಿದಿರ್ದೊಡದಂ ನೀರೆಗೆತ್ತು ಕುಡಿದು ಸೊಕ್ಕಿ ಪಾಡುತ್ತುಮಾಡುತ್ತುಂ ಬಂದಾ ಕಲ್ನೆಲೆ ನಿಂದ ಮುನಿಯಂ ಕಂಡು

1 ಯೊಂಬು 2 ದೆ 3 ಮ……ಗಿ 4 ಕತರ 5 ಸ

ಮುನಿದು ಗುಂಡುಗಳಂ ಕೊಂಡಿಟ್ಟು ತಣಿಯದೆ ಕಲ್ಲುಗಳನಡಕಿತಂದೊಟ್ಟೆ ಕೊರಳ್ವರಂ ಪೂಳ್ದು ದಡದವನೇಱಿ ತಲೆಯಂ ರುಂಜೆಯುರ್ದಿ ಬಾಜಿಸಿ ಪಾಡುತ್ತಿರೆ ಮುನಿಗೆ ಮುನಿಸು ಮಾಯುಷ್ಯಾವಸಾನಮುಮೊಡನಾಗೆ ಪೊಲೆಯರ್ ಪತ್ತುವಿಟ್ಟು ಪೋದ ಬೞಿಯಮು ಪರ್ಗಾ ಕಲ್ಗಲೆ ನಿಂದುದುಂ ಕಲುಗೊಂಡಿಟ್ಟುದುಂ ಕಲ್ಲನೊಟ್ಟಿದುದುಮಧಿಕಮಾಗೆ ಕಂಠ ಗತಪ್ರಾಣಮಾಗಿರ್ದುದುಂ ಬಲದೇವ ವಾಸುದೇವರ್ಕಳ್ ಕೇಳ್ದು ಪರಿತಂದು ಕಲ್ಲೆಲ್ಲಮಂ ಕಳೆದು ಕುಳ್ಳಿರಿಸಿ ಕ್ಷಮಿಯಿಸಿಮೆಂದು ಕೆಯ್ಯಂ ಮುಗಿದೆಱಗಿದೊಡೆ ಕಂಡಾ ಮುನಿ ಯಿರ್ವರುಮುೞಿವಿರೆಂದೆರಡುಂ ಬೆರಲಂ ತೋಱಿದೊಡೆ ಮಗುೞ್ದು ಪೋಗಿ ಶಾಂತಿಗೆಯ್ಯು ತ್ತಿರ್ದರಂತು ದೀಪಾಯನರ್ ಸತ್ತು ಭವನವಾಸಿಲೋಕದೊಳಗ್ನಿಕುಮಾರನಾಗಿ ಪುಟ್ಟಿ ತನ್ನೊಳೊಗೆದ ವಿಭಂಗಜ್ಞಾನದಿಂ ಮುನ್ನಿನ ಭವದೊಳ್ ದ್ವಾರಾವತಿಯ ಪೊಲೆಯರ ಗೆಯ್ದೋಗಮಱಿತು ಬಂದಪ....... ಮುನ್ನಮುೞಿವೆನೆಂಬಂತೆ

ಮಂದಾನಿಲ ರಗಳೆ||

ಪೊಲೆಗೇರಿಯೊಳುರಿ ನೆಗೆದೋದವೆ ಕರಂ
ಪಲವೊಂದಿಯೆ ಬೆಂದವು ಗೃಹನಿಕರಂ
ಬಳಸಿರ್ದ ವಿಜಾತಿ ಗೃಹಾಂತರದೊಳ್
ಅಳುರ್ದೋದವಿದುದುರಿ ಗಗನಾಂತರದೊಳ್
ಮಂದುರಮನೆ ಉರಿದವು ಉಳ್ಳನಿತುಂ
ಬೆಂದವು ಗಜಶಾಲೆಗಳೆನಿತನಿತುಂ
ಕರಮುರಿದವು ಸೂಳೆಯರೊಳ್ಮನೆಗಳ್
ಒಡನೊಗೆದುರಿದವು ಪರದರ ಮನೆಗಳ್
ಕಡು ನೆಗೆದುರಿದವು ಪಾರ್ವರ ಮನೆಗಳ್
ಅಂತಃಪುರವರ ಗೃಹತತಿಯೊಳಗಂ
ಸಂತತಮುಬ್ಬಿದ ಉರಿಗಳ ಬಳಗಂ
ಮಣಿಮಾಡಂ ಮುರಿದವಭೇದ್ಯಕರಂ
ದಿಣರಲ್ ಕರಮುರಿದುದು ಚೋದ್ಯಕರಂ
ಎತ್ತಣದುರಿ ನೋಡಿಮದೆಂಬಿನೆಗಂ
[1][ಯಿತ್ತ][1]ೞಿದವ್ವಾವೋವೆಂಬಿನೆಗಂ
ಪುಗಲೆಡೆ ನಮಗಿಲ್ಲೆಂದರ್ ಕೆಲಬರ್
ಕಡುನಲ್ಲ[2][ರ][2]ಪ್ಪಿ ಮಡಿದರ್ ಕೆಲಬರ್
ಮಡಿವಾತ್ಮಜರಂ ಕೆಲಬರ್ ಪಿಡಿದರ್

1 ಯಿಂತ 2 ರನ

ಕಾವವರ್ಗಳನಱಿಸಿ ಕೆಲರ್ ತಿಱಿದರ್
ದೇವಾಲಯದತ್ತ ಕೆಲ[1][ರ್][1] ಪರಿದರ್
ಪರಿಯುತ್ತೆ ಕೆಲರ್ ವೀರಾಸನದಿಂ
ದಿರುತಂ ಮಡಿದರ್ ಸಂನ್ಯಾಸನದಿಂ
ಪೊಱಮಡುವರುಮಂ ಶಿಖಿ ಪಿಡಿದಳುರ್ವುತ್ತಂ
ನೆಱಪಲು ಮುನಿಸಂಚಲದಿಂ ಕೆಳಲಂ (?)
ಬಗೆಬಗೆದಾ ಮುನಿಸಿನೊಳೊಗೆದಬಲ್ದಂ
ಧಗಧಗಿಸುವಿನಂ ಸುಟ್ಟಂ ಪೊೞಲಂ ೨೬

ಕಂ॥ ದ್ವಾರಾವತಿ ಬೇಯೆ ಕರಂ
ನೀರ ಹಳಾಯುಧನಡುರ್ತು ತಳಿದೊಡೆ ಪೊಕ್ಕಾ
ನೀರುರಿಯೆಯೆಣ್ಣೆಯಂತಿರೆ
ಭೋರೆಂದಳುರ್ದುದು ಕ್ಷಾಯಲಾರ್ಪರುಮೊಳರೇ ೨೭

ವ॥ ಅದಂ ಕಂಡು ಜೀವ್ರದಿದು ಖೇಚರಾಸುರ ಜನಿತಮೊಯೆಂದು ಮುಳಿದು ದಿವ್ಯರಕ್ಷಿತಮಪ್ಪ ಚಕ್ರಮಂ ನೆನೆದೊಡೆ ಮುನ್ನಱದಿಂಗಳ್ ಪುಣ್ಯಕ್ಷಯಮಾದೊಡಾಯುಧಶಾಲೆಯೊಳಿರ್ದ ಚಕ್ರರತ್ನಂ ಮೊದಲಾಗಿ ಪತ್ತುವಿಟ್ಟು ಪೋದುದನಱದಿನ್ನಿರಲಾಗ ಬನ್ನಿಮೆಂದಂತಪ್ಪ ಚಕ್ರವರ್ತಿ ಬಲದೇವನುಂ ತಾನುಮಿರ್ಬರೆ ಪೊೞಲಿಂ ಪೊಱಮ[2][ಟ್ಟು ತೆಂಕ][2]ಮೊಗದೆ ನಡೆದು ಪಯಣಂ ಬರುತ್ತಂ

ಮ॥ ಜ್ವಲನಂ ಕಾಯ್ದೊಡೆ ಕೂರ್ತು ತನ್ನ ನೆಲನುಂ ಕಾಯ್ದಂತೆ ಕಾಯ್ದಿರ್ದಳಾ
ತಳಮುಂ ಮೆಟ್ಟೆ ಪುಗುಳ್ಗಳಾಗೆ ಪುಗುಳಂ ಕಲ್ಲೊತ್ತೆ ನೊಂದಾಗಳ
ಗ್ಗಳಮಿಂ ನೋಯ್ಪನೆ ನಾನುಮೆಂಬ ತೆಱದಿಂದೆತ್ತಂ ಬಿಸಿಲ್ ಕಾಯೆ ಸೂ
ಡೊಳಱರ್ದಂತೆ ಬೞಲ್ದೆಬಲ್ದು ನಡೆದರ್ ಶ್ರೀಮಂತರಂತಿರ್ವರುಂ ೨೮

ಕಂ॥ ಬಲಗರ್ವಿತಪ್ರತಾಪಿಗ
ಳಲಂಘ್ಯರಪ್ರತಿಮರಖಿಳ ಭೂಭೃತ್ಪ್ರಭುಗಳ್
ಬಲದೇವ ವಾಸುದೇವರ್
ನೆಲೆಗೆಟ್ಟೇಕಾಕಿಯಾದರುೞದವರಳವೇ ೨೯

ವ॥ ಅಂತಿರ್ಬರುಂ ಶ್ರಮಂಬಟ್ಟು ದೆಸೆಗೆಟ್ಟು ಪೋಗಿ ಮೂಱು ಜಾವಮಪ್ಪಿನಂ ನಡೆದು ಪಥಪರಿಶ್ರಮಮನಾಱಿಸಲೆಂದೊಂದು ಮರದಡಿಯೊಳಿರ್ದಲ್ಲಿ ಬಲದೇವಸ್ವಾಮಿ

---

1 ವರ್ 2 ಟ್ಟು...

ತಮ್ಮನ ಪಸಿವುಮನಱಿದಿರ್ದ್ದಿರಿಮಾಸಿತ್ತತ್ತಲಱಿಸಿ ನಮಗಾಹಾರಮಂ ತಂದಪ್ಪೆನೆಂದಲ್ಲಿಂದ ಮಿದ್ದು ಕಿಱಿದಂತರಮಂ ಪೋಗಿ ಪಿರಿದಪ್ಪಾರವೆಯುಂ ಕರ್ಗಿ ತೋರ್ಪ ಬನಮುಂ ಕಂಡೆಯ್ದೆ ಪೋಗಿಯೊರ್ವನಂ ಕಂಡೀ ಪೊೞಲಾವುದಿದನಾರಾಳ್ವರೆನೆ ವನಕುಸುಮಮೆಂಬುದು ಪೊೞಲಿದಂ ದುರ್ಯೋಧನನ ಮಮ್ಮಂ ಕಯುವರನೆಂಬನಾಳ್ವನೆಂದೊಡಂತೆಯೆಂದು ಪೋಗಿ ಪೊೞಲಂ ಪೊಕ್ಕೊಡಲ್ಲಿ ದ್ವಾರಾವತಿ ಬೆಂದಪುದೆಂಬ ಪಡೆಮಾತಂ ಕೇಳ್ದು ಗುಡಿಗಟ್ಟಿಯುಂಬೆಯಾಡುವುದಂ ನೋಡುತ್ತಮಂತೆ ಪೊಕ್ಕು ನಾಗದತ್ತನೆಂಬೊರ್ವ ಪರದನಂ ಕಂಡಾತನಂಗಡಿಯೊಳ್ ಕುಳ್ಳಿರ್ದು ತಾಂ ಪರಮೇಶ್ವರನಪ್ಪುದಱಿಂ ಮಾಱಿನ ಲೆಕ್ಕಮಂ ಬಗೆಯದೆ ತನ್ನ ಕಿವಿಯ ಕುಂಡಲಂಗಳಂ ಕಳೆದಿವಂ ಕೊಂಡು ಕಿಱಿದುಂ ಕೂೞಂ ಕಲಸಿಯಟ್ಟಿಮೆಂದು ಕೊಟ್ಟೊಡೆ ಪರದಂ ಕೊಂಡು ಮನೆಗೆ ಪರಿತಂದು ಕೂೞಂ ಬಾಗವೇೞ್ದು ಮತ್ತಮಾ ಕುಂಡಳಂಗಳಂ ನೋಡಿ

ಕಂ॥ ಇವರದಿವು ರತ್ನಕುಂಡಳ
ಮಿವಗೊಡೆಯಂ ದಿವ್ಯಮಾನವಂ ಮತ್ತದಱಿಂ
ದಿವನವನಿಪತಿಗೆ ತೋಱದೊ
ಡವಿನಯಮೆಂದೊಸೆದು ಪರಿದನರಮನೆಗಾಗಳ್ ೩೦

ವ॥ ಪರಿದರಸನಂ ಕಂಡೊರ್ವಂ ಧನಳಾಂಗಂ ಭದ್ರಾಕಾರಂ ದೇವನಕ್ಕೆ ಮಾನವನಕ್ಕೆ ಬಂದೆನ್ನಂಗಡಿಯೊಳ್ ಕುಳ್ಳಿರ್ದಿವಂ ಕೂೞ್ಗೆ ಕೊಟ್ಟೊಡೆ ಕೊಂಡುಬಂದೆನೆಂದು ರತ್ನಕುಂಡಳಂಗಳಂ ತೋಱಿದೊಡೆ ನೋಡಿ ಕಯುವರಂ ಬೆರ್ಚ್ಚಂಬಟ್ಟು ಪೆಱನಲ್ಲನಾತಂ ಬಲದೇವನಿವಾತನ ಕುಂಡಳಮೆನ್ನ ಪಗೆ ನಮನಿನಿಸಿತೆಂದು ಪರದನಂ ಪೋಗವೇೞ್ದು ಬೇಗಂ ತನ್ನಾಳೆಲ್ಲಮಂ ಬರವೇೞ್ದು ನಡೆದಾತನ ಮೇಗೊಳ್ವ ಬಟ್ಟೆಯೊಳೊಡ್ಡಿ ನಿಂದನನ್ನೆಗಮಾ ಪರದಂ ಕೂೞಂ ಕಲಸಿ ಪಲವುಂ ಬಾಡುಮೆರಸಿ ಕೂೞನೊಂದು ವಳಿಂಬದ ಕಪ್ಪಟದೊಳ್ ಕಟ್ಟಿಕೊಟ್ಟಡೆ ಕೊಂಡು ಬರ್ಪನಂ ಕಯುವರನಾಳೆಲ್ಲಮೊಱಿ ತಾಗುವುದಂ ಕಂಡು ನಾರಾಯಣನಂ ಕಾವ ದಿವ್ಯದೇವತೆಗಳೊಳರಪ್ಪೊಡಿವನನ್ನೆಗಂ ಪಿಡಿದಿರಿಮೆಂದಾ ಕೆಯ್ಯ ಕೂೞನಾಕಾಶಕ್ಕೀಡಾಡಿದೊಡಾತನ ಪುಣ್ಯಕ್ಷಯದೊಳಾರುಂ ಪಿಡಿಯದಿರೆ ನೆಲಕ್ಕೆ ಪರೆ ಮತ್ತಂ ಕೊಂಡಿನ್ನೆನಗಪ್ಪ ಪುಣ್ಯದೇವತೆಗಳೊಳರಪ್ಪಡೆ ಪಿಡಿಯಿಮೆಂದಾಕಾಶಕ್ಕೆ ಮಗುೞ್ದೀಡಾಡಿದೊಡೆ ಪಿಡಿದಿರ್ದರಾಗಳತ್ತಿತ್ತ ನೋಡಿ ಪಿರಿದೊಂದು ಗಜಸ್ತಂಭಮಂ ಕಿೞ್ತುಕೊಂಡು

ಪೃಥ್ವಿ॥
ಅಡುರ್ತು ಪರಿದತ್ತಮಿತ್ತಮರಿಸೇನೆಯಂ ಕೋಪದಿಂ
ಸಿಡಿಲ್ವೊಡೆ[ದ] ಮಾಱ್ಕೆಯಂತೆ ಪೊಡೆದಾಗಳಾ ಸಾಧನಂ
ಪಡಲ್ವಡೆ ಮನುಷ್ಯನಲ್ಲನಿವನೆಂ[1][ದುಮಾ ಘಾ][1]ತಿಯಿಂ
ಪೊಡರ್ಪುಡುಗಿ ಬೇಗಮೊಡ್ಡಳಿದು ಪೋಗಲಿರ್ದರ್ ಪಲ[2][ರ್][2] ೩೧

ಕಂ॥ ಏಱಿಸಿ ಪುಗದಿರಿಮಿ ಬ
ಲ್ಲಾಳ ತ[3][ಱಿದ ದನುಜನಂದಮುದು][3]ವೆಂದಾಗಳ್
ಜೋಳಂಗೊಂಡವರೆಲ್ಲರ್
[4][ಮೇಳಂ][4]ಗೊಂಡರೆ ತಗುಳ್ದ ಭರವಶದಿಂದಂ ೩೨

ಪೃಥ್ವಿ॥
ಇವಂ ನೆಗೞ್ದ ಚಕ್ರಿಯಗ್ರಜನ ಮಾಱ್ಕೆಯಿಂದಲ್ತೆ ನಾ
ಮಿವಂಗೆ ಮುಳಿದಿಂ[5][ತುಮೆಂತು][5]ಮವನಲ್ಲನೀ ರೂಪದಿಂ
ಜವಂ ಮಸಗಿ ತಾನೆ ಬಂದನಿವನಾ ಭವಂಗೆಟ್ಟನೀ
ಭವಂಗಿದಿ[ನಿ]ಸೆಂದು ತಾಂ ಕಯುವರಂ ಬಿಗುರ್ತೋಡಿದಂ ೩೩

ವ॥ ಅಗಳ್ ಬಲದೇವನಿದಿರ್ಚುವರಂ ಕಾಣದೆ ಮಗುೞ್ದು ತನ್ನೀಡಾಡಿದಲ್ಲಿಗೆ ಕೆಯ್ಯಂ ನೀಡಿ ಕೂಟಂ ಕೊಂಡು ಬಂದ ಬಟ್ಟೆಯಂ ತಗುಳ್ದು ಕಿಱಿದಾನುಮಂತರದೊಳ್ ಕಂಬಮನೀಡಾಡಿ ತಮ್ಮನಿರ್ದೆಡೆಯುಮನೆಯ್ದೆ ವಂದಾತನಂ ಕರೆದು ನೀರ ತಡಿಯ ಪಿರಿಯ ಕಲ್ಲ ಮೇಲೆ ಕುಳ್ಳಿರಿಸಿ ಪಿರಿಯಮಪ್ಪೆಲೆಗಳಂ [6][ಕೊಂ][6]ಡು ಪಾಸಿ ಬಡಿಸಿದೊಡೆ ಹರಿಯುಣುತ್ತಿರೆ ತಾನಾಗಳೀ ಸುಣ್ಣಳಿಯುಣಸಂ ಕಂಡು ಮನ್ಯುಕೆತ್ತು ಸೈರಿಸದಿನಿಸುಂ ಕೆಟ್ಟುಪೋಗಿ

ಕಂ॥ ಅಕ್ಕಟ ಚಕ್ರೀಧರೆಯೊಳ್
ಮಿಕ್ಕ ಮಹಾಪುರುಷ ನೆಗೞ್ದ ಬಲ್ಲಾಳ್ಬೆ ಭೈ
ಕ್ಷಕ್ಕೀ ಗುಱಿಯಾದ[7][ರ್][7] ಬಗಿ
ತಕ್ಕೆ ಸಮಂ ಬಾರದಂತುಟಾದುದೆ ನಿಮಗಂ ೩೪

ವ॥ ಭರತಾರ್ಧ ಶ್ರೀಖಂಡಧರಾತಳಮುಮಂ ನಾಲ್ವತ್ತೆರಡು ಲಕ್ಕೆ ಭದ್ರಹಸ್ತಿಯುಮಂ ಒಂಬತ್ತು ಕೋಟಿ ಜಾತ್ಯಂಶಗ[8][ಳುಮಂ][8] ನಾಲ್ವತ್ತೆಣ್ಬಾಸಿರಮರಸಿಯು

1 ದು... 2 ಬರ್ 3 ಱಿದನುಜನೆಂದ 4 ಮೋಸಂ 5 ತು 6 ಕಂ 7 ರುಂ 8 ಳುಂ

[1][ರುಮಂ][1] ಚಕ್ರಂ ಮೊದಲಾಗೇೞುಂ ಮಹಾರತ್ನಂಗ[2][ಳುಮಂ][2] ನಾಲ್ಕುವರೆ ನಿಧಿಗಳುಮಂ ಪದಿನಾಱುಸಾಸಿರ್ವರ್ ಮಕುಟಬದ್ಧರುಮಂ ಪದಿನಾಱುಸಾಸಿರ್ವರ್ ಮೆಯ್ಗಾಪಿನ ಗಣಬದ್ಧದೇವರುಮಂ ಪದಿನೆಂಟುಕೋಟಿ ಯಾದವರುಮಂ ಮಿತ್ರಬಲಮುಮುೞಿಯೆ ಪನ್ನೊಂದಕ್ಷೋಹಿಣಿ ನಿಜತಂತ್ರಮುಮನೊಡೆಯನಾಗಿರ್ದುಮೆಲ್ಲಂ ನೆಲೆಗೆಟ್ಟೊರ್ವನೆಯೆ ಬಂದಡವಿಯಂ ಪುಗುವಂತಾಯ್ತು ಕರುಮಾಡದೊಳಗಿರ್ಪ ನಿನಗೆ ಮರದಡಿಯ[3][ಲಿ][3]ರ್ಪಂತಾಯ್ತು ಮೃದುಶಯ್ಯೆಯೊಳ್ ಪಡುವಾತಗೆ ತಱುಬಿನೊಳ್ ಪಡುವನಿತಾಯ್ತು ಚಾಮರದ ಗಾಳಿಯಲ್ಲದಱಿಯದೊಂಗೆ ಸುಟ್ಟುರೆಗಾಳಿ ಕೊಳ್ವಂತಾಯ್ತು ಸಿಂಹಾಸನದ ಮೇಲೆಯಿರ್ಪ ನಿನಗೆ ಕಲ್ಲ ಮೇಗಿರ್ಪುದಾಯ್ತು ಮಹಾಸ್ಥಾಯಿಕೆಯೊಳಿರ್ಪಾತಂಗೆ ಮೃಗದ ನಡುವಿರ್ಪಂತಾಯ್ತು ವೀಣಾದಿ ಕಿನ್ನರ ಗೇಯಂಗಳಂ ಕೇಳ್ವ ನಿನಗೆ ಬಳ್ಳುಗಳ ಸರಂಗೇಳ್ವಂತಾಯ್ತು ದಿವ್ಯಾಹಾರಮಂ ಮಣಿಕನಕಮಯಮಪ್ಪ ಪರಿಯಾಣದೊಳುಣ್ಬ ನಿನಗೆ ಸೀರೆಯೊಳ್ ಕಟ್ಟಿ ತಂದ ಕೂೞಂ ಕಲ್ಲಮೇಲಿಕ್ಕಿಯುಣ್ಬಂತಾಯ್ತು ಹಾ ಹಾ ನಿನಗಮೆಲ್ಲಮಿನಿತಾಯ್ತೆಂದೊಡುೞಿದಂಗೆ ಅಳಾಪಂಗೆಯ್ದು ಬಂದಾತನ ಕೈಗೆಱೆದು ಬೞಿಯಂ ತಾನುಮುಂಡು ತನ್ನ ಪೋದ ಬಂದ ವೃತ್ತಾಂತಮೆಲ್ಲಮಂ ಪೇೞ್ದಡಂತಪ್ಪೊಡಿಲ್ಲಿ ಕೂರದರ ಸಮೀಪದೊಳಿರ್ಪುದು ಕಜ್ಜಮಲ್ಲಂ ನಾಡತ್ತ ಪೋಪಂ ಬನ್ನಿಮೆಂದು ನಾರಾಯಣನೆರ್ದು ನಡೆಯೆ ಬಲದೇವಸ್ವಾಮಿಯುಂ ಬೞಿಯಂ ನಡೆದು ಪಯಣಂಬೋಗಿ ಕೌಶಂಬಿಯೆಂಬ ಪೆರಡವಿಯ ನಡುವೆ ಪೊಕ್ಕಲ್ಲಿಯೊಂದೆರಡುದಿನದೊಳ್

ಕಂ|| ಲೀಲೋನ್ನತಿಯಂ ಪಚ್ಚೆಯ
ಶೈಲಮನನುಕರಿಸಿ ನೆೞಲ ತಣ್ಪಿಂ ಹಿಮವ
ತ್ಕಾ[4][ಲ][4]ಮನೇಳಿಸಿ ಕುಳಿರ್ಕೊಳು
ವಾಲಮನತಿಶಯ ವಿಳಾಸಮಂ ಕಂಡವರ್ಗಳ್ ೩೫

ವ|| ನೆೞಲ್ಗೆ ಮಂದು ವಿಶ್ರಮಿಸಿರ್ಪಮೆಂದಿರ್ವರುಮಲ್ಲಿ ಪಟ್ಟಿರ್ದು ಕಿಱಿದು ಬೇಗದಿಂ ಪರಿಗೆ ಪರಿಶ್ರಮಮಡಂಗೆ ನೀರಡಸಿಪೆಂ ಬೇಗಂ ನೀರಂ ತನ್ನಿಮೆಂದಾಗಳಂತೆಗೆಯ್ವೆನೆಂದು ಬಲದೇವಂ ತನ್ನ ತಂದ ರತ್ನಗಂಬಳಿಯಂ ಪೊದೆಯಿಸಿ ಪೋಗಿ ತೊೞಲ್ದಱಸುವಾಗಳ್ ಕೊಳರ್ವಕ್ಕಿಗಳ ಕಳಕಳಧ್ವನಿಯ ಪೆಂಪು ನೀರ್ವೂಗಳ ತಣ್ಗಂಪು ತೀಡಿದೊಡಾದೆಸೆಯತ್ತ ಪೋಗಿ ಸೊಗಯಿಸಿಪ ಕೊಳದೊಳೆ ಪಾದಪ್ರಕ್ಷಾಳನಾನಂತರಮರ್ಹತ್ ಸರ್ವಜ್ಞರ್ಗೆ ನಮಸ್ಕಾರಂಗೆಯ್ದು ಪಿರಿದೊಂದು ತಾವರೆಯೆಲೆಯೊಳ್ ನೀರಂ ಮೊಗೆದು ಪೊಟ್ಟಳಂಗಟ್ಟಿ ಕೊಳದಿಂ ಪೊಱಮಟ್ಟು ತಮ್ಮನಲ್ಲಿಗೆ ಬರ್ಪನಂ ಮುನ್ನೆ ನೇಮಿನಾಥರಾದೇಶದಿಂದೆ ಪೊಱಮಟ್ಟು ಪೋಗಿ ಸಮುದ್ರತೀರದೊಳ್ ಮ್ಲೇಚ್ಛರಾಜನಾಗಿರ್ದು ಅಲ್ಲಿಂ

---

1 ರುಂ 2 ಳುಂ 3 ನಿ 4 ರ

ಮುನ್ನೆ ಸಮುದ್ರದೊಳಗೆಚ್ಚಂಬನೊಂದು ಬಾಳೆಮೀನ್ ನುಂಗಿದೊಡಾ ಮೀ[1][ನುಂ][1]
ದೋಣಿಯೇಱಿ ಬೀಸುವ ಜಾಲೆಗಾಱನ ಬಲೆಯೊಳ್ ಸಿಲ್ಕಿ ಬಂದು

ಕಂ॥ ಅರಿದಾಗಳಲ್ಲಿ ಬಂದಾ
ಸರಲಂ ಕರವಿಂಬುಮಾಡಿ ಕೋಲೊಳುಮಟ್ಟಾ
ದರದಿಂ ಜಮಂಗೆ ಪಾಪಾ
ಗರಮಂಗೊಟ್ಟಾಗಳಾತನಾ ಸರಲೊಪ್ಪಂ ೩೬

ವ॥ ಕಂಡು ಮೆಚ್ಚಿ ಪಿರಿಯವು ಮೃಗಂಗಳನಿಂತಪ್ಪಂಬಿನಿಂದೆಸೆದೆಂತಿಪ್ಪರೆಂದಾಗಳೆ ಬೇಟೆವೋಪಂ ಬನ್ನಿಮೆಂದು ಪಾಂಗಿನವರನೊಡಗೊಂಡು ಪೋಗಿ ಮಹಾಟವಿಯಂ ಪೊಕ್ಕು ಗಾಳಿಯ ಮೇಗಂ ಪಾರ್ದು ಬರ್ಪಾತನಾಲದ ಮರವಡಿಯೊಳೆ ಮಱಲ್ದು ಪಟ್ಟೊಂದು ಕಾಲನೊಂದು ಕಾಲಮೇಲೆ ಅಡ್ಡಮಿಟ್ಟಿರ್ದನಂ ಹರಿಯೆಂದಱಯದೆ ಕಿವಿಗಳಂತಿರ್ದೊಂದು ಕಾಲ ಕೆಂದಳಮುಮನೆಟಿಲ್ವ ಸೆಱಂಗುಮಂ ಕಂಡು ಮೃಗಮೆಂದು ಬಗೆದು ಪೊಸತು ವೊಂದಂಬಂ ತೆಗೆದು ತೊಟ್ಟೆಚ್ಚೊಡೆ

ಕಂ॥ ಅಂಗಾಲೊಳ್ ನಟ್ಟ ಸರಲ್
[2][ಮುಂ][2]ಗಾಲೊಳ್ ಮೂಡೆ ಭೋಂಕನೆಚ್ಚತ್ತಾಗಳ್
ಸಿಂಗದ ಕಡುಮುಳಿದೆಸಕದ
ಪಾಂಗೆ ಕರಂ ಮುಳಿದು ಕಿತ್ತನಾ ನಟ್ಟಂಬಂ ೩೭

ವ॥ ಆಗಳ್ ಪರಿತಂದು ವಿಷ್ಣುವೆಂಬುದನಱಿದು ಜರತ್ಕುಮಾರಂ ಕಾಣುತ್ತೆ ತಮ್ಮಣ್ಣನಪ್ಪುದಂ ಬಿಲ್ಲುಮಂಬುಮನೀಡಾಡಿ ಬಂದು ಮಹಾಪಾತಕನಾದೆನೆಂದು ತನ್ನ ಗೆಯ್ದ ದೋಷಕ್ಕಂಜಿದೆಂ........ನಂ ಜರತ್ಕುಮಾರನಪ್ಪುದನಱಿದೇಱಿಅಂದೆತ್ತಿ ಪೊಡೆ ಪಟ್ಟೊನಂ ಪರಸಿಯಾನಿಂ ಬರ್ದೇನೆಂ ಸಾವೆನೆನೆ ನೀನೇವೆಯಿಂತುಟು ಸಮುಕಟ್ಟೆಂದಾಱಿ ನುಡಿದು ಬಲದೇವಸ್ವಾಮಿ ಬಂದೆನ್ನನೊಂದು....ನಿನ್ನಂ ಕೊಲ್ಗುಂ ಬೇಗಂ ಪೋಗಿಮೆಂದು ಆತನಂ ಕಳೆದು ಮುನ್ನಂ ಪಟ್ಟಿರ್ದಲ್ಲಿಯೆ ಮೆಯ್ಯನಿಕ್ಕಿ ರತ್ನಗಂಬಳಂ ಪೊದೆದಿರ್ದನ್ನ ನೆಜ್ಜೊನಂ ಕೊಲಲಾಗದೆಡೆಯಾಯ್ತು ಪೆಱನಾದೊಡಿಂತಿಱಿವನೆಂದು ರೌದ್ರಧ್ಯಾನ ದೊಳ್ ಸತ್ತು ಅಧೋಗತಿಗೆ ಪೋದನನ್ನೆಗಂ ನೀರಂ ಕೊಂಡು ಬಲದೇವಂ ಬಂದು ನಿಂದು ಪಥಶ್ರಮದೊಳ್ ಮಮಡಿಸಿದನೆಚ್ಚಱಿವಿನಮಿರ್ಪನೆಂದು ಮರದ ಕೊಂಬಿನೊಳ್ ನೀರ ಪೊಟ್ಟಣಮನೇಱಿಟ್ಟು ಕೆಲದೊಳ್ ಕುಳ್ಳಿರ್ದು ಕಾಲತ್ತ ನೋಱಂ ನಮಸಱಿ ತನ್ನ ಮೇಲುದಱಿಳ್ ಬೀಸುತ್ತಿರ್ದಂತಂತೆ ನೋೞ್ಪನಸಲ್ಲಿ ಮೊಕ್ಕಳಮೊಕ್ಕ ನೆತ್ತರಂ ಕಂಡು ಬೆ[3][ಕ್ಕತೊ][3]ಯ್ಯನೆ ಕಂಬಳಮಂ ತೆಱೆದಂಗಾಲನುರ್ಚಿದ........ಕಂಡು ಬೇಗಂ

1 ನಂ 2 ಮೊ 3 ಕ್ಕತೊ

ಮೊಗನುಂ ತೆಗೆದು ನೋಲ್ಪನ್ನೆಗಂ ಪ್ರಾಣಮಿಲ್ಲೆಂದು ಮೂರ್ಛೆವೋಗಿ ಬಿರ್ದೆಂತಾನು ಮೆಚ್ಚತ್ತು

ಉ|| ಎನ್ನನುಜಾತನಂ ನೆಗೞ್ದ ಚಕ್ರಿಯುಮಂ ತಪೆ ಕೊಂದನಾವನೋ
ಪನ್ನತಮೆಂದು ಬೇಗಮತಿಕೋಪದಿನೆರ್ದು ಮಹಾವಿಶಾಲಶಾ
ಖೋನ್ನತಮಾಗುವಾಲಮರನಂ ವಿಭು ತೊಟ್ಟನೆ ಕಿಱ್ತುಕೊಂಡು ಸ
ಚ್ಛನ್ನತರುಪ್ರದೇಶ ಗಹನಾಂತರದೊಳ್ ತಿರಿತಂದು ನೋಡಿದಂ ೩೮

ವ|| ನೋಡಿ ಬಗೆಗಾಣದಾ ಮರನನೀಡಾಡಿ ಕರಂ ಮುಳಿದು ಮುಳಿಸು ಪೋಗದೆ ಮಗುೞ್ದಾ ಕಾಡಮರನೆಲ್ಲಮಂ ಕಿರ್ತೀಡಾಡುತ್ತಮಂತೆ ತಾಂ ಮುನ್ನಿನಲ್ಲಿಗೆ ವಂದು

ಉ|| ಬಂದಿದುವೇನುಪೇಂದ್ರ ಮಱಲುಂದಿದೊಡೆಚ್ಚಱಲಿನ್ನುಮಾಗದೇ
ನಿಂದಿನ ನಿಪ್ರೆಯುಂಡಮೆನಗೆಂದಿನ ಮಾಱ್ಕೆಯ[ದಂತುಮ]ಲ್ಲಿದೇ
ನಂದಮೊ ಚಕ್ರಿ ಪೇೞ್ ಮುಳಿದೆಯೋ ಮುಳಿಸಂತವಮಾನ್ಯನಾಗಿ ತಾ
[1][ನಿಂದುದವೇನೊ][1] ಚಿಃ ನುಡಿಯದಿರ್ಪುದು ತಕ್ಕುದೆ ಕಂಡು ಕೂರ್ತರಂ ೩೯

ಕಂ|| ಕೂರ್ತುದನೇನೆಂಬೆನೊ ಶುಭ
ಕರ್ತಾರನ ನುಡಿಗೆ ಪುತ್ರ ಪೌತ್ರಾದಿಗಳಂ
ದಾರ್ತರ್ತಾಱುನನಾನೇ
ನಾರ್ತನೆ ಪೇೞು ನಿನಗಲ್ಲದಿದುಮಂ ಬಗೆಯಾ (?) ೪೦

ಚಂ|| ಬಗೆಯದೊಡೆನ್ನನಾವೆಡರ್ಗಮಾಗುವ ಸೋದರ ಮೈದುನರ್ಕಳಂ
ಗಗನದೊಳೆಲ್ಲಿಗಂ ನೆಗೞ್ದ ಪಾಂಡವರಂ ನಿನಗಮ್ಮ ಕೂರ್ಪರಂ
ಬಗೆವವರ್ಗಪ್ಪ ಮಾತುಗಳನಟ್ಟಿಪೆ ಕ[2][ಮ್ಮ][2]ಗಿವಲ್ಕೆ ತಕ್ಕುದೇ
ತಗದು ಮುರಾರಿ ನಿನ್ನ ಪುರುಷೋತ್ತಮನಪ್ಪಳವಿಂತುಟಾದುದೇ ೪೧

ಕಂ|| ಅಳವ[3][ಟ್ಟಿ ತಳ್ತು ಪೋಗದೆ][3]
ಖಳ ಕಂಸನನಿಕ್ಕಿ ಬೞಿ[4][ಕೆ][4] ನೆಗೞ್ದಿರ್ದ ಮಹಾ
ಬಳ ಸಹಿತ ಜರಾಸಂಧನ
ನೆಳೆ ಪೊಗೞ್ವಿಂತಿರ್ಕೆ ಗೆಲ್ದುದೇಂ ಕೇವಳಮೋ ೪೨

1 ನೆನಗತಿಕ್ರಮುಂಗಿದನೆ 2 ಯಮ 3 ಟ್ಟತಲ್ತು 4 ಕ್ಕೆ

ಉ|| ಕೇವಳಮಲ್ತು ನಿನ್ನ ವಿಭವಂ ನರಲೋಕದೊಳಿಂದ್ರವೈಭವಂ
ಕೇವಳಮಲ್ತು ಸಗ್ಗದೊಳ್ ನಿಂತಮರೇಂದ್ರ ಸಮಾನನಪ್ಪ ನೀ
ನೀಗಳರಣ್ಯದೊಳ್ ಪ[1][ಡು][1]ವನೀ ಧ[2][ಣೀಶ್ವರನೆತ್ತ][2] ಕೆಟ್ಟನೋ (?)
ವೋವೊ ವಿಧಾತ್ರ ನೀನೆಮಗಮಿಂತಿರೆ ಮಾಳ್ಪುದಿದೇನೊ ತಕ್ಕುದೇ ೪೩

ಕಂ|| ತಕ್ಕುದಱ ಬಿದಿಯೆ ಜೆಲ್ವಿನ
ಮಿಕ್ಕ ಪೊಬಿಲ್ ಜೇಯೆಯಿಂತು ತಂದೀತನನಿ
ಲ್ಲಿಕ್ಕಿದೊಡೆ ಮತ್ತೆಯುಂ ಕೊಂ
ದಿಕ್ಕಿದನಿನ್ನೇವೆ[3][ನೆಂದು ದುಗುಡದೆ ಪೊರಳ್ದಳ್][3] ೪೪

ಉ|| ಬಿರ್ದು ಪೊರಳ್ದು ಪುಯ್ಯಲಿಡುತಂ ತಲೆಯಂ ಬಡಿದತ್ತು ನೋಡಲೆಂ
ದೆರ್ದಿರಲಾಜದಪ್ಪಿ ಪೆಣನಂ ಮೊಗಮಂ ಕೊರಲಲ್ಲಿ ಸಾರ್ಚಿ ನೀ
ಡಿರ್ದು ಕನಲ್ದೊನಲ್ದು ಜೆಗಟುತ್ತು ಜೆಗಟ್ ಮಿಗೆ ಮತ್ತ[4][ಮಂತೆ ಸಾ
ರಿರ್ದು][4] ಮುರಾರಿ ಹಾ ಸರಸಿಜೋದರ ಹಾ ನೆಗಟ್ದಿರ್ದ ಚಕ್ರಿ ಹಾ ೪೫

ಕಂ|| ಹಾಹಾ ಕಂಸಧ್ವಂಸೀ
ಹಾಹಾ ಭರತಾರ್ಧಧರಣಿನಾಥಾ ನೂತಾ
ಹಾಹಾ ಹರಿಕುಲತಿಲಕಾ
ಹಾಹಾ ನಿನಗೆಂತುಟಾಯ್ತು ವಿಷ್ಣುವೆ ಹಾಹಾ ೪೬

ಶಾ|| ಹಾ ವಿಕ್ರಾಂತಸಮನ್ವಿತಾ ನರಪತೀ ಹಾ ದುಷ್ಟಶತ್ರುಕ್ಷಯಾ
ಹಾ ವಿಖ್ಯಾತಗುಣಾಶ್ರಯಾ ಜನನುತಾ ಹಾ ದೀನಕಲ್ಪದ್ರುಮಾ
ಹಾ ವಿಸ್ತಾರಯಶೋದಯಾ ಪರಿಹತಾ ಹಾ ಕೃಷ್ಣಭೂಪಾಲಕಾ
ಹಾ ವಿದ್ವಜ್ಜನಪೂಜಿತಾ ಮಹಿಧರಾ ಹಾ ಶ್ರೀಪತೀವಲ್ಲಭಾ ೪೭

ವ|| ಇಂತೆನಿತಾನುಂ ತೆಱದಿಂದಮೆ ಮರಗಳೆಲ್ಲಂ ಕೇಳ್ದು ಮರಪಟ್ಟಂತೆ ಬಿಸ್ಸನೆ ಶೋಭೆಗೆಟ್ಟಿರೆ ಪಕ್ಷಿಗಳೆಲ್ಲವೊಡನೆ ಮರಪಟ್ಟಂತಿರೆ ಬಳಸಿಯುಲಿಯುತ್ತಮಿರೆ ಮೃಗಂಗಳೆಲ್ಲಂ ಶೋಕರಸಮೆರ್ದೆಯಂ ಕೊಂಡಾಗಳ್ ಗೋರಿಗೊಂಡಂತೆ ಸುಟುಸುಟುದು ಕಲಗೆಲದೊಳಿರೆ ವಿಪ್ರಳಾಪಂಗೆಯ್ಯುತ್ತಂ ಮುಂದೆಲ್ಲಮಿರ್ದು ಕಣ್ಗಳ್ ಪಕ್ಕಾಲಿಬಿರ್ದು ನೇಸಱ್ ಮೂಡಿದಾಗಳೆರ್ದು ಚಕ್ರಿಯಿನ್ನುಮುಪ್ಪಡಿಸನೆಂದು ಮೆಲ್ಲನೆ ಕಾಲನೊತ್ತುತ್ತಿರ್ದು ಸ್ಪೆರಿಸದೆ ಮತ್ತಂ ನೆಲನೊತ್ತೆ ಪಟ್ಟೆಪ್ಪನೆಯೆಂದುಮೆತ್ತಿ ಪೆಗಲೊಳಿಟ್ಟು ಕೊಂಡು ಮರಮರುಂದಪ್ಪಡೆ ಪೋಗಿ ವನದೇವತೆಗಳಿರಾ ಮೇಗಿಲ್ಲದೆ ನೆಗಟ್ದಿ ಬಲ್ಲಾಳೀತನಂ

1 ಡ 2 ಣ... 3 ನೆಂ......ಳೂ 4 ಮಂ...

ತೇಕಿರ್ದಪನೆಂದು ತೊಟಿಲುತ್ತಂ ಕೆಲವು ದಿವಸಂ ಪೋಗಿ ತೊಱಿವಿಡಿದು ನಡೆದು ಜಲ ದೇವತೆಗಳಿರಾ ಕಿನ್ನರ ಖೇಚರಾದಿಗಳಿರಾ ಚಕ್ರವರ್ತಿಯ ಮೆಯ್ಯಿಂತೊಣಗುವುದೆಂಬುದೇ ನೆನುತಂ ಕೆಲವು ದಿವಸಂ ಪೋದೊಡೆ ಬೆಟ್ಟುಗಳನಡರ್ದಲ್ಲಿ ಪಸಿಯಿಸಿರ್ಪ ರಾಕ್ಷಸಾದಿಗಳಿರಾ ಎನ್ನ ತಮ್ಮನೆನ್ನೊಳ್ ನುಡಿಯದ ಕಾರಣಮೇನೆಂದು ಪಲವಾಡುತ್ತಮಱುದಿಂಗಳುವರಂ ಬಲದೇವಸ್ವಾಮಿ ದಿವ್ಯಶಕ್ತಿಸಂಪನ್ನನಪ್ಪುದಱಿಂ ಬಲದೇವನ ತೋಳಲಿರ್ದಂ ಮುನ್ನಿನ ಭವದ ಸ್ನೇಹದೊಳ್ ಬೆಸಕೆಯ್ದು ಬರ್ದು ಸಿದ್ಧಸಮಾಧಿ ಕೂಡೆ ಸ್ವೈಗನುದೇವನಾಗಿ ಪುಟ್ಟಿರ್ದವಧಿಜ್ಞಾನದಿಂ

ಕಂ॥ ಬಲದೇವಂ ದುಃಖಾಗ್ರ
ಜ್ವಲನಾಹತನಾಗಿ ಪೊತ್ತು ತಮ್ಮನ ಪೆಣನಂ
ಪಲವಾಡುತ್ತ ತೊಟಿಲ್ದಪೊ
ನಲಂಘ್ಯತರ ಗಹನದಲ್ಲಿಯೆಂಬುದನಱಿದಂ ೪೮

ವ॥ ಅಱಿದಾತನ ದುಃಖಮನಾಱಿಸುವೆನೆಂದು ದೇವಲೋಕದಿಂ ಬಂದು ಮನುಷ್ಯರ ರೂಪುಗೊಂಡು ಮಹಾರಣ್ಯದೊಳ್ ಪೆಣನಂ ಪೊತ್ತು ತೊಟಿಲ್ವ ಬಲದೇವ ನಿದಿರೊಳೊಂದು ಅಱಿಯ ಮೇಲೆ ತಾವರೆಯಂ ತಂದು ನಡಪುವೆನೆಂದು ನೀರಂ ತಂದೆಱಿ ಯುತ್ತಿರೆ ಬಲದೇವಂ ಕಂಡು ನಕ್ಕುಯಿದೇಂ ಮರುಳೆ ತಾವರೆಯಂತದು ಕೊಳದೊಳಂ ಕೆಱಿಯೊಳಂ ಬಾಳ್ಪವು ಅಱಿಯುಮೇಗೆಂತು ಬಾಳ್ಗುಮೆಂದೊಡಾ ದೇವನೆಂದನೀ ಸಿಲೆಯ ಮೇಲೆ ತಾವರೆಯುಂ ಬಾಟಿಸುವೊಡಂ ಬಾಟಿಸುವೆಮಿಾ ಪೆಣನಂ ಬಾಳ್ಗುಮೆಂಬ ಮೋಹದೊಳ್ ಪೊತ್ತು ತೊಟಿಲುತ್ತಿರ್ದನ್ನಂ ನಗುವೆನೆಂಬುದೇನೆಂದೊಡೆನ್ನ ತಮ್ಮನಂ ಚಕ್ರವರ್ತಿಯಂ ಪೆಣನೆಂದಪನೆಂದು ನೆಲದೊಳಿಟಿಸಿ ಮುಳಿದೆಯ್ದುವಾಗಳಾ ದೇವನ ದೃಶ್ಯಮಾದೊಡೆ ಕಾಣದೆ ಮಗುಳ್ದು ಪೆಣನನೆತ್ತಿ ಪೊತ್ತು ತೊಟಿಲುತ್ತಿರೆ ಮತ್ತಮಾ ದೇವಂ ಮುಂದೆ ಬಂದು

ಕಂ॥ ಪಿರಿದೊಂದು ಗಾಣದೊಳ್ ತಂ
ದೆರಡೆತ್ತಂ ಪೂಡಿಕೊಂಡು ಮಣಲಂ ಪೊಯ್ದೋ
ದರದ ಪಿಟಿಯುತ್ತಮೊಂದಣ
ದಿರವಂ ಕಂಡಿನ್ನವಣಕಮೆಂಬುದುಮೊಳವೇ ೪೯

ವ॥ ಎಂದು ನಗುತ್ತಮಿದೇನೆಂದೊಡೆ ತೆಲ್ಲಿಗನನೆಣ್ಣೆಗೆಂದು ಗಾಣಂಬಡಿಯುತ್ತಿ ದ್ದೊಡಿದೇಕೆಂಬುದನೆಂದೊಡದುಣಲ್ ಪಿಟಿದೆಣ್ಣೆಗಾಪತ್ತುವಡುವ ಮರುಳ್ತನಕೆ ನಗೆಯಾಗಿ ಬೆಸಗೊಂಡಪೆನೆಂದೊಡೆ ಬಲ್ಲೆತ್ತಿನೊಳೆತ್ತಿ ಪಿಟಿದೊಡೆ ಮಣಲೊಳಗೆಣ್ಣೆಯಪ್ಪುದವಕ್ಕು ನಿನ್ನ ಪೊಕ್ಕ ಪೆಣದಲ್ ಪ್ರಾಣಮೆಂತಕ್ಕುಮದಂ ಬಗೆದೆನ್ನಂ ನಗುವರೆಂಬುದನೆನೆ ಪೆಗಲ

ಪೆಣನಂ ನೆಲದೊಳಿಱಿಪಿ ಪೆಣನಂತಾದೊಡಮೆನ್ನ ತಮ್ಮನ ಪೆಣನನಗಲಲಾಱೆನೆಂದೆತ್ತಿ ಕೊಂಡು ಪೋಗೆ ಮತ್ತೊಂದೆಡೆಯೊಳೋಡಿ ಪರಿದಿರ್ದೆ ಸಂದು

ಕಂ॥ ಮುೞುಂದಿರ್ದೊಂದಾಲದ [ಬೞಿ]
ಕೊೞಡಂ [ತಾಂ] ತಂದು ನಟ್ಟು ನಡಪಲ್ ನೀರ್ದಂ
ದೆಱೆಯು¹[ತಿ]¹ರೆ ಕಂಡು ನಕ್ಕೀ
ತೆಱದ ಮರುಳ್ಗಂಡೆನಿಲ್ಲ ಧಾತ್ರಿಯೊಳೆಂದುಂ ೫೦

ವ॥ ಎಂಬುದನಾತಂ ಕೇಳ್ದಾಂ ಗಡ ಮರುಳೆನೀ ಕೊೞಡು ಕೊನರ್ಪಡಂ ಕೊನರುಗುಮಿಾ ನಿನ್ನ ಪೆಗಲ ಪೆಣನೆನಿತು ಕಾಲಮಿರ್ದೊಡಂ ಬಾೞದುದನೞುದಾಸೆಯೊಳ್ ಪೊತ್ತೞುದಿಂಗಳ್ ತೊೞಲ್ವ ನೀಂ ಮರುಳಾಯೆನುತೆ ಮಾಯಮಾದಾಗಳ್ ಪೆಣನಂ ನೆಲದೊಳಿಕ್ಕಿ ನಿಂದು ನೋಡಿ ತೆರ್ಪತ್ತು ಬೞಿಯಂ ತ್ರಯಾ²[ಣಾ]²ನೇಕ ವಾಕ್ಯಂ ಸಂಪ್ರತ್ಯಯಃ ಎಂಬುದಿಂತು ಮೂಱೆಡೆಯೊಳಮಿಾ ಮಾತನೆ ಕೇಳ್ದೆನಿನ್ನಿರಲಾಗದೀತನನಾರುಂ ಜಾಮಿಸದೆಡೆಯೊಳ್ ಜಾಮಿಸುವೆನೆಂದು ಮತ್ತಂ ಪೊತ್ತುಕೊಂಡು ಪೋಗಿ ತುಂಗಿಯೆಂಬ ಬೆಟ್ಟಮನಡರ್ದೇೞು ಶಿಖರದಲ್ಲಿ ಶುದ್ಧಮಪ್ಪೆಡೆಯೊಳಿರಿಸಿ ಚಂದನದ ಪುಳ್ಳಿಗಳಂ ತಂದೊಟ್ಟಿ ಜಾಮಿಸಲಿರ್ದಾಗಳ್

ಕಂ॥ ಈತನನೀಯೆಡೆಯೊಳ್ ತಂ
ದೀ ತೆಱದಿಂದಿಪ್ಪತೇೞು ಸೂ³[ೞ್]³ ಭ್ರಾಂತಿಸಮೇ
ಡೇತಱೆೞಳಮೆಂದೊಣರ್ದುದು
ಭೂತಧ್ವನಿ ನಭದೊಳಂತದಂ ಕೇಳ್ದಾತಂ ೫೧

ವ॥ ದೆಸೆಗಳಂ ನೋಡಿ ಯಾರುಮಂ ಕಾಣದೆ ದಿವ್ಯವಚನಮೆಂದೞುದಾ⁴[ನಿನ್ನಾ]⁴ಗಮಜ್ಞಾನಿಯೆನಾದೆನಿನ್ನೆನಗಪ್ಪ ಕಜ್ಜದೊಳ್ ನೆಗೞ್ವೆನೆಂದು ತಮ್ಮನ.... ....ಶ್ರಯದೊಳ್ ನಿಂದು ನಿರ್ವೇಗಪರಾಯಣನಾಗಿ ಪೋಗುತ್ತಂ ಚಾರಣಋಷಿಯರಂ ಕಂಡು ಬಂದಿಸಿ ದೀಕ್ಷೆಯಂ ಬೇಡಿ ಪಡೆದು ಕೈಕೊಂಡು ಸಕಳವ್ರತಿಯಾಗಿ ವಿಷಯ ಕಷಾಯಂಗ....ನೆಗೞ್ದು ವಿಹಾರಿಸಿ ಮಗುೞ್ದು ತುಂಗಿಗಿರಿಶಿಖರದೊಳ್ ಧರ್ಮ ಧ್ಯಾನ್ಯಮಂ ನಿೞಿಸಿ ಮುಡಿಪಿ ಬ್ರಹ್ಮಕಲ್ಪದೊಳ್ ಪುಟ್ಟಿದನಂತು ನಿರವಶೇಷಂ ದ್ವಾರಾವತಿ ಬೆಂದುದುಮಂ ಬಲದೇವ ವಾಸುದೇವರಿಬ್ಬರೆ ಪೊಱಮಟ್ಟುದುಮಂ ಕೌಶಂಬಾಟವಿಯೊಳ್ ವಾಸುದೇವಂ ಸತ್ತುದುಮಂ ಬಲದೇವಂ ತಪಸ್ಥನಾದುದುಮಂ ಮಧುರೆಯೊಳ್ ರಾಜ್ಯಂಗೆಯ್ಯುತಿರ್ದ ಪಾಂಡವರ್ ಕೇಳ್ದು ದುಃಖಂಗೆಯ್ದು ಲೌಕಿಕಕ್ರಿಯೆಯಂ ಮಾಡಿ ಬಂದು

---

1 ತ್ತಿ 2 ಣ 3 ಳ್ವರದಿಂ 4 ನಿಂನ

ಚಂ॥ ಸುರನರ ನಿರ್ಮಿತಂ ಪ್ರವರಮಂ ಮಹದಂಬುಧಿವಾರಿಖಾತಮಾ
ಸುರ ಮುರಪ್ಪೆರಿಸಾಘನಭಿರಕ್ತಿಸು[1][ವಾ][1] ಜಲಪೇಮಸಂತುಮಾ
ಪುರಮುಱುಪತ್ತನರ್ ಮುಡಿದರೆಂಪೊಡೆ ಮರ್ತಿನಮಾತ್ಯರೆಂಬರೇ
ವಿರಿಯುರಸಂದಿದಂ ತಡೆಯುದಿಕ್ಕುಗುಮಂತಕನುರ್ಚಿ ಮುಕ್ಕುಗುಂ ೫೨

ವ॥ ಇನಿತುಮಿರಲಾಗೆಂದರ್ಜುನನ ಮಗಂ ಪರೋಕ್ಷಿಗೆ ಪಟ್ಟಂಗಟ್ಟಿ ಧರ್ಮ ಪುತ್ರ ಭೀಮಾರ್ಜುನ ನಕುಲ ಸಹದೇವರ್ಕಳ್ಳಿವರುಂ ಪೊಱಮಟ್ಟು ಬಂದು ವರದತ್ತಗಣ ಧರಸ್ವಾಮಿಗಳಲ್ಲಿ ದೀಕ್ಷೆಯುಂ ಕೊಂಡಹಿಂಸಾ ಸತ್ಯಮಸ್ತೇಯಾ ಬ್ರಹ್ಮ [ಆ]ಕಿಂಚನ್ಯ ಮೆಂಬಯ್ದುಂ ಮಹಾವ್ರತಂಗಳನೇಱಸಿಕೊಂಡು ಕಣ್ ಕಿವಿ ಮೂಗು ನಾಲಗೆ ಮೆಯ್ಯೆಂ ಬಯ್ದುವಿಂದ್ರಿಯಂಗಳಂ ನಿರೋಧಂಗೆಯ್ದು ಈ[2][ರ್ಯಾ][2] ಭಾಷೇಷಣಾದಾನನಿಕ್ಷೇಪಣ ವ್ಯುತ್ಸರ್ಗಮೆಂಬಯ್ದುಂ ಸಮಿ[3][ತಿ][3]ಗಳನುಂಟುಮಾಡಿ ಸಾಮಾಯಿಕ ಚತುರ್ವಿಂಶತಿಸ್ತವನ ವಂದನ ಪರಿಕ್ರಮಣ ಪ್ರತ್ಯಾ[ಖ್ಯಾ]ನ ಕಾಯೋತ್ಸರ್ಗಗಳೆಂಬಾಱುಮಾವಶ್ಯಕಂಗಳಂ ಕುಂದಿಸದೆ ಲೋಚಾ[4][ಚೇ][4]ಲ [5][ಅಸ್ನಾನ ಕ್ಷಿತಿಶಯನ ಅದಂತಧಾವನ ಸ್ಥಿತಿಭೋಜನೇಕ ಭು][5]ಕ್ತಂಗಳೆಂದೀಯೇೞುಱೂಳಂ ನೆರೆಯುತ್ತಿರ್ಪತ್ತೆಂಟು ಮೂಲಗುಣಂಗಳುಂ ಮನೋ ವಾಕ್ಕಾಯಂಗಳೆಂಬೀ ಮೂಱುಂ ಕ್ಲೇಶಗುಪ್ತಿಗಳಂ ತಾಳ್ದಿ ಉತ್ತಮಕ್ಷಮಾ ಮಾರ್ದ ವಾ[6][ರ್ಜವ][6] ಸತ್ಯ ಶೌಚ ಸಂಯಮ ತಪ[7][ಸ್ತ್ಯಾಗಾ][7]ಕಿಂಚನ್ಯ ಬ್ರಹ್ಮಚರ್ಯಮೆಂಬ ದಶಕುಶಳಧರ್ಮದೊಳ್ ನೆಗೞ್ದು ಅನಶ[ನಾವಮೌ][8]ದರ್ಯ ವೃತ್ತಿಪರಿಸಂಖ್ಯಾನ ರಸಪರಿತ್ಯಾಗ [9][ವಿಕಶಯ್ಯಾಸನ][9] ಕಾಯಕ್ಲೇಶ ಪ್ರಾಯಶ್ಚಿತ್ತ ವಿನಯ ವೈಯ್ಯಾವೃತ್ಯ ಸ್ವಾಧ್ಯಾಯ ಧ್ಯಾನ ಉತ್ಸರ್ಗಮೆಂಬ ಪನ್ನೆರಡುಂ ತೆಱದ ತಪಮಂ ಕೈಕೊಂಡಿಂತು

ಕಂ॥ ವ್ರತಗುಣ ಸಂಯಮ ಶೀಲೋ
[10][ನ್ನ][10]ತ ನಿಯಮಾಳೋಚನ ಕ್ರಿಯಾಮಿರ್ಯಾ[ದಿ]
ವ್ರತತಿಗಳಂ [11][ಕಂಡಿಂತೀ][11]
ಸ್ಥಿತಿಯಿಂದಂ ಗ್ರಹಣಕಾಲ ಪೋದಿಂ ಬೞಿಯಂ ೫೩

ವ॥ ಆಚಾರ ಸೂತ್ರಕೃತ ಸ್ಥಾನ ಸಮವಾಯ ವ್ಯಾ[12][ಖ್ಯಾ][12]ಪ್ರಜ್ಞಪ್ತಿ ಜ್ಞಾ[13][ತೃಧರ್ಮಕಥಾ ಉ][13]ಪಾಸಕಾಧ್ಯಾಯನಾಂತಕೃದ್ದಶಾನು[14][ತ್ತರೌಪಪಾತಿಕ][14] ಪ್ರಶ್ನವ್ಯಾಕರಣ ವಿಪಾಕಸೂತ್ರ ದೃಷ್ಟಿವಾದಮೆಂಬ ಪನ್ನೆರಡಂಗಮುಂ [15][ಉತ್ಪಾ][15] ದಪೂರ್ವಾಗ್ರಾಯಣೀಯ ವೀರ್ಯಾನು[ಪ್ರ]ವಾದ [ಅಸ್ತಿ]ನಾಸ್ತಿಪ್ರವಾದ ಆತ್ಮ

ವ್ಯಾಂ 2 ರ್ಯ 3 ತು 4 ಜ 5 ಸಾಲಕ್ಷಿವಾರಸಯ ಭೋಜನಾನೇಕ ಭ
6 ರ್ದವ 7 ಸ್ತ್ಯಾಗ 8 ನಾವೊ 9 ವಿವಿಕಶಯನಾಶನ 10 ನ 11 ಕ 12 ಖ್ಯಾಸ
13 ತ್ವ್ಯಕಾಯೋ 14 ......ಮಾದೇಕಾದಶ 15 ......ನುತ್ಸಾಪ

[1][ಪ್ರವಾದ ಸತ್ಯಪ್ರವಾದ ಜ್ಞಾನಪ್ರವಾದ ಕರ್ಮಪ್ರವಾದ][1] ಪ್ರತ್ಯಾಖ್ಯಾನ ನಾಮಧೇಯ ವಿದ್ಯಾನುವಾದ ಕಲ್ಯಾಣನಾಮಧೇಯ ಪ್ರಾಣವಾ[2][ದ][2] ಕ್ರಿಯಾವಿಶಾಲ ಲೋಕ ಬಿಂದುಸಾರವೆಂಬ ಪದಿನಾಲ್ಕುಂ ಪುಬ್ಬಂಗಳುಮಂ ನೆಱೆಯೆ........ತೂ

ಕಂ॥ ಓದೆನಿತನಿತುಮನೆಡೆವಿಡ
ದೋದುತ್ತಂ ತಮ್ಮ ಕಲ್ತುದಂ ಪೆಱರಂ ತಾ
ವೋದಿಸುತಂತವರಂ ದೃಢ
ಮೋದಿಸುತಂ ನಡೆಯೆ ಪೋಯ್ತು ಶಿಕ್ಷಾಕಾಲಂ ೫೪

ವ॥ ಆ ಕಾಲದಿಂ[ದಿಂತು] ಭವ್ಯಜನಕ್ಕೆ ಧರ್ಮೋಪದೇಶಂಗೆಯ್ಯಲ್ ಚಾತುರ್ವರ್ಣ ಶ್ರವಣಸಂಘಮೆಲ್ಲಮುನವರವರ್ಗೆ ತಕ್ಕ ಕ್ರಿಯೆಯೊಳ್ ನಡಪುತ್ತಂ ಯೋಗಕ್ಷೇಮಂಗಳನಾರಯ್ವುತ್ತಂ ದರ್ಶನಜ್ಞಾನ ಚಾರಿತ್ರಂಗಳ[ಂ] ಅವಿಘ್ನದಿಂದ ನಡೆಯಿಸುತ್ತಂ ಗಣಪೋಷಣಕಾಲಮುಂ ಕೞಿಪಿ ತದನಂತರಂ ಜೀವಾಜೀವ ಪುಣ್ಯ ಪಾಪಾಸ್ರವ ಸಂವರ[ಬಂಧ] ನಿರ್ಜರ ಮೋಕ್ಷಮೆಂಬ ನವತತ್ತ್ವಭಾವನೆಯುಂ ಭಾವಿಸುತ್ತಂ ದ್ವಾದಶಾನುಪ್ರೇಕ್ಷಾ ಸ್ಮರಣೋದ್ಯುಕ್ತಚಿತ್ತರಾಗಿ ಜ್ಞಾನಭಾವನೆಯಿಂದಾತ್ಮ ಸಂಸ್ಕಾರ ಕಾಲಾಂತರದೊಳ್ ಶತ್ರುಂಜಯಪರ್ವತಕ್ಕೆ ಬಂದು ಯೋಗನಿರೋಧದೊಳಿರ್ದುದಂ ದುರ್ಯೋಧನ[ನ] ಮೊಮ್ಮಂ ಕಯುವರಂ ತಮ್ಮಜ್ಜನ ಪಗೆವರಪ್ಪ ಪಾಂಡವರೆಂಬುದನಱಿದವರಿರ್ದಲ್ಲಿಗೆ ವಂದು

ವೃ॥ ಇವ[3][ರಂ][3] ಮುನ್ನೆ ಬಿಗು[4][ರ್ತು][4] ಯುದ್ಧದೊಳಡುರ್ತೆಮ್ಮಜ್ಜ[5][ರಂ ತಾಗುತಿ][5]
ಪ್ಪವಮಂ ಕೊಂಡೆನಿತೊಂದು ರಾಜ್ಯಪದಮುಂ ಕೈಯ್ಕೊಂಡು ಮಿಕ್ಕಿರ್ದ ಪಾಂ
ಡವರಪ್ಪುಪ್ಪುರುಮಾದೊಡೇನಿವರ್ಗೆತಿಸ್ನೇಹಾರ್ತದಿಂ ಬಿರ್ದನಿ
ಕ್ಕುವೆನೆಂದಾಗಡೆ ಕೋಪದಿಂ ತರಿಸಿದಂ ದಂಡಪ್ರಯೋಗಂಗಳಂ ೫೫

ವ॥ ತನ್ನಿಪೆಂದು ಕಾಸಿದ ಕರ್ಬೊನ್ನ ಮಣೆಗೊಳೊಳ್ಳಿವರುಮಂ ಕುಳ್ಳಿರಿಸಿ ಮಿಡಿಪಲಿಱೆಯಿಮೆಂದು ಕರಗಿಸಿದ ಲೋಹರಸಮಂ ಮೇಗಿಱಿಯ ಸುರಿಯಿಸಿ ಬೇಗುತ್ತಂದುಪ್ಪಟಿಪನುಡಿಸಿಮೆಂದು ಎಣ್ಣೆಯೊಳ್ ನಾಂದಿದ ಘಟ್ಟಿಗಳಂ ತರಿಸಿ ತಿದಿಯಂ ಸುತ್ತಿಯುರಿಯಂ ತಗುಳ್ಚಿ ಭೂಷಣಂಗಳಂ ತುಡಿಸಿಮೆಂದು ಕರ್ಪೊನ್ನ ಕಾಸಿದಾಭರಣಂಗಳಂ ತುಡಿಸಿ ಪಿರಿಯಾತಂಗೆ ಪಟ್ಟಂ ಭೀಮಂಗೆ ಯುವರಾಜಪಟ್ಟಮರ್ಜುನಂಗೆ [6][ವೀರ][6] ಪಟ್ಟಮೆಂದು ಕಾಯ್ದ ಕರ್ಪೊನ್ನ ಪಟ್ಟಂಗಳಂ ನೊಸಲೊಳ್ ಕಟ್ಟಿ ಚಾಮರಮೆಂದುರಿಯ ಪೊಟ್ಟಣಂಗಳಂ ಬೀಸವೇೞುತ್ತಂ ಪಲತೆಱದಿಂ ನಿಗ್ರಹಂಗೆಯ್ಯೆ ಸೈರಿಸಿ

1 ಪ್ರ...ದ 2 ಯ 3 ರ 4 ತ್ತು 5 ರ... 6 ವಿ

ಶಾ|| ಇಂತಾಗಿರ್ದ ಮ[ಹೋಪ]ಸರ್ಗಭರದೊಳ್ ನಿಂದಂದದಿಂ ಮೂವರುಂ
ಕೌಂತೇಯಪ್ರತಿಗಳ್ ವಿಶೇಷಮತಿಗಳ್ ಶುದ್ಧೇದ್ಧ ಸದ್ಧ್ಯಾನದಿಂ
[1][ಸಾಂತರ್ ಸಾಂ][1]ತ ರಸೋದಯರ್ಕಳತಿಬದ್ಧಾನಾದಿ ಕ[2][ರ್ಮಾರಿಗಳ್
ಸಂತಂ ತಾಂ ಸು][2]ಮಹೋನ್ನತೋಜ್ವಳಗುಣೋದ್ಯನ್ಮುಕ್ತಿಯೊಳ್
ಕೂಡಿದರ್ ೫೬

ವ|| ಮತ್ತೀತ ನಿರ್ವೃತಮಿಾತನಲ್ಲಂ ನಮ್ಮಂ ನಿಗ್ರಹಿಸುವಂತಾಯ್ತೆಂದಿನಿಸು ತಳೆದ ಬಗೆಯಿಂ ಮುಡಿಪಿ ಸರ್ವಾರ್ಥಸಿದ್ಧಿಯ....ನೇಮಿಭಟ್ಟಾರಕ ಸಮವಸರಣಂ ವಿಹಾರಿಸುತ್ತಂ ಭವ್ಯಜನ ಸಸ್ಯಾಸಮೂಹಕ್ಕನುರಾಗಮಾಗೆ ಧರ್ಮಾಮೃತ ವೃಷ್ಟಿಯಂ ಸುರಿವುತ್ತಮಂತೆ ಬಂದು ಜಯಂತಗಿರಿಯಮೇಗಿಟ್ಟು....ಜ್ಞ ಸಮಾನಮಾಗಿರ್ದುತ್ತರ ಪ್ರಕೃತಿಗಳಂ ನಿರವಶೇಷಂ ಮಾಡುವುದಱಿಂ

ಉ|| ಯೋಗ ನಿರೋಧದಿಂದುೞಿದ ನಾಲ್ಕುಮಘಾ[3][ತಿ ಚತುಷ್ಟಯಂ][3]ಗಳಂ
ಬೇ[ಗ]ದಿನಿಕ್ಕಿ ಗೆಲ್ದು ಭುವನತ್ರಯದಗ್ಗ[ಳಮಾ]ದ ಭೂತಳ
ಕ್ಕಾಗಳೆ ಪೋಗಿ ಸಿದ್ಧಗುಣಮೆಂಬವಱಿಂದೊಳ್ ನೆಲಸಿರ್ದ ನಿರ್ವೃತಿ
ಶ್ರೀಗಧಿನಾಥನಾಗಿ ನೆಲಸಿರ್ದನನಂತಚತುಷ್ಟಯೋದಯಂ ೫೭

ಗದ್ಯ|| ಇದರ್ಹತ್ಸರ್ವಜ್ಞ ಪಾದಪದ್ಮ ವಿರಾಜಿತೋತ್ತಮಾಂಗ ಶ್ರೀ ಬಂಧುವರ್ಮ ನಿರ್ಮಿತಮಪ್ಪ ಹರಿವಂಶಾಭ್ಯುದಯದೊಳ್

**ಚತುರ್ದಶಾಶ್ವಾಸಂ**

— ಸಂಪೂರ್ಣಂ —

1 ಭೃತ್ಸಾಂತಸಾ೯೦ 2 ವ... 3 ತ...

# ೧. ಪದ್ಯಗಳ ಅಕಾರಾದಿ

[ಮೊದಲ ಸಂಖ್ಯೆ ಆಶ್ವಾಸವನ್ನೂ ಎರಡನೆಯ ಸಂಖ್ಯೆ ಪದ್ಯವನ್ನೂ ಸೂಚಿಸುತ್ತದೆ]

# ೨. ಅರ್ಥಕೋಶ

[ಸಂಖ್ಯೆಗಳು ಆಶ್ವಾಸ ಮತ್ತು ಪದ್ಯಸಂಖ್ಯೆಯನ್ನು ಸೂಚಿಸುತ್ತವೆ]

### ಅ

ಅಂಕಿಸು ೧೨-೫೫ ಗುರುತುಮಾಡು
ಅಂಬಳಿಕ್ಕು ೬-೯ವ ಅಂಬೆಗಾಲಿಕ್ಕು
ಅಂಬೇಱು ೫-೧೯ವ, ೧೨-೨ವ ಬಾಣದ ಹೊಡೆತ
ಅಕ್ಕಳೆ ೩-೫೧ ಹೆಂಗಸು (?)
ಅಕ್ಕುಳಿಸು ೨-೧೪ ಒಳಕ್ಕೆ ಇಳಿ, ಕುಗ್ಗು
ಅಖಿಲ್ಯ ೯-೨೦ವ, ೧೨-೫ ಹೇಡಿ
ಅಗರು ೪-೫ ಸುಗಂಧದ್ರವ್ಯ
ಅಗಿ ೧೩-೨೨ವ ಹೆದರು, ಅಂಜು
ಅಗುಣಿ ೧೨-೫೧ ತಾಳು, ಅಗಣಿ
ಅಗ್ಗಾಯಿಲೆ ೩-೫೦ವ, ೩-೫೩ವ ಸೂಳೆ
ಅಗ್ಗುರಿ ೬-೪೦ ಅಧಿಕವಾದ ಉರಿ (?)
ಅಘುಪಡು ೪-೨೮, ೧೧-೬೨ವ ದುಃಖಕ್ಕೆ ಒಳಗಾಗು, ಕಷ್ಟಪಡು
ಅಚ್ಚಿಗ ೩-೩೮ ತೀವ್ರವಾದ ವ್ಯಥೆ
ಅಚ್ಚಿಗಂಗೊಳ್ ೧೧-೧೪ ಆಶ್ಚರ್ಯಪಡು
ಅಚ್ಚು ೮-೫೦ವ < ಅಕ್ಷ, ಇರಚಿ
ಅಡಂಗೊತ್ತು ೬-೬ವ ಅಡಗುವಂತೆ ಅದುಮು
ಅಡಕುದುರೆ ೭-೬೧ ಅಡ್ಡ ಕುದುರೆ (?)
ಅಡಗಿಂಡೆ ೮-೧೨ ಮಾಂಸದ ಮುದ್ದೆ
ಅಡಪ ೧೪-೨ ಎಲೆಅಡಿಕೆ ಚೀಲ
ಅಡುಜಿರ್ ೨-೪೬ ಕವಿ, ಆಕ್ರಮಿಸು
ಅಡುಜಿರ್ ೧-೫೮, ೭-೫೪ ವ್ಯಾಪಿಸು
ಅಣಲ್ ೩-೫೬ ಅಂಗುಳು
ಅಣಿ ೮-೨೬ವ ಕಾಲಾಳು, ಪದಾತಿ
ಅಣಿ ೯-೧೯ ಮನೋಹರ
ಅಣಿಯರ ೨-೧೨ ಸಡಗರ
ಅಣ್ಕೆ ೭-೩೭ ಲೇಪನ, ಬಳಿತ
ಅಣ್ಣಲೆ ೧೧-೭೧ವ, ೧೧-೬೩ 'ದೊರೆ' ಎಂದು ಹೀಯಾಳಿಸಿ ನುಡಿಯುವ ಮಾತು (?)
ಅಣ್ಣಲೆಗ ೧೧-೧೨ ಅಣ್ಣಲೆ, ರಾಜ (?)
ಅತ್ತಪರ ೨-೫೭ವ, ೪-೧೧ವ ಗುರಾಣಿ
ಅದವಟಿಲ್ ೭-೮ವ ದುಃಖ
ಅದಿರ್ಮುತ್ತೆ ೫-೬ವ ಮಾಧವಿ ಹೂವು
ಅದಿಲ್ಯ ೧೨-೫ (?)
ಅದ್ದ ೧೨-೬೨ ಅರ್ಥ
ಅಧವ ೮-೧೦ ಅಂಗಹೀನ
ಅಧಿವಾಸಿಸು ೬-೩೫ವ ದೇವತಾವಿಗ್ರಹವನ್ನು ಪ್ರತಿಷ್ಠಿಸುವ ಮೊದಲು ಧಾನ್ಯ, ನೀರು ಮೊದಲಾದುವುಗಳಲ್ಲಿ ನೆಲೆಗೊಳಿಸು
ಅನ್ನವೃತ್ತಿ ೧೧-೩೦ವ ಅಂತಹ ಕೆಲಸ
ಅನ್ಯತ್ವ ೪-೧೫ವ ಅನುಪ್ರೇಕ್ಷೆಗಳಲ್ಲಿ ಒಂದು
ಅಪಪ್ರಥೆ ೭-೭೫ವ ಅಪವಾದ, ನಿಂದೆ
ಅಪ್ಪೈಸು ೧-೩೪ವ, ೪-೧೦ವ, ೪-೧೩ವ ಒಪ್ಪುವಂತೆ ಮಾಡು, ಒಪ್ಪಿಸು

ಅಯ್ಕಿಲ್ ೧೪-೧೪ ಚಳಿ, ಶೀತ
ಅರಗೊಟ್ಟಂಗ ೨-೧೧ವ (?)
ಅರಿಂಜಯ ೧೨-೪೯ ಹಗೆಗಳನ್ನು ಗೆಲ್ಲುವವನು
ಅರಿಸಾಧನ ೭-೬೧ ಶತ್ರುವಿನಾಶಕ
ಅರುವಂಗ ೨-೩೨ವ (?)
ಅರ್ಕಱ್ ೩-೪೫, ೩-೬೩ ಅಕ್ಕರು, ಪ್ರೀತಿ
ಅರ್ಕಾಡು ೪-೪ವ, ೭-೬೩ವ ನಾಶವಾಗು
ಅರ್ಗು ೪-೧೫ ಅಱ್ಗು, ಮುಳುಗು, ನಾಶವಾಗು
ಅರ್ಚನೆ ೭-೭೨ವ, ೮-೬೪ವ, ೧೩-೪೫ವ
ಪೂಜಾಸಾಮಗ್ರಿ
ಅರ್ಜುನ ೭-೭, ೯-೨೦ವ ಮತ್ತಿಯ ಮರ
ಅರ್ಥಿಗ ೧೦-೩೨ವ ಬಯಸುವವನು
ಅರ್ವಿ ೧೧-೨೪ವ ಬೆಟ್ಟದಿಂದ ಬೀಳುವ ನದಿ
ಅರ್ವಿಸು ೨-೧೭ ಅಧಿಕವಾಗು
ಅಲಂಪು ೨-೩ ಸೊಗಸು, ಸೌಂದರ್ಯ, ಪ್ರೀತಿ
ಅಲಕ್ತಕ ೩-೩೬ ಅರಗು
ಅಲತಗೆ ೩-೯ವ ಅರಗು
ಅಲತೆ ೪-೪ ಅರಗು, ಮಸಿ (?)
ಅಲವಲಿಸು ೨-೧೫ ಆಸೆಪಡು, ಹಾತೊರೆ
ಅವಟಯಿಸು ೩-೭೨ವ ಒಪ್ಪಿಸು
ಅವತಂಸ ೨-೪೧ವ ಕಿವಿಯ ಆಭರಣ
ಅವಷ್ಟಂಭ ೧೧-೭೨ವ ಆಶ್ರಯ
ಅಷ್ಟಾಪದ ೨-೩೮ವ ಶರಭ
ಅಸಗ ೬-೪೨ ಅಗಸ
ಅಸಿಧಾರಾವ್ರತಿ ೪-೩೦ ಕತ್ತಿಯ ಅಲಗಿನ
ಮೇಲೆ ನಡೆಯುವ ವ್ರತದವನು
ಅಸಿಪಂಜರ ೧೧-೭೭ ಅಲಗಿನ ಪಂಜರ
ಅಸುಂಗೊಳ್ ೮-೨೭ವ ಪ್ರಾಣವನ್ನು ತೆಗೆ
ಅಸುಂಗೊಳ್ ೧೦-೪೨ವ ಹೆದರು, ಭಯಪಡು
ಅಸುವೆ ೧೦-೧೦ ಅರೆಯುವ ಕಲ್ಲು
ಅಸೃಗ್ಜಳ ೧೨-೬೫ ರಕ್ತದ ನೀರು

ಅಳವಿಗ ೫-೧೭ ಪರಾಕ್ರಮಿ
ಅಳಱ್ ೮-೪೭ ಭಯ
ಅಳಿಪಳಿ ೧೧-೧೦೫ ಕೆಟ್ಟ ದೂರು, ಕೆಲಸಕ್ಕೆ
ಬಾರದ ಮಾತು
ಅಳೀಕ ೨-೩೫ವ ಮೋಸ
ಅಳುಂಬ ೩-೫೩, ೪-೨೫ ಅತಿಶಯ
ಅಳುಱ್ ೩-೬೩ ಆವರಿಸು
ಅಳುರ್ಕೆ ೩-೬೩, ೫-೧೨ ಆಧಿಕ್ಯ, ಶಕ್ತಿ
ಅಳೆ ೧೦-೧೦ ಅಳತೆಮಾಡು (?)
ಅಳ್ಳಿಱಿ ೩-೫೮ ಚುಚ್ಚು, ತಿವಿ
ಅಱಂಬುಗಱಿ ೬-೨೪ವ ೬-೨೮ ಉತ್ಪಾತವೇ
ಮೊದಲಾದ ದೋಷನಿವಾರಣೆಗಾಗಿ ಗೋವಿ
ನಿಂದ ಹಾಲು ಕರೆ (?)
ಅಱಗಂಡಿ ೧೨-೩ ಯುದ್ಧಮಾಡುವವನು
ತಪ್ಪಿಸಿಕೊಳ್ಳಲು ಇರುವ ಅವಕಾಶ
ಅಱಗೆಱೆ ೧-೧೮ವ ಬತ್ತಿಹೋಗದ ಕೆರೆ
ಅಱವಳ ೧೨-೫೧ (?)
ಅಱಿಯಮಿಕ್ಕೆ ೯-೨ ಅಜ್ಞಾನ
ಅಱುನೀರ್ ೧೦-೧೧ ಬತ್ತಿದ ನೀರು
ಅಱಿಗೆಯ್ತ ೧೧-೪೨ವ ನೀಚ ಕೆಲಸ
ಅಱ್ಕಾಡಿಸು ೩-೭೧ ನಾಶಗೊಳಿಸು

## ಆ

ಆಟವಿಕ ೧೧-೫೩ವ ಅಡವಿಯಲ್ಲಿ ವಾಸ
ಮಾಡುವವ, ಬೇಡ
ಆಟಿಸು ೧-೫೭ ಬಯಸು
ಆಡಪೋರಿ ೪-೩೩ವ ಗಂಡಾಡು, ಹೋತ
ಆತಾಮ್ರ ೭-೨೧ ಹೆಚ್ಚಾದ ಕೆಂಪು
ಆದಮಾನುಂ ೧೨-೨೬ವ ವಿಶೇಷವಾಗಿ
ಆಯತನ ೧-೨೩ವ ಮನೆ
ಆಯತಿ ೭-೬೮ ಸಾಮರ್ಥ್ಯ
ಆರವೆ ೧೪-೨೯ವ ಉದ್ಯಾನವನ

ಆರು ೨-೩೮ವ ನೀರುಹಲಸು

ಆವಣ ೧-೨೪ ಆಪಣ, ಅಂಗಡಿ

ಆವರ ೧-೨೪ ಅಲ್ಲಿಯವರೆಗೆ

ಆಸು ೨-೩೮ವ ಆಚದ ಮರ

ಆಳಂಬಿತ ೧-೧೭ವ ಜೋಲುಬಿಟ್ಟ, ಇಳಿಬಿಟ್ಟ

ಆಱಿನುಡಿ ೭-೮೧ವ ಸಮಾಧಾನ ಹೇಳು

ಆೞ್ ೩-೮ವ, ೯-೩೪ವ ಮುಳುಗು

## ಇ

ಇಂಡೆಯಾಡು ೧೪-೯ವ ಎಸೆದಾಡು, ತೂರಾಡು

ಇಂಬುಮಾಡು ೬-೫೮ವ ಕ್ರಮಪಡಿಸು

ಇಚ್ಛಾಕಾರಂಗೆಯ್ ೪-೨೯ವ ಸತ್ಕರಿಸು, ಆದರಿಸು

ಇಟ್ಟಳ ೩-೧೭, ೫-೯, ೮-೭೦ವ, ೯-೮೩ ಸುಂದರ, ನಿಂದೆ, ಆಧಿಕ್ಯ

ಇದ್ಧ ೭-೭೯ ಪ್ರಖರವಾದ

ಇಬ್ಬಕುಳ ೩-೩ವ ಇಭ್ಯಕುಲ, < ವರ್ತಕ ವಂಶ

ಇರ್ಕುಳಿ ೨-೩೧ವ, ೩-೩೧ ಸೆಳೆತ, ಆಕರ್ಷಣೆ

ಇರ್ಪೋಡು ೧೧-೩೪ ದ್ರವವು ಇಂಗಿಹೋಗು

ಇರ್ವೀಡು ೨-೩೮ವ ಶಿಂಶುಪವೃಕ್ಷ

ಇಱಿಮುಱಿ ೧೧-೧೨ವ ಚೂರುಚೂರು

## ಈ

ಈರ್ಯಾಪಥ ೧೧-೨ವ ಪರ್ಯಟನದ ದಾರಿ

## ಉ

ಉಂತು ೭-೭೦ ಮಧ್ಯದ ರೀತಿ

ಉಂತೆ ೧೧-೬೬ವ ನಿಷ್ಕಾರಣ

ಉಂಬಲ ಕುಷ್ಠ ೧೩-೩೪ ಒಂದು ವಿಧವಾದ ಕುಷ್ಠರೋಗ

ಉಕ್ಕಲಿಸು ೮-೬೮,೧೧-೨೪ವ ಕೊಬ್ಬು, ಹೆಚ್ಚು

ಉಕ್ಕೈಪ ೮-೭೬ವ ಮೋಸ

ಉಗಿ ೫-೧೪ವ, ೧೦-೩೧ವ, ೧೧-೧೦೬ವ ಹೊರಕ್ಕೆಳೆ, ಸೆಳೆ, ಚಿಮ್ಮು

ಉಗುಣಿ ೧೧-೧೨ ಒಂದು ಜಾತಿಯ ಮರದ ಕಡ್ಡಿ, ಉಗುಣಿ ಬಳ್ಳಿ (?)

ಉಜ್ಜುಗ ೧೩-೧೮ವ ಉದ್ಯೋಗ, ಕಾರ್ಯ

ಉಡುಪಾನನೆ ೧-೪೬ ಚಂದ್ರಮುಖಿ

ಉಡುಪಾಸ್ಯೆ ೭-೨೫ ಚಂದ್ರಮುಖಿ

ಉಡ್ಡಿಸು ೧೧-೯೨ ಪ್ರತಿಭಟಿಸು

ಉತ್ತರಿಸು ೧೨-೩೩ವ ಅತಿಕ್ರಮಿಸು

ಉದಾತ್ತವಚನ ೩-೫೪ವ ಒಂದು ಕಾವ್ಯಾಲಂಕಾರ

ಉದ್ಗಮ ೧-೩೪ ಏರಿಕೆ

ಉಪರೋಧಿಸು ೧೦-೩೭ವ, ೧೦-೪೨ವ ಬಲಾತ್ಕಾರ ಮಾಡು

ಉಪಲಕ್ಷಿಸು ೩-೮ವ, ೩-೪೭ವ ಗುರುತಿಸು

ಉಪಳ ೧೧-೨೯ವ ಶಿಲೆ, ಬಂಡೆ

ಉಪೇಂದ್ರ ೭-೭೧ ಕೃಷ್ಣ

ಉಪ್ಪಟ ೧೪-೫೫ವ ಉತ್ತಮವಾದ ವಸ್ತ್ರ

ಉಪ್ಪಯೊಗ ೪-೩೪ (?)

ಉಪ್ಪವಡಿಸು ೧೪-೪೬ವ ನಿದ್ರೆಯಿಂದ ಎಚ್ಚರಗೊಳ್ಳು

ಉಬ್ಬೆಗ ೫-೨೧ವ, ೮-೮ವ ಉದ್ವೇಗ, ದುಃಖ

ಉಮ್ಮಸೆ ೯-೧೦ವ ಬಿಸಿಬಿಸಿಯಾಗಿ

ಉಮ್ಮಳಿಸು ೪-೧ವ ದುಃಖಿಸು

ಉಮ್ಮಳಿಸು ೧೧-೧೧೨ ಕುದಿ, ತವಕಿಸು

ಉರುಗುರ ೪-೫, ೧೦-೧೦ ಅಮೇಧ್ಯ, ಮಲ

ಉರ್ಚು ೧೪-೫೨ ಕೀಳು, ಹೊರಕ್ಕೆತೆಗೆ

ಉರ್ವಿನಂ ೬-೧೨ವ, ೬-೧೫ವ ಅತಿಶಯವಾಗಿ

ಉಳಿನಯು ೨-೮ ಮೋಸದ ನಯ

ಉಲ್ಲಟಿಸು ೧೧-೧೬ವ ಹೊರಳಾಡು

ಉಳ್ಕು ೫-೧೯ವ ಕುಗ್ಗು

ಉಱುಮಾಱ್ ೪-೨೩ವ ವಕ್ರತೆ, ಬಳಸಿಹೇಳು

ಕಬ್ಬಿ ೬-೨೦ ಕಡಿವಾಣ
ಕಮ್ಮೆಣ್ಣೆ ೪-೬ವ ಪರಿಮಳದ ಎಣ್ಣೆ
ಕರಂಕೆ ೯-೩೦ವ ಕರಂಕ, ತಲೆಬುರುಡೆ
ಕರಂಡಕ ೨-೫ವ ಮುಚ್ಚಳವಿರುವ ಸಣ್ಣ ಪಾತ್ರೆ, ಭರಣಿ
ಕರಡೆ ೧೧-೪ ಕಾಡು ಅಥವಾ ಬೆಟ್ಟದ ಮೇಲೆ ಬೆಳೆದು ಒಣಗಿದ ಹುಲ್ಲು
ಕರಭ ೧೦-೩೧ವ ಒಂಟೆ
ಕರುಮಾಡ ೨-೫ವ ಉಪ್ಪರಿಗೆ
ಕರ್ಕಡೆ ೧೦-೧೦ ಒಂದು ಬಗೆಯ ಆಯುಧ(?)
ಕರ್ಚು ೧೪-೨೩ವ ಕಚ್ಚು, ತಿನ್ನು
ಕಲ್ ೧೩-೩೮ ಕಲಿ
ಕಲ್ಲೆಯುಂಕವಿಯುಂ ೪-೧೪ವ ಅಲ್ಲೋಲ ಕಲ್ಲೋಲ
ಕವಿಲ್ ೨-೪೧ ಮಾಸಲುಗೆಂಪು ಬಣ್ಣ
ಕವಿಲ್ಗಣ್ ೨-೧೪ ಕಪಿಲವರ್ಣದ ಕಣ್ಣು
ಕಳಾಚಾರಿ ೯-೬ವ ಕಲಾಚಾರ್ಯ
ಕಳಿಂಕೆ ೫-೫ವ ಮೊಳಕೆ, ಮೊಗ್ಗು
ಕಱುತ್ತು ೬-೫೪,೧೧-೮ ಕೋಪಗೊಂಡು, ಕೆರಳಿ
ಕೞಿಲ್ ೮-೭೩ವ ಕುಗ್ಗು, ಕುಸಿ
ಕೞವೆ ೯-೩೨ವ ಬತ್ತ
ಕಾಚವಳಯ ೪-೩೨ವ ಗಾಜಿನ ಬಳೆ
ಕಾದಲ್ ೩-೫೦ವ ಪ್ರೀತಿಪಾತ್ರ
ಕಾಯ್ಪು ೮-೭೩ವ ಕೋಪ
ಕಾರ್ಕೋೞಿ ೨-೩೯ವ ಕಾಡುಕೋಳಿ
ಕಾಲ್ಗೋ ೨-೫೨ವ ಕಾಲನ್ನು ಕಟ್ಟು, ಬಂಧಿಸು
ಕಾಲ್ವೀಸ ೨-೩೭ (?)
ಕಾಟ್ಪುರ ೧೨-೧೭ವ ಕಾಡುಪ್ರವಾಹ
ಕಿಣೆ ೧೪-೧೪ವ ಹಲ್ಲಿನ ಕೊಳೆ
ಕಿಷ್ಕಿಂಧ ೨-೩೮ವ ಒಂದು ಜಾತಿಯ ಹಕ್ಕಿ
ಕಿಸುಗಣ್ಣು ೧೦-೩೬ವ ಅತಿ ಕೋಪಗೊಳ್ಳು
ಕಿಸುಗುಳ ೧೦-೧೦ ಅಲ್ಪ, ಹೀನ
ಕಿಱುಕುಣಿಕ್ಕೆ ೧೩-೨೦ ಸಣ್ಣ ಗಂಟು
ಕಿಱುಕುಳ ೧೧-೧೦೪ವ ಅಲ್ಪ, ತುಚ್ಛ
ಕಿಱುಪು ೧೧-೩೪ ಹಾರು, ಕುಣಿ
ಕೀಲಣೆ ೯-೪೩ವ ಕಟ್ಟು, ಬಂಧ, ರಚನೆ
ಕೀಲಿಸು ೩-೧೧ವ ಕಟ್ಟು
ಕೀಱು ೫-೩೮ವ ಒತ್ತಾಯಮಾಡು
ಕೀೞಿಲ್ ೧೩-೩೧ವ ಸೇವಕರ ಮನೆ
ಕುಂಟಣಿ ೧-೫೨ವ ತಲೆಹಿಡಿಕಿ
ಕುಂದ ೨-೪ ಮೊಲ್ಲೆ, ಕೋಲುಮಲ್ಲಿಗೆ
ಕುಂಬು ೧೧-೨೧ ನಮಸ್ಕರಿಸು, ಬಗ್ಗು
ಕುಚಂದನ ೭-೭ ಕೆಂಪುಗಂಧದ ಮರ
ಕುಟಜ ೭-೭ ಕೊಡಸಿಗೆ ಮರ
ಕುತ್ತ ೬-೪೫ವ ರೋಗ
ಕುಯ್ಯಲ್ ೮-೭೨ ಕೊಯ್ಲು, ಫಸಲು
ಕುರವಕ ೭-೭ ಗೋರಂಟೆ ಮರ
ಕುಱುವ ೩-೧೧ವ, ೪-೧೫ವ ದ್ವೀಪ
ಕುಱುಕುಣಿಕೆ ೧೦-೩೪ ಕಿಱುಕುಣಿಕೆ, ಕಿರುಬೆರಳು
ಕೊಂಟಣಿ ೩-೩೨, ೩-೩೩ ತಲೆಹಿಡಿಕಿ
ಕೂಕಿಱಿ ೧೨-೫೮ ಗಟ್ಟಿಯಾಗಿ ಕೂಗು
ಕೂರಿಗೆ ೨-೩೮ವ ಬೀಜ ಬಿತ್ತುವ ಸಾಧನ
ಕೂವಕಂಭ ೪-೧೪ವ ಹಡಗಿನ ಮಧ್ಯದ ಕಂಭ
ಕೆಂಕ ೩-೩೬ ಕೆಂಪು
ಕೆಂಗಣ್ಣ ೨-೩೮ವ ಕೋಗಿಲೆ
ಕೆಂಗೋಲ್ ೮-೪೨ ಕೆಂಪಗೆ ಕಾಯಿಸಿದ ಬಾಣ
ಕೆಕ್ಕಳ ೧೩-೩೫ ಕೆರಳಿಕೆ
ಕೆನ್ನಂ ೭-೧೨, ೧೦-೩೪ ಅಧಿಕವಾಗಿ, ಹೆಚ್ಚಾಗಿ
ಕೆಯ್ತ ೩-೪೦, ೫-೧೨ ಕಾರ್ಯ, ಕೆಲಸ, ರಚನೆ
ಕೆಯ್ತಗು ೫-೧೧ವ ಯೋಗ್ಯರೀತಿಯಲ್ಲಿ ಅಲಂಕರಿಸು
ಕೆಳರ್ ೬-೧೯ವ ಗಟ್ಟಿಯಾಗಿ ಕೂಗು, ಕೆರಳು

ಕೇರ್ ೬-೫ವ ಗೋಡೆ
ಕೇರು ೨-೩೮ವ ಗೇರುಮರ
ಕೇಲ ೩-೨೩ ಮಣ್ಣಿನಿಂದ ಮಾಡಿದ ಗಡಿಗೆ
ಕೈಪಿಡಿ ೧-೪೮ ಕನ್ನಡಿ
ಕೈಪೊಡೆ ೯-೧೪ ಬಾಣದ ಹಿಡಿ
ಕೊಂತ ೧೦-೩೨ವ ಒನಕೆ
ಕೊಕ್ಕರಿಕೆ ೪-೮, ೧೦-೭ವ ಅಸಹ್ಯ
ಕೊಟ್ಟುಕ ೨-೩೮ವ ಟಿಟ್ಟಿಭ ಎಂಬ ಹಕ್ಕಿ
ಕೊತ್ತಳಿಗೆ ೧೨-೨೦ ಕೋಟೆಯ ತೆನೆ, ಬುರುಜು
ಕೊದಳ್ ೩-೫೭ ತೊದಲು, ಬಿಕ್ಕಲು
ಕೊಳ್ಕೊಡೆ ೭-೭೦ವ ಕೊಳುಕೊಡೆ, ಸಂಬಂಧ
ಕೊಱಚಾಟ ೫-೮ ಅಣಕ
ಕೋಡಗಗಟ್ಟು ೮-೭೩ ಕಪಿಯನ್ನು ಕಟ್ಟುವಂತಹ ಕಟ್ಟು
ಕೋಡು ೧೪-೨೩ವ ದಂತ, ಕೋರೆಹಲ್ಲು
ಕೋಳ್ ೪-೧೨, ೧೧-೩೯ ಕೊಳ್ಳೆ, ಹಿಡಿತ, ಆಕ್ರಮಣ
ಕೋಳಡ ೧-೨೪ (?)
ಕೋಳ್ಗುದಿಗೊಳ್ ೧೦-೧೦ ದುಃಖಪಡು
ಕೋಳ್ವಾಯ್ ೧೧-೪೧ವ ಸೆರೆಹಿಡಿದ ಸ್ಥಳ
ಕೋಱ್ಮೃಗ ೮-೧೩ ಕೋಡುಳ್ಳ ಪ್ರಾಣಿ
ಕೌಸುಂಭ ೧-೩೯ವ ಕೇಸರಿಬಣ್ಣ
ಕ್ಷಪಕ ೧೦-೩೧ವ ಜೈನಸಂನ್ಯಾಸಿ

ಖ

ಖಾತಿಕೆ ೧೧-೩೨ ಕೊಳ
ಖಾಸ ೧೩-೩೧ವ ಕೆಮ್ಮಲು
ಖೇಟ ೩-೧೨ವ ಅಡ್ಡಣ, ಗುರಾಣಿ

ಗ

ಗಂಡವರ್ಕಳ್ ೪-೩ವ ಶೂರರು
ಗಂಡವೇಟ ೮-೫೨ವ ಗಂಡುವೇಟ, ಗಂಡಸಿನಲ್ಲುಂಟಾಗುವ ಪ್ರೀತಿ (?)
ಗಂದಿಗವಸರ ೪-೧೦ವ ಸುಗಂಧ ದ್ರವ್ಯಗಳ ಅಂಗಡಿ
ಗಜೆ ೧೨-೪೬ವ ಗದೆ
ಗತ್ತ ೪-೫ ಗರ್ತ, ಕುಳಿ
ಗದ್ಯಾಣ ೪-೧ವ ನಿರ್ದಿಷ್ಟತೂಕದ ಹಣ
ಗರುಣಿ ೧೦-೩೩ವ, ೧೦-೩೬ವ ಗರುಡಿ (?)
ಗಾವುರ ೧೩-೨ ಗಾವರ, ನಾದ
ಗಾರಣ ೬-೧೨ವ ದೂರು
ಗಾವರ ೨-೨೮ ಧ್ವನಿ
ಗುಂಡವೇಷ ೯-೩೦ವ ಆಳಿನ ವೇಷ (?)
ಗುಗ್ಗುಳ ೧೦-೧೦ ಒಂದು ಬಗೆಯ ಸುಗಂಧ ಧೂಪದ್ರವ್ಯ
ಗುಡಿಗಟ್ಟು ೨-೧೧ವ ಸುತ್ತುಗಟ್ಟು
ಗುಣಿಯಿಸು ೧೦-೩೩ವ ಬಿಲ್ಲಿನ ಹಗ್ಗವನ್ನು ಧ್ವನಿಮಾಡು (?)
ಗುರುಗುಂಜೆ ೨-೪೧ವ ಗುರುಗುಂಜಿ ಬೀಜ
ಗುರ್ವಿಸು ೮-೪೬ ಅಗುರ್ವಿಸು, ಭಯಪಡು
ಗೂಂಟು ೭-೬೫ (?)
ಗೆತ್ತು ೧೧-೫೦ವ ತಿಳಿದು, ಭಾವಿಸಿ
ಗೊಂದಳ ೧-೨೧, ೧೨-೪೪ ಗುಂಪು
ಗೊಡ್ಡ ೨-೭೭ವ, ೪-೬ ತುಂಟಾಟ, ಚೇಷ್ಟೆ
ಗೋಮುಖಿ ೬-೨೪ವ ಒಂದು ನೋಂಪಿಯ ಹೆಸರು
ಗೋಶೀರ್ಷ ೯-೩ವ, ೯-೩೫ವ ಗಂಧದ ಮರ
ಗೋಱ್‌ಮೇಳ್ ೧೩-೨೨ವ (ದನಗಳ) ಹುಯ್ಯಲು, ಕಿರಿಚಾಟ
ಗೋಱುಂಡೆಗೊಳ್ ೯-೧೬ವ ದುಃಖಪಡು
ಗ್ರಂಥಿಮ ೨-೨೯ವ ಹೂವು ಕಟ್ಟುವ ಒಂದು ಬಗೆ

ಘ

ಘಟ್ಟಿವಳ್ಳ ೨-೨೮ವ, ೫-೫ವ ಗಂಧ ತೇಯುವವನು

ಘುಸಣಿ ೩-೧೧ವ ಕಷ್ಟ, ತೊಂದರೆ

ಘೋಟಕಾಯಿಲ ೧೯-೧೦೬ವ ರಾವುತ

### ಚ

ಚಂದ ೭-೭ ಒಂದು ಜಾತಿಯ ಮರ

ಚಟ್ಟ ೪-೨೮ವ, ೫-೩೧ ಛಾತ್ರ, ಶಿಷ್ಯ

ಚಲ್ಲ ೩-೭೨, ೧೩-೬ ಚಲ್ಲಾಟ, ವಿನೋದ

ಚಲ್ಲಂಬೇಱು ೩-೫೦ ಸಂತೋಷ ಹೆಚ್ಚಿಸು

ಚಲ್ಲಣ ೨-೩೨ ಚಡ್ಡಿ

ಚವುರಿ ೨-೩೮ವ ಚಮರೀಮೃಗ

ಚಾಮೀಕರ ೭-೭೨ ಚಿನ್ನ

ಚಾರಿ ೩-೭೦ವ ದಾಳ

ಚಿಕ್ಕುಟು ೭-೭೫ ಚಿಗುಟ

ಚೀರ ೯-೬ವ ವಸ್ತ್ರ

ಚೆಂಕೊನ್ನಿಗರಬ್ಬ ೫-೫ವ (?)

ಚೌಕಿಗೆ ೩-೬೯ವ ಮನೆಯ ಅಂಗಣ

ಚೌಪಳಿಕೆ ೨-೩೦ವ, ೧೧-೧೪ವ ಚೌಪಳಿಗೆ, ಮಂಟಪ

ಚೌವಟ ೧-೩ವ, ೯-೩೮ ನಾಲ್ಕುದಾರಿಗಳು ಸೇರುವ ಸ್ಥಳ

ಚೌವಳಿಗೆ ೫-೧೨ವ ಮಂಟಪ

### ಛ

ಛರ್ದಿಸು ೯-೩೦ ವಾಂತಿಮಾಡು

ಛಾತ್ರ ೩-೧ವ, ೫-೨ವ ಶಿಷ್ಯ

### ಜ

ಜಂಬಿರ ೭-೭ ಜಂಬೀರ, ನಿಂಬೆ

ಜಾಮಿಸು ೧೪-೫೦ವ ಸುಡು (?)

ಜಾಲಿಸು ೧೨-೭೧ವ ಅರಿಸಿ ತೆಗೆ

ಜಾಲೆಗಾಱ ೧೪-೩೫ವ ಬೆಸ್ತ

ಜಿಂಜಿರು ೧೩-೩೩ (?)

ಜಿವುಳಿದುಱಿ ೮-೫೩ ಚಿಗುಳಿಯನ್ನು ತುಳಿದಂತೆ ತುಳಿ

ಜೀಱಿಟ್ಟಿರ್ ೧೨-೫೧ ಜೀರೆಂದು ಶಬ್ದಮಾಡು

ಜೋವೆಱಿ ೮-೪೯ ಜೋಲಾಡು, ತೂಗಾಡು(?)

### ಠ

ಠಮಾಳ ೧೨-೮ ಕುಟಿಲ, ಮೋಸ

### ಡ

ಡಾಮರ ೨-೨೮ ಕೋಟಲೆ, ಹಿಂಸೆ

ಡೊಂಬೆಸಿರಿ ೧೧-೧೦೪ ಚಂಚಲೆಯಾದ ಲಕ್ಷ್ಮಿ

### ತ

ತಮಾಳ ೭-೭ ಹೊಂಗೆಯಮರ

ತರಟ್ಟು ೯-೭ವ ಬೋಳು

ತಲೆನೀರ್ ೧-೨೯ವ ಮಂಗಳಸ್ನಾನ

ತವಸಿಗ ೧೧-೮೬ ತಪಸ್ವಿ

ತಱುಂಬು ೧೪-೧೨ ಒರಟುನೆಲ

ತಱಿ ೮-೧೩ವ ಖದಿರೆಯ ಮರ

ತಱುಬು ೧೪-೩೪ವ ಒರಟುನೆಲ

ತಾೞ್ ೧-೧೧ ತಾಳೆಗರಿ, ಓಲೆಗರಿ

ತಿಂಟೆ ೩-೮ವ ರಾಶಿ, ಗುಡ್ಡೆ

ತಿದಿ ೯-೬೨ ಚರ್ಮದ ಚೀಲ

ತಿರುವಾಯ್ ೧೧-೧೪ವ ಬಿಲ್ಲಿನ ಹೆದೆ

ತೀಟ ೩-೮ವ ತೀಡುವಿಕೆ

ತುಮುಳ ೧೧-೧೨೨ ಭೀಕರ

ತುಯ್ಯಲ್ ೯-೩೨ವ ಪಾಯಸ

ತುಳಿ ೧೧-೧೦೫ ನಡುಕ, ಕಂಪನ (?)

ತುಱುಂಬು ೧-೪೦ವ ಮುಡಿದುಕೊಳ್ಳು

ತುಱುಗೆವೆಗಣ್ ೩-೪೫ ದಟ್ಟವಾದ ರೆಪ್ಪೆಕೂದಲ ಕಣ್ಣು

ತುೞಿಲಸಂದ ೧೦-೩೧ವ, ೧೧-೫೮ವ ವೀರ

ತುೞಿಲಾಳ್ ೧-೫೭ ವೀರಭಟ

ತೂಗುಂದಲೆ ೨-೧೧ವ ತೂಗಾಡುವ ತಲೆ

ತೆರ್ಪಱ್ ೮-೫, ೧೪-೬ವ, ೧೪-೫೭ವ ಎಚ್ಚತ್ತುಕೊಳ್ಳು

ತೆಲ್ಲಿಗ ೧೪-೪೯ವ ಗಾಣಿಗ
ತೊಂಗಲ್ ೧೪-೬ವ ಕುಚ್ಚು
ತೊಂಡಿಕೆ ೨-೬, ೫-೩೧ವ ತುಂಟತನ
ತೋಡು ೧೧-೧೧೦ ಬಾಣವನ್ನು ತೊಡುವಿಕೆ
ತೋಲ್ ೩-೨೩ ತೊಗಲು, ಚರ್ಮ
ತ್ರಿಪತಾಕ ೨-೩೩ವ ಒಂದು ಹಸ್ತಾಭಿನಯ
ತ್ರಿಸ್ಥೂಳ ೧೧-೪೧ವ ತ್ರಿವಿಧ ಶಕ್ತಿ (?)

## ದ

ದಂಡಿತ ೨-೪೦ (?)
ದಂದುಗ ೧-೧೫ ತೊಂದರೆ, ಕಷ್ಟ
ದಕ್ಕಾಲಿ ೧೪-೪೭ವ ಗುಳಿಬಿದ್ದ ಕಣ್ಣು
ದಕ್ಕು ೬-೭ವ ದಸಿ, ಚೂಪಾದ ಗೂಟ
ದಕ್ಕುಂದಲೆ ೨-೧೧ವ ಶೂಲದ ಮೇಲಣ ತಲೆ
ದಯಿತ ೩-೧೭ ಪತಿ, ಯಜಮಾನ
ದವಳಾರ ೩-೪೯ವ ಅರಮನೆ
ದಶವಂದ ೧೦-೩೬ವ ಹತ್ತರಲ್ಲಿ ಒಂದು ಭಾಗ
ದಳಿಂಬ ೩-೫೪ವ, ೧೪-೩೦ವ ಬಟ್ಟೆ, ಶುಭ್ರ ವಸ್ತ್ರ
ದಾಹಿಸು ೭-೭೦ವ ದಹಿಸು
ದಿಣರ್ ೧೪-೨೬ ಒಂದು ಅನುಕರುಣ ಶಬ್ದ
ದುರ್ಯೋಧನವಾಡಿ ೨-೩೮ವ ದುರ್ಯೋಧನನ ಅಂತಃಪುರ (?)
ದೂಪೆ ೨-೧೧ (?)
ದೊಮ್ಮಳಿಸು ೧೧-೧೧೨ ಸಂಭ್ರಮದಿಂದ ಸುತ್ತಾಡು
ದ್ವಿಪ ೫-೩೧ ಆನೆ

## ನ

ನಂದ್ಯಾವರ್ತ ೭-೩೦ ನಂದಿಬಟ್ಟಲಹೂವು
ನಣ್ಪು ೧೧-೨೨ವ ಸ್ನೇಹ
ನಾಗ ೭-೭ ಒಂದು ಜಾತಿಯ ಮರ
ನಾಗವಟ್ಟಣಿಗೆ ೩-೩೭ ಒಂದು ಬಗೆಯ ವಸ್ತ್ರ
ನಾಣರ್ ೨-೩೨ವ (?)
ನಾಣಿಲಿ ೩-೬೧, ೧೧-೧೦೪ ನಾಚಿಕೆಯಿಲ್ಲದ
ನಾತ ೫-೫ ದುರ್ವಾಸನೆ
ನಾರ್ ೪-೧೨ ದುರ್ವಾಸನೆ
ನಾವಿದ ೯-೬ವ ಕ್ಷೌರಿಕ, ಹಜಾಮ
ನಾಱಿಕ್ಸೂಳೆ ೧೧-೧೦೪ ಪ್ರಸಿದ್ಧಳಾದ ಜಾರೆ
ನಿಕ್ಕುವ ೮-೧೬ ನಿಜ, ಸತ್ಯ
ನಿಚ್ಚಟ ೧೩-೨೫ವ, ೧೩-೨೮ವ ದೃಢ, ಸ್ಥಿರ
ನಿಷ್ಠೆವಡಿಸು ೧೦-೩೧ವ ನಿಷ್ಠೆಯನ್ನು ಹೊಂದು
ನಿತ್ತರಿಸು ೧೦-೨೦ವ, ೧೧-೮೩ ನಿರ್ವಹಿಸು
ನಿಧುವನ ೨-೪೯ ಸಂಭೋಗ
ನಿಪ್ಪುಗೆ ೪-೧೪ವ ಹೆಚ್ಚಾದ (?)
ನಿಯಮ ೮.೬೫ ನೇಮ
ನಿಸದ ೬-೧೯, ೧೧-೭೭ ನಿಜ, ಸತ್ಯ
ನಿಱುದಲೆ ೫-೭ ಕ್ರಮವಾಗಿ ಬಾಚಿದ ತಲೆ
ನೀರ್ಗಾದಿಗೆ ೧-೨೩ ನೀರುಳ್ಳ ಕಂದಕ
ನೀಲಾವಳಿ ೧-೪೨ವ ನೀಲಿಬಣ್ಣದ ರೇಷ್ಮೆವಸ್ತ್ರ
ನುಡಿವಳಿ ೧೧-೮೦ವ ಪ್ರತಿಜ್ಞೆ, ಮಾತು
ನುಣ್ಬಳಿ ೧೪-೩೩ವ (?)
ನುಲುವ ೭-೬೭ (?)
ನೆಗರ್ತೆ ೩-೬೨, ೪-೩೪, ೮-೫೨ವ ನೆಗಟಿತ್ತಿ, ಪ್ರಸಿದ್ಧಿ
ನೆಯ್ಯೇಱಿಸು ೧೧-೧೩ವ ಎಣ್ಣೆಯನ್ನು ಹಚ್ಚು
ನೆಲ್ಲಕೆಯ್ ೧-೧೮ವ ಬತ್ತದ ಗದ್ದೆ
ನೆಟಿಲ್ ೧೧-೨೪ವ ಒಂದು ಜಾತಿಯ ಮರ
ನೇಣ್ ೪-೨೬ವ ಹಗ್ಗ
ನೇಲಿಸು ೧-೧೨ ಸೇರಿಸು, ತಗುಲುಹಾಕು (?)
ನೊಕ್ಕ ೨-೧೪ ಹೊರಬಂದ (?)
ನೊಟಿಲೆ ೭-೬೭ ಒಂದು ಬಗೆಯ ನೀರುಹಾವು

## ಪ

ಪಂಗಾಗೆ ೨-೩೮ವ ಒಂದು ಜಾತಿಯ ಕಾಗೆ

ಪಂಚತ್ವ ೧೨-೨೯ ಸಾವು
ಪಂಚರಾಯಿತ ೧೦-೩೦ವ (?)
ಪಂಚವಳ್ಳಿ ೮-೬೧ ಒಂದು ಜಾತಿಯ ಬಳ್ಳಿ
ಪಂದಲೆ ೨-೧೭ ಆಗತಾನೆ ಕತ್ತರಿಸಿದ ತಲೆ
ಪಚ್ಚು ೧೨-೬೧ ಎರಡುಭಾಗ ಮಾಡು
ಪಟಳಕ ೧೩-೨೮ವ ಬುಟ್ಟಿ, ತಟ್ಟೆ
ಪಟ್ಟಂದ ೧೧-೧೨ವ ರೀತಿ, ಸ್ಥಿತಿ (?)
ಪಟ್ಟೆ ೧೩-೨೨ವ ಕೊಟ್ಟಿಗೆ
ಪಟ್ಟಿಸ ೧೧-೫೦ವ ಬೆಲೆಬಾಳುವ ವಸ್ತ್ರ (?)
ಪಡಡಕ್ಕೆ ೭-೭೨ ಮದ್ದಳೆ
ಪಡಲಿಗೆ ೯-೧ವ ಪಟಲಕ(ತ್ಸ), ಚಿಬ್ಬುಲು
ಪಡಿ ೬-೫ವ ಬಾಗಿಲು
ಪಡಿಯಱ ೯-೬ವ ಬಾಗಿಲುಕಾಯುವವನು
ಪಡುಕೆ ೩-೧೬ ಪಡೆಯುವುದು, ಹೊಂದುವುದು
ಪಡುಕೆನಾಱು ೧೩-೩೪ ದುರ್ನಾತ ಹೊಡೆ
ಪಡೆವು ೮-೫೦ವ ಹೊಂದಿದುದು, ಪಡೆದದ್ದು
ಪಡೆವಳ ೧-೨೭ವ ಸೇನಾಧಿಪತಿ
ಪಣ್ ೬-೪೫ವ, ೮-೭೭ ಸಜ್ಜುಗೊಳಿಸು
ಪಣ್ಣುಗೆ ೫-೨ವ ಸಜ್ಜು
ಪತ್ತುವಿಡು ೧೪-೨೭ವ ಕೂಡಿದ್ದನ್ನು ಬಿಡು
ಪದ ೧೧-೪೯ವ ಹದ, ರೀತಿ
ಪದವಿಡಿ ೨-೪೩ ಬೆದೆಯ ಹೆಣ್ಣಾನೆ
ಪನ್ನತ ೬-೫೫, ೮-೬ ಶೂರ, ಪರಾಕ್ರಮಿ
ಪಯ್ಯರ್ ೧೨-೫೮ ಬಾಲಕರು
ಪರಕಲಿಸು ೫-೫ವ ಹರಡು
ಪರತ್ರೆ ೧-೫೭, ೧೧-೧೦೦ ಪರಲೋಕ
ಪರಿ ೧೧-೬೨ವ ಕೊರಕಲು
ಪರಿಪಾಡಿ ೨-೫೯ ಪರಿಪಾಟಿ, ಕ್ರಮ
ಪರಿಪಾಱು ೯-೬೯ ನಿರೀಕ್ಷಿಸು
ಪರೇತವನ ೨-೧೦ವ ಶ್ಮಶಾನ
ಪಲಗೆ ೩-೭೦ವ ಹಲಗೆ, ಆಟ

ಪಲ್ಲಣ ೪-೩೪ವ ಪಲ್ಯಯನ, ಜೀನು
ಪವಣ್ ೨-೩೨ ಪ್ರಮಾಣ
ಪಶ್ಚಿಮ ೧೨-೬೨ ಬೆನ್ನು, ಹಿಂಭಾಗ
ಪಸ ೯-೪೧ವ ಬಯಕೆ, ಆಸೆ
ಪಸದನ ೧-೪೩, ೭-೭೪ವ ಅಲಂಕಾರ, ತೊಡಿಗೆ
ಪಸರ ೫-೫ವ ಅಂಗಡಿ
ಪಸುಗೆ ೯-೫೨ವ ಹಂಚಿಕೆ, ವಿಧಾನ
ಪಸೆ ೫-೨೨ವ, ೫-೪೪ ಹಸೆ, ಪೀಠ, ಆಸನ
ಪಳಂಕು ೩-೧೮ ಗಾಢಸ್ಪರ್ಶನೆ, ಬಲವಾಗಿ ಒತ್ತು
ಪಳಕು ೪-೧೫ವ ಜರ್ಜರಿತವಾಗು
ಪಳಚ್ಚನೆ ೨-೩೮ ಪ್ರಕಾಶಮಾನವಾಗಿ
ಪಳಿತ ೧೩-೪೫ವ ಒಂದು ನಿಗದಿಯಾದ ಕಾಲ
ಪಳುಕು ೩-೧೧ವ ಸ್ಫಟಿಕ
ಪಱೆಯ ೫-೧೪, ೧೫, ೫-೧೫ವ } ತಮಟೆ (?) ಬಾರಿಸುವವನು
ಪಱಿಗ ೫-೧೨ವ }
ಪಱಿಯಿಗೆ ೧೧-೬೨ವ ಬಾವುಟ
ಪಱಹ ೫-೧೨ವ ಪಟಹ, ತಮಟೆ
ಪಱಿ ೨-೧೮ವ, ೪-೩೬ವ, ೮-೭೮ ಬಟ್ಟೆ, ನಿಂದೆ, ಅಪಖ್ಯಾತಿ
ಪಱೆ ೧೨-೭ವ ಹಳೆಯ (?)
ಪಾಂಗು ೩-೪೪, ೮-೪೮ ರೀತಿ
ಪಾಗುಡ ೯-೫೯ವ ಉಡುಗೊರೆ
ಪಾಟಳ ೯-೧೦೪ ಪಾದರಿಹೂವು
ಪಾಠಕಾಱ ೫-೫ವ ಹೊಗಳುಭಟ್ಟ
ಪಾರಣೆ ೫-೩೪ವ ಉಪವಾಸವ್ರತ
ಪಾರಸಿಗ ೪-೩೫ವ ಪಾರಸಿ ದೇಶದವನು
ಪಾರಿಸು ೫-೩೪, ೫-೩೫ವ ಉಪವಾಸವ್ರತ ಮುಕ್ತಾಯ ಮಾಡು
ಪಾರ್ವಂತಿ ೧-೫೧ವ ಬ್ರಾಹ್ಮಣರ ಹೆಂಗಸು
ಪಾವುಗೆ ೮-೨೯ವ ಮರದ ಮೆಟ್ಟು
ಪಾಸೆ ೨-೩೮ವ ಹಗ್ಗ (?)

ಪಾಱುಂಬಳೆ ೧೨-೧೧೪ವ ಚಕ್ರ
ಪಾೞಾವಳಿ ೯-೬ವ (?)
ಪಾೞಿ ೧-೧೮ವ, ೯-೫೨ವ ಸಾಲು, ಕ್ರಮ
ಪಾೞಿಕಾಱ ೧೪-೧೬ವ ಸರದಿಯ ಸೇವಕ
ಪಿಂಜರಿತ ೧-೧೭ವ ಕೆಂಪುಮಿಶ್ರ ಹಳದಿ
ಪಿಂಡಿವಾಳ ೧೧-೧೧೪ವ, ೧೨-೬೩ವ ಬಿಂಡಿವಾಳ, ಒಂದು ವಿಧದ ಆಯುಧ
ಪಿಡಿಕುತ್ತು ೫-೪೧ ಬಲವಾಗಿ ಚುಚ್ಚು, ತಿವಿ
ಪಿಣಿಲ್ ೪-೪೩ವ ಕೂದಲ ಗಂಟು
ಪಿನದ್ಧ ೮-೧೪ ತೆತ್ತಿಸಿದ
ಪಿಸುಣ್ ೮-೭೪ ಚಾಡಿ, ದೂರು
ಪುಗುಳ್ ೧೪-೨೮ ಬೊಕ್ಕೆ, ಬೊಬ್ಬೆ
ಪುಣ್ಬು ೧೧-೪೫ ಪ್ರತಿಜ್ಞೆಮಾಡಿಸು
ಪುದುವಾೞ್ ೩-೩೪ ಕೂಡಿಬಾಳು
ಪುದುವಿರು ೧-೭೯ವ ಕೂಡಿರು
ಪುಯ್ಯಲ್ ೫-೩೧ವ ಕೂಗಾಟ
ಪುಯ್ಯಲಿಗ ೧೧-೪೨ವ ಸಾರುವವನು, ಗಟ್ಟಿಯಾಗಿ ಕೂಗುವವನು
ಪುಯ್ಯಲ್ಚು ೪-೧೯ವ ಗಟ್ಟಿಯಾಗಿ ಕೂಗು, ಗೋಳಿಡು
ಪುಪ್ಪ ೫-೬ವ ಪುಷ್ಪ
ಪುಳ್ಳಿವೇಡ ೯-೧೬ ಕ್ಷುದ್ರಬೇಡ
ಪೂಣ್ ೮-೩ವ ಪ್ರತಿಜ್ಞೆ
ಪೂಣೆ ೩-೬೧ ಪ್ರತಿಜ್ಞೆಮಾಡಿದವನು
ಪೂಣಿಕೆ ೩-೬೧ ಪ್ರತಿಜ್ಞೆ
ಪೂವಲಿ ೩-೮ವ ಹೂವುಗಳಿಂದಾದ ಅಲಂಕಾರ, ಹೂವುಗಳ ರಂಗವಲ್ಲಿ
ಪೆಪ್ಪಳಿಸು ೬-೧೮ವ ನಡುಗು, ತಲ್ಲಣಗೊಳ್ಳು
ಪೆರ್ಮಡಿಲ್ ೧-೪೭ ದೊಡ್ಡ ಗೋಡೆ
ಪೆಳದು ೭-೬೪ ಪೆಳರ್ಚು, ಭಯ (?)
ಪೆಳಱ್ ೫-೧೮ವ, ೬-೧೩ ಭಯ
ಪೆಪ್ಪಳಿಸು ೧೧-೨೭ ಹೆದರು
ಪೆಟಿಕು ೭-೬೭ ಜಗಳ
ಪೇನಿ ೨-೧೧ವ ಪಿಶಾಚಿ (?)
ಪೇಪಂದಿ ೪-೪ವ ಹೇಲು ತಿನ್ನುವ ಹಂದಿ
ಪೇಸೇಱ್ ೧೧-೪೨ವ, ೧೨-೬ವ ಜುಗುಪ್ಸೆಪಡು, ಅಸಹ್ಯಪಡು
ಪೊಂಕ ೧೧-೧೫ ಗರ್ವ, ಅಹಂಕಾರ
ಪೊಂಕು ೧೩-೩೧ವ ಹೊಡೆ, ಬಡಿ (?)
ಪೊಂಗು ೭-೩೬, ೮-೧೩ ಉಕ್ಕು, ಹೊರಹೊಮ್ಮು
ಪೊಗರ್ತೆ ೮-೫೨ವ ಹೊಗಳಿಕೆ
ಪೊಚ್ಚಱ್ ೧೦-೩೪, ೧೨-೪೩ ಸ್ಫುರಿಸುವಿಕೆ, ಪರಾಕ್ರಮ, ಶಕ್ತಿ
ಪೊಡರ್ ೬-೪೫ವ ನಡುಗು
ಪೊಡರ್ಪು ೮-೫, ೧೩-೨೦, ೧೪-೩೧ ಕಳೆ, ಕಾಂತಿ, ಶಕ್ತಿ
ಪೊರಸು ೬-೯ವ ಮಂಚ
ಪೊರಳ್ಕೆ ೪-೩೭ವ ತೊಳಲಾಟ
ಪೊರೆಪು ೬-೪೬ ಪಡೆವು (?)
ಪೊಱಂಡ ೯-೨೬ ವಿಕೃತವಾದ ದೇಹವುಳ್ಳವನು?
ಪೊಱಮಾಱು ೧೨-೪೧ ಹಿಂದೆಗೆ, ಪಲಾಯನ
ಪೊಱಸು ೨-೩೮ವ, ೧೧-೨೬ ಒಂದು ಬಗೆಯ ಪಾರಿವಾಳ, ಕಪೋತ
ಪೋಟಿಲ್ ೫-೩೩ವ ಮರದ ಪೊಟರೆ
ಪ್ರತಿಪತ್ತಿ ೯-೪೪ವ, ೧೧-೨ವ ಸತ್ಕಾರ
ಪ್ರತ್ಯಾಖ್ಯಾನ ೧೦-೩೧ವ ತಿರಸ್ಕಾರ, ದೂರೀಕರಿಸುವಿಕೆ
ಪ್ರಮಾದವಲಗೆ ೪-೧೪ವ ಜೀವರಕ್ಷಕ ಹಲಗೆ
ಪ್ರಸಾಧನ ೬-೨೮ವ ಉಡುಪು
ಪ್ರಾಶ್ನಿಕ ೨-೩೨ವ ತೀರ್ಪುಗಾರ

ಬ

ಬಂಚಿಸು ೨-೬ವ, ೩-೩೩ ವಂಚಿಸು

ಬಂಧುರಾಯಿಕ ೧೧-೧೧೭ವ (?)
ಬಕ್ಕುಡಿ ೯-೬೭ವ ತಳಮಳ, ಭಯ
ಬಟ್ಟುಡು ೨-೩೮ವ (?)
ಬಡ್ಡಿಸು ೯-೨೬ವ ಬಡಿಸು
ಬಣರುಡೆ ೯-೧೪ (?)
ಬದ್ದು ೩-೬೧ ಪ್ರಾರ್ಥಿಸು
ಬದ್ದೆ ೩-೪೮ ಪ್ರಾರ್ಥನೆ
ಬರ್ದೆ ೩-೫೪ ಪ್ರಾರ್ಥನೆ
ಬನ್ನ ೪-೧೪ವ, ೧೪-೪೮ ಭಂಗ
ಬರಿ ೪-೨೨ವ ಪಕ್ಕೆಲುಬು
ಬಲ್ಕಣಿ ೬-೫೦ವ, ೭-೬೭ ಶೂರ
ಬವಣಿಗೆ ೧-೩೯ವ ಪರಿಬವಣಿಗೆ, ಸಂಚಾರ
ಬಸ ೬-೧೭ವ, ೮-೪೨ ಸಾಧ್ಯ, ಶಕ್ಯ
ಬಸನ ೧೦-೧೯ ವ್ಯಸನ
ಬಸನಿ ೩-೪೮, ೧೧-೨೪ವ ವ್ಯಸನಿ
ಬಸನೆ ೩-೬೮ (?)
ಬಸಿರ್ಪೊಸು ೯-೫ವ, ೯-೯, ೧೩-೭ ಹೊಟ್ಟೆಯನ್ನು ಮುಟ್ಟು (?)
ಬಹಿರಿಗೆ ೪-೪೧ವ, ೯-೫ವ ಬಯಲುಪ್ರದೇಶ
ಬಹುಳ ೧೦-೩೨ವ ಹೆಚ್ಚು, ಪ್ರವೀಣ
ಬಳಾರಿ ೬-೫ವ ಒಂದು ದೇವತೆ
ಬಳ್ಳಿಮಾಡ ೪-೪೪ ಲತಾಗೃಹ
ಬಳ್ಳು ೬-೮ ನರಿ
ಬಱುಬ ೧೧-೯೧ ಕೃಶನಾದವನು
ಬಱುಳಿ ೨-೩೮ವ ಒಂದು ಜಾತಿಯ ಹಕ್ಕಿ (?)
ಬಟೀಕಾಱ ೧೦-೨೪ ಅತಿಥಿ (?)
ಬಾಗೆ ೮-೫೨ ಒಂದು ಜಾತಿಯ ಮರ, ಶಿರೀಷ
ಬಾಜಿಸು ೫-೩೨ವ ನುಡಿಸು, ಬಾರಿಸು
ಬಾಧ್ಯೆಗೀಳಿಸು ೧೨-೭೩ವ ಅಜ್ಞಾಧೀನನನ್ನಾಗಿ ಮಾಡು
ಬಾರಸ ೨-೩೩ (?)
ಬಾರಿಸು ೧೦-೨೫ ತಡೆ
ಬಾಸಿಗ ೬-೩೫ವ ಹಾರ, ಮಾಲೆ, ದಂಡೆ
ಬಿಗುಱ್ ೮-೨೭ವ, ೧೪-೩೩ ಹೆದರು, ಭಯಪಡು
ಬಿದಿರ್ಚು ೪-೩ವ, ೬-೫೪ ಹರಡು
ಬಿನ್ನಣಿ ೫-೧೫ ಚತುರ, ನಿಪುಣ
ಬಿನ್ನನೆ ೧೨-೨೫ ಬಿನ್ನಗೆ, ಸುಮ್ಮನೆ, ಮೌನವಾಗಿ
ಬಿರ್ದು ೨-೧೧ವ, ೮-೩೫ವ ಔತಣ
ಬಿಲ್ಲು ೨-೩೮ವ ಒಂದು ಜಾತಿಯ ಮರ
ಬಿಸಸನ ೧೧-೪೧ ಘಾತಿಸುವುದು, ಹೊಡೆತ
ಬಿಳಿಲು ೨-೩೮ವ ಒಂದು ಜಾತಿಯ ಮರ
ಬೀವು ೩-೨೨, ೯-೬೮ವ ಒಂದು ವಿಧದ ಮಣ್ಣಿನ ಪಾತ್ರೆ
ಬೀಸರ ೩-೧೮ ಅಳಿಸಿಹೋಗು, ಹಾಳಾಗು
ಬುಡುಕೆ ೧೧-೨೧ (?)
ಬೂತು ೧೨-೩೧ವ ಸೇವಕ, ಸುದ್ದಿಗಾರ (?)
ಬೆಗಡು ೬-೧೮ವ ಭಯ
ಬೆಗಱ್ ೧೪-೪೫ ಭಯಪಡು
ಬೆನ್ನೀರು ೧೨-೫೨ವ ಬಿಸಿನೀರು
ಬೆಬ್ಬೆ ೪-೧೨ ಕಳವಳ, ಗಾಬರಿ
ಬೆಸಲ್ ೬-೩ವ ಪ್ರಸವಿಸು, ಹೆರು
ಬೆಳರ್ಗತ್ತಿ ೫-೫ ಬಿಳಿಯಕತ್ತಿ
ಬೆಳ್ಕಱ್ ೧೪-೩೭ವ ಭಯ
ಬೆಳ್ಗತ್ತಿ ೧೩-೩೪ವ ಬಿಳಿಯ ಕತ್ತಿ
ಬೆಳ್ಕುಱ್ ೯-೩೦, ೧೧-೩೧ವ, ೧೩-೧೭, ೧೩-೩೭ ಭಯ
ಬೆಳ್ಮಾಡು ೩-೩೦ವ ಮರುಳುಗೊಳಿಸು
ಬೇಳಾವನ ೧-೧೭ವ ವೇಲಾವನ, ಸಮುದ್ರದ ಕಡಿಯ ಬನ
ಬೇಱ್ ೧೪-೧೪ ಬೇಡು

ಬೈಕೆಂಗುಳಿ ೧೩-೩೩ವ ತಿರುಕ, ಭಿಕ್ಷೆಬೇಡಿ ತಿನ್ನುವವ

ಬೈಕೆಂಗೊಳ್ ೨-೩೮ವ ಭಿಕ್ಷೆಬೇಡು

ಬೊಜಗ ೩-೪೫ವ ವಿಟ

ಬೊಡ್ಡಣವಾವಿ ೧-೨೧ವ, ೧೩-೩ವ ವರ್ಧನವಾಪಿ, ತುಂಬಿದ ಬಾವಿ

## ಭ

ಭಂಡ ೪-೧೦ವ ಭಾಂಡ, ವಸ್ತು

ಭುಜಂಗ ೬-೫ವ ಸರ್ಪ

ಭ್ರಾಜಿಸು ೫-೧೪ ಸೆಳೆ, ಆಕರ್ಷಿಸು

## ಮ

ಮಂಟವಿಗೆ ೧೩-೨೧ವ ಮಂಟಪ

ಮಂತಣ ೪-೬ವ, ೭-೧ವ ಮಂತ್ರಾಲೋಚನೆ

ಮಂದುರ ೧೪-೨೬ ಕುದುರೆಲಾಯ

ಮಗಳ್ಮಾ ೧೨-೬೩ ವಿಧೇಯತೆ

ಮಗುಚುರ್ಚು ೯-೧೬ವ ಹಿಂದಿರುಗು

ಮಣ್ಮಟಿ ೧೨-೫೪ವ ರೂಪಳಿದ ಸಾವು

ಮದವಳಿಗೆ ೧೩-೨೨ವ ಮದುವೆ ಹೆಣ್ಣು, ವಧು

ಮದಿಲು ೯-೨೫ವ ಪೌಳಿ, ಗೋಡೆ

ಮದುವಳಿಗೆ ೯-೬ವ ಮದುವೆ ಹೆಣ್ಣು

ಮನಂಗಾಪು ೧೦-೨೮ವ ಮನಸ್ಸಿನ ರಕ್ಷಣೆ

ಮರಕತ ೧-೪೧ವ ಪಚ್ಚೆ

ಮರವಡು ೫-೧೩ವ, ೮-೫ ಎಚ್ಚರತಪ್ಪು

ಮರವಾಳ್ ೩-೨೬ ಮರದಿಂದ ಮಾಡಿದ ಕತ್ತಿ

ಮರಳಿ ೨-೩೮ವ ಒಂದು ಜಾತಿಯ ಹಕ್ಕಿ

ಮಳೀಮಸ ೧೧-೬೨ ಕೊಳಕು

ಮಱಲುಂದು ೧೪-೩೯ ವೈಮರೆ

ಮಱಸಿಗೆ ೮-೫೭ ವೈಮರೆವು

ಮಱುಕ ೧-೫೩ ದುಃಖ

ಮಱಿವಾರ ೧೧-೪೯ವ ಮರೆಯಾದ ಸ್ಥಳ

ಮಱಿವಾೞ್ ೭-೬೪ ಗುಟ್ಟಾಗಿ ಬಾಳು

ಮಾರ್ಕೊಳ್ ೪-೨ವ ಪ್ರತಿಭಟಿಸು

ಮಾರ್ಪಡಿ ೧೨-೩೩ ಪ್ರತಿಸೈನ್ಯ (?)

ಮಾಲ್ ೧೪-೩ವ ಅಲ್ಪಪದಾರ್ಥ (?)

ಮಾಸಾದಳವಿ ೧೪-೨೫ ಮಹಾ ಸಾಹಸದ ಪ್ರಮಾಣ (?)

ಮಿಸಿಸು ೬-೯ವ ಸ್ನಾನಮಾಡಿಸು

ಮಿಳಿ ೯-೬೮ವ, ೧೩-೨ ದಪ್ಪ ಹಗ್ಗ

ಮಿಳಿರ್ ೨-೫, ೩-೮ವ ಚಲಿಸು, ಅಲ್ಲಾಡು

ಮೀಂಗುಲಿ ೨-೩೮ವ ಬಕಪಕ್ಷಿ

ಮೀಂಗುಲಿಗ ೨-೩೮ವ, ೫-೩೧ವ ಮೀನನ್ನು ಕೊಲ್ಲುವವನು, ಬೆಸ್ತ

ಮೀಸಿಸು ೧೧-೧೩ವ ಮೀಯಿಸು

ಮುಂಗುರಿ ೧೧-೨೫ ಮುಂಗುಸಿ, ಕೀರ

ಮುಖವಾರ್ತೆ ೧೦-೩೮ವ ಸಮಾಚಾರ

ಮುಟ್ಟುಗೆಡು ೧೧-೬೨ವ ಬೇರೆ ದಾರಿಕಾಣದಾಗು, ನಿರುಪಾಯನಾಗು

ಮುಟ್ಟುಪಡು ೪-೮ ಮುಟ್ಟಾಗು (?)

ಮುಟ್ಟೆವರಿ ೪-೧ವ ಹತ್ತಿರ ಬರು

ಮುಮ್ಮರಿ ೭-೬೨ ಮುಮ್ಮಟಿ (?)

ಮುಮ್ಮಟಿ ೭-೮೦ವ ಮುಮ್ಮುಟಿ, ರೂಪಳಿದ ಸಾವು

ಮುಮ್ಮುರಿ ೧೦-೧೦ ಕಾಸಿದ ಮಳಲ್

ಮುಸು ೧-೧೯ ಕಪ್ಪುಮುಖದ ದೊಡ್ಡ ಕೋತಿ

ಮುಸುಂಬು ೬-೨೬ ಮೂತಿ

ಮೂಗಿ ೨-೩೮ವ ಒಂದು ಜಾತಿಯ ಹಕ್ಕಿ (?)

ಮೂಗಿಟ್ಟೆೞು ೮-೩೬ ಮೂಗನ್ನು ಇಟ್ಟು ಹತ್ತು, ಕಷ್ಟಪಟ್ಟು ಹತ್ತು

ಮೂಡಿಗೆ ೧೧-೧೧೦ ಬತ್ತಳಿಕೆ

ಮೂರಿವಿಡು ೧೧-೪೧ ಬಿರುಕುಬಿಡು

ಮೃಣಕ್ತಿ ೨-೫೦ (?)

ಮೆಚ್ಚವಣಿಗೆ ೧೧-೮೦ವ ಮೆಚ್ಚನುಳ್ಳುದು

ಮೆಯ್ದಳ್ ೧೩-೩೧ವ (?)
ಮೆಚ್ಚಿಡು ೪-೧೪ವ, ೭-೬೯ ವಂಚನೆಗೊಳ್ಳು, ಮೋಸಹೋಗು
ಮೋಳಸ ೨-೩೨ವ (?)
ಮೊಕ್ಕಳ ೧೪-೩೭ವ ವಿಶೇಷವಾಗಿ
ಮೊಗ್ಗು ೮-೨೫ ಸಾಧ್ಯ
ಮೊಟಗು ೭-೩೮ವ ಒಂದು ಜಾತಿಯ ಮರ
ಮೋದು ೬-೪೪ ಹೊಡೆ

## ಯ

ಯಾನಪಾತ್ರ ೪-೧೨ವ ಹಡಗು

## ರ

ರಣ ೪-೧೪ವ ಹಡಗಿನ ಒಂದು ಭಾಗ (?)
ರಣಮಾರ ೧೧-೯೪ ಯುದ್ಧದಲ್ಲಿ ನಾಶಮಾಡುವವನು, ರಣಭಯಂಕರ
ರಯ್ಯ ೩-೮ ರಮ್ಯ, ಸುಂದರ
ರುಂಜೆ ೧೪-೨೫ವ ಕಂಚಿನ ನಗಾರಿ
ರೂಪುಗರೆ ೧೧-೧೩ವ ರೂಪನ್ನು ಮರೆಮಾಚು

## ಲ

ಲಂಪಳಿ ೪-೩೬ವ ಲಂಪಟತ್ವ, ಅತಿಯಾಸೆ
ಲೋಗೇಶ್ವರ ೧೨-೧೨ ಲೋಯಿಸರ (?)
ಲೋಚುಗೆಯ್ ೧೦-೩೦ವ ತಲೆಗೂದಲನ್ನು ಕೀಳು
ಲೋಳೆ ೯-೩೮ವ ಜೊಲ್ಲು

## ವ

ವಲ್ಲಭ ೧೨-೫೧ (?)
ವಿಗುರ್ವಣ ೯-೧೧೨ವ ಭಯಂಕರ
ವಿಚಕಿಳ ೨-೪೪ ಒಂದು ಜಾತಿಯ ಮಲ್ಲಿಗೆ, ಗಿರಿಮಲ್ಲಿಗೆ
ವಿಧುಮುಖಿ ೮-೧೦ ಚಂದ್ರಮುಖಿ
ವಿದ್ದ ೭-೭೧ವ ಹೋಲಿಕೆ
ವಿಸರುಹ ೨-೩೯ ತಾವರೆ
ವಿಸ್ತರಿಗೆ ೩-೬೯ವ ವಿಸ್ತರ, ಪೀಠ
ವೃಥೆ ೩-೫ ನಿರರ್ಥಕ
ವೇಗಾಯ್ಲಿಕೆ ೧೨-೧೧ ವೇಗ, ರಭಸ
ವೇಢಿಮ ೨-೨೯ವ ಹೂವು ಕಟ್ಟುವ ಒಂದು ಬಗೆ
ವೇಥಿಮ ೨-೨೯ವ ಹೂವು ಕಟ್ಟುವ ಒಂದು ಬಗೆ
ವೇಸರಿ ೧-೪೩ವ, ೩-೪೦ವ ಹೆಣ್ಣು ಹೇಸರಗತ್ತೆ
ವೈತಾಳಿಕ ೧-೩೯ವ ಹೊಗಳುಭಟ್ಟ
ವ್ಯಂತರದೇವ ೪-೧೯ವ ಒಂದು ಬಗೆಯ ದೇವತೆ
ವ್ಯಾಳ ೩-೨೯ವ, ೩-೪೦ವ ದುಷ್ಟ, ಕ್ರೂರಿ

## ಶ

ಶಕುನಿ ೯-೨೦ವ ಒಂದು ಜಾತಿಯ ಹಕ್ಕಿ
ಶಲ್ಯ ೧೩-೩೧ವ ಮೂಳೆ
ಶಿಖಂಡಿ ೨-೩೮ವ ನವಿಲು

## ಸ

ಸಂಗತ್ಯ ೨-೩೫ವ ಜೊತೆ, ಸಹವಾಸ
ಸಂಗಾಣಿ ೨-೫೪ವ (?)
ಸಂಘಾಯಿಮ ೨-೨೯ವ ಹೂವುಕಟ್ಟುವ ಒಂದು ಬಗೆ
ಸಂಬಿಸು ೩-೪೪ ಕೂಡಿಸು
ಸಂತಾರ ೧೦-೩೦ವ, ೧೦-೩೧ ಮರಣಸಮಾಧಿ
ಸಂಧಾರಿತ ೧-೩೬ ಕೂಡಿದ
ಸಂಪೂರಿಮ ೨-೨೯ವ ಹೂವುಕಟ್ಟುವ ಒಂದು ಬಗೆ
ಸಂಬಳ ೪-೩೨ವ ಪ್ರಯಾಣಕ್ಕೆ ಬೇಕಾದ ಆಹಾರ ಸಾಮಾಗ್ರಿ
ಸಂಹನನ ೨-೫೧ ಕೊಲ್ಲುವುದು
ಸಕಳಿ ೨-೧೦ವ, ೪-೨೬ವ ಶಕಲಾ, ಮಡಕೆಯ ಚೂರು
ಸಖಾಯರ್ ೨-೧೮ವ, ೩-೭ವ ಗೆಳೆಯರು
ಸನ್ನಣ ೫-೧೮ವ, ೮-೭೩ವ < ಸನ್ನಾಹ
ಸವಿದೆ ೫-೩೩ವ ಸೌದೆ

ಸಯ್ತು ೪-೬ ನೇರ, ಸರಿ
ಸಲ್ಲೇಖನ ೧೦-೩೦ವ ಉಪವಾಸವ್ರತ
ಸಱ ೧೧-೨೬ ಕಮ್ಮರಿ
ಸಾಂತ ೪-೩೨ವ ಮೊದಲಿನಿಂದ ಕೊನೆಯವರೆಗೆ
ಸಾರಸ ೩-೫೮ ಒಂದು ಬಗೆಯ ಹಕ್ಕಿ
ಸಾರ್ತ ೪-೧೦ವ ಸಾರ್ಥ, ವ್ಯಾಪಾರಿಗಳ ಗುಂಪು
ಸಾಲಿಸು ೫-೧೪ವ ಸಾಕುಮಾಡು
ಸಿಗ್ಗು ೩-೪೪, ೬-೨ವ ನಾಚಿಕೆ, ಅಪಮಾನ
ಸೀಗುರಿ ೧-೪೧ವ, ೫-೧೨ವ ಚಾಮರ
ಸೀರೆ ೧೧-೨೪ವ (?)
ಸುಂಕುಬುಲ್ಲು ೮-೧೩ವ ಸೋಕಿದರೆ ಮೈಗೆ ಹತ್ತಿಕೊಳ್ಳುವ ಹುಲ್ಲು
ಸುಗಿ ೫-೧೧ ಕತ್ತರಿಸು
ಸುಗಿ ೬-೫೨ವ, ೧೨-೬೭ ಭಯ, ಕಂಪಿಸು
ಸುಟ್ಟನುಡಿ ೩-೧೨, ೬-೩೫ ಬೆರಳಿನಿಂದ ಗುರುತಿಸಿ ಹೇಳು
ಸುಟ್ಟುರೆ ೧೧-೧೨೧ ಸುಂಟರಗಾಳಿ
ಸುಣಸೊಕ್ಕು ೧೨-೬೮ ನಾಯಿಗರ್ಭ
ಸುರಿಗೆ ೩-೨೬ ಕಠಾರಿ
ಸುಲಿ ೧೦-೨೦ವ ಉಜ್ಜು, ಸ್ವಚ್ಛಮಾಡು
ಸೂಳೆಯ ೩-೨೯ವ ಜಾರ, ವಿಟ
ಸೆಂಬಳಿಗೋಲು ೯-೬೨ ಅಂತ್ಯಜರು ಅಧಿಕಾರದ ಗುರುತಾಗಿ ಹಿಡಿದುಕೊಳ್ಳುವ ದೊಣ್ಣೆ
ಸೆದಗೆ ೨-೧೮ವ ಚಿತೆ
ಸೆರಗು ೧೧-೪೨ವ ಕೇಡು, ತೊಂದರೆ
ಸೆರೆ ೨-೪೧ ನರ
ಸೆಲೆ ೬-೫೫ ಶಿಲೆ
ಸೆಳೆಗೊಂಬು ೧೩-೨ ಎಳೆಯ ಕೊಂಬೆ
ಸೆಱಗು ೩-೬೯ವ ಮೇಲೆ ಹೊದೆಯುವ ಬಟ್ಟೆ, ಉತ್ತರೀಯ
ಸೇದೆ ೪-೧೮ ಆಯಾಸ, ಬಳಲಿಕೆ
ಸೇದೆಗೆಡು ೪-೨೦ವ ಬಳಲು
ಸೈಪು ೪-೩ವ ಪುಣ್ಯ
ಸೊಂಬು ೪-೧ ಜಡತ್ವ, ಮತ್ತತೆ
ಸೊದರು ೫-೫ವ ಸೊನೆ (?)
ಸೊಪ್ಪುಸೊವಡು ೬-೪೨ ಜರ್ಜರಿತ
ಸ್ಥಾನಕ ೧೨-೧೧ವ ಆಯಃಕಟ್ಟಿನ ಸ್ಥಳ
ಸ್ವಾಧ್ಯಾಯ ೮-೬೫ ಸ್ವತಃ ಅಧ್ಯಯನ ಮಾಡುವುದು

## ಹ

ಹಟತ್ಕಾರ ೧೨-೪ ಹಟಗಾರತನ
ಹನು ೨-೪೯ ದವಡೆ
ಹಾಟಕ ೯-೧೦೪ ಚಿನ್ನ
ಹೃದ್ರೋಗ ೪-೧೨ವ ದುಃಖ
ಹೆಬ್ಬೆ ೫-೫ವ (?)
ಹೊಱಸು ೨-೩೮ವ ಕಪೋತ

## ಱ

ಱಕೋಡಿಸು ೧೧-೨೭ ಅಪಹಾಸ್ಯಮಾಡು

## ೩. ಪಾರಿಭಾಷಿಕ ಪದಕೋಶ

**ಅನಂತ ಚತುಷ್ಟಯ** ೧೦-೧೦ಪ: ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ, ಅನಂತಸುಖ.

**ಅರಸು** ೭-೧ಪ: ೧. ದುರ್ಬುದ್ಧಿ-ಪ್ರತಿನಿತ್ಯವೂ ದುರ್ವ್ಯಸನಿಯಾಗಿ ಧರ್ಮಾರ್ಥಗಳನ್ನು ದ್ವೇಷಿಸುವವನು. ೨. ಆಹಾರ್ಯಬುದ್ಧಿ-ಗುರು ಹೇಳಿದುದನ್ನು ತಿಳಿದು ಅದರಂತೆ ನಡೆಯುವವನು. ೩. ಬುದ್ಧಿಮಾನ್-ಗುರು ಹೇಳಿದಂತೆ ತಿಳಿದು ನಡೆಯುವವನು.

**ಅರ್ಥಾಲಂಕಾರಗಳು** ೭-೫೨ಪ: ಸ್ವಭಾವ, ಆಖ್ಯಾನ, ಉಪಮಾ, ರೂಪಕ, ದೀಪಕ, ಅಧಿಕ, ಆಕ್ಷೇಪ, ಅರ್ಥಾಂತರನ್ಯಾಸ, ವ್ಯತಿರೇಕ, ವಿಭಾವನ, ಸಮಾಸೋಕ್ತಿ, ಉತ್ಪ್ರೇಕ್ಷೆ, ಹೇತು, ಸೂಕ್ಷ್ಮ, ವಕ್ರೋಕ್ತಿ, ಪ್ರೇಯ, ರಸವತ್, ಊರ್ಜಸ್ವಿ, ಪರ್ಯಾಯೋಕ್ತಿ, ಸಮಾಹಿತ, ಉದಾತ್ತ, ಅಪಹ್ನುತಿ, ಶ್ಲೇಷ, ವಿಶೇಷ, ಸದೃಶೋಕ್ತಿ, ವಿರೋಧ, ಅಪ್ರಸ್ತುತಸ್ತೋತ್ರ, ವ್ಯಾಜ, ವ್ಯಾಜನಿಂದೆ, ವ್ಯಾಜಸ್ತುತಿ, ನಿದರ್ಶನ, ಸಹೋಕ್ತಿ, ಪರಿವೃತ್ತಿ, ಸಂಕೀರ್ಣ, ಭಾವಿಕ.

**ಆರು ಆವಶ್ಯಕಗಳು** ೧೪-೫೨ಪ: ೧. ಸಾಮಾಯಿಕ-ಎಲ್ಲ ಜೀವಗಳಲ್ಲಿಯೂ ಸಮತ್ವ ಭಾವನೆ. ೨. ಚತುರ್ವಿಂಶತಿಸ್ತವನ-ಇಪ್ಪತ್ತುನಾಲ್ಕು ತೀರ್ಥಂಕರರ ಸ್ತವನ. ೩. ವಂದನಾ-ಪಂಚಪರಮೇಷ್ಠಿ ವಂದನ. ೪. ಪರಿಕ್ರಮಣ-ಪ್ರತಿಕ್ರಮಣ, ಹತ್ತಿದ ದೋಷಗಳಿಗಾಗಿ ಪಶ್ಚಾತ್ತಾಪ. ೫. ಪ್ರತ್ಯಾಖ್ಯಾನ-ಮುಂದೆ ಇಂಥ ಪಾಪಕರ್ಮಗಳನ್ನು ಮಾಡುವುದಿಲ್ಲವೆಂದು ಪ್ರತಿಜ್ಞೆ ಮಾಡುವುದು. ೬. ಕಾಯೋತ್ಸರ್ಗ-ದೇಹಾಭಿಮಾನವನ್ನು ಬಿಟ್ಟು ಆತ್ಮಧ್ಯಾನದಲ್ಲಿರುವುದು.

**ಇಪ್ಪತ್ತೆಂಟು ಮೂಲಗುಣಗಳು** ೧೧-೧೦೪ಪ: ಪಂಚಮಹಾವ್ರತಗಳು (೫), ಪಂಚ ಸಮಿತಿಗಳು (೫), ಪಂಚೇಂದ್ರಿಯ ನಿಗ್ರಹ (೫), ಷಡಾವಶ್ಯಕಗಳು (೬), ಸ್ನಾನಾಭಾವ (೧), ಭೂಮಿಶಯನ (೧), ನಗ್ನತ್ವ (೧), ಕೇಶೋತ್ಪಾಟನ (೧), ಏಕಾಶನ (೧), ದಂತಧಾವನಾಭಾವ (೧), ಸ್ಥಿತಾಶನ (೧).

**ಏಳು ಬೆಸನಗಳು** ೭-೧೫: ಈ ಏಳನ್ನು ಎರಡು ಗುಂಪುಗಳಾಗಿ ವಿಂಗಡಿಸಲಾಗಿದೆ. ವಾಕ್ಪಾರುಷ್ಯ, ಅರ್ಥದೂಷಣ, ದಂಡಪಾರುಷ್ಯ ಇವು ಮೂರು ಕೋಪದಿಂದ ಬಂದುವಾಗಿವೆ. ಮತ್ತೊಂದು ಕಾಮಜನ್ಯ. ಇವು ಮೃಗಯಾ, ದ್ಯೂತ, ಪಾನ, ಸ್ತ್ರೀವ್ಯಸನಗಳಾಗಿವೆ.

**ಏಳು ರಾಜಪ್ರಕೃತಿಗಳು** ೭-೧೫: ೧. ಸ್ವಾಮಿ-ರಾಜನಿಗೆ ಇರಬೇಕಾದ ಸದ್ಗುಣಗಳಿಂದ ಕೂಡಿರುವವನು. ೨. ಅಮಾತ್ಯ-ಮಂತ್ರಿಸಂಪತ್ತು. ೩. ಜನಪದ-ಒಳ್ಳೆಯ ಪ್ರಜಾಸಂಪತ್ತು. ೪. ದುರ್ಗ-ರಾಜ್ಯರಕ್ಷಣೆಗೆ ತಕ್ಕಂತಹ ದುರ್ಗಸಂಪತ್ತು ೫. ದಂಡ-ಒಳ್ಳೆಯ ಸೈನ್ಯ. ೬. ಕೋಶ-ಧರ್ಮದಿಂದ ಗಳಿಸಿದ ಅರ್ಥಸಂಪತ್ತು ೭. ಮಿತ್ರ-ಒಳ್ಳೆಯ ಸ್ನೇಹಿತರು.

**ಐದು ಇಂದ್ರಿಯಗಳು** ೧೪-೫೨: ಕಣ್ಣು, ಕಿವಿ, ಮೂಗು, ನಾಲಗೆ, ಮೆಯ್.

**ಐದು ಪಾಪಗಳು** ೧೦-೯೫: ಕೊಲೆ, ಪುಸಿ, ಕಳವು, ಪರದಾರ, ಪರಿಗ್ರಹ.

**ಐದು ಮಹಾವ್ರತಗಳು** ೧೪-೫೨: ೧. ಅಹಿಂಸಾ-ಮನೋವಾಕ್ ಕಾಯಗಳಿಂದ ಯಾವ ಪ್ರಾಣಿಗೂ ಹಿಂಸೆಮಾಡದಿರುವುದು. ೨. ಸತ್ಯ-ಯಾವಾಗಲೂ ನಿಜವನ್ನೇ ಹೇಳುವುದು. ೩. ಅಸ್ತೇಯ-ಕದಿಯದಿರುವುದು, ತನಗಾಗಿ ಕೊಟ್ಟದ್ದು ಹೊರತು ಬೇರೆ ವಸ್ತುಗಳನ್ನು ತೆಗೆದುಕೊಳ್ಳದಿರುವುದು. ೪. ಬ್ರಹ್ಮ-ಬ್ರಹ್ಮಚರ್ಯ; ಮನೋವಾಕ್ ಕಾಯಗಳಿಂದ ಸ್ತ್ರೀಸಂಗ, ಪುರುಷಸಂಗ ಮಾಡದಿರುವುದು. ೫. ಆಕಿಂಚನ್ಯ-ಅಪರಿಗ್ರಹ; ಪ್ರಾಪಂಚಿಕ ವಿಷಯಗಳಲ್ಲಿ ಸ್ವಲ್ಪವೂ ಮನಸ್ಸು ಕೊಡದೆ ಅವನ್ನು ತ್ಯಾಗಮಾಡುವುದು.

**ಐದು ಸಮಿತಿಗಳು** ೧೪-೫೨: ೧. ಈರ್ಯಾ-ಸೂರ್ಯೋದಯವಾದ ಬಳಿಕ ಜೀವಿಗಳ ಹಿಂಸೆಯು ನಡೆಯದಂತೆ ತನ್ನ ಮುಂದಿನ ಒಂದು ಮಾರು ದಾರಿಯನ್ನು ಚೆನ್ನಾಗಿ ನೋಡುತ್ತಾ ನಡೆಯುವುದು. ೨. ಭಾಷಾ-ತನಗೂ ಪರರಿಗೂ ಹಿತಕರವೂ ಮಿತವೂ ನಿರ್ದೋಷವೂ ಆದ ಪ್ರಿಯವಚನವನ್ನು ಹೇಳುವುದು. ೩. ಏಷಣಾ-ಪಾತ್ರಗಳು ವಿಧಿಪೂರ್ವಕವಾಗಿ ಕೊಡುವ ಆಹಾರವನ್ನು ಹರ್ಷ ವಿಷಾದಗಳಿಲ್ಲದೆ, ರುಚಿ ಅರುಚಿಯೆನ್ನದೆ ಶಾಂತತ್ವದಿಂದ ಸ್ವೀಕರಿಸುವುದು. ೪. ಆದಾನನಿಕ್ಷೇಪಣ-ಪುಸ್ತಕ ಕಮಂಡಲು ಮೊದಲಾದ ಉಪಕರಣಗಳನ್ನು ಜೀವಹಿಂಸೆಯಾಗದಂತೆ ಒಂದು ಸ್ಥಳದಲ್ಲಿಡುವುದು ಮತ್ತು ಪಿಂಛದಿಂದ ಸ್ವಚ್ಛ ಮಾಡಿ ತೆಗೆದುಕೊಳ್ಳುವುದು. ೫. ವ್ಯುತ್ಸರ್ಗ-ತ್ರಸ ಸ್ಥಾವರ ಜೀವಗಳಿಗೆ ಪೀಡೆಯಾಗದಂತೆ ಜಂತುರಹಿತವಾದ ಗಟ್ಟಿನೆಲದ ಮೇಲೆ ಮಲಮೂತ್ರ ವಿಸರ್ಜನೆ ಮಾಡುವುದು ಮತ್ತು ಪ್ರಾಸುಕಜಲದಿಂದ ಶೌಚಕ್ರಿಯೆ ಮಾಡಿಕೊಳ್ಳುವುದು.

**ಕಾವ್ಯಾಲಂಕಾರಗಳು** ೩-೩೩ನ, ೩-೬೭ನ: ಜಾತಿಸ್ವಭಾವ, ಉಪಮೆ, ರೂಪಕ, ದೀಪಕಚ್ಛಾಯೆ, ಅರ್ಥೋಕ್ತಿ, ಆಕ್ಷೇಪ, ಅರ್ಥಾಂತರ, ವ್ಯತಿರೇಕ, ಭಾವನಾರ್ಥ, ಸಮಾಸೋಕ್ತಿ, ಅತಿಶಯ, ಉತ್ಪ್ರೇಕ್ಷೆ, ಹೇತುವಚನ, ಇಂಗಿತೋಕ್ತಿ, ಕ್ರಿಯಾರ್ಥ, ಯಥಾಶಂಕೆ, ಆಖ್ಯಾನ, ರಸವಾಹ, ಊರ್ಜಸ್ವಿ, ಪರ್ಯಾಯೋಕ್ತಿ, ಅಳುಂಬ(?) ಉದಾತ್ತವಚನ, ವಿಚಿತ್ರ, ಶ್ಲೇಷಾವಿರುದ್ಧ, ವಿಭ್ರಾಂತ, ಸದೃಶೋಕ್ತಿ, ವಿರುದ್ಧಾರ್ಥ, ನಿಂದಾಪ್ರಶಂಸೆ, ವ್ಯಾಜಸ್ತುತಿ, ನಿದರ್ಶನ, ಸಹೋಕ್ತಿ, ಪರಿವೃತ್ಯಾರ್ಥ, ಧ್ವನಿ, ಸಂಕೀರ್ಣಾಳಂಕ್ರಿಯೆ, ಭಾವಿಕಾ.

**ಚತುರ್ದಶ ಗುಣ** ೫-೨ವ: ವರ್ಣ, ಅಲಂಕಾರ, ಸ್ವರ, ಪದ, ಸಮಾಸ, ಉಚ್ಛ್ವಾಸ, ಸಭಾ, ಆದೇಶ, ತಾಳ, ಲಯ, ಯತಿ, ಫಣಿಸ್ಥಾನ, ದೇಶ, ಕಾಲಜ್ಞತೆ.

**ದಾನಗಳು** ೧೦-೧೦ಪ: ಆಹಾರದಾನ, ಅಭಯದಾನ, ಶಾಸ್ತ್ರದಾನ, ಭೈಷಜ್ಯದಾನ.

**ದುರ್ಗಗಳು** ೭-೧ವ: ಗಿರಿದುರ್ಗ-ಬೆಟ್ಟಗಳಿಂದ ಆವೃತವಾದ ಸ್ಥಳ, ವನದುರ್ಗ-ಕಾಡುಗಳಿಂದ ಆವೃತವಾದ ಸ್ಥಳ, ಜಲದುರ್ಗ-ನೀರಿನಿಂದ ಆವೃತವಾದ ಸ್ಥಳ.

**ಧರ್ಮಗಳು** ೧೦-೧೦ವ: ಪೂಜೆ, ಶೀಲ, ಉಪವಾಸ.

**ನಯಗಳು** ೭-೧ಪ: ಸಾಮ, ಭೇದ, ದಂಡ.

**ನಾಟ್ಯಾಂಗ** ೨-೩೩ವ: ಉತ್ಕ್ಷೇಪಣ, ಆಕುಂಚನ, ಪ್ರಸಾರಣ, ಮನೋಭ್ರಮಣ, ಜಾವನ, ಸ್ಯಂದನ, ನಮನೋನ್ನಮನ, ಸ್ಥಿತಾಚಳಿತ, ಪ್ರಚಳಿತ, ಕ್ರಾಂತ, ಅಪಕ್ರಾಂತ, ಕ್ಷಿಪ್ತಕ, ಪತಾಕ, ತ್ರಿಪಾತಕ, ಕರ್ತರೀಮುಖ, ಅರ್ಧಚಂದ್ರ, ಕಳಾ, ಶುಕತುಂಡ.

**ನೀತಿಗಳು** ೭-೧ವ: ಭೃತ್ಯಪೋಷಣ, ಪ್ರಜಾಪಾಳನ, ಧರ್ಮರಕ್ಷಣ, ಆತ್ಮಪ್ರಯತ್ನ.

**ಪೆಗೆಗಳು** ೭-೧ನ: ಸಾಪತ್ನ, ವಾಸ್ತುಜ, ಸ್ತ್ರೀಜ, ವಾಗ್ಭೂತಸುರಾಜ.

**ಪದಗತಗಳು** ೨-೩೧ವ: ನಾಮಾಖ್ಯಾತ, ಉಪಸರ್ಗ, ನಿಪಾತ, ತದ್ಧಿತ, ಸಮಾಸ, ಕೃತ್ಯೋಪೇತ, ವ್ಯಾಕರಣ, ಸಿದ್ಧಾಂತ.

**ಪ್ರತೀಕಾರಗಳು** ೭-೧ವ: ಭೂರಿ, ಕರ್ಮಣಾ, ಆರಂಭೋಪಾಯ, ಪುರುಷದ್ರವ್ಯಸಂಪತ್, ದೇಶಕಾಲ ವಿಭಾಗ, ವಿನಿಪಾತ ಪ್ರತೀಕಾರ, ಉಚ್ಚಾಟನ, ಬಂಧನ, ಕರ್ಮಣಾಮುಪನಯನ

**ಬಾಹ್ಯಪ್ರಕೃತಿಗಳು** ೭-೧೯: ರಾಷ್ಟ್ರಪಾಲ, ಅಂತಪಾಲ, ಪ್ರತ್ಯಂತವಾಸಿ.

**ಭವನಗಳು** ೭-೧೫ವ: ಏಕಶಾಲ, ದ್ವಿಶಾಲ, ತ್ರಿಶಾಲ, ಚತುಶ್ಯಾಲ, ಪಂಚತಳ, ಮಹಾಕೂಟ, ಕೂಟಸ್ವಸ್ತಿಕ, ಗುಲ್ಮೋತ್ಪಳ, ನಂದ್ಯಾವರ್ತ, ಶ್ರೀಭದ್ರಶಾಲ.

**ಭೃತ್ಯರು** ೭- ೯: ಕರ್ಮಣ್ಯ, ಮಂತ್ರ, ಲಾಭದಾಯಕ, ಸಂಗ್ರಾಮಿಕ.

**ಮಲ್ಲಯುದ್ಧ** ೬-೫೦ನ ಲಂಘನ, ವಲ್ಗನ, ಪ್ಲವನ, ವಿಕ್ರಮ, ಭ್ರಮರಿ, ಕರಣ, ಸನುಲತಾ, ಬಹುಕಳಿ, ಕತ್ತರಿ.

**ಮೂರು ಕ್ಲೇಶಗುಪ್ತಿಯುಗಳು** ೧೪-೫೨ವ: ೧. ಮನ-ಸುಖದಃಖಗಳಿಗೆ ಅಮಿತ ವಾಗಿ ವಶನಾಗದೆ ಸಮತಾಭಾವವನ್ನು ಸರ್ವರಲ್ಲಿಯೂ ತೋರಿ ತನ್ನ ಆತ್ಮ ಕಲ್ಯಾಣವನ್ನು ನೆನೆಯುವುದು. ೨. ವಾಕ್-ಮೌನದಿಂದಿರುವುದು ಅಥವಾ ಮಿತವಾಗಿ ಮಾತನಾಡುವುದು. ೩. ಕಾಯ-ಆಗಮಗಳಲ್ಲಿ ಆಪ್ತರು ಹೇಳಿರುವ ಆಚರಣೆಗಳನ್ನು ಆಚರಿಸುವುದು.

**ಶಕ್ತಿತ್ರಯುಗಳು** ೭-೧೯: ಪ್ರಭು, ಮಂತ್ರ, ಉತ್ಸಾಹ.

**ಷಾಡ್ಗುಣ್ಯ** ೭-೧೯: ರಾಜ್ಯರಕ್ಷಣೆಗೆ ರಾಜನಲ್ಲಿರಬೇಕಾದ ಆರು ಗುಣಗಳು. ೧. ಸಂಧಿ -ಸಂಧಾನ. ೨. ವಿಗ್ರಹ-ಶತ್ರುತ್ವವನ್ನು ಹೊಂದುವುದು. ೩. ಯಾನ- ಯುದ್ಧಕ್ಕಾಗಿ ಹೋಗುವುದು. ೪. ಆಸನ-ಶತ್ರುವಿಗೆ ಭಯವನ್ನುಂಟುಮಾಡಲು ಯಾತ್ರೆ ಹೊರಟು ಸ್ವಸ್ಥಾನದಲ್ಲಿಯೇ ನಿಲ್ಲುವುದು. ೫. ಸಂಶ್ರಯ-ದುರ್ಗ ವನ್ನಾಗಲಿ, ಮತ್ತೊಬ್ಬ ರಾಜನನ್ನಾಗಲಿ ಆಶ್ರಯಿಸುವುದು. ೬. ದ್ವೈದೀಭಾವ- ಸಂಧಿ ಮಾಡಿಕೊಂಡೂ ಯುದ್ಧದ ಯೋಜನೆಯಲ್ಲಿರುವುದು.

**ಸ್ವರಗತಿಗಳು**: ೨-೩೧ನ ಸಪ್ತಸ್ವರ, ಗ್ರಾಮ, ಶ್ರುತಿ, ಮೂರ್ಛನೆ, ಆನನ, ಸ್ಥಾನ, ವೃತ್ತಿ, ಶುಷ್ಕ, ಸಾಧಾರಣ, ಜಾತಿ, ವರ್ಣ, ಅಲಂಕಾರ.

**ಹತ್ತು ಮುನಿಧರ್ಮಗಳು** ೧೦-೧೦ವ, ೧೪-೫೨ವ: ೧. ಉತ್ತಮಕ್ಷಮಾ-ಕೋಪ ವನ್ನು ಪೂರ್ಣವಾಗಿ ತೊರೆದು ಯಾರು ಯಾವ ಕೇಡು ಮಾಡಿದರೂ ಸಹಿಸಿ ಕೊಳ್ಳುವುದು. ೨. ಮಾರ್ದವ-ಅಹಂಕಾರವನ್ನು ಮೆಟ್ಟಿ ವಿನಯವನ್ನು ಬೆಳಸು ವುದು. ೩. ಆರ್ಜವ-ಮರೆಮೋಸಗಳನ್ನು ಬಿಟ್ಟು ಸರಳತೆಯಿಂದಿರುವುದು. ೪. ಸತ್ಯ-ನಿಜವನ್ನೆ ಆಡುವುದು. ೫. ಶೌಚ-ಕೆಟ್ಟ ಆಲೋಚನೆ, ಕೆಟ್ಟಮಾತು, ಕೆಟ್ಟ ಕೆಲಸಗಳಿಲ್ಲದೆ ಶುಚಿಯಾಗಿರುವುದು. ೬. ಸಂಯಮ-ಇಂದ್ರಿಯ ನಿಗ್ರಹ ಮತ್ತು ಪ್ರಾಣಿದಯೆ. ೭. ತಪಸ್ಸು-ಉತ್ತಮವಾದ ತಪಸ್ಸು ಮಾಡುವುದು.

೮. ತ್ಯಾಗ–ಸ್ತ್ರಾಸಂಚಿಕ ವಿಷಯಗಳಲ್ಲಿ ಆಸಕ್ತಿಯನ್ನು ತೊರೆಯುವುದು. ೯. ಆಕಿಂಚನ್ಯ–ತನ್ನದಲ್ಲದ ಯಾವುದನ್ನೂ ತೆಗೆದುಕೊಳ್ಳದಿರುವುದು. ೧೦. ಬ್ರಹ್ಮಚರ್ಯ–ಮನೋವಾಕ್ಕಾಯಗಳಿಂದ ಸ್ತ್ರೀವಿಷಯಾಸಕ್ತಿಯನ್ನು ಬಿಡುವುದು.

**ಹದಿನಾಲ್ಕು ಪುಬ್ಬಗಳು** ೧೪–೫೩ನ: ೧. ಉತ್ಪಾದ–ಉತ್ಪತ್ತಿಯ ಸಮಗ್ರತಿಳುವಳಿಕೆ. ೨. ಅಗ್ರಾಯಿಣಿ–ಜೀವ ಪರ್ಯಾಯಗಳ ವಿವರವುಳ್ಳದು. ೩. ವೀರ್ಯಾನುಪ್ರವಾದ–ಅನಂತವೀರ್ಯಗುಣದ ವಿವರಣೆ ಮಾಡುವ ಅನುವದಿಸುವ ಶಕ್ತಿ. ೪. ಅಸ್ತಿನಾಸ್ತಿಪ್ರವಾದ–ಆಸ್ತಿಕ್ಯ ನಾಸ್ತಿಕ್ಯಗಳ ಸ್ಪಷ್ಟ ಜ್ಞಾನ ೫. ಆತ್ಮಪ್ರವಾದ–ಆತ್ಮದ ಪೂರ್ಣ ಕಲ್ಪನೆ. ೬. ಸತ್ಯಪ್ರವಾದ–ಸತ್ಯದ ತಿಳುವಳಿಕೆ. ೭. ಜ್ಞಾನಪ್ರವಾದ–ಸಮ್ಯಕ್‌ಜ್ಞಾನದ ಸಂಪೂರ್ಣ ತಿಳುವಳಿಕೆ. ೮. ಕರ್ಮಪ್ರವಾದ–ಕರ್ಮದ ಸಂಪೂರ್ಣ ತಿಳುವಳಿಕೆ. ೯. ಪ್ರತ್ಯಾಖ್ಯಾನ–ತಿರಸ್ಕಾರದ ಕಲ್ಪನೆ. ೧೦. ವಿದ್ಯಾನುವಾದ–ವಿದ್ಯೆಯನ್ನು ಅನುವಾದ ಮಾಡುವ ಸಾಮರ್ಥ್ಯ. ೧೧. ಕಲ್ಯಾಣನಾಮಧೇಯ–ಆತ್ಮದ ಹಿತದ ಕಲ್ಪನೆ. ೧೨. ಪ್ರಾಣವಾದ–ಪ್ರಾಣದ ಕಲ್ಪನೆ. ೧೩. ಕ್ರಿಯಾವಿಶಾಲ–ಕ್ರಿಯೆಯ ಸ್ವರೂಪ. ೧೪. ಲೋಕಬಿಂದುಸಾರ–ಲೋಕದ ತಿಳುವಳಿಕೆ.

**ಹನ್ನೆರಡು ಅಂಗಗಳು** ೧೪–೫೩ನ: ೧. ಆಚಾರ–ಚಾರಿತ್ರ್ಯ ಯಾವ ರೀತಿ ಇರಬೇಕೆಂದು ಹೇಳುವ ಶಾಸ್ತ್ರ ವಿಭಾಗ. ೨. ಸೂತ್ರಕೃತ–ಶಾಸ್ತ್ರದ ಸೂತ್ರ ರಚಿಸುವಿಕೆ. ೩. ಸ್ಥಾನ–ಸ್ಥಳ ವಿಶೇಷಗಳ ಕಲ್ಪನೆಯ ವಿವರವುಳ್ಳದು; ಲೋಕಾಲೋಕಗಳ ವರ್ಣನೆಯುಳ್ಳದು (?). ೪. ಸಮವಾಯ–ಶಾಸ್ತ್ರಗಳ ಅಂಗೋಪಾಂಗಗಳ ನಿತ್ಯಸಂಬಂಧಜ್ಞಾನ. ೫. ವ್ಯಾಖ್ಯಾಪ್ರಜ್ಞಪ್ತಿ–ಶಾಸ್ತ್ರ-ವಚನಗಳಿಗೆ ವಿವರಣ ಮಾಡುವ ಶಕ್ತಿ. ೬. ಜ್ಞಾತೃಧರ್ಮಕಥಾ–ಸಮ್ಯಕ್‌ಜ್ಞಾನಿಗಳ ಕಥೆಯ ವಿವರ. ೭. ಉಪಾಸಕಾಧ್ಯಯನ–ಉಪಾಸನೆಯನ್ನು ವಿವರಿಸುವ ಶಾಸ್ತ್ರವಿಭಾಗ. ೮. ಅಂತಕೃದ್ದಶಾ–ಕರ್ಮದ ಕೊನೆಯ ಅವಸ್ಥೆಗಳನ್ನು ವಿವರಿಸುವ ಶಾಸ್ತ್ರವಿಭಾಗ. ೯. ಅನುತ್ತರತಾಪಪಾತಿಕ–ಅನಂತರ ಹುಟ್ಟುವ ಅವಸ್ಥೆಯ ವಿವರ. ೧೦. ಪ್ರಶ್ನವ್ಯಾಕರಣ–ಪ್ರಶ್ನೆಮಾಡುವುದು, ವ್ಯಾಕರಣಗಳ ವಿವರವುಳ್ಳದು. ೧೧. ವಿಪಾಕಸೂತ್ರ–ಪುಣ್ಯ ಹಾಗೂ ಪಾಪಗಳ ಫಲಗಳ ವರ್ಣನೆಯುಳ್ಳದು. ೧೨. ದೃಷ್ಟಿವಾದ–ಪರಿಕರ್ಮ, ಸೂತ್ರ, ಪ್ರಥಮಾನುಯೋಗ, ಪೂರ್ವಗತ ಮತ್ತು ಚೂಲಿಕಾ ಎಂಬ ಐದು ಖಂಡಗಳಿವೆ.

**ಹನ್ನೆರಡು ತಪಗಳು** ೧೪–೫೨ನ: ೧. ಅನಶನ–ಉಪವಾಸ. ೨. ಅವಮೌದಾರ್ಯ–ಊನೋದರತೆ, ನಿರಾಹಾರ ತಪಶ್ಚರ್ಯ. ೩. ವೃತ್ತಿಪರಿಸಂಖ್ಯಾನ–ಊಟಕ್ಕೋಸ್ಕರ ಹೋಗುವ ಮನೆಗಳ ನಿಯಮ ಮೊದಲಾದುವನ್ನು ಮಾಡಿಕೊಳ್ಳು

ವುದು. ೪. ರಸಪರಿತ್ಯಾಗ–ಆರೂ ರಸಗಳನ್ನು ಇಲ್ಲವೆ ಒಂದೆರಡನ್ನು ಬಿಡುವುದು. ೫. ಏಕಶಯ್ಯಾಸನ–ವಿವಿಕ್ತಶಯ್ಯಾಸನ, ಏಕಾಂತಸ್ಥಾನದಲ್ಲಿರುವುದು ಮತ್ತು ಮಲಗುವುದು. ೬. ಕಾಯಕ್ಲೇಶ–ಶರೀರಕ್ಕೆ ಕಷ್ಟಕೊಡುವುದು. ೭. ಪ್ರಾಯಶ್ಚಿತ್ತ–ದೋಷಕ್ಕಾಗಿ ದಂಡಕೊಡುವುದು. ೮. ವಿನಯ–ರತ್ನತ್ರಯಕ್ಕೂ ಅದನ್ನು ಧರಿಸಿದವರಿಗೂ ವಿನಯ ತೋರಿಸುವುದು. ೯. ವೈಯಾಪೃತ್ಯ–ವೈಯಾವೃತ್ಯ, ಪಾದಸಂವಾಹನ ಮೊದಲಾದವುಗಳಿಂದ ಗುರುಗಳನ್ನೂ ಮುನಿಗಳನ್ನೂ ಸೇವಿಸುವುದು. ೧೦. ಸ್ವಾಧ್ಯಾಯ–ಶಾಸ್ತ್ರಗಳನ್ನು ಓದುವುದು. ೧೧. ಧ್ಯಾನ–ಧ್ಯಾನ ಮಾಡುವುದು; ಇದರಲ್ಲಿ ಆರ್ತ, ರೌದ್ರ, ಧರ್ಮ, ಶುಕ್ಲ ಎಂಬ ನಾಲ್ಕು ಬಗೆಯಿದೆ. ೧೨. ಉತ್ಸರ್ಗ–ವ್ಯುತ್ಸರ್ಗ, ಶರೀರದ ಮೇಲಿನ ಮಮತೆಯನ್ನು ಕಡಿಮೆ ಮಾಡುವುದು.

**ಹಸ್ತಾಂಗುಳಿಗಳು** ೫–೨೪: ಸಮ, ಪ್ರಹರಣ, ವಿಶದ, ಶಮ, ಮಧುರ, ಜಸ, ರಸ, ದವ, ವೃಷ್ಟಿ, ಜಿತ, ಶ್ರಮ, ಸ್ವೇದ, ದುಸ್ಥಿರ, ನಖ.

# ೪. ಪಾಠಾಂತರಗಳು

[ಹರಿವಂಶಾಭ್ಯುದಯದ ತೃತೀಯಾಶ್ವಾಸದಲ್ಲಿ ಬರುವ ಅಲಂಕಾರಗಳಿಗೆ ಸಂಬಂಧ ಪಟ್ಟ ೩೩–೬೭ ಪದ್ಯಗಳಿಗೆ ಉದಯಾದಿತ್ಯಾಲಂಕಾರದ ಹಸ್ತಪ್ರತಿಯಲ್ಲಿ ದೊರೆತ ಪದ್ಯಗಳಲ್ಲಿ ಕಂಡುಬರುವ ಪಾಠಾಂತರಗಳು]

## ತೃತಿಯಾಶ್ವಾಸಂ

| ಪದ್ಯ | ಪಂಕ್ತಿ | ಹರಿವಂಶಾಭ್ಯುದಯ | ಉದಯಾದಿತ್ಯಾಲಂಕಾರ |
|---|---|---|---|
| ೩೩ | ೩ | ಸಂ[6][ಗದಾ][6] | ಸಂದಗಾ |
| ೩೪ | ೩ | ಪುದುವಾೞೀ | ಪುದುವಾಳಂ |
| ೩೪ | ೪ | ಪೋಲ್ತಿಂತೊತ್ತೆಗೆಂದಿರ್ದಳಂ | ಪೋಲ್ತಂತಿರ್ದಳಂದೊತ್ತೆಗಂ |
| ೩೫ | ೪ | ನೆಂದೆ ನೋಡಿದಂ | ನೆಂದು ನೋಡಿದರ್ |
| ೩೬ | ೪ | ಮುಂಗೋದ್ಯತ್ | ಮುಂಗೋದ್ಯರ್ |
| ೩೭ | ೩ | ಚಂದನವಳ್ಕೆ | ಚಂದನವಳ್ಕಿ |
| ೩೯ | ೨ | ಳೊಂದಿದೆ | ಳೊಂದಿದ |
| ೪೦ | ೨ | ನೋೞ್ಪಡೇ | ನೋಳ್ಪಡಂ |
| ೪೧ | ೩ | ಬಿಡದೆಚ್ಚಾರಿದ್ದ | ಬಿಡದೆಚ್ಚಾಱಿದ್ದ |
| ೪೧ | ೪ | ಕೆ[1][ಗೆ ನೀನಿಂತುರೆ][1] | ಕೆಗೆ ನೀನೇಕೆಗೆ |
| ೪೩ | ೩ | ಕಮುರ್ಗಿಲಾಗೆ | ಕಮ್ಮುಗಿಲಾಗಿ |
| ೪೪ | ೧ | ತಪ್ಪು | ತಪ್ಪಂ |
| ೪೪ | ೨ | ನಿನ್ನಂ | ನಿನ್ನಿಂ |
| ೪೪ | ೩ | ಗೆಂದಿರ್ದ | ಗೊಂಡಿರ್ದ |
| ೪೫ | ೨ | ಪೊತ್ತು | ಪೊಳ್ತು |
| ೪೫ | ೩ | ಮನದೊ[1][ಳ್ಳ][1]ೞು | ಮನದೊಳ್ತಳು |
| ೪೫ | ೪ | ಮಿಂತವೆಲ್ಲ | ಮಿಂತಿವೆಲ್ಲ |

| | | | |
|---|---|---|---|
| ೪೬ | ೧ | ವಿಟಸಂ | ವಿಟರಂ |
| ೪೬ | ೩ | ನಾಳೆ[4][ಗೇಂ ಮಿಗೆ][4] | ನಾಳೆಗೆ |
| ೪೬ | ೪ | ನಡೆದಿಂಗಿತೋಕ್ತಿಯಂ | ನುಡಿದಿಂಗಿತೋಕ್ತಿಯಂ |
| ೪೭ | ೧ | ತಾಯಲಿ | ತಾಯಲ |
| ೪೭ | ೨ | ತಾಪದೊಳುಣ್ಮೆ | ತಾಪದೊಳುಣ್ಮೆ |
| ೪೭ | ೨ | [5][ಳಂತವನಂ ಪುಗ][5]ದೊ | ಳಂದೊಳಗಂ ಪುಗುವೊ |
| ೪೭ | ೨ | ಯಾತನಂ | ಯಾಣ್ಮನಂ |
| ೪೭ | ೩ | ಪುಷ್ಪರಜಪ್ಪುಜ | ಪುಷ್ಪರಜದ್ರವ |
| ೪೭ | ೩ | ಕಣ್ಣೊಳೇಂ | ಕಣ್ಗೊಳೇ |
| ೪೮ | ೧ | ತಗುಳ್ದು | ತಗುಳ್ದ |
| ೪೮ | ೪ | [8][ವೈ][8]ಶ್ಯಸಂಭವಂ | ವೈಭವೋದ್ಧತಂ |
| ೪೯ | ೩ | ಸಂ[1][ತಸ][1]ಕ್ಕೆ ನಿಮ್ಮೃತ್ತೆ | ಸಂತಸಕ್ಕೆ ನಿರ್ವೃತ್ತೆ |
| ೪೯ | ೪ | ಪೆಱವಿಲ್ಲ | ಪೆಱತಿಲ್ಲ |
| ೫೦ | ೩ | ಸದ್ಭಾವಮೆನ್ನಲ್ಲಿ | ಸದ್ಭಾವಮೇನೆಲ್ಲಿ |
| ೫೦ | ೪ | ಬಂದಿರ್ದಳಂ | ಕಂಗೊಪ್ಪಿದಳ್ |
| ೫೧ | ೨ | [2][ಟಿಕೀ][2]ನೆವವೇ | ಳ್ದೀನೆವವೇ |
| ೫೧ | ೩ | ದಾದೊಡಾ | ದಾದೊಡೀ |
| ೫೨ | ೧ | ನಿ[1][ಱಿಂ][1]ಗುಱಿತ | ನಿಱಿಂಗುಱಿತ |
| ೫೪ | ೪ | ಪ[3][ಣ್ಯಾ][3]ಗೃಹ | ಪಣಾರ್ಗೃಹ |
| ೫೪ | ೪ | ಗೆಲ್ಲವೇ | ಗೆಲ್ಲಮೋ |
| ೫೫ | ೪ | ತ್ತೆನಿತೆನಿ | ತ್ತಿನಿತಿನಿ |
| ೫೫ | ೪ | ನಲ್ಲದಲೇಂ | ನಿಲ್ಲದಲೇಂ |
| ೫೬ | ೧ | ಪ್ರಿಯರ ಸತ್ಸೌಂದರ್ಯಮುಂ | ಪ್ರಿಯ ಲಸತ್ಸೌಂದರಮುಂ |
| ೫೬ | ೩ | ಮೇಗಿಲ್ಲೆಂಬಣಲೀಕೆಗಳ್ಗೆ | ಮೇಗಿಲ್ಲೆಂಬವಲೀಕೆಗಳ್ಗೆ |
| ೫೭ | ೪ | [4][ಗರ್ಣ ಪ][4]ರ್ವಿ ವಿಭ್ರಾಂತಮುಂ | ಗೆಲ್ದವಿಕ್ಷುವ್ರಾತಮುಂ |
| ೫೮ | ೨ | ಲ್ಕೈತ್ತಮೊಡರ್ಚಲಯ್ಸರನ | ಲ್ಕೈತ್ತಿಮೊಡರ್ಚಲಯ್ಸರ |
| ೫೮ | ೪ | ಗುತ್ತಿರೆ | ಡುತ್ತಿರೆ |
| ೫೯ | ೧ | ಶತಪತ್ರಂ ಸುಮ್ಮೃಣಾ[6][ಳ][6] | ಶತಪತ್ರಾಸ್ಯೆ ಮೃಣಾಣ |
| ೫೯ | ೨ | ಚಂದ್ರಾಕಾಂತೆ | ಯಿಂತಾಕಾಂತೆ |
| ೫೯ | ೪ | ವೃತ್ತಕಂ | ರೂಪಕಂ |
| ೬೦ | ೧ | ಪಬ್ಬುರ್ವಂತಿರ್ಪು | ಪರ್ಚುರ್ವಂತಿರ್ಪು |

| | | | |
|---|---|---|---|
| ೬೦ | ೨ | ರಿರ್ಪವು | ರಿರ್ಪುದು |
| ೬೦ | ೨-೩ | ಮೇಗಿಲ್ಲದಂತಿರ್ಪುವೊಳೊಡ್ದೆಗಳ್ ಕಣ್ಗೆಡಱುತ್ತಮಿರ್ಪವು ನಖಂ ಮೆಯ್ವೆರ್ಚಿ | ಮೆಯ್ವೆರ್ಚಿ |
| ೬೦ | ೪ | ಕಾಂತೆಗಿಂತೆಂದು | ಕಾಂತೆಗೆಂತೆಂದು |
| ೬೦ | ೫ | ಮೆಚ್ಚಿದೋ | ಮಚ್ಚಿದೈ |
| ೬೧ | ೧ | ವಿದಗ್ಧೆಯನೆಲ್ಲಿ | ವಿದಗ್ಧೆಯರೆಲ್ಲ |
| ೬೧ | ೨ | ಕೂಡೆಯುಂ | ಕೂಡಿಯುಂ |
| ೬೧ | ೩ | ರಾದರೆನುತೊಂದು | ರಾಗದರೆನಿತೊಂದು |
| ೬೨ | ೧ | ಕೂರ್ತಡೆ ನೇದಿರೆವೆಂದೊ | ಕೂರ್ತಡೆದೇವಿರಿದೆಂದೊ |
| ೬೨ | ೨ | ನೆಗರ್ತೆ | ನೆಗಱ್ತೆ |
| ೬೨ | ೨ | ತೆರಳಿಲ್ಲ | ತೆಗಳಿಲ್ಲ |
| ೬೨ | ೩ | ಮದೋಷಿಹೆ | ಮದೋಷನೆ |
| ೬೩ | ೧ | ದರ್ಕಱುಣ್ಕೆ | ದಳ್ಕಱುಣ್ಕೆ |
| ೬೩ | ೩ | ಜಡೆಗೆಡೆಗೋಡೆ | ಣಡಿಗಡಿಗೋಡೆ |
| ೬೩ | ೩ | ನಾಡೆಪದಂ | ಪದಂ |
| ೬೩ | ೩ | ಮಾಣದೇಳೆ ತಂ | ಮಾಣದೇವಳಲಂ |
| ೬೩ | ೪ | ಸಮಾ[3][ಗಮುಂಬಡುತಳುರ್ತ][3] | ಸಮಾನಮಾದುದು ತಳುರ್ತ |
| ೬೪ | ೩ | ಮೆಲ್ಪಿನೊಳೊಂದು | ಮೆಲ್ಪಿನೊಳಂದು |
| ೬೭ | ೩ | ಧರ್ಮಮೀ | ಧರ್ಮ |
| ೬೭ | ೩-೪ | ಮೆಂದು ಮತ್ತವರ್ಗಳ | ಮೆಂದವರ್ಗಳ |

# ೫. ಒಪ್ಪೋಲೆ

| ಪುಟ-ಪಂಕ್ತಿ | ತಪ್ಪು | ಒಪ್ಪು |
| --- | --- | --- |
| ೮-೩ | ದಾರಿ | ಧಾರಿ |
| ೧೬-೬ | ವಂದಿಗನಂ | ಪೊಂದಿಗನಂ |
| ೧೮-೯ | ನೋಯಿಸಿ | ನೋಯಿಸೆ |
| ೧೯-೧೯ | ಕುಂದವಶೋಕೆಗಳ್ | ಕುಂದವಶೋಕೆಗಳು |
| ೨೦-೧೮ | ಕೊಂಡಾಟ | ತೊಂಡಾಟ |
| ೨೨-೧೦ | ಪೇನಿಗಳುಂದೊಡ | ಪೇನಿಗಳುಂಡೊಡ |
| ೨೮-೧೯ | ವೀಣಾಶರೀರ | ವೀಣಾಶಾರೀರ |
| ೩೧-೨೭ | ವಿಸರುಹ | ಬಿಸರುಹ |
| ೩೭-೫ | ಶ್ರೀಮಜ್ಜನಾವಾಸಿ | ಶ್ರೀಮಜ್ಜಿನಾವಾಸಿ |
| ೪೩-೧೦ | ಪರೆ[1][ದೊಗು][1] | ಪರೆ[1][ದೊಗು][1]ವ |
| ೫೦-೨೫ | ಸೂಜಿಗಳಂ | ಸೂಚಿಗಳಂ |
| ೫೨-೬ | ನಿಮ್ಮಱಿಸುವಾ | ನೀಂ ಮಱಿಸುವಾ |
| ೫೬-೧೨ | ಬೇಡಕಾರ್ತಿ | ಬೇಟಕಾರ್ತಿ |
| ೬೦-೯ | ರಕ್ಕಟರೊಳ | ರಕ್ಕಟವರೊಳ |
| ೬೧-೧೫ | ಶೃಂಗಾರಸವಂ | ಶೃಂಗಾರರಸವಂ |
| ೭೨-೧೧, ೧೪ | ಬಱಿ | ಬರಿ |
| ೭೩-೫ | ಬಱಿ | ಬರಿ |
| ೭೫-೧೭ | ಟ್ರಸಿಧಾರಾವೃತ್ತಿ | ಟ್ರಸಿಧಾರಾವ್ರತಿ |
| ೮೩-೧೬ | ಗಾಂಧರ್ವದತ್ತೆಯುಂ | ಗಾಂಧರ್ವದತ್ತೆಯಂ |
| ೧೦೦-೨ | ವಿಳಾ[3][ಸಿನ್ಯ][3]ತ್ಕರಂ | ವಿಳಾ[3][ಸಿನ್ಯೋ][3]ತ್ಕರಂ |
| ೧೦೧-೧೯ | ಕಾದಿದೊಡೆ | ಕಾಡಿದೊಡೆ |
| ೧೨೮-೧ | ಪಳವಿಸು | ಪಟವಿಸು |
| ೧೩೦-೬ | ಬಂಧುವರ್ಗಮುಂ | ಬಂಧುವರ್ಗಮುಮಂ |
| ೧೩೦-೧೦ | ಮುಪ್ಪಪರಸಿ | ಪರಸಿ |

| | | |
|---|---|---|
| ೧೩೦-೧೧ | ಚಿತವಮಾ²[ಜಂ]² | ಚಿತಮಪ್ಪ ಮಾ²[ಡಂ]² |
| ೧೩೮-೩ | ಕೊಳ್ಗೊಂಡೊರ್ವ | ಕೋಳ್ಗೊಂಡೊರ್ವ |
| ೧೪೧-೧೧ | ಮೇಲೆ ಪಟ್ಟ | ಮೇಲೆ ಪಟ್ಟ |
| ೧೪೨-೮ | ಜೀವಮರುಣೌಗ್ರರಣೌಹತ | ಜೀವಮರುಣಾಗ್ರ ರಣಾಹತ |
| ೧೬೧-೭ | ಭೂತಂಗಳ್ | ಭೂತಂಗಳ |
| ೧೬೧-೨೧, ೨೨ | ತಿಱಿ | ತಿರಿ |
| ೧೬೪-೧೦ | ಬೀಸಿದಾಗೆ | ಬಿಸಿದಾಗೆ |
| ೧೬೫-೫ | ಮೊಳೆಯಾಗ | ಮೊರೆಯಾಗ |
| ೧೬೫-೮ | ಮರನನಿಟ್ಟರು | ಮರನನೆಟ್ಟರು |
| ೧೭೧-೧೦ | ತೀರ್ಥಕರಂ | ತೀರ್ಥಕರರಂ |
| ೧೭೧-೧೦ | ಧೂಮಕೇತುವೆಂಬ | ಧೂಮಕೇತುವೆಂಬ |
| ೧೭೨-೩ | ನರಸುಗೆಯ್ದುದೆನ್ನಂ | ನರಸುಗೆಯ್ಯುದೆನ್ನಂ |
| ೧೯೮-೨೦ | ಮುಟ್ಟಿಂದುಕ್ಕವಿಸಿತಂದೆ | ಮುಟ್ಟಿಂದುಕ್ಕೆವಿಸಿ ತಂದ |
| ೨೨೧-೨೯ | ಕರ್ಮಾಶ್ರವ | ಕರ್ಮಾಸ್ರವ |
| ೨೩೦-೧೪ | ಸ್ತುತಿಯಂ | ಸ್ತುತಿಯಿಂ |
| ೨೩೯-೧೯ | ಪೆಱರ | ಪೆಱರು |
| ೨೫೧-೧೮ | ನಿರ್ಭೇಧದನಂ | ನಿರ್ಭೇದನಂ |
| ೨೫೯-೧೨ | ಸಾರವುಪ್ಪುದಱಿಂದ | ಸಾರವುಪ್ಪುದಱಿಂದಂ |
| ೨೬೧-೧೩ | ಕುಸಿದವ | ¹[ಪು]¹ಸಿದವ ಪಾಠಾಂ. 1 ಕು |
| ೨೮೦-೨೮ | ವನನದಿಶರ | ವನನಿಧಿಶರ |
| ೨೯೧-೫ | ತೋಳ್ಗ¹[ಳಿನಂಬೇಱಿಸಿ]¹ | ತೋಳ್ಗ¹[ಳಿನಂಬಿಱಿಸಿ]¹ |
| ೨೯೬-೧೯ | ನಂದನುವುಂ | ನಂದನುವುಂ |
| ೩೦೦-೨ | ಸಂ[ಸಂ]ರ್ಗ | ಸಂ[ಸ]ರ್ಗ |
| ೩೦೩-೧೨ | ಪೇಱಿದ್ದಯಲ್ತೆ | ಪೇೞಿದ್ದಯಲ್ತೆ |
| ೩೧೬-೧೨ | ನಿಂಮೆೞ್ತುಂದಿರೆನ್ನಂ | ನೀಮೆೞ್ತುಂದಿರೆನ್ನಂ |
| ೩೧೬-೨೬ | ಸೇದೆಗೀಡುವ | ಸೇದೆಗಿಡುವ |
| ೩೨೦-೬ | ಯಿಂದೆಯಾಡು | ಯಿಂಡೆಯಾಡು |

---